# ದೇಗುಲಜ್ಯೋತಿ

ಕನಕಪುರ ಶ್ರೀದೇಗುಲ ಮಠದ

ಲಿಂಗೈಕ್ಯ ಶ್ರೀಶ್ರೀ ಇಮ್ಮಡಿ ನಿರ್ವಾಣಸ್ವಾಮಿಗಳವರ

ಸ್ಮರಣ ಸಂಪುಟ





...ಮಠ ಕನಕಪುರ

॥ ಶ್ರೀ ಗುರು ಬಸವಲಿಂಗಾಯನಮಃ ॥

# ದೇಗುಲ ಜ್ಯೋತಿ

## ಲಿಂಗೈಕ್ಯ ಶ್ರೀ ಮ. ನಿ. ಪ್ರ. ಇಮ್ಮಡಿ ನಿರ್ವಾಣ ಸ್ವಾಮಿಗಳವರ

## ಸ್ಮರಣ ಸಂಪುಟ

ಪ್ರಕಾಶಕರು :

**ಶ್ರೀಮನ್ನಿರಂಜನ ಪ್ರಣವ ಸ್ವರೂಪಿಗಳಾದ**
**ಚರಮೂರ್ತಿ ಶ್ರೀ ಮಹಾಲಿಂಗಸ್ವಾಮಿಗಳವರು**
**ಗುರು ಶ್ರೀ ನಿರ್ವಾಣಸ್ವಾಮಿಗಳವರು**

ಸಂಪಾದಕರು :

ಶ್ರೀ ಎನ್. ಮಹಾದೇವಪ್ಪ, ಎಂ. ಎ., ಬಿ. ಎಡ್.
ಶ್ರೀ ಬಿ. ನಂಜುಂಡಪ್ಪ

ದೇಗುಲ ಮಠ
ಕನಕಪುರ
೧೯೭೬

ಪ್ರಕಾಶಕರು :

ಶ್ರೀ ಮ. ನಿ. ಪ್ರ. ಚರಮೂರ್ತಿ ಶ್ರೀ ಮಹಾಲಿಂಗ ಸ್ವಾಮಿಗಳವರು
ಗುರು ಶ್ರೀ ನಿರ್ವಾಣ ಸ್ವಾಮಿಗಳವರು
ಶ್ರೀ ದೇಗುಲಮಠ, ಕನಕಪುರ, ಬೆಂಗಳೂರು ಜಿಲ್ಲೆ



ಬೆಲೆ : ಹತ್ತು ರೂಪಾಯಿ

ಮುದ್ರಕರು :
ಶ್ರೀ ಎಂ. ಎಸ್. ನಾಗರಾಜ್
ಯುಗಾಂತರ ಮುದ್ರಣಾಲಯ
ಚಾಮರಾಜಪೇಟೆ, ಬೆಂಗಳೂರು–೧೮

# ಲಿಂಗೈಕ್ಯ ಶ್ರೀ ಶ್ರೀ ನಿರ್ವಾಣ ಸ್ವಾಮಿಗಳವರ
# ಸ್ಮರಣ ಸಂಪುಟ ಸಮಿತಿ

೧. ಶ್ರೀ ಮ. ನಿ. ಪ್ರ. ಚರಮೂರ್ತಿ ಶ್ರೀ ಮಹಾಲಿಂಗಸ್ವಾಮಿಗಳವರು ಅಧ್ಯಕ್ಷರು

೨. ಶ್ರೀ ಮ. ನಿ. ಪ್ರ. ಚರಮೂರ್ತಿ ಶಿವರುದ್ರಸ್ವಾಮಿಗಳವರು ಸದಸ್ಯರು
ಕಂಚುಕಲ್ ಬಂಡೇಮಠ

೩. ಶ್ರೀ ಮ. ನಿ. ಪ್ರ. ಚರಮೂರ್ತಿ ಶ್ರೀ ಕಾಲಾಗ್ನಿರುದ್ರಮುನಿಸ್ವಾಮಿಗಳವರು
ಶ್ರೀ ಮರಳೆ ಗವೀಮಠ

೪. ಷ. ಬ್ರಂ. ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳವರು
ಅಂಕನಹಳ್ಳಿ ಗವೀಮಠ

೫. ಷ. ಬ್ರಂ. ಶ್ರೀ ಶಾಂತಮಲ್ಲಿಕಾರ್ಜುನಸ್ವಾಮಿಗಳವರು
ಬೇವೂರು ಮಠ.

೬. ಶ್ರೀ ಮ. ನಿ. ಪ್ರ. ಶ್ರೀ ಮಲ್ಲಿಕಾರ್ಜುನಸ್ವಾಮಿಗಳವರು
ಗುರುವಣ್ಣದೇವರಮಠ ಬೆಂಗಳೂರು

೭. ಶ್ರೀ ಮ. ನಿ. ಪ್ರ. ಬಸಪ್ಪಸ್ವಾಮಿಗಳವರು
ತೋಟಹಳ್ಳಿ ಮಠ

೮. ಷ. ಬ್ರಂ. ಶ್ರೀ ಗುರುಸಿದ್ಧ ಶಿವಾಚಾರ್ಯಸ್ವಾಮಿಗಳು ಕಾರ್ಯದರ್ಶಿಗಳು
ಗುರುವಿನಪುರ ಮಠ

೯. ಶ್ರೀ ಎನ್. ಮಹಾದೇವಪ್ಪ, ಎಂ. ಎ., ಬಿ. ಎಡ್., ಸಂಪಾದಕರು

೧೦. ಶ್ರೀ ಬಿ. ನಂಜುಂಡಪ್ಪ ,,

———

# ದೇಗುಲ ಜ್ಯೋತಿ

## ಲೇಖನ ಸೂಚಿ

# ಪ್ರಕಾಶಕರ ನುಡಿ

ಶ್ರೀ ದೇಗುಲ ಮಠವು ಅಲ್ಲಮಪ್ರಭು ಪರಂಪರೆಯ ಆದಿಗುರು ಶ್ರೀ ನಿರ್ವಾಣ ಸ್ವಾಮಿಗಳವರ ಕಾಲದಿಂದ ಸುಮಾರು ಆರು ಶತಮಾನಗಳಿಂದಲೂ ಶಿವಯೋಗ ಸಾಧನೆಗೆ ಪ್ರಸಿದ್ಧಿ. ಈ ಪವಿತ್ರ ಕ್ಷೇತ್ರದಲ್ಲಿ ನೆಲಸಿದ ಗುರುಗಳೆಲ್ಲರೂ ಮಹಾಮಹಿಮ ರಾಗಿದ್ದರು.

ನಮ್ಮ ಪೂಜ್ಯ ಗುರುಪುಂಗವರಾದ ಲಿಂ. ಶ್ರೀ ಮನ್ನಿರಂಜನ ಪ್ರಣವಸ್ವರೂಪಿ ಶ್ರೀ ನಿರ್ವಾಣ ಸ್ವಾಮಿಗಳವರು ಕನಕಪುರ ತಾಲ್ಲೂಕು ಮಾತ್ರವಲ್ಲದೆ ನಾಡಿನ ಬಹು ಭಾಗದ ಎರಡು ಪೀಳಿಗೆಯ ಜನತೆಗೆ ಚಿರಪರಿಚಿತರು. ಅವರ ಆರೋಗ ದೃಢ ಕಾಯ ಅಪಾರ್ಥಿವ ತೇಜಃಪುಂಜ ನಿಲವೂ, ಶಿವಯೋಗ ಪ್ರಭಾವವೂ. ಶಿಶು ಸದೃಶ ಕಾರುಣ್ಯಪೂರಿತ ನುಡಿಗಳೂ ಪ್ರಸಕ್ತ ಜನಮನದಲ್ಲಿ ಅಚ್ಚೊತ್ತಿ ನಿಂದಿವೆ. ಶ್ರೀ ನಿರ್ವಾಣ ಸ್ವಾಮಿಗಳವರದು ಒಂದು ಶತಮಾನಕ್ಕೂ ಮಿಕ್ಕ ದೀರ್ಘ ಜೀವನ. ಅವರು ನಿಷ್ಠಾವಂತರೂ ತ್ರಿವಿಧ ದಾಸೋಹ ಮೂರ್ತಿಗಳೂ ಪರಮ ಶಾಂತ ಮೂರ್ತಿಗಳೂ ತಪೋಧನರೂ ಆದ ಗುರುಗಳು. ಅನೇಕರು ಮಾತನಾಡಿ ಸಾಧಿಸ ಲಾರದ್ದನ್ನು ಶ್ರೀ ನಿರ್ವಾಣ ಸ್ವಾಮಿಗಳವರು ಮೌನದಿಂದಲೇ ಸಾಧಿಸಿದರು. ಅವರ ಸ್ಮರಣೆಯೊಂದು ಪುಣ್ಯ ವಿಶೇಷ.

ಶ್ರೀಗಳವರ ಭೌತಿಕ ನಿಲುವಿನ ದರ್ಶನಕ್ಕೆ, ಸ್ಮರಣೆಗೆ ಒಂದು ಭಾವಚಿತ್ರವಾದರೆ, ಸಾಕಾದೀತು. ಆದರೆ ಅವರ ವ್ಯಕ್ತಿತ್ವ, ಮಹಿಮೆ, ಸಾಧನೆ, ಸಿದ್ಧಿ, ಗುಣ ಸಂಪತ್ತು ಗಳು ಭಾವೀ ಜನತೆಗೆ ಮಾರ್ಗದರ್ಶನವಾಗಲು, ಸ್ಫೂರ್ತಿ ನೀಡಲು ಜ್ಯೋತಿರ್ಲಿಂಗ ಗಳೆನಿಸಿದ ನುಡಿಗಡಣಗಳೂ ಆಗತ್ಯ. ಮಿಗಿಲಾಗಿ, ಶ್ರೀಸಿದ್ಧಗಂಗಾಕ್ಷೇತ್ರಾಧಿಪತಿಗಳಾದ ಶ್ರೀ ಮ. ನಿ. ಪ್ರ ಶ್ರೀ ಶಿವಕುಮಾರ ಸ್ವಾಮಿಗಳವರ ಪ್ರೇರೇಪಣೆ, ಪ್ರೋತ್ಸಾಹ, ಶ್ರೀ ನಿರ್ವಾಣಸ್ವಾಮಿಗಳವರ ಅಪಾರ ಭಕ್ತಮಂಡಲಿಯ ಬಯಕೆ, ಹಾಗೂ ನಮ್ಮದೂ ಆದ ಕೈಂಕರ್ಯಕ್ಕಾಗಿ ಆ ಮಹಾಶಿವಯೋಗಿಗಳ ದಿವ್ಯ ಜೀವನದ ಚಿರಸ್ಮರಣೆಗಾಗಿ ಒಂದು ಸ್ಮರಣ ಸಂಪುಟವನ್ನು ಹೊರತರಲು ಸಂಕಲ್ಪ ಮಾಡಿದೆವು. ಆ ಯತ್ನದ ಸಿದ್ಧಿಯೇ ಈ ಸ್ಮರಣಸಂಪುಟ—ದೇಗುಲ ಜ್ಯೋತಿ. ದೀರ್ಘ ಕಾಲದಿಂದಲೂ ತಮ್ಮ ತಪಸ್ಸು, ದಾಸೋಹ, ದರ್ಶನಾಶೀರ್ವಾದಗಳಿಂದ ಶ್ರೀ ದೇಗುಲಮಠವನ್ನು ಬೆಳಗಿದ, ಮುಂದೆ ನಿರಂತರವಾಗಿ ತಮ್ಮ ದಿವ್ಯ ಆಶೀ ರ್ವಾದದಿಂದ ಬೆಳಗಲಿರುವ ಆ ಮಹಾಜ್ಯೋತಿಯೇ ಇಮ್ಮಡಿ ಶ್ರೀ ನಿರ್ವಾಣಸ್ವಾಮಿ ಗಳವರು. 'ದೇಗುಲ ಜ್ಯೋತಿ' ಎಂಬ ಈ ಸ್ಮರಣ ಸಂಪುಟದ ಅಭಿಧಾನವು ಅನ್ವರ್ಥಕ.

ಆದಿಯಿಂದಲೂ ಶ್ರೀ ನಿರ್ವಾಣಸ್ವಾಮಿಗಳವರು ಬಹಳ ದೊಡ್ಡವರೆಂದು ನಂಬಿ ಬೋಧಿಸುತ್ತಾ ಬಂದು ಅವರ ಸ್ಮರಣ ಸಂಪುಟಕ್ಕೆ ತಮ್ಮ ಅಮರವಾಣಿಯ ಮುನ್ನುಡಿಯನ್ನಿತ್ತುದೇ ಅಲ್ಲದೆ, ನಮ್ಮನ್ನು ಅಡಿಗಡಿಗೂ ಆಶೀರ್ವದಿಸಿ ಪ್ರೋತ್ಸಾಹಿಸುತ್ತಾ ಬಂದಿರುವ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರಿಗೆ ನಮ್ಮ ಅನಂತ ಪ್ರಣಾಮಗಳು.

ಈ ಸ್ಮರಣ ಸಂಪುಟವನ್ನು ರೂಪಿಸಲು ಬಹು ವಿಧದಲ್ಲಿ ನೆರವಾದ ಸ್ಮರಣ ಸಂಪುಟ ಸಮಿತಿಯ ಮಾನ್ಯ ಸದಸ್ಯರ ಉಪಕಾರವನ್ನು ನೆನೆಯದಿರಲಾರೆವು.

ಈ ಸ್ಮರಣ ಸಂಪುಟವನ್ನು ತ್ವರಿತವಾಗಿ ಹೊರತರುವ ಗುರುತರ ಕಾರ್ಯವನ್ನು ವಹಿಸಿದರೂ ನಮ್ರತೆಯಿಂದ, ಭಕ್ತಿ ಭಾವದಿಂದ ನಡೆಸಿರುವ ಸಂಪಾದಕರುಗಳಾದ ಶ್ರೀ ಎನ್. ಮಹಾದೇವಪ್ಪ ಮತ್ತು ಶ್ರೀ ಬಿ. ನಂಜುಂಡಪ್ಪ—ಅವರಿಗೆ ಸಕಲ ಸನ್ಮಂಗಲವುಂಟಾಗಲೆಂದು ಆಶೀರ್ವದಿಸುತ್ತೇವೆ.

ಶ್ರೀಮಠದ ಏಳಿಗೆಗೆ-ಕಟ್ಟಡಗಳ ನಿರ್ಮಾಣ, ದಾಸೋಹಾದಿ ಕಾರ್ಯಗಳಿಗೆ ಭಕ್ತಮಂಡಲಿಯವರ ಸಹಾಯ ಸಹಕಾರಗಳು ನಿರಂತರವಾಗಿ ನಡೆದು ಬಂದಿರುತ್ತವೆ.

ಸಮಾಜದ ಕೆಲವು ಭಕ್ತ ಮಹನೀಯರು ಕಟ್ಟಡಕೆಲವು ಭಾಗಗಳ ವೆಚ್ಚವನ್ನು ತಾವೇ ವಹಿಸಿದರು. ಹಲವು ಮಹನೀಯರು ತಮ್ಮ ತಮ್ಮ ಶಕ್ತ್ಯನು ಸಾರ ಸಹಾಯ ನೀಡಿದರು. ಲಿಂಗೈಕ್ಯ ಶ್ರೀಗಳವರ ರಜತ ಪ್ರತಿಕೃತಿ ಮತ್ತು ಇತರ ಸಲಕರಣೆಗಳನ್ನು ಉದಾರವಾಗಿ ನೀಡಿದರು. ದಾಸೋಹಕ್ಕಾಗಿ ವಿಶೇಷಸಹಾಯ ಮಾಡಿದರು. ಲಿಂಗೈಕ್ಯ ಗುರುವರ್ಯರ ವಾರ್ಷಿಕ ಜಂಗಮಾರಾಧನೆ ಸಂಬಂಧವಾದ ಉತ್ಸವಾದಿಗಳಿಗೆ ಮುಕ್ತ ಹಸ್ತದಿಂದ ಧನ ಮತ್ತು ವಸ್ತುರೂಪವಾಗಿ ಸಹಾಯ ನೀಡುತ್ತಲೂ ಇರುವರು. ಮಾಸಿಕ ಮತ್ತು ಪಾಕ್ಷಿಕವಿಶೇಷ ಪೂಜಾದಿಗಳನ್ನು ಅವ್ಯಾಹತವಾಗಿ ನಡೆಸಲು ಸೇವೆ ಸಲ್ಲಿಸುತ್ತಿರುವರು. ಮುಂದೆಯೂ ಇದೇ ರೀತಿಯ ಸಹಾಯ ಸಹಕಾರಗಳು ಒದಗುವವೆಂಬ ವಿಶ್ವಾಸ ನಮಗಿದೆ. ತಮ್ಮ ಶಕ್ತ್ಯನುಸಾರ ಸಹಾಯ ನೀಡುತ್ತಾ ಬಂದಿರುವ ಭಕ್ತಮಂಡಲಿಯವರಿಗೆಲ್ಲಾ ಶ್ರೀ ಗುರು ನಿರ್ವಾಣೇಶ್ವರರು ಸಕಲ ಸನ್ಮಂಗಳವನ್ನೀಯಲೆಂದು ಆಶಿಸುತ್ತೇವೆ.

ಈ ಸ್ಮರಣ ಸಂಪುಟವನ್ನು ಹೊರತರುವಲ್ಲಿ ಆರ್ಥಿಕವಾಗಿಯೂ ಸೇವಾರೂಪದಲ್ಲಿಯೂ ಸಹಕರಿಸಿದ ಭಕ್ತಜನತೆಗೆಲ್ಲಾ ಶ್ರೀ ಗುರುವಿನ ನಿರಂತರ ಕೃಪೆಯಿರಲೆಂದು ಹಾರೈಸುತ್ತೇವೆ.

ಶ್ರೀ ದೇಗುಲಮಠ, ಕನಕಪುರ
ದಿ. ೯–೨–೧೯೭೬

**ಪ್ರಕಾಶಕರು**

# ಸಂಪಾದಕರ ಅರಿಕೆ

ಆಧುನಿಕ ಭಾರತವು ಆರ್ಥಿಕವಾಗಿ, ವೈಜ್ಞಾನಿಕವಾಗಿ, ನಾಗರಿಕತೆಯಲ್ಲಿ ಇನ್ನೂ ಜಗತ್ತಿನ ಪ್ರಥಮ ರಾಷ್ಟ್ರವೆನಿಸದಿರಬಹುದು. ಆದರೆ ಧಾರ್ಮಿಕ ವಿಚಾರದಲ್ಲಿ ಮಾತ್ರ ಎಂದೆಂದಿಗೂ ಇದು ಅಗ್ರ ರಾಷ್ಟ್ರವಾಗಿಯೇ ಮೆರೆದಿದೆ. ಭಿನ್ನ ಭಿನ್ನ ಧಾರ್ಮಿಕ ಪರಂಪರೆ, ಭಿನ್ನ ಭಿನ್ನ ಸಂಸ್ಕೃತಿಗಳಿಂದ ಕೂಡಿಯೂ ತನ್ನ ಏಕಾಭಿನ್ನ ಗುಣವನ್ನು ಪ್ರದರ್ಶಿಸಿದೆ. ಇಲ್ಲಿ ಉದಿಸಿ ಬೆಳೆದು ಬೆಳಗಿದ ಧರ್ಮಗಳು ವಿಶ್ವ ಧರ್ಮಗಳೆಂಬ ಮನ್ನಣೆಗೆ ಪಾತ್ರವಾಗಿವೆ. ಅಂತಹ ಹಲವಾರು ಧರ್ಮಗಳಲ್ಲಿ ದಕ್ಷಿಣ ಭಾರತದಲ್ಲಿ ಉಚ್ಛ್ರಾಯವಾಗಿ ಮೆರೆದ ವೀರಶೈವ ಧರ್ಮವೂ ಒಂದು. ಈ ಧರ್ಮದ ಉಗಮ ಬೆಳವಣಿಗೆಗಳ ಬಗ್ಗೆ ಭಿನ್ನಾಭಿಪ್ರಾಯಗಳಿರಬಹುದಾದರೂ ಇದರ ಹಿರಿಮೆಯ ಬಗ್ಗೆ ಯಾವ ಭಿನ್ನಾಭಿಪ್ರಾಯಗಳಿಗೂ ಎಡೆ ಅಲ್ಪವೇ. ಇಹದಲ್ಲಿಯೇ ಪರದ ಇರುವಿಕೆಯನ್ನು ದರ್ಶನ ಮಾಡಿಸುವ ಈ ಧರ್ಮದ ಹೆಗ್ಗಳಿಕೆ ಅಪೂರ್ವವಾದುದು ಅಸದೃಶವಾದುದು.

ಹನ್ನೆರಡನೆಯ ಶತಮಾನದಲ್ಲಿ ಕನ್ನಡ ನಾಡಿನ ಧಾರ್ಮಿಕ ಕ್ಷೇತ್ರದಲ್ಲಿ ಮಹಾ ಕ್ರಾಂತಿಯನ್ನೆಸಗಿದವರು ಶ್ರೀ ಬಸವಾದಿ ಪ್ರಥಮ ಪುಂಗವರು. ಭಕ್ತಿ ಭಂಡಾರಿ ಬಸವಣ್ಣನವರ ನೇತೃತ್ವದಲ್ಲಿ ವೀರಶೈವ ಧರ್ಮ ತತ್ತ್ವಗಳು ಉಜ್ವಲವಾಗಿ ಬೆಳಗಿದವು. ಈ ವೀರಶೈವ ಧರ್ಮದ ಆಧ್ಯಾತ್ಮಿಕ ಪರಂಪರೆಗೆ ಚೇತನ ಸ್ವರೂಪರೂ ನಿಷ್ಕಲ ಪರಬ್ರಹ್ಮ ಪ್ರತಿರೂಪರೂ ಆಗಿದ್ದ ಅಲ್ಲಮ ಪ್ರಭುಗಳು ಶೂನ್ಯಪೀಠ ಸಂಸ್ಥಾಪನಾಚಾರ್ಯರು ಹಾಗೂ ಅನುಭವ ಮಂಟಪದ ಅಧ್ಯಕ್ಷರು. ಈ ಪರಂಪರೆಯ ಹಲವಾರು ಶರಣವರೇಣ್ಯರು ನಾಡಿನಾದ್ಯಂತವಲ್ಲದೆ ಹೊರನಾಡಿನಲ್ಲೂ ಅಲ್ಲಲ್ಲಿ ಲೀಲಾಮೂರ್ತಿಗಳಾಗಿ ಸಂಚರಿಸಿ, ತಮ್ಮ ಶಿವಯೋಗ ನಿಷ್ಠೆಯಿಂದ ಜನಮನದಲ್ಲಿ ಆಧ್ಯಾತ್ಮಿಕ ಪ್ರವೃತ್ತಿಯನ್ನು ಬೆಳೆಸಿದರು. ಸನಾತನ ಸತ್ಯ ಧರ್ಮವನ್ನು ಮೊಳಗಿಸಿದರು. ಆಚಾರನಿಷ್ಠೆ, ದಿವ್ಯಜ್ಞಾನವೇ ಜೀವನ ಧರ್ಮವಾಗಿ ಮಹಾಶಿವಯೋಗ ಸಾಧನೆಯಲ್ಲಿ ನಿಷ್ಣಾತರಾಗಿದ್ದರು.

ದುರದೃಷ್ಟದ ಮಾತೆಂದರೆ ಹನ್ನೆರಡನೆಯ ಶತಮಾನದ ಅಂತ್ಯಕ್ಕೇ ತಲೆಎತ್ತಿದ ಮಾನವ ದೌರ್ಬಲ್ಯಗಳು ವೀರಶೈವ ಧರ್ಮದ ಓಜಸ್ಸನ್ನು ಕುಂದಿಸಿ ತೇಜಸ್ಸನ್ನು ಮಸುಕುಗೊಳಿಸಲು ಯತ್ನಿಸಿದವು. (ಆದರೂ ಇಂದಿಗೂ ಈ ಧರ್ಮದ ಅನುಯಾಯಿಗಳು ಕರ್ನಾಟಕದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರುವುದು ಈ ಧರ್ಮದ ಹಿರಿತನಕ್ಕೊಂದು ಜೀವಂತ ಸಾಕ್ಷಿ.) ತತ್ಪರಿಣಾಮವಾಗಿ ಕ್ರಾಂತಿಯ ಕಿಡಿಯು ಭುಗಿಲೆದ್ದಿತು. ಅನುಯಾಯಿಗಳಲ್ಲಿ ದಿಗ್ಭ್ರಾಂತಿ ಮೂಡಿತು. ಶರಣರಂತಃಕರಣ ನೊಂದಿತು. ಶಾಂತಿ ಭಂಗವಾಯಿತು. ಶರಣರು ಕಲ್ಯಾಣದ ಕೇಂದ್ರವನ್ನು ಬಿಟ್ಟು

ನಾನಾ ದಿಕ್ಕುಗಳಿಗೆ ಚದುರಿದರು. ಅಂತಹ ಶರಣರಲ್ಲಿ ಅಲ್ಲಮಪ್ರಭು ಪೀಠದ ಗಣವರ್ಯರಲ್ಲೊಬ್ಬರಾದ ಶ್ರೀ ನಿರ್ವಾಣಿಯ ಪ್ರಭುಗಳು ಕರ್ನಾಟಕದ ದಕ್ಷಿಣ ಅಂಚಿನಲ್ಲಿ ಸಂಚರಿಸಿ ಅಗಣಿತ ಮಹಿಮೆಗಳನ್ನು ಬೀರಿ, ನಾಡಿನಂಚಿನಲ್ಲಿರುವ ಶ್ರೀ ಮಲೆಯ ಮಹಾದೇಶ್ವರ ಬೆಟ್ಟದಲ್ಲಿ ಬಯಲಾದರು. ಅವರ ಶಿಷ್ಯ, ಪ್ರಶಿಷ್ಯರೂ ನಾಡಿನ ಆಗ್ನೇಯ ಭಾಗದ ಅರಣ್ಯಗಳಲ್ಲಿ ತಮಗೆ ಮೆಚ್ಚಿಕೆಯಾದೆಡೆಗಳಲ್ಲಿ ನೆಲೆಗೊಂಡು ತಪಸ್ಸನ್ನಾಚರಿಸಿ ಬಯಲಾದರು. ಆ ಪ್ರದೇಶದಲ್ಲಿರುವ ನೂರೊಂದಯ್ಯನ ಬೆಟ್ಟ, ಕಾವೇರಿ–ಅರ್ಕಾವತಿ ಸಂಗಮ ಸ್ಥಳದ ಬದಿಯಲ್ಲಿರುವ ಮಡಿವಾಳ ಕ್ಷೇತ್ರಗಳಲ್ಲಿ ನೆಲೆಸಿದ ಅಲ್ಲಮಪ್ರಭು ಪರಂಪರೆಯ ಆ ಮಹಾ ಶಿವಯೋಗೀಶ್ವರರಲ್ಲೊಬ್ಬರಾದ ಶ್ರೀ ನಿರಂಜನ ನಿರ್ವಾಣ ಶಿವಯೋಗೀಶ್ವರರು ಅಲ್ಲಿಂದ ಮುಂದೆ ಉತ್ತರಾಭಿಮುಖವಾಗಿ ಸಂಚರಿಸಿ ಅರ್ಕಾವತಿಯ ಬಲದಡದಲ್ಲಿ ನೆಲೆಸಿದರು. ಅವರೇ ಆದ್ಯ ನಿರ್ವಾಣ ಗುರುಗಳು. ಅವರು ನೆಲೆಸಿದ ಪುಣ್ಯಕ್ಷೇತ್ರವೇ ಕನಕಪುರದ ಇಂದಿನ ಶ್ರೀ ದೇಗುಲ ಮಠ. ಅವರು ಪವಾಡ ಪುರುಷರು. ಅಂದಿನಿಂದಲೂ 'ನಿರುವಾಣ ದೇವರ ಮಠ' ವೆಂದು ಪ್ರಸಿದ್ಧವಾಗಿದ್ದ ಶ್ರೀ ಮಠವು ಸುಮಾರು ಎರಡು–ಎರಡೂವರೆ ಶತಮಾನಗಳಿಂದೀಚೆಗೆ 'ಶ್ರೀ ದೇಗುಲ ಮಠ' ವೆಂಬ ಅನ್ವರ್ಥನಾಮ ಪಡೆಯಿತೆಂದು ಪ್ರತೀತಿ.

ಈ ಮಠದ ಪರಂಪರೆಯಲ್ಲಿ ಬಂದ ಗುರುವರ್ಯರೆಲ್ಲರೂ ಶಿವಯೋಗ ಸಂಪನ್ನರೂ, ದಾಸೋಹ ಮೂರ್ತಿಗಳೂ, ಮಹಾಮಹಿಮರೂ ಆಗಿದ್ದರು. ಈಗ್ಗೆ ಮುನ್ನೂರು ವರ್ಷಗಳ ಹಿಂದೆಯೇ ಇದನ್ನು ಅರಿತ ಮೈಸೂರು ರಾಜ ಮನೆತನದವರು ಈ ಕ್ಷೇತ್ರಕ್ಕೈತಂದು, ಅಂದಿನ ಶ್ರೀಗಳ ದರ್ಶನಾಶೀರ್ವಾದಗಳನ್ನು ಪಡೆದು, ಶಿಲಾಮಠವೊಂದನ್ನು ಕಟ್ಟಿಸಿ, ಭೂಮಿಯನ್ನೂ ದಾನವಾಗಿ ಕೊಟ್ಟ ವಿಷಯವು ಶ್ರೀ ಮಠದ ಬಳಿ ಉಪಲಬ್ಧವಾಗಿರುವ ಶಿಲಾಶಾಸನದಿಂದ ತಿಳಿದು ಬರುತ್ತದೆ. ಅಲ್ಲಿಂದೀಚೆಗೆ ಮೈಸೂರು ಅರಸು ಮನೆತನದ ಕಡೆಯ ಮಹಾರಾಜರಾದ ದಿ॥ ಶ್ರೀ ಜಯಚಾಮರಾಜ ಒಡೆಯರ್ ರವರು ೧೯೫೨ ರಲ್ಲಿ ಶ್ರೀ ಮಠಕ್ಕೆ ಆಗಮಿಸಿ ಲಿಂಗೈಕ್ಯ ಇಮ್ಮಡಿ ಶ್ರೀ ನಿರ್ವಾಣ ಸ್ವಾಮಿಗಳವರ ದರ್ಶನಾಶೀರ್ವಾದಗಳನ್ನು ಪಡೆದರು. ಅದೇ ಆ ಅರಮನೆ–ಈ ಗುರುಮನೆಗಳ ಕಡೆಯ ಸಂಗಮ.

ಶೂನ್ಯ ಸಿಂಹಾಸನಾಧೀಶ್ವರರಾದ ಚಿತ್ರದುರ್ಗ ಮಹಾಸಂಸ್ಥಾನದ ಲಿಂಗೈಕ್ಯ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳವರು ಈಗ್ಗೆ 25 ವರ್ಷಗಳ ಹಿಂದೆಯೂ ದಿನಾಂಕ ೧೧–೧೧–೭೪ರಂದು ಪ್ರಸಕ್ತ ಜಗದ್ಗುರುಗಳಾದ ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳವರೂ ಶ್ರೀಮಠಕ್ಕೆ ದಯಮಾಡಿಸಿ ತಮ್ಮ ಸಂತಸವನ್ನು ಪ್ರಕಟಿಸಿ, ದರ್ಶನಾಶೀರ್ವಾದಗಳನ್ನಿತ್ತು ಅನುಗ್ರಹಿಸಿರುತ್ತಾರೆ.

ಶ್ರೀ ದೇಗುಲಮಠದ ಇತಿಹಾಸದಲ್ಲಿ ಇಮ್ಮಡಿ ಶ್ರೀ ನಿರ್ವಾಣಸ್ವಾಮಿಗಳು ಹಾಗೂ ಇಮ್ಮಡಿ ಶ್ರೀ ಮಹಾಲಿಂಗಸ್ವಾಮಿಗಳವರ ಕಾಲವು ಆಧುನಿಕ ಕಾಲವಾಗಿದ್ದು ಮಠವು ಸರ್ವತೋಮುಖವಾಗಿ ಅಭಿವೃದ್ಧಿ ಹೊಂದಿದೆ. ಹತ್ತೊಂಬತ್ತು–ಇಪ್ಪತ್ತನೆಯ ಶತಮಾನಗಳೆರಡರ ನಡುವಣ ಸೇತುವೆಯಂತಿದ್ದ ಇಮ್ಮಡಿ ಶ್ರೀ ನಿರ್ವಾಣ ಸ್ವಾಮಿಗಳವರು ತಾ॥ ೩೦–೧–೭೨ ರಂದು, ತಮ್ಮ ನೂರಮೂರನೆಯ ತುಂಬು ವಯಸ್ಸಿನಲ್ಲಿ ಲಿ ಂ ಗ ದೊ ಳ ಗಾ ದ ರು. ಅವರ ಕರಕಮಲ ಸಂಜಾತರೂ, ಶ್ರೀಮಠದ ಪ್ರಸಕ್ತ ಅಧ್ಯಕ್ಷರೂ ಆದ ಚರಮೂರ್ತಿ ಇಮ್ಮಡಿ ಶ್ರೀ ಶ್ರೀ ಮಹಾಲಿಂಗಸ್ವಾಮಿಗಳವರು ಭಕ್ತಜನರ ಒತ್ತಾಯ ಹಾಗೂ ತಮ್ಮ ಅಭೀಪ್ಸೆಯಿಂದ ತಮ್ಮ ಲಿಂಗೈಕ್ಯ ಗುರುವಿನ ಪುಣ್ಯ ಸ್ಮರಣೆಗಾಗಿ ಸ್ಮರಣ ಸಂಪುಟವೊಂದನ್ನು ಹೊರತರಲು ನಿಶ್ಚೈಸಿದರು. ಆ ನಿಶ್ಚಯದ ಫಲವೇ ಈ ಸ್ಮರಣ ಸಂಪುಟ. ಈ ಸಂಪುಟದ ಕಾರ್ಯಕ್ಕೆ ಸಂಪಾದಕರಾಗಿರಲು ನಮಗೆ ಅಪ್ಪಣೆ ಕೊಡಿಸಿದರು. ಇದು ನಮ್ಮಳವಿಗೆ ಅಳವಡದ ಕಾರ್ಯವೆಂದು ಪೂರ್ಣವಾಗಿ ನಮಗೆ ಮನವರಿಕೆಯಾಗಿದ್ದರೂ ಗುರುವಾಕ್ಯ ಪರಿಪಾಲನೆಗಾಗಿ ಶಿರಬಾಗಿ ಒಪ್ಪಿದೆವು. ಆ ದಿವ್ಯ ಪುರುಷನ ಸ್ಮರಣೆಗಾಗಿ ಅತ್ಯಲ್ಪ ಸೇವೆ ಮಾಡಲು ನಮಗೆ ಈ ಅವಕಾಶ ದೊರೆತದ್ದೂ ಶ್ರೀ ಗುರು ನಮ್ಮಲ್ಲಿ ವಿಶ್ವಾಸ ವಿಟ್ಟು ನಮಗೆ ಈ ಕಾರ್ಯ ವಹಿಸಿಕೊಟ್ಟುದೂ ನಮ್ಮ ಪುಣ್ಯ ವಿಶೇಷವೆಂದೇ ಭಾವಿಸುತ್ತೇವೆ. ಈ ಹೊತ್ತಗೆಯು ಸರ್ವಾಂಗ ಸುಂದರವಾಗಿದೆಯೆಂಬ ಭ್ರಮೆಯು ಸುಳಿಯಲ್ಲಿ ನಾವಿಲ್ಲದಿದ್ದರೂ, ಈ ಹೊತ್ತಗೆಯು ಯಾವ ದಿವ್ಯ ಗುರುವಿನ ಚರಣ ಸ್ಮರಣೆಗಾಗಿ ಮೈದಳೆಯಿತೋ ಆ ದಿವ್ಯ ದೇಗುಲಜ್ಯೋತಿ ಇಮ್ಮಡಿ ನಿರ್ವಾಣ ಸ್ವಾಮಿಗಳವರ ಒಂದು ಶತಮಾನಕ್ಕೂ ಮಿಕ್ಕ ಬದುಕು ಮಾತ್ರ ಸರ್ವಾಂಗ ಸುಂದರ, ಭಕ್ತಜನ ಬಂಧುರವೆಂಬುದರಲ್ಲಿ ಯಾವ ಭ್ರಮೆಯೂ ಇಲ್ಲ. ಈ ಹೊತ್ತಗೆಯಲ್ಲಿ ದೋಷಗಳಿದ್ದಲ್ಲಿ ಅದು ನಮ್ಮ ಮಿತಾನುಭವದಿಂದಾದುದೆಂದೂ, ಹಿರಿಮೆಯಿದ್ದಲ್ಲಿ ಶ್ರೀ ಗುರುವಿನ ಮಹಿಮೆಯೆಂದೂ ಭಾವಿಸಬೇಕಾಗಿ ಪ್ರಾರ್ಥನೆ.

ಈ ಗ್ರಂಥಕ್ಕೆ ತಮ್ಮ ಅಮೂಲ್ಯ ಮುನ್ನುಡಿಯನ್ನು ದಯಪಾಲಿಸುವುದರ ಮೂಲಕ ಶ್ರೀ ನಿರ್ವಾಣಸ್ವಾಮಿಗಳವರ ದಿವ್ಯ ಸ್ಮರಣೆಗೆ ಭವ್ಯತೆಯನ್ನೂ ಕರುಣಿಸಿದ ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ಅಡಿದಾವರೆಗಳಿಗೆ ನಮ್ಮ ಭಕ್ತಿಪೂರ್ವಕ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸುತ್ತೇವೆ. ಸ್ಮರಣಸಂಪುಟ ಸಮಿತಿ ಅಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಮಹಾಲಿಂಗಸ್ವಾಮಿಗಳವರ ಹಾಗೂ ಸಮಿತಿಯ ಇತರ ಎಲ್ಲಾ ಪೂಜ್ಯ ಸದಸ್ಯರ ಚರಣಗಳಿಗೂ ನಮ್ಮ ನಮನಗಳು. ಶ್ರೀ ನಿರ್ವಾಣಸ್ವಾಮಿಗಳವರ ಜೀವಿತ ಘಟನೆಗಳಲ್ಲಿ ಕೆಲವನ್ನು ಹಲವು ಕಾಲ ಅವರ ಸೇವಾ ಕೈಂಕರ್ಯಗಳನ್ನೆಸಗಿದ್ದ ಐಜೂರಿನ ಶ್ರೀ ವೀರಭದ್ರಪ್ಪನವರು ತಿಳಿಸಿ ಉಪಕರಿಸಿದರು. ಅವರಿಗೆ ನಮ್ಮ ಧನ್ಯವಾದಗಳು

ಈ ಹೊತ್ತಗೆಗಾಗಿ ತುಂಬಾ ಶ್ರಮವಹಿಸಿ ಲೇಖನಗಳನ್ನು ಸಿದ್ಧಪಡಿಸಿ ಕಳುಹಿಸಿ ಕೊಟ್ಟು ಈ ಗ್ರಂಥದ ಸಮಗ್ರತೆಗೆ ನೆರವಾದ ಪರಮಪೂಜ್ಯರಿಗೂ ಮಾನ್ಯ ಲೇಖಕರಿಗೂ ನಾವು ಅತ್ಯಂತ ಕೃತಜ್ಞರಾಗಿದ್ದೇವೆ. ನಾನಾ ರೀತಿಯಲ್ಲಿ ಸಲಹೆ ಸಹಕಾರಗಳನ್ನು ನೀಡಿದ ಪಂಡಿತ ಶ್ರೀ ಚನ್ನಪ್ಪ ಎರೆಸೀಮೆಯವರಿಗೂ ಕೆಲವು ಪಡಿಯಚ್ಚುಗಳನ್ನು ಒದಗಿಸಿ ಉಪಕರಿಸಿದ ಶ್ರೀ 'ಸಿದ್ಧಗಂಗಾ' ಪತ್ರಿಕೆಯ ವ್ಯವಸ್ಥಾಪಕರಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ. ಈ ಗ್ರಂಥಕ್ಕೆ ಅಗತ್ಯವಾದ ಭಾವಚಿತ್ರಗಳನ್ನು ಒದಗಿಸಿಕೊಟ್ಟ ಕಲಾವಿದರಾದ ಶ್ರೀ ಬಿ. ಗುರುಬಸವಯ್ಯನವರನ್ನೂ ವ್ಯವಹಾರ ದೃಷ್ಟಿಗಿಂತ ಮಿಗಿಲಾದ ವಿಶ್ವಾಸದೃಷ್ಟಿಯಿಂದ ಅತ್ಯಲ್ಪ ಅವಧಿಯಲ್ಲಿ ಅಧಿಕ ಶ್ರಮವಹಿಸಿ ಅಂದವಾಗಿ ಮುದ್ರಿಸಿಕೊಟ್ಟ ಬೆಂಗಳೂರು ಯುಗಾಂತರ ಮುದ್ರಣಾಲಯದ ಮಾಲೀಕರಾದ ಶ್ರೀ ಎಂ. ಎಸ್. ನಾಗರಾಜ್ ಮತ್ತು ಸಹೋದರರನ್ನೂ ಕೃತಜ್ಞತೆಯಿಂದ ಸ್ಮರಿಸುತ್ತೇವೆ.

ಈ ಗ್ರಂಥವನ್ನು ಹೊರತರುವಲ್ಲಿ ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಸಹಕರಿಸಿದ ಎಲ್ಲಾ ಮಹನೀಯರಿಗೂ ನಮ್ಮ ಹೃತ್ಪೂರ್ವಕ ಧನ್ಯವಾದಗಳನ್ನು ಸಲ್ಲಿಸುತ್ತೇವೆ.

**ಶ್ರೀ ದೇಗುಲ ಮಠ** — **ಎನ್. ಮಹಾದೇವಪ್ಪ**
ಕನಕಪುರ — **ಬಿ. ನಂಜುಂಡಪ್ಪ**
ದಿನಾಂಕ : ೯–೨–೧೯೭೬ — ಸಂಪಾದಕರು

# ಮುನ್ನುಡಿ

ಲಿಂಗೈಕ್ಯ ಪೂಜ್ಯ ನಿರ್ವಾಣ ಮಹಾಸ್ವಾಮಿಗಳವರ ಸವಿನೆನಪಿಗಾಗಿ ಕನಕಪುರದ ದೇಗುಲ ಮಠಾಧ್ಯಕ್ಷರಾದ ಶ್ರೀ ಮಹಾಲಿಂಗ ಸ್ವಾಮಿಗಳವರು ಧರ್ಮಸಂಸ್ಮರಣ ಗ್ರಂಥವೊಂದನ್ನು ಪ್ರಕಟಿಸುತ್ತಿರುವುದು ಅಭಿನಂದನೀಯವಾಗಿದೆ. ಪೂಜ್ಯ ನಿರ್ವಾಣ ಮಹಾಸ್ವಾಮಿಗಳವರ ವ್ಯಕ್ತಿತ್ವ ಬಹುದೊಡ್ಡದು; ಎತ್ತರದ್ದು. ಅರಿತವರಿಗೆ ಮಾತ್ರ ಅರಿವಾಗಬಲ್ಲದು. ಅವರ ಜೀವನ ದರ್ಶನ ನಿಜವನರಿದ ನಿಶ್ಚಿಂತರಾಗಿ ಮಹವನರಿದ ಮಹಾಂತರಾಗಿ, ಶಬ್ದಮುಗ್ಧರೆನಿಸಿ ದಿವ್ಯ ಜೀವನದ ಶರಣಪಥವನ್ನು ಕ್ರಮಿಸಿ ಮಹಾ ಬೆಳಗಾದ ಪುಣ್ಯ ಪುರುಷರವರು. ಶ್ರೀಗಳು ವಿದ್ಯಾವಂತರಾಗಿ ಪಂಡಿತರೆನಿಸಿಕೊಳ್ಳದೇ ಇದ್ದರೂ, ಅನುಷ್ಠಾನದ ಬಲದಿಂದ ಆಳವಾದ ಆತ್ಮಾನುಭವವುಳ್ಳವರಾಗಿದ್ದರು. ಸರಳತೆ, ಸಹಜತೆ, ಸರ್ವ ಸಮತಾಭಾವ ಭೂತಾನುಕಂಪ ಮೊದಲಾದ ಶ್ರೇಷ್ಠ ಮಾನವೀಯ ಮೌಲ್ಯಗಳ ರತ್ನಕಣಿಯೇ ಆಗಿದ್ದರು. ಉದಾರ ಚರಿತಾನಾಂ ವಸುಧೈವ ಕುಟುಂಬಕಂ ಎಂಬ ಆರ್ಯೋಕ್ತಿಗೆ ಭಾಷ್ಯವಾಗಿ ಬಾಳಿದರು; ಬೆಳಗಿದವರು. ಇಂಥ ಪುಣ್ಯ ತಪಸ್ವಿಗಳ ಸಂಸ್ಮರಣಾರ್ಥವಾಗಿ ಧರ್ಮಗ್ರಂಥವನ್ನು ಪ್ರಕಟಿಸುತ್ತಿರುವುದಂತೂ ಈಶ್ವರ ಪೂಜೆಯ ಮತ್ತೊಂದು ರೂಪವೇ ಆಗಿದೆ.

ಪರಿಪೂರ್ಣತೆಯತ್ತ ಸಾಗುವುದು ಬಾಳಿನ ಪರಮಗುರಿಯೆಂಬುದನ್ನು ಶರಣರು ನಡೆದು, ಬಾಳಿ ತೋರಿಸಿದ್ದಾರೆ. ಅವರ ಬಾಳಿನಲ್ಲಿ, ಊರ್ಧ್ವಗಾಮಿ ಚೇತನಗಳ ಉನ್ನತ ಅನುಭವವು ಶರಣರ ವಚನಗಳಲ್ಲಿ ಮನಂಬುವಂತೆ ಮೂಡಿಬಂದಿದೆ; ಸಾರ್ವಕಾಲಿಕ ಮಾನವ ಧರ್ಮವು ಮೂಡಿ ಬಂದಿದೆ.

ಜನಸಾಮಾನ್ಯರಲ್ಲಿ ಧರ್ಮದ ದೃಷ್ಟಿ ಎಚ್ಚರಗೊಳ್ಳದೇ ಹೋದರೆ ಧರ್ಮಕ್ಕೆಲ್ಲಿದೆ ಉಳಿವು ? ಉಪ್ಪು ತನ್ನ ಉಪ್ಪಿನ ಗುಣವನ್ನೇ ಕಳೆದುಕೊಂಡಂತಾಗುವುದಿಲ್ಲವೆ ?.

"ಭರತ ಖಂಡದ ಧರ್ಮದ ಚರಿತ್ರೆಯಲ್ಲಿ ಧರ್ಮದ ಪುನರುದ್ಧಾರದ ಪ್ರಯತ್ನ ಮೇಲಿಂದ ಮೇಲೆ ನಡೆದಿದೆ. ಉಪನಿಷತ್ತುಗಳು ಕಂಡ ಲೋಕೋತ್ತರವಾದ ಮನೋಧರ್ಮ ಕಣ್ಮರೆಯಾಗಿ, ಧರ್ಮ ಸಂಕುಚಿತವಾಗಿ ಸಮಯ ಸಾಧಕರ ಸ್ವಾರ್ಥದ ಕೈಗೊಂಬೆಯಾಗಿ ಪರಿಣಮಿಸಿದಾಗ–ಬುದ್ಧ ಬರಬೇಕಾಯಿತು. ಆಚಾರ್ಯರು ಬರಬೇಕಾಯಿತು. ಸಂತರು ಬರಬೇಕಾಯಿತು." ಭರತ ಖಂಡದ ಧರ್ಮಮಾರ್ಗ ಇವರೆಲ್ಲರ ಅಧ್ಯಾತ್ಮಿಕ ಸಾಧನೆಯಿಂದ ಬಹುಮುಖಿ ಶಕ್ತಿಯನ್ನೂ ವ್ಯಾಪ್ತಿಯನ್ನೂ ಪಡೆದು ಶ್ರೀಮಂತವಾಗಿದೆ.

“ಶೈವ ಧರ್ಮದ ಬೆಳವಣಿಗೆಯಲ್ಲಿ ಬಹುಶಃ ಪರಿಪೂರ್ಣತೆಯನ್ನು ಸಾಧಿಸಿದ ಶಾಖೆಯೆಂದರೆ ವೀರಶೈವ ಎನ್ನಬಹುದು. ಎಲ್ಲ ಶೈವ ಸಿದ್ಧಾಂತಗಳ ಒಳ್ಳೆಯ ಅಂಶಗಳನ್ನು ತನ್ನಲ್ಲಿ ಸಮಾವೇಶಗೊಳಿಸಿಕೊಂಡು ವ್ಯಾಪಕವಾದ ಅಂದು ತತ್ತ್ವ ಸಿದ್ಧಾಂತವನ್ನೂ ಆಚರಣೆಯ ಮಾರ್ಗವನ್ನೂ ಇದು ರೂಪಿಸಿಕೊಂಡಿತು” ಮುಖ್ಯವಾಗಿ ಆಗಮಗಳ ತಳಹದಿಯ ಮೇಲೆ ರೂಪಿತವಾದ ಈ ಧರ್ಮ ಇತರ ಆಗಮಿಕ ಶೈವಗಳಿಗಿಂತ ವಿಶಿಷ್ಟವಾಗಿರುವ ಷಟ್‌ಸ್ಥಲ ಮತ್ತು ಲಿಂಗಧಾರಣ ಲಕ್ಷಣಗಳಿಂದ ಕಂಗೊಳಿಸುತ್ತಿದೆ. “ವೀರಶೈವ ಧರ್ಮ ಶರಣರ ಆಚಾರ ವಿಚಾರಗಳಿಂದ ಮಾನವತೆಯ ಉದ್ಧಾರಕ ಶಕ್ತಿಯಾಯಿತು. ಧರ್ಮದ ತತ್ತ್ವಗಳನ್ನು ಅವರು ವಿಚಾರದ ಮೂಸೆಯಲ್ಲಿ ಕರಗಿಸಿ ಎರಕಹೊಯ್ದು ಆಚಾರದಿಂದ ನವಚೈತನ್ಯವನ್ನಿತ್ತು ಜೀವಂತಗೊಳಿಸಿದರು; ಚಿಂತನಗೊಳಿಸಿದರು. ಸಿದ್ಧಾಂತದ ಶಾಸ್ತ್ರೀಯವಾದ ಪ್ರತಿಪಾದನೆಗಿಂತ ಹೆಚ್ಚಿನ ಶಕ್ತಿಯನ್ನು ಧರ್ಮ ಇದರಿಂದ ಪಡೆಯಿತು.”

ಕಗ್ಗತ್ತಲೆಯ ಬಸಿರನ್ನು ಬಗೆದು ಬಂದ ಶಿವಶರಣರು ಕರ್ತಾರನ ಕಮ್ಮಟದಲ್ಲಿ ನಡೆಸಿದ ಕ್ರಾಂತಿ ಅದ್ಭುತವಾದುದು. ಕಾಲದೇಶ ಖಂಡಗಳನ್ನು ಗೆದ್ದು ನಿಲ್ಲುವಂಥದು. “ಅದು ಜನವಾಣಿಯನ್ನೇ ದೇವವಾಣಿಯನ್ನಾಗಿಸಿದ ಕ್ರಾಂತಿ; ಕೀಳು ಕಸುಬನ್ನು ಕಾಯಕವನ್ನಾಗಿ, ಕಾಯಕವನ್ನು ಕೈಲಾಸವನ್ನಾಗಿ ಮಾರ್ಪಡಿಸಿದ ಕ್ರಾಂತಿ.’’ ‘ಹಾಳು’ ಹೆಣ್ಣನ್ನು ಮಹಾದೇವಿಯನ್ನಾಗಿ, ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನನ್ನಾಗಿ ಪರಿವರ್ತಿಸಿದ ಕ್ರಾಂತಿ, ತೀರ್ಥ, ಕ್ಷೇತ್ರ, ಶಕುನ, ಸೂತಕ, ತಿಥಿ, ವಾರ, ನಕ್ಷತ್ರ, ರಮಲ, ಜ್ಯೋತಿಷ್ಯ, ಬಹುದೇವತಾಪೂಜೆ, ಪಶುಬಲಿ, ಅಂಧಶ್ರದ್ಧೆ, ಅವಿಚಾರ ಪರತೆ, ಡಾಂಭಿಕತೆ, ಅಸಹಿಷ್ಣುತೆ ಇತ್ಯಾದಿಗಳ ಕಪಿಮುಷ್ಟಿಯಿಂದ ಮಾನವನನ್ನು ಮುಕ್ತ ಮಾಡಿ ನವಮಾನವತೆಯ ನಾಂದಿಯನ್ನು ಹಾಡಿದ ಕ್ರಾಂತಿ, ಕಲ್ಲಿಗೆರೆಯುವ ಹಾಲನ್ನು ಜೀವಿಗೆರೆಯೆಂದು ಸಾರಿ, ಕಲ್ಲುದೇವರ ಗೀಳು ಬಿಡಿಸಿ ಜೀವಿಗಳ ಹೃದಯದಲ್ಲಿ ದೇವನನ್ನು ಕಾಣಹತ್ತಿದ ಕ್ರಾಂತಿ.’’ ಆ ಕ್ರಾಂತಿ ಗಂಗೋತ್ರಿ ಮುಂದುವರಿದು ನಡೆಯಲರಿಯದೆ ಲಿಂಗವ ಪೂಜಿಸಿ ಫಲವೇನು? ಅವರ ಸುಖವೆನ್ನಸುಖ, ಅವರ ದುಃಖವೆನ್ನ ದುಃಖ ಕೂಡಲ ಶರಣರ ಮನ ನೊಂದರೆ ಆನು ಬೆಂದೆನಯ್ಯ ಎಂದು ಸಾರಿತು. ಮರದ ಬಾಯಿಬೇರು, ಲಿಂಗದ ಬಾಯಿ ಜಂಗಮ ಎಂದು ವೈಚಾರಿಕ ಪ್ರಜ್ಞೆಯನ್ನರಳಿಸಿತು. ಆ ಕ್ರಾಂತಿ. ಸತಿಪತಿಗಳೊಂದಾದ ಭಕ್ತಿ ಹಿತವಾಯಿತ್ತು ಲಿಂಗಕ್ಕೆ ಎಂದು ವಿಶ್ವಾಸವಿತ್ತು, ‘ಉಭಯ ದೃಷ್ಟಿಯಿಂದ ದೃಷ್ಟವ ಕಾಂಬಂತೆ ದಂಪತಿ ಏಕಭಾವವಾಗಿ ನಿಂದಲ್ಲಿ ಗುಹೇಶ್ವ ಲಿಂಗಕ್ಕೆ ಅರ್ಪಿತವಾಯಿತ್ತು’—ಎಂದು ತೀರ್ಮಾನಿಸಿತು ಆ ಕ್ರಾಂತಿ. ಆ ಕ್ರಾಂತಿಯ ಪರಿಣಾಮವಾಗಿ ನುಡಿದ ಮಾತು ಮುತ್ತಾಯಿತು; ಮಾಣಿಕ್ಯವಾಯಿತು; ಸ್ಫಟಿಕದ ಸಲಾಕೆಯಾಯಿತು; ಲಿಂಗಮೆಚ್ಚಿ ಅಹುದಹುದೆನುವಂತಾಯಿತು; ಕೊನೆಗೆ ಮಾತು

ಜ್ಯೋತಿರ್ಲಿಂಗವಾಯಿತು. ಮರ್ತ್ಯ ಕರ್ತಾರರ ಕಮ್ಮಟವಾಗಿ, ನುಡಿ–ನಡೆಯಾಗಿ, ನಡೆ–ನುಡಿಯಾಗಿ, ದಯೆ ಧರ್ಮದ ಮೂಲವಾಗಿ, ಕಾಯಕ ಕೈಲಾಸವಾಗಿ, ಆಚಾರವೇ ಕುಲವಾಗಿ, ಅನಾಚಾರವೇ ಹೊಲೆಯಾಗಿ, ಮೃದು ವಚನಗಳೇ ಸಕಲ ಜಪತಪಗಳಾಗಿ, ಸದ್ವಿನಯವೇ ಸದಾಶಿವನ ಒಲುಮೆಯಾಗಿ, ಭಕ್ತನಂಗಳ ವಾರಣಾಸಿಯೆನಿಸಿ, ದೇಹ ದೇಗುಲವೆನಿಸಿ, ಪರಧನ, ಪರವಧುವನೊಲ್ಲದ ಫಲ ಮರೆದು ಒಡೆಯರಿಗೆ ಒಡವೆಯನೊಪ್ಪಿಸುವುದಾಗಿ, ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನೇಮವಾಗಿ, ಆಶೆಯೇ ದಾಸತ್ವವೆನಿಸಿ, ನಿರಾಶೆಯೇ ಈಶತ್ವವೆನಿಸಿ, ಬಂದುದೇ ಪರಿಣಾಮವಾಗಿ, ನಿಂದುದೇ ನಿವಾಸವಾಗಿ, ಕಾಯವೇ ಪೀಠವಾಗಿ ಪ್ರಾಣವೇ ಲಿಂಗವಾಗಿ ಮೈದಾಳಿತು.

ಸಮಾಜದಲ್ಲಿ ಸಮಾನತೆ ಸ್ವಯಂಪೂರ್ಣತೆ, ಶ್ರಮಗೌರವ ಗುಣಗೌರವ ಗಳನ್ನು ಸ್ಥಾಪಿಸಿದಂತೆ ಸಿದ್ಧಾಂತದಲ್ಲಿ ಸಮನ್ವಯವನ್ನೂ ಸಾಧಿಸಿದರು ಶರಣರು. ಜೀವನದ ಎಲ್ಲ ಮುಖಗಳನ್ನು ಪೂರ್ಣದೃಷ್ಟಿಯಿಂದ ಕಂಡರು. ವ್ಯಕ್ತಿಯ ಎಲ್ಲ ಶಕ್ತಿಗಳ ಬೆಳವಣಿಗೆಗೂ ಅವಕಾಶವನ್ನು ಕೊಟ್ಟಂತೆ ವ್ಯಕ್ತಿಯಿಂದ ನಿರ್ಮಿತವಾದ ಸಮಾಜದ ಒಟ್ಟು ಹಿತವನ್ನು ಗಮನಿಸಿದರು, ವ್ಯಕ್ತಿಯ ಹಿತವೆಂದರೆ ಸಮಾಜದ ಹಿತಕ್ಕೆ ವಿರುದ್ಧವಾದುದೆಂದಲ್ಲ. ಸಮಾಜದ ಒಳಿತು ವ್ಯಕ್ತಿಯ ಒಳಿತನ್ನು ಬಿಟ್ಟಿಲ್ಲ. ಎಂಬ ಸಮನ್ವಯ ಮಾರ್ಗ ಶರಣ ಜೀವನದಿಂದ ರೂಪಿತವಾಗಿದೆ.

ಶ್ರೀ ನಿರ್ವಾಣಸ್ವಾಮಿಗಳವರನ್ನು ಕುರಿತು ಬಂದಿರುವ ಈ ಸ್ಮರಣ ಗ್ರಂಥ ಅಂತಹ ಪ್ರಯತ್ನವೊಂದನ್ನು ಮಾಡಿ ಸ್ತುತ್ಯಾರ್ಹವೆನಿಸಿದೆ. ಇಲ್ಲಿ ವಿವಿಧ ಲೇಖಕ ರಿಂದ ಮಂಡಿತವಾಗಿರುವ ವಿಚಾರ ವೈಖರಿ, ತತ್ತ್ವ ಪ್ರತಿಪಾದನೆಗಳು ಮನನೀಯ ವಾಗಿ, ಸರ್ವಾಂಗೀಣ ಸುಂದರವಾಗಿ ಗ್ರಂಥ ಪ್ರಕಟವಾಗುತ್ತಿರುವುದು ಸಂತೋಷ ದಾಯಕವಾದುದು. ಪರಶಿವನು ಸನ್ಮಂಗಳಗಳನ್ನುಂಟು ಮಾಡಲೆಂದು ಆಶಿಸುತ್ತೇವೆ.

೧೦–೨–೧೯೭೬

ಶ್ರೀ ಶಿವಕುಮಾರಸ್ವಾಮಿಗಳು
ಶ್ರೀ ಸಿದ್ಧಗಂಗಾಮಠ

# ದೇಗುಲ ಜ್ಯೋತಿ

## ಶ್ರೀ ನಿರ್ವಾಣ ಶಿವಯೋಗಿ

ದೇಗುಲವೆ ತಾನಾದ ದೇಹದೊಳು ನೆಲೆಸಿರ್ಪ
ಆಗು ಹೋಗುಗಳಿರದ ಆತ್ಮಲಿಂಗದಿ ಬೆರೆಯೆ
ರಾಗಾದಿಗಳನಳಿಸಿ ಭೋಗದಾಸೆಯ ತೊರೆಸಿ ವೈರಾಗ್ಯವನು ಮೂಡಿಸಿ ।
ತ್ಯಾಗ ದೀಕ್ಷೆಯ ಕೊಡಿಸಿ ಭಕ್ತಸಂತತಿಗೆ ಶಿವ
ಯೋಗಮಾರ್ಗವ ತಿಳಿಸಿ ನಿಜಲಿಂಗದೊಳ್ಬೆರೆದ
ದೇಗುಲದ ಚಿಜ್ಜ್ಯೋತಿ ನಿರ್ವಾಣಶಿವಯೋಗಿ ರಕ್ಷಿಸೆಮ್ಮನನವರತ ॥ ॥ ೧ ॥

ಗುರು ಕೃಪಾ ಸುಧೆಯುಣಿಸಿ ದುರಿತ ಕರ್ಮವನಳಿಸಿ
ಶರಣ ಸಂಗದಿ ಬೆರೆಸಿ ನೀತಿಮಾರ್ಗದಿ ನಡೆಸಿ
ಕರುಣೆದೋರಲು ಕಲಿಸಿ ಪ್ರಸಿಯುದಂತಿರೆ ವಿಧಿಸಿ ಸಿಂದಿಸದ್ವೋಲ್ಪಂಡಿಸಿ ।
ಸಿರಿಯ ಮೋಹವ ಬಿಡಿಸಿ ನಿಜಭಕ್ತರಂ ಹರಸಿ
ಪರಚರಣದಲ್ಲಿರಿಸಿ ನಿಜಲಿಂಗದೊಳ್ಬೆರೆದ
ಪರಮ ಕರುಣಾಮೂರ್ತಿ ನಿರ್ವಾಣ ಶಿವಯೋಗಿ ರಕ್ಷಿಸೆಮ್ಮನನವರತ ॥ ೨ ॥

ಲಸಿತಭಸಿತವ ಪೂಸಿ ಪೆರ್ನೊಸಲ ಸಿಂಗರಿಸಿ
ಹಸನಾದ ರುದ್ರಾಕ್ಷಿ ಮಣಿಮಾಲೆಯಂ ಧರಿಸಿ
ಪಸಿತವದನದಿ ಸತತ ಪ್ರಣವ ಪಂಚಾಕ್ಷರಿಯ ತಾದಾತ್ಮ್ಯದಿಂ ಜಪಿಸುತ ।
ಅಸಮ ಗುರುಪಾದ ಪದ್ಮಂಗಳಂ ಮನದಿ ಸ್ಮ
ರಿಸುತಂತ್ಯದೊಳು ಪರಮ ನಿಜಲಿಂಗದೊಳ್ಬೆರೆದ
ಕುಸುಮಬಾಣಾರಿಸಮ ನಿರ್ವಾಣ ಶಿವಯೋಗಿ ರಕ್ಷಿಸೆಮ್ಮನನವರತ ॥ ೩ ॥

ಜ್ಯೋತಿಯಂದದಿ ಬೆಳಗಿ ಕತ್ತಲೆಯ ಕಳೆಯುತ್ತ
ಜಾತಿಮತ ವೈಷಮ್ಯವನು ದೂರ ದೂಡುತ್ತ
ನೀತಿ ಧರ್ಮವ ಬಿಡದೆ ಸತ್ಯದಿಂ ನಡೆಯಿರೆಂದನವರತ ಘೋಷಿಸುತ್ತ ।
ಭೂತಳದೊಳೀ ಯತಿಗೆ ಸಾಟಿಯಾರೆಂಬ ವಿ
ಖ್ಯಾತ ನಾಮವನಾಂತು ನಿಜಲಿಂಗದೊಳ್ಬೆರೆದ ,
ಭೂತೇಶನವತಾರಿ ನಿರ್ವಾಣ ಶಿವಯೋಗಿ ರಕ್ಷಿಸೆಮ್ಮನನವರತ ॥ ೪ ॥

ತಿರಿಯದಲೆ ಯಾವುದನು ನೆನೆದ ಮಾತ್ರಕೆ ಪಡೆದು
ಬರಿ ಹೊಟ್ಟೆಯಲಿದಣಿದು ಮಠದ ಬಳಿಗೈತಂದ
ಪರಿಕರಿಯರೆಲ್ಲರಿಗು ಸಂತೃಪ್ತಿಯಲಿ ನೀಡಿ ಕಷ್ಟಕಾರ್ಪಣ್ಯ ಕೇಳಿ ।
ಪರಿಹಾರ ನೀಡುತ್ತ ಸಂತೈಸಿ ಸತ್ಕರಿಸಿ
ಕರುಣಾಬ್ಧಿ ತಾನೆನಿಸಿ ನಿಜಲಿಂಗದೊಳ್ಬೆರೆದ
ಶರಣಜನಸಂಸೇವ್ಯ ನಿರ್ವಾಣ ಶಿವಯೋಗಿ ರಕ್ಷಿಸೆಮ್ಮನನವರತ ॥ ೫ ॥

—ಪಿ. ಬಸವಣ್ಣ, ಬಿ.ಎಸ್‌ಸಿ., ಬಿ. ಎಲ್.,
ಕೊಳ್ಳೇಗಾಲ.

# ದೇಗುಲ ಮಠದ ಪರಂಪರೆ

● ಷ|| ಬ್ರ|| ಶ್ರೀ ವೀರಭದ್ರಶಿವಾಚಾರ್ಯರು
ಬೃಹನ್ಮಠ, ಹಲಗೂರು

ಕನ್ನಡ ನಾಡಿನ ಆಗ್ನೇಯ ಅಂಚಿನ ಪ್ರದೇಶ ಹಿಂದೆ ದುರ್ಗಮವಾದ ಘೋರಾರಣ್ಯವಾಗಿತ್ತು. ಭಾರತದ ದಕ್ಷಿಣ ವಲಯದ ಪೂರ್ವ ಘಟ್ಟಗಳ ವ್ಯಾಪ್ತಿಗೆ ಸೇರಿದುದು ಅದು. ಗಿರಿವನಗಳ ನಿರ್ಝರ ನಿನಾದದಿಂದ ಮೃಗಪಕ್ಷಿಗಳ ಕಲಕಲರವದಿಂದ ನಿಸರ್ಗ ರಮಣೀಯತೆಯನ್ನು ಬೀರುತ್ತಿತ್ತು ಆ ಪ್ರದೇಶ. ಆ ಭೀಕರ-ರಮ್ಯ ಗಿರಿ ಗಹ್ವರಗಳ ಕಾನನದಲ್ಲಿ ಋಷಿ ಮುನಿಗಳ ತಪೋಭೂಮಿಗಳಿಗೆ ಕೊರತೆಯಿರಲಿಲ್ಲ. ಕನ್ನಡ ನಾಡನ್ನು ತಣಿಸಿ ಕಾವೇರಿ ತನ್ನ ಉಪನದಿಯಾದ ಅರ್ಕಾವತಿಯೊಡನೆ ಕೂಡಿ* ಘೋರ ಕರ್ಕಶ ಶಿಲಾಮಯ ಪರ್ವತಗಳನ್ನು ಭೇದಿಸಿ, ಇಕ್ಕಟ್ಟಾದ ಕಣಿವೆಯಲ್ಲಿ ನುಗ್ಗಿ ನುಸುಳಿ ಭೋರ್ಗರೆದು ಪ್ರವಹಿಸಿ ನೆರೆಯ ನಾಡನ್ನು ಬೆಳಗಿಸಲು ಹೊರಟಿದೆ.

ಅರ್ಕಾವತಿಯು ಹರಿಯುತ್ತಿರುವ ಪ್ರದೇಶ ಅದೇ ಬಗೆಯ ನೈಸರ್ಗಿಕ ಸೌಂದರ್ಯದಿಂದ ಕೂಡಿದ ಕಾಡು ಪ್ರದೇಶವಾಗಿತ್ತು ಹಿಂದೆ. ಈ ನದಿಯ ಬಲದಡದಲ್ಲಿದೆ ಕನಕಪುರ. ಈವೂರು ಹಿಂದೆ ಕಾನಕಾನಹಳ್ಳಿಯಾಗಿತ್ತು. ಅದಕ್ಕೂ ಮೊದಲು ಕಾಣಿಕಾರನಹಳ್ಳಿ ಎಂಬ ಹೆಸರು ಅದಕ್ಕಿದ್ದುದನ್ನು ಶಾಸನಗಳಲ್ಲಿ*೧ ಕಾಣುತ್ತೇವೆ. ಬೆಂಗಳೂರಿನ ದಕ್ಷಿಣಕ್ಕೆ ೩೫ ಮೈಲು ದೂರದಲ್ಲಿರುವ ಜಿಲ್ಲೆಯ ಪ್ರಮುಖ ತಾಲ್ಲೂಕು ಕೇಂದ್ರವಾಗಿದೆ ಕನಕಪುರ. ನದಿಯ ಬಲದಡದಲ್ಲಿ ಊರಿಗೆ ಎರಡು ಫರ್ಲಾಂಗ್ ದೂರದಲ್ಲಿ ಸುಂದರವಾದ ತೋಟಗಳ ಫಲವೃಕ್ಷಗಳ ಮಧ್ಯೆ ಇದೆ ಶ್ರೀಕ್ಷೇತ್ರ ದೇಗುಲ ಮಠ.

## ದೇಗುಲ ಮಠ

ಬಹಳ ಹಿಂದಿನ ಕಾಲದಿಂದಲೂ ಮಹಾತಪಸ್ವಿಗಳಾದ ಶಿವಯೋಗಿ ಪುಂಗವರು ನೆಲಸಿದ್ದ ತಪೋಭೂಮಿ ದೇಗುಲ ಮಠ. ಆ ಮಹಿಮಾ ಪುರುಷರ ಪ್ರಭಾವದಿಂದಾಗಿ ನಾಡಿನ ನಾನಾ ಕಡೆಗಳಿಂದ ಭಕ್ತ ಸಂದಣಿ ಸಂದರ್ಶನಾರ್ಥವಾಗಿ ಈ ಕ್ಷೇತ್ರಕ್ಕೆ ಬರುತ್ತಿತ್ತು. ಅದರಿಂದಾಗಿ ಅದು ಪ್ರತ್ಯಕ್ಷ ದೇವರ ಬೀಡಾಗಿ ದೇಗುಲ ಮಠವೆಂಬ ಹೆಸರು ಪಡೆಯಿತು.

* ಸಂಗಮ-ಮೇಕೆದಾಟು.

*೧ Mysore Gazetteer Vol. (v)

## ಸ್ಥಾಪನೆ

೧೨ ನೆಯ ಶತಮಾನದಲ್ಲಿ ಕಲ್ಯಾಣ ಪಟ್ಟಣದಲ್ಲಿ ಬಸವೇಶ್ವರರಿಂದ ಸ್ಥಾಪಿತವಾದ ಶೂನ್ಯ ಸಿಂಹಾಸನದ ಅಧಿಪತಿಗಳಾದ ಅಲ್ಲಮ ಪ್ರಭುಗಳ ಪರಂಪರೆಯಲ್ಲಿ ಬಂದ "೫ ನೆಯ ಪಟ್ಟದ ಆದಿಗಣೇಶ್ವರರೆಂಬವರು ತಮ್ಮ ಗುರುಗಳಾದ ಅನಾದಿ ಗಣನಾಥರ ಅನುಜ್ಞೆಯಂತೆ ಕೊಂಕಣ ದೇಶದ ಲವಣ ಸಮುದ್ರ ತೀರದ ಗೊಮೆ (ಗೋವಾ) ಯಲ್ಲಿ ಗೊಮೇಶ್ವರಲಿಂಗದಾಲಯದಲ್ಲಿದ್ದು ಲಿಂಗಪೂಜಾ ಜಂಗಮ ದಾಸೋಹದಿಂದಿರುವ ಸಮಯದಲ್ಲಿ ಮ್ಲೇಂಛರ ಅವಾಂತರ ಹೆಚ್ಚಿದುದರಿಂದ, ಅವರು ಆ ಸ್ಥಳವನ್ನು ಬಿಟ್ಟು ದೇಶ ಸಂಚಾರ ಮಾಡುತ್ತಾ ಅಲ್ಲಲ್ಲಿಯ ಭಕ್ತರಿಗೆ ಷಟ್‌ಸ್ಥಲ ಜ್ಞಾನೋಪದೇಶ ಮಾಡುತ್ತಾ ತಲಕಾಡು ಕಾವೇರಿ ತೀರದ ಮಾಲಿಂಗಿ ಸಮೀಪದ ಪ್ರಭುದೇವರ ಬೆಟ್ಟ*ಕ್ಕೆ ಬಂದು ನೆಲಸಿದರು.''*೧

ಅವರ ನಂತರ ಬಂದ ಅವರ ಶಿಷ್ಯರಾದ ೬ ನೆಯ ಪಟ್ಟದ ಸಿದ್ಧಾರ್ಯ ಗಣೇಶ್ವರರು ಮಹಾಮಹಿಮರಾಗಿ ವೀರ ವಿರಕ್ತರಾಗಿ, ಅಲ್ಲಿಂದ ಹೊರಟು ಅನೇಕ ಪವಾಡಗಳನ್ನು ಮೆರೆದರು. ಅವರೇ ಮಲೆ ಮಾದೇಶ್ವರರು. ಅವರು ಅದೇ ಹೆಸರಿನ ಮಲೆ ಮಹದೇಶ್ವರಬೆಟ್ಟದಲ್ಲಿ ಶಿವಯೋಗ ಸಮಾಧಿಸ್ಥರಾದರು.*೨ ಆ ಪರಂಪರೆಯ ೭ ನೆಯ ಪಟ್ಟದ ನಿರಂಜನ ಗಣೇಶ್ವರರು ಹಳೇಬೀಡಿನ ವಿಷ್ಣುವರ್ಧನ ಬಲ್ಲಾಳನ ಕಾಲದವರೆಂದೂ, ಅವರು ಹರಿಹರ, ರಾಘವಾಂಕ, ಕೆರೆಯ ಪದ್ಮರಸ, ಹೊಯಸಲೇಯ ಭೈರವರಾಜ, ಚಕ್ಕಲೂರ ನುಲಿಯ ಕಲ್ಲಪ್ಪ ಮುಂತಾದ ಮಹಿಮರಿಗೆ ದರ್ಶನಾಶೀರ್ವಾದವನ್ನಿತ್ತರೆಂದೂ ನಿರಂಜನವಂಶರತ್ನಾಕರದಿಂದ ತಿಳಿದು ಬರುತ್ತದೆ.*೩ ಆ ನಿರಂಜನ ಸ್ವಾಮಿಗಳೇ ತಮ್ಮ ಗಣ ಸಮೂಹದಲ್ಲಿದ್ದ ನೂರ ಒಂದು ವಿರಕ್ತರೊಡನೆ ದೇಶ ಸಂಚಾರ ಮಾಡುತ್ತಾ ಶಿವಮತವನ್ನು ಉದ್ಧಾರ ಮಾಡುತ್ತಾ ಭಕ್ತ ಮಾಹೇಶ್ವರರಿಗೆ ಷಟ್‌ಸ್ಥಲ ಜ್ಞಾನೋಪದೇಶ ಮಾಡುತ್ತಾ ಹೊರಟು, ಘೋರಾರಣ್ಯದಿಂದ ಕೂಡಿದ ಪರ್ವತ ಪ್ರದೇಶದಲ್ಲಿ ನೆಲಸಿದರು. ಅದೇ ಈಗ ನೂರೊಂದುಸ್ವಾಮಿಬೆಟ್ಟವೆಂದು ಪ್ರಸಿದ್ಧವಾಗಿದೆ. *೪ ಅವರೂ ಅವರ ಶಿಷ್ಯರಾದ೮ನೆಯ ಶಿವಾನುಭವ ಚರಂತಿ ಪಟ್ಟದ ಜ್ಞಾನಾನಂದ ಸ್ವಾಮಿಗಳೂ ಅಲ್ಲಿಯೇ

* ಮೈಸೂರು ಜಿಲ್ಲೆ ಕೊಳ್ಳೇಗಾಲದ ಸಮೀಪದಲ್ಲಿದೆ.

*೧ ನಿರಂಜನ ವಂಶರತ್ನಾಕರ-ಶ್ರೀ ಫ. ಗು ಹಳಕಟ್ಟಿ.

*೨ ಶ್ರೀ ಮಲೆ ಮಹದೇಶ್ವರರ ಕಾಲ ಸು. ೧೪ನೆಯ ಶತಮಾನವೆಂದು ಪಂಡಿತರತ್ನಂ ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಶ್ರೀ ಮಾದೇಶ್ವರ ಚರಿತ್ರೆ (ಪು. ೧೫) ಯಲ್ಲಿ ತಿಳಿಸುತ್ತಾರೆ.

*೩ ನಿರಂಜನವಂಶರತ್ನಾಕರ—ಫ. ಗು. ಹಳಕಟ್ಟಿ

*೪ ಈ ಬೆಟ್ಟವು ಈಗಿನ ಕರ್ನಾಟಕ ರಾಜ್ಯದ ಆಗ್ನೇಯ ಅಂಚಿನಲ್ಲಿ ತಮಿಳುನಾಡಿನ ಸೇಲಂ ಜಿಲ್ಲೆಯಲ್ಲಿದೆ.

ಲಿಂಗಪೂಜೆ ಜಂಗಮ ದಾಸೋಹ ಮಾಡುತ್ತಾ, ತಮ್ಮ ಚರಂತಿಕೆ ಪಟ್ಟವನ್ನು ಆನೆಯು ಪಟ್ಟದ ತತ್ವಗಣನಾಥರಿಗೆ ವಹಿಸಿ ತಾವು ನೂರೊಂದಯ್ಯನ ಬೆಟ್ಟದಲ್ಲೇ ಬಯಲಾದರು. ತತ್ವಗಣನಾಥರು ಗಣ ಸಮೂಹದೊಡನೆ ಕಂಚಿ, ಕಾಳಹಸ್ತಿ, ತಿರುವಣ್ಣಾಮಲೆ, ಚಿದಂಬರ, ಕುಂಭಕೋಣ ಮುಂತಾದ ಚೋಳ ದೇಶದ ಪ್ರದೇಶಗಳಲ್ಲಿ ಸಂಚರಿಸಿ ಮಠಗಳನ್ನು ಸ್ಥಾಪಿಸಿದರೆಂದು ತಿಳಿದು ಬರುತ್ತದೆ.*

ಹಿಂದೆ ತಿಳಿಸಿದ ನೂರೊಂದು ವಿರಕ್ತ*೧ ರಲ್ಲಿ ಕೆಲವರು ಹಿಂತಿರುಗಿ ಕಾವೇರಿ ಮತ್ತು ಅದರ ಉಪನದಿಯಾದ ಅರ್ಕಾವತೀ ತೀರದ ಅರಣ್ಯ ಪ್ರದೇಶಗಳಲ್ಲಿ ನೆಲಸಿ, ಷಟ್‌ಸ್ಥಲ ಜ್ಞಾನೋಪದೇಶ–ಶಿವಯೋಗ ನಿಷ್ಠೆಯಲ್ಲಿ ನಿರತರಾದರು. ಹೀಗೆ ನೆಲಸಿದ ಕ್ಷೇತ್ರಗಳಲ್ಲಿ ಕಾವೇರಿ–ಅರ್ಕಾವತಿ ಸಂಗಮಕ್ಕೆ ಸಮೀಪದಲ್ಲಿರುವ ಮಡಿವಾಳ, ಮತ್ತು ಅರ್ಕಾವತೀ ನದಿಯ ಬಲದಡದಲ್ಲಿನ ಕಾಣಿಕಾರನಹಳ್ಳಿ (ಕನಕಪುರ)ಗಳು ಪ್ರಖ್ಯಾತವಾದವು. ಈ ಕಾಣಿಕಾರನಹಳ್ಳಿಯ ಬಳಿಯ ಅರ್ಕಾವತೀ ಬಲದಡದಲ್ಲಿಯೇ ಪ್ರಭುದೇವರ ಪರಂಪರೆಯವರಾದ ನಿರಂಜನ ಸ್ವಾಮಿಗಳ ಗಣಸಮೂಹದ ನೂರೊಂದು ವಿರಕ್ತಮೂರ್ತಿಗಳಲ್ಲಿ ಒಬ್ಬರಾದ ಆದ್ಯ ನಿರ್ವಾಣ ಸ್ವಾಮಿಗಳವರು ನೆಲಸಿದರೆಂದೂ, ಅದೇ ದೇಗುಲ ಕ್ಷೇತ್ರವೆಂದೂ, ಅಲ್ಲಿಯೇ ಆ ಮಹಾಮಹಿಮರು ತಮ್ಮ ಶಿವಯೋಗಾನುಷ್ಠಾನದಿಂದ ಅನೇಕ ಮಹಿಮೆಗಳನ್ನು ತೋರಿದರೆಂದೂ ಪ್ರತೀತಿ ಇದೆ. ಈ ಕಾರಣಗಳಿಂದ ದೇಗುಲ ಮಠದ ಪರಂಪರೆ ಕಳೆದ ಆರು ಶತಮಾನಗಳಿಂದ ಬೆಳೆದು ಬಂದಿದೆಯೆನ್ನಬಹುದು.

## ಆದ್ಯ ಶ್ರೀ ನಿರ್ವಾಣ ಸ್ವಾಮಿಗಳು

ಸ್ವತಸ್ಸಿದ್ಧರಾದ ಆದ್ಯ ಶ್ರೀ ನಿರ್ವಾಣ ಸ್ವಾಮಿಗಳು ಅಲ್ಲಮ ಪ್ರಭು ಪರಂಪರೆಯವರಾಗಿದ್ದರೆಂಬುದು ವಿದಿತವೇ ಆಗಿದೆ. ಅವರು ಮಹಾವಿರತರು. ಅಣಿಮಾದಿ ಅಷ್ಟಸಿದ್ಧಿಗಳನ್ನು ಸಾಧಿಸಿ ಜನಮನವನ್ನು ಆಕರ್ಷಿಸಬೇಕೆಂಬ ಹವಣಿಕೆ ಅವರಿಗಿರಲಿಲ್ಲ. ಅವಿರತ ನಿಷ್ಠೆಯಿಂದಾಗಿ ಅಷ್ಟಸಿದ್ಧಿಗಳು ಅವರನ್ನು ಹಿಂಬಾಲಿಸಿದವು. ಲೋಕ ಲೌಕಿಕದಲ್ಲಿ ಅವರು ತೊಡಗಿದವರಲ್ಲ. ಆದರೂ 'ಜಾಣನು ಲೌಕಿಕ ಪಾರಮಾರ್ಥವೆರಡನ್ನೂ ಮಾಣದೆ ನಡೆಸುತ್ತಿಹ'ನೆಂಬ ಶ್ರೀ ನಿಜಗುಣ ಶಿವಯೋಗಿಗಳ ಉಕ್ತಿಯಂತೆ, ದೇಹಧಾರಿಯಾಗಿದ್ದು ಲೋಕದವರನ್ನು ಪಾರಮಾರ್ಥ ಪಥಕ್ಕೆ ಕರೆದೊಯ್ಯಲು ಬೇಕಾಗುವಷ್ಟು ವ್ಯವಹಾರದಿಂದ ದೂರವಾದವರಲ್ಲ. ತೋರಿಕೆಗೆ ಮಾತ್ರ ಲೋಕದವರಂತಿದ್ದು, ತಮ್ಮ ನಿಜದರಿವಿನ ಎಚ್ಚರದಲ್ಲಿ 'ಬಿಂದನುಲಿ'

* ನಿರಂಜನ ವಂಶ ರತ್ನಾಕರ—ಭಾಗ ೨. ಪುಟ ೧೨೭ – ಶ್ರೀ ಚನ್ನಮಲ್ಲಿಕಾರ್ಜುನರ "ಸದ್ಧರ್ಮ ದೀಪಿಕೆ."

*೧ ಇವರು ವಿಜಯನಗರದ ಪ್ರೌಢದೇವರಾಯನ ಕಾಲದ ನೂರೊಂದು ವಿರಕ್ತರಿಂದ ಭಿನ್ನರಿರಬಹುದು (?)

ಯುತಿದ್ದವರು. ಸಾಧಕರನ್ನು ಅನಿತ್ಯದಿಂದ ನಿತ್ಯಕ್ಕೆ ಒಯ್ಯುವ ದಾರಿದೀಪವಾಗಿದ್ದರು, ಸರ್ವೇಂದ್ರಿಯ ವ್ಯವಹಾರಗಳನ್ನೂ ಲಿಂಗಭೋಗವಾಗಿ ಪರಿವರ್ತಿಸಿ ಲಿಂಗಭೋಗೋಪಭೋಗಿಗಳಾಗಿದ್ದವರು. ಸರ್ವ ಸಮತಾಭಾವವುಳ್ಳವರಾಗಿ ವಿಶಿಷ್ಟ ಪ್ರಾಣಿವರ್ಗದಲ್ಲೂ ದಯಾಪರರಾಗಿದ್ದವರು. ಮನದ ಸಂಕಲ್ಪ ವಿಕಲ್ಪಗಳನ್ನು ಅಳಿದವರು. ಜೀವನ್ಮುಕ್ತರು. ಪರಮ ವೈರಾಗ್ಯಮೂರ್ತಿಗಳು.

ಶ್ರೀಗಳು ಪೂಜಾಧ್ಯಾನಾಸಕ್ತರಾಗಿರುತ್ತ ಸದಾ ಶಿವಯೋಗನಿರತರಾಗಿದ್ದರು. ಕೌಪೀನಧಾರಿಗಳಾಗಿ ಭಸ್ಮರುದ್ರಾಕ್ಷಭೂಷಣರಾಗಿರುತ್ತಿದ್ದರು. ಶಿವತೇಜಸ್ಸಿನಿಂದ ಉಜ್ವಲಗೊಂಡಿತ್ತು ಅವರ ದಿವ್ಯಮೂರ್ತಿ ಸ್ವರೂಪ. ಅವರ ಪರಿಪೂರ್ಣವಾದ ಶಿವಜ್ಞಾನ ಸಂಪತ್ತು, ಜ್ಞಾನಕ್ರಿಯಾಸಮನ್ವಯ ದೃಷ್ಟಿ, ನಡೆನುಡಿಗಳ ಹೊಂದಾಣಿಕೆ, ವಿಶಾಲ ದೃಷ್ಟಿ, ಸದ್ಭಕ್ತಿಭಾವಗಳಿಂದಾದ ನಿರ್ಮಲ ಚರಿತ್ರೆ–ಇವು ಅವರ ವ್ಯಕ್ತಿತ್ವವನ್ನು ರೂಪಿಸಿದ್ದವು. ಅವರಿಂದಾಗಿ, ಆ ಮಹಾತ್ಮರು ನೆಲಸಿದ ಕ್ಷೇತ್ರ ಸುಕ್ಷೇತ್ರವೆನಿಸಿತು. ಅವರ ಪ್ರಭಾವ ಎಲ್ಲೆಡೆಯೂ ಹಬ್ಬಿ, ದಿನದಿನವೂ ನಾಡಿನ ನಾನಾಮೂಲೆಗಳಿಂದ ಭಕ್ತ ಸಮೂಹವು ಶ್ರೀಗಳ ದರ್ಶನಾಶೀರ್ವಾದಗಳಿಗೆ ಧಾವಿಸಿ ಬರುತ್ತಿತ್ತು–ಆ ಸಾಕಾರ ಶಿವನ ಸಂದರ್ಶನಕ್ಕಾಗಿ. ಆ ಕಾರಣದಿಂದ ಈ ಕ್ಷೇತ್ರಕ್ಕೆ ದೇಗುಲ (ದೇವಸ್ಥಾನ) ಮಠವೆಂಬ ಪ್ರತೀತಿಯುಂಟಾದುದು ಸಹಜವೇ ಆಗಿದೆ.

ಆದ್ಯ ಶ್ರೀ ನಿರ್ವಾಣ ಸ್ವಾಮಿಗಳು ಅನುಪಮ ಬೋಧಾಗುರುಗಳೂ ಆಗಿದ್ದುದರಿಂದ ಅನೇಕ ಮೋಕ್ಷಾರ್ಥಿಗಳು ಅವರ ಉಪದೇಶಾಮೃತವನ್ನು ಪಡೆಯಲು ಕಾತರರಾಗಿ ಬರುತ್ತಿದ್ದರಷ್ಟೆ. ಶ್ರೀಗಳು ಮುಮುಕ್ಷುಗಳ ಮಾನಸಿಕ ಶಕ್ತಿಯನ್ನರಿತು ಅವರವರ ಅಂತಸ್ತಿಗೆ ತಕ್ಕಂತೆ ಅಧ್ಯಾತ್ಮ ವಿಚಾರಗಳನ್ನರುಹಿ ಮಾರ್ಗದರ್ಶನವೀಯುತ್ತಿದ್ದರು. ಕಲ್ಯಾಣದ ಶಿವಶರಣರ ವಚನಾನುಭವವನ್ನೇ ಬಹುಮಟ್ಟಿಗೆ ಬೋಧಿಸುತ್ತಿದ್ದುದಾಗಿ ತಿಳಿದು ಬಂದಿದೆ.

ಆದ್ಯ ನಿರ್ವಾಣ ಸ್ವಾಮಿಗಳ ಮಹಿಮಾತಿಶಯವನ್ನು ತಿಳಿಸುವ ಹಲವು ನಿದರ್ಶನಗಳು ಈ ಪ್ರಾಂತದಲ್ಲಿ ಜನ ಜನಿತವಾಗಿವೆ.

"ಸಚ್ಚಿದಾನಂದ ಸ್ವರೂಪ ಶಿವನು ಪ್ರಕೃತಿ ರೂಪಿಂದ ನಾಲ್ವರು ಶಕ್ತಿಯರು ಅವತರಿಸಿ, ನಿತ್ಯರಾದ ಆದ್ಯ ನಿರ್ವಾಣ ಸ್ವಾಮಿಗಳವರನ್ನು ಕಾಯೇನ ವಾಚಾ ಮನಸಾ ಭಕ್ತಿಪೂರ್ವಕ ಸೇವಿಸುತ್ತಿದ್ದರಂತೆ! ಶಿವನಲ್ಲಿ ಅವಿನಾಭೂತವಾಗಿರುವ ಶಿವನ ನಿಜದ ನಿಲುವನ್ನು ಗುರುಮುಖದಿಂದ ಅರಿತು ಆರಾಧಿಸಬೇಕೆಂಬುದೇ ಅವರ ಮನದಾಸೆಯಾಗಿತ್ತಂತೆ! ಮಹಾಕಾಲ ಬರಲು ಆ ಸ್ವಾಮಿಗಳವರ ಕೃಪೆಯಿಂದ ಅವರಿಷ್ಟ ಸಾಧ್ಯವಾಗಿ ಆ ನಾಲ್ವರೂ ಕೃತಾರ್ಥರಾದರಂತೆ!........"

"ವಿರುಪಸಂದ್ರ, ಕುರುಪೇಟೆ, ಮಳಗಾಳು ಮತ್ತು ಕನಕಪುರ–ಈ ನಾಲ್ಕು ಗ್ರಾಮಗಳಲ್ಲಿ ಗುಡಿಕಟ್ಟಿ ಆ ನಾಲ್ವರು ಶಕ್ತಿಯರನ್ನು ಸಂಕೇತ ಸಂಸ್ಮರಣಾರೂಪ

ದಿಂದ ಇಂದಿಗೂ ಪೂಜಿಸುತ್ತಿದ್ದಾರೆ. ಆಯಾ ಪೂರಮಂದಿ ಪ್ರತಿವರ್ಷವಲ್ಲೂ ಆಯಾ ದೇವಾಲಯುಗಳ ಮುಂಭಾಗದಲ್ಲಿ 'ಕೊಂಡ' ಮಾಡುವಾಗ ದೇಗುಲ ಮಠ ದಿಂದ ಆ ದೇವಿಯರಿಗೆ ಸೋಗಿಲು ತುಂಬುವ–ತೀರ್ಥ ಕೊಡುವ ಪದ್ಧತಿಯನ್ನು ಇವೊತ್ತಿಗೂ ಕಾಣಬಹುದು. ತೌರಿಂದ ಬೀಳ್ಕೊಡುವ ಮಗಳಿಗೆ ತಾಯಿಯಕ್ಕಿ ಲೇಸ ಬಯಸಿ ಆಶೀರ್ವದಿಸುವ ಸಂಪ್ರದಾಯುವದು. ಭಕ್ತಕೋಟಿಯನ್ನು ಶುದ್ಧಗೊಳಿಸು ವುದಕ್ಕಾಗಿ ಗುರುಗಳು ಕರುಣಿಸುವ ಒಳ್ಳೆಯ ರೂಢಿಯಿದು."

"ಆದ್ಯ ನಿರ್ವಾಣ ಸ್ವಾಮಿಗಳವರು ಒಮ್ಮೆ ಕೊಲ್ಲಾಪುರ ಪಟ್ಟಣದಲ್ಲಿದ್ದಾಗ ಆ ನಾಲ್ವರು ಉಪಶಕ್ತಿಯರೂ ಎಳೆಕೂಸುಗಳ ಆಕಾರದಿಂದ ಆಗಮಿಸಿ, ಶ್ರೀ ಶ್ರೀ ಗಳವರ ಕೃಪಾಛತ್ರದ ಆಶ್ರಯವನ್ನು ಅಪೇಕ್ಷಿಸಿದರೆಂದೂ ಕರುಣಾಳು ಶ್ರೀಗಳವರು ಆ ಮಾಯದ ಕಂದಮ್ಮಗಳನ್ನು ಕರೆತಂದು ತಮ್ಮ ಮಠದಲ್ಲಿ ಅಕ್ಕರೆಯಿಂದ ಪೋಷಿಸಿ ಕಡೆಗೆ ಶಿವೆಯ ಗುಹ್ಯಾದ್ಗುಹ್ಯತರ ಸ್ವರೂಪವನ್ನು ಅರಿವುಗೊಳಿಸಿ ಕಟಾಕ್ಷಿಸಿದರೆಂದೂ ಪ್ರತೀತಿ''*

ಒಂದು ದಿನ ಪ್ರಾತಃಕಾಲ ಸೂರ್ಯೋದಯದ ಸಮಯ. ಶಿವಭಕ್ತ ಕನ್ಯೆ ಯೊಬ್ಬಳು ತನ್ನ ಓರಗೆಯ ಗೆಳತಿಯರೊಡನೆ ಅರ್ಕಾವತಿ ನದಿಯಿಂದ ನೀರು ಹೊತ್ತು ತರುತ್ತಿದ್ದಳು. ಆದ್ಯ ನಿರ್ವಾಣ ಸ್ವಾಮಿಗಳವರು ಆಗತಾನೇ ಶಿವಪೂಜೆ ಮುಗಿಸಿ ಮಠದ ಹೊರ ಆವರಣದಲ್ಲಿ ನಿಂತಿದ್ದರು. ಕೌಪೀನಧಾರಿಗಳಾಗಿ ಭಸ್ಮರುದ್ರಾಕ್ಷಗಳನ್ನು ಧರಿಸಿ ನಿಂತಿದ್ದ ಸಾಕ್ಷಾತ್ ಶಿವಸ್ವರೂಪಿ ಶ್ರೀಗಳನ್ನು ಆ ಕನ್ಯೆಯರು ಸಂದರ್ಶಿಸಿದರು.

ನೀರಿನ ಕೊಡಗಳನ್ನಿಳಿಸಿ ಪಾದಕ್ಕೆ ನಮಸ್ಕರಿಸಿದರು. ದಯಾರ್ದ್ರಹೃದಯರಾದ ಶ್ರೀಗಳು ಹಸನ್ಮುಖರಾಗಿ, ಅವರ ಮನವನ್ನು ಪರೀಕ್ಷಿಸುವ ಸಲುವಾಗಿ ಕೌಪಕ್ಕಾಗಿ ತುಂಡು ಪಾವಡ ಕೊಡುವಂತೆ ಕೇಳಿದರು. ಒಬ್ಬ ಜಾಣಕನ್ಯೆಯು ತನ್ನ ನೂತನ ಪೀತಾಂಬರದ ಸೀರೆಯ ಸೆರಗನ್ನೇ ಹರಿದು ಸ್ವಾಮಿಗಳಿಗೆ ಭಕ್ತಿಯಿಂದ ಅರ್ಪಿಸಿ ನಮ ಸ್ಕರಿಸಿದಳು. ಎಲ್ಲರೂ ತಮ್ಮ ಮನೆಯ ಕಡೆಗೆ ತೆರಳಿದರು. ಪಾವಡವನ್ನಿತ್ತ ಕನ್ಯೆ ನಡೆದ ವೃತ್ತಾಂತವನ್ನು ತನ್ನ ತಂದೆ ತಾಯಿಗಳಿಗೆ ತಿಳಿಸಿದಳು. ಹರಿದ ತನ್ನ ಸೀರೆಯ ಸೆರಗನ್ನು ಅವರಿಗೆ ತೋರಿಸಿ ನೋಡುವಲ್ಲಿ ಸೀರೆಯ ಸೆರಗು ಹರಿದಿರದೆ ಮೊದಲಿ ನಂತೆಯೇ ಇದ್ದಿತು! ಅದನ್ನು ನೋಡಿ ಎಲ್ಲರೂ ಆಶ್ಚರ್ಯಪಟ್ಟರು. ಕೂಡಲೇ ಆಕೆಯ ತಂದೆ ತಾಯಿಗಳೂ ಬಂಧು ಮಿತ್ರರೂ ಓಡಿ ಬಂದು ಶ್ರೀಗಳನ್ನು ಸಂದರ್ಶಿಸಿ ಸಾಷ್ಟಾಂಗ ಪ್ರಣತರಾಗಿ, ಗುರುವಿನ ಮಹಿಮೆಯನ್ನು ಮನಸಾರೆ ಕೊಂಡಾಡಿದರು.

ಆದ್ಯ ನಿರ್ವಾಣಸ್ವಾಮಿಗಳ ಈ ಬಗೆಯ ಮಹಿಮೆಗಳನ್ನು ತಿಳಿಸುವ ಪ್ರಸಂಗ ಗಳು ಜನಮನದಲ್ಲಿ ಈಗಲೂ ನೆಲಸಿವೆ. ನಿಗ್ರಹಾನುಗ್ರಹ ಸಮರ್ಥರಾದ ಈ ಮಹಿ

* ಯೋಗಭೂಮಿ– ಶ್ರೀ ವೀರಭದ್ರ ಶಿವಾಚಾರ್ಯರು. ಪುಟಗಳು ೧೪–೧೫

ಮಾರು ೧೨೦ ವರ್ಷಕಾಲ ಬಾಳಿ ಲಿಂಗೈಕ್ಯರಾದರು. ಅವರ ಮೂಲ ಗದ್ದುಗೆಯು ಶ್ರೀಮಠದಲ್ಲಿದೆ.

## ಶ್ರೀ ದೇವಲಿಂಗ ಸ್ವಾಮಿಗಳು

ಆದ್ಯ ಶ್ರೀ ನಿರ್ವಾಣ ಸ್ವಾಮಿಗಳ ಸೇವೆಯಲ್ಲಿದ್ದವರು ಶ್ರೀ ದೇವಲಿಂಗ ಸ್ವಾಮಿಗಳು. ಗುರುಗಳ ಸೇವೆಯನ್ನು ಕಠಿಣವ್ರತದಂತೆ ಭಕ್ತಿಯಿಂದ ನಿಷ್ಠೆಯಿಂದ ಆಚರಿಸಿದವರು ಅವರು. ಗುರುವಿನ ಕೃಪೆಗೆ ಪಾತ್ರರಾಗಿದ್ದುದಲ್ಲದೆ, ಅವರು ಅತ್ಯಂತ ಸೂಕ್ಷ್ಮಮತಿಗಳೂ ಆಗಿದ್ದವರು. ಗುರುವಿನ ಪೂರ್ಣಾನುಗ್ರಹವನ್ನು ಪಡೆದ ಬಳಿಕ ಅವರು ಪ್ರತ್ಯೇಕ ಆಶ್ರಮವೊಂದನ್ನು ತೆರೆದು ತಮ್ಮ ಅನುಷ್ಠಾನವನ್ನು ಬೆಳೆಸುತ್ತಾ ಬಂದರು. ಆ ನೂತನ ಆಶ್ರಮವೇ ಚಿಕ್ಕಮಠವೆಂಬ ಹೆಸರು ತಾಳಿತು. ಗುರುಗಳ ಆದರ್ಶವನ್ನೇ ಅವರೂ ಪಾಲಿಸಿದರು. ಶಿವಶರಣರ ವಚನಾನುಭವವನ್ನೂ ಯೋಗ ಮತ್ತು ಶಾಸ್ತ್ರ ಪಾಂಡಿತ್ಯವನ್ನೂ ಪಡೆದರು. ತತ್ತ್ವಾರ್ಥ ವಿವೇಚನೆಯಲ್ಲಿ ಬಹಳ ಆಸಕ್ತರಾಗಿದ್ದರು. ಶಿವಯೋಗ ನಿಷ್ಠರು. ಗುರುಗಳಂತೆ ವೀರವೈರಾಗ್ಯ ಮೂರ್ತಿಗಳು, ಶಿವಪೂಜಾದುರಂಧರರು. ಅವರ ಪೂಜಾನುಷ್ಠಾನ ಪ್ರಭಾವವೂ ಅನಂತರೂಪದಲ್ಲಿ ಹೊರ ಹೊಮ್ಮುತ್ತಿತ್ತು.

ಶ್ರೀ ಮಠದ ವ್ಯಾಪ್ತಿಗೆ ಸೇರಿದ ಸ್ಮಶಾನ ಭೂಮಿಯಲ್ಲಿ ಖನನ ಮತ್ತು ದಹನ ಕ್ರಿಯೆಗಳೆರಡೂ ಪ್ರತ್ಯೇಕ ಸ್ಥಾನಗಳಲ್ಲಿ ನಡೆಸಲ್ಪಡುತ್ತಿದ್ದವು. ಆದರೆ, (ದಹನಕಾಲ) ದಲ್ಲಿ ಶಿರಸ್ಸು ಸಿಡಿಯುವ ಭೇದನ ಶಬ್ದವುಂಟಾಗುತ್ತಿದ್ದುದರಿಂದ ಪೂಜಾನುಷ್ಠಾನದ ಶಾಂತಿಮಯ ವಾತಾವರಣವು ಕಲಕುವ ಸಂಭವವಿರುತ್ತಿದ್ದುದರಿಂದ, ಅಂದಿನಿಂದಾಚೆಗೆ ದಹನ ಕಾಲದ ಶಿರೋಭೇದನ ಶಬ್ಧವಾಗದಂತೆ ಶ್ರೀಗಳ ಅಪ್ಪಣೆಯಾಯಿತು. ಶ್ರೀಗಳ ತಪಃಪ್ರಭಾವದಿಂದಾಗಿ ಇಂದಿಗೂ ಮಠದ ವ್ಯಾಪ್ತಿಯಲ್ಲಿ ಆ ಶಬ್ದ ಕೇಳಿಸದಂತಾಗಿದೆ.

ತಮ್ಮ ಗುರುಗಳಂತೆಯೇ ಶ್ರೀ ದೇವಲಿಂಗ ಸ್ವಾಮಿಗಳು ಮಹಾತಪಸ್ವಿಗಳಾಗಿದ್ದುದಲ್ಲದೆ, ಭಕ್ತರ ಇಷ್ಟಾರ್ಥಗಳನ್ನು ತಮ್ಮ ಕೃಪಾದೃಷ್ಟಿಯಿಂದ ನೆರವೇರಿಸುತ್ತಿದ್ದರು. ವ್ಯಾಧಿಗ್ರಸ್ತರಿಗೂ ಸಾಂಸಾರಿಕ ತೊಂದರೆಗಳಿಂದ ಪೀಡಿತರಾಗಿದ್ದವರಿಗೂ ಆಶೀರ್ವದಿಸಿ ತೊಂದರೆ ನಿವಾರಣೆ ಮಾಡುತ್ತಿದ್ದರು.

ಶ್ರೀಗಳು ದೇಗುಲ ಮಠದಲ್ಲಿಯೇ ಲಿಂಗೈಕ್ಯರಾದರು. ಅವರ ಗದ್ದುಗೆ ಚಿಕ್ಕ ಮಠದಲ್ಲಿದೆ.

## ಶ್ರೀ ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರ ಪರಂಪರೆಯ ಸಂಬಂಧ

೧೫ನೆಯ ಶತಮಾನದಲ್ಲಿ ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರರು ೬೩ ಮಂದಿ ವಿರಕ್ತ ಮೂರ್ತಿಗಳೊಡನೆ ಕನಕಪುರಕ್ಕೆ ಏಳುಮೈಲಿ ದೂರದಲ್ಲಿದ್ದ ಅರಣ್ಯ



ಶ್ರೀ ಶ್ರೀ ಚನ್ನಬಸವ ಸ್ವಾಮಿಗಳವರ
ಗದ್ದುಗೆ



ಇಮ್ಮಡಿ ಶ್ರೀ ಶ್ರೀ ಮರುಳ ಸಿದ್ಧಸ್ವಾಮಿಗಳವರ
ಗದ್ದುಗೆ



ಲಿಂಗೈಕ್ಯ ಇಮ್ಮಡಿ ಶ್ರೀ ನಿರ್ವಾಣ ಸ್ವಾಮಿಗಳವರ
ಗದ್ದುಗೆ



ಲಿಂ. ಶ್ರೀ ನಿರ್ವಾಣ ಸ್ವಾಮಿಗಳವರು ಭಕ್ತಾದಿಗಳಿಗೆ
ಸಂದರ್ಶನವೀಯುತ್ತಿದ್ದ ವೇದಿಕೆ

ಪ್ರದೇಶಕ್ಕೆ ಬಂದರು. ಅಲ್ಲಿನ ಗವಿಯೊಂದರಲ್ಲಿ ಅನೇಕ ದಿನಗಳವರೆಗೆ ಶಿವಯೋಗಾನು ಷ್ಠಾನದಲ್ಲಿ ನಿಂತರು. ಹತ್ತಿರದ ಮರಳೆ ಗ್ರಾಮದ ಭಕ್ತರ ಕೋರಿಕೆಯಂತೆ ಆ ಸ್ಥಳ ದಲ್ಲಿ ತಮ್ಮೊಡನಿದ್ದ ವಿರಕ್ತಮೂರ್ತಿಗಳಲ್ಲಿ ಒಬ್ಬರಾದ ಶ್ರೀ ಕಾಲಾಗ್ನಿ ರುದ್ರ ಮುನಿಸ್ವಾಮಿಗಳೆಂಬುವರನ್ನು ಅಲ್ಲಿಯೇ ಇರಿಸಿ, ತಾವು ಮುಂದೆ ಪ್ರಯಾಣ ಬೆಳಸಿ ದರು. ಶ್ರೀಗಳಿಗಾಗಿ ಅಲ್ಲಿ ಒಂದು ಮಠ ಸ್ಥಾಪನೆಯಾಯಿತು. ಅದೇ ಇಂದಿನ ಮರಳೆ ಗವಿಮಠ. ಅಂದಿನಿಂದ ಅದು ಶಿವಯೋಗಿಗಳ ಪವಿತ್ರ ನೆಲೆವೀಡೆನಿಸಿತು. ಶ್ರೀ ಕಾಲಾಗ್ನಿರುದ್ರಮುನಿ ಸ್ವಾಮಿಗಳ ಸ್ಮಾರಕವಾದ ಮುನೇಶ್ವರಸ್ವಾಮಿ ಬೆಟ್ಟವು ಶ್ರೀಕ್ಷೇತ್ರದ ಬಳಿ ಇದೆ.

ಅದಾದ ಅನತಿಕಾಲದಲ್ಲಿಯೇ ಶ್ರೀ ಮರಳೆ ಗವೀಮಠಕ್ಕೂ ಶ್ರೀ ದೇಗುಲ ಮಠಕ್ಕೂ ಆಧ್ಯಾತ್ಮಿಕ ಸಂಬಂಧ ಬೆಳೆಯತೊಡಗಿತು. ಶ್ರೀ ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರ ಪ್ರವರಾನ್ವಿತರಾದ ಅಲ್ಲಿನ ಶ್ರೀಗಳಿಗೂ ದೇಗುಲ ಮಠದ ಅಂದಿನಿಂದೀ ಚಿನ ಕೆಲವು ಶ್ರೀ ಗಳಿಗೂ ಶಿವಯೋಗ ವಿಚಾರ ವಿನಿಮಯ ಹಾಗೂ ಅನುಭವ ಸಾಮ ರಸ್ಯ ವಿಚಾರಗಳಲ್ಲಿ ಹೆಚ್ಚಿನ ಸಂಪರ್ಕ ಬೆಳೆಯಿತು. ಈ ಅಂಶಗಳಿಂದ ಉಭಯ ಮಠಾಧೀಶರುಗಳೂ ಶ್ರೀ ಜಗದ್ಗುರು ಅಲ್ಲಮಪ್ರಭು ಸಂಪ್ರದಾಯದ ಶಾಖಾಮಠ ಗಳೆಂಬ ಅಂಶವು ಸ್ಪಷ್ಟವಾಗುತ್ತದೆ.

## ಶ್ರೀ ನಂಜಯ್ಯ ಸ್ವಾಮಿಗಳು

ಶ್ರೀ ... ನಿರ್ವಾಣ ಸ್ವಾಮಿಗಳನಂತರ ದೊಡ್ಡಮಠದ ಅಧಿಕಾರ ವಹಿಸಿ ಕೊಂಡವರಲ್ಲಿ ಶ್ರೀ ನಂಜಯ್ಯ ಸ್ವಾಮಿಗಳು ಮುಖ್ಯರಾದವರು. ಇವರು ವೀರ ವೈರಾಗ್ಯ ಮೂರ್ತಿಗಳಾಗಿದ್ದು, ಶಾಸ್ತ್ರಪಾಂಡಿತ್ಯವನ್ನು ಗಳಿಸಿದ್ದರು. ಇವರು ಕೆಲವು ಕಾಲ ಶಿವಕ್ಷೇತ್ರಗಳ ಪ್ರವಾಸ ಮಾಡಿ ಮಠಕ್ಕೆ ಹಿಂತಿರುಗಿದರು. ಮಠದ ಅಭಿವೃದ್ಧಿ ಕಾರ್ಯಕ್ಕೆ ಗಮನ ಕೊಟ್ಟರು.

## ಶ್ರೀ ನಾಗಲಿಂಗ ಸ್ವಾಮಿಗಳು

ಲಿಂಗೈಕ್ಯರಾದ ಶ್ರೀ ದೇವಲಿಂಗಸ್ವಾಮಿಗಳು ಚಿಕ್ಕಮಠದ ಉತ್ತರಾಧಿಕಾರ ವನ್ನು ತಮ್ಮ ಕರಕಮಲ ಸಂಜಾತರಾದ ಶ್ರೀ ನಾಗಲಿಂಗ ಸ್ವಾಮಿಗಳಿಗೆ ವಹಿಸಿದರು ನೂತನ ಶ್ರೀಗಳು ತಮ್ಮ ಗುರುಗಳ ಸೇವೆಯನ್ನು ಸಂತತವಾಗಿ ನಡೆಸಿದವರು ಮತ್ತು ಅವರ ಪೂರ್ಣ ವಾತ್ಸಲ್ಯವನ್ನು ಗಳಿಸಿದ್ದವರು. ಅಲ್ಲದೆ, ಅವರು ಶಿವಧರ್ಮನಿಷ್ಠೆ ಯುಳ್ಳವರು. ಶರಣ ಮಾರ್ಗದಲ್ಲಿ ಅಚಲ ಶ್ರದ್ಧೆಯುಳ್ಳವರು, ಶಾಸ್ತ್ರಪರಿಚಯವುಳ್ಳ ವರೂ ... ಆಗಿದ್ದರು. ವಿನಯ, ವಿಶಾಲದೃಷ್ಟಿ, ದಯೆ, ಸೌಶೀಲ್ಯಾದಿ ಸದ್ಗುಣಸಂಪನ್ನರಾಗಿದ್ದವರು. ತ್ರಿಕಾಲ ಪೂಜಾಸಕ್ತರು. ಅವರ ಸಾನ್ನಿಧ್ಯ ದರ್ಶನ

ಲಾಭ ಪಡೆಯಲು ಬಂದ ಭಕ್ತರ ಕಷ್ಟ ನಷ್ಟಗಳನ್ನು ಸಾವಧಾನ ಚಿತ್ತದಿಂದ ಆಲಿಸಿ ಪರಿಹಾರೋಪಾಯವನ್ನು ತಿಳಿಸುತ್ತಿದ್ದರು. ಧರ್ಮ ಸ್ವರೂಪವನ್ನು ಶ್ರೋತೃಗಳಿಗೆ ಮುಂದಟ್ಟು ಮಾಡುತ್ತಿದ್ದರು. ಅವರ ಗದ್ದುಗೆ ಚಿಕ್ಕ ಮಠದಲ್ಲಿದೆ.

## ಶ್ರೀ ಮಹಾಲಿಂಗ ಸ್ವಾಮಿಗಳು

ಶ್ರೀ ನಂಜಯ್ಯ ಸ್ವಾಮಿಗಳು ಲಿಂಗೈಕ್ಯರಾದ ನಂತರ ದೇಗುಲ ಮಠದ ನಿರಾಭಾರಿ ಪೀಠವನ್ನಲಂಕರಿಸಿದವರು ಶ್ರೀ ಮಹಾಲಿಂಗ ಸ್ವಾಮಿಗಳು. ಆ ವೇಳೆಗೆ ಚಿಕ್ಕ ಮಠದ ಅಧಿಕಾರ ನಿರ್ವಹಣೆಯೂ ಅವರ ಪಾಲಿಗೇ ಬಂದಿತು. ಶ್ರೀಗಳು ಎರಡು ಮಠಗಳ ವ್ಯವಸ್ಥೆಯನ್ನು ದಕ್ಷತೆಯಿಂದ ನಿರ್ವಹಿಸಿದರು. ಶ್ರೀಗಳ ಅನುಷ್ಠಾನ ಶಿವಯೋಗ ಪ್ರಭಾವಗಳು ನಾಡಿನ ಎಲ್ಲಾ ಕಡೆಗಳಿಂದಲೂ ಭಕ್ತಸಂದೋಹವನ್ನು ಆಕರ್ಷಿಸಿದವು. ಕಲ್ಯಾಣದ ಶರಣರ ವಚನಾನುಭವದಲ್ಲಿ ಶ್ರೀಗಳು ನಿಷ್ಣಾತರು. ಭಜನೆ, ಅನುಭವ ಗೋಷ್ಠಿಗಳಿಂದ ಭಕ್ತರ ಹೃನ್ಮಂದಿರವನ್ನು ಬೆಳಗಿಸಿದವರು ಅವರು. ಸಮಾಜ ಜೀವನದಲ್ಲಿ ಆಗಾಗ್ಗೆ ತಲೆದೋರುತ್ತಿದ್ದ ವಿರಸ ವಿಭಿನ್ನತೆಗಳನ್ನು ಅಳಿಸಿ ಶಿವತತ್ತ್ವ ವಿಚಾರಗಳನ್ನು ಪ್ರಚುರ ಪಡಿಸುವುದರಲ್ಲಿ ಅವರಿಗೆ ತೀವ್ರವಾದ ಆಸಕ್ತಿ ಇತ್ತು. ಅವರ ಗದ್ದುಗೆ ಶ್ರೀ ಮಠದಲ್ಲಿದೆ.

## ಶ್ರೀ ಹುಚ್ಚಪ್ಪ ಸ್ವಾಮಿಗಳು

ಶ್ರೀ ಮಹಾಲಿಂಗ ಸ್ವಾಮಿಗಳು ಲಿಂಗೈಕ್ಯರಾದ ಬಳಿಕ ಈ ಪರಂಪರೆಯ ಚರ ಪಟ್ಟಾಧಿಕಾರವನ್ನು ವಹಿಸಿದವರು ಶ್ರೀ ಹುಚ್ಚಪ್ಪ ಸ್ವಾಮಿಗಳು. ಇವರು ಮಹಾನಿಷ್ಠ ಶಿವಯೋಗಿಗಳು. ಅವರ ಆತ್ಮಶಕ್ತಿ ಪ್ರಕೃತಿ ಶಕ್ತಿಯನ್ನೂ ಮೀರಿಸಿತ್ತು. ಅವರು ಸ್ವಲೀಲಾನಂದದಲ್ಲಿದ್ದ ಶಿವಯೋಗಿಗಳು. ಅವರ ಮಹಿಮೆಯನ್ನು ಕುರಿತ ಒಂದೆರಡು ನಿದರ್ಶನಗಳನ್ನಿಲ್ಲಿ ನಾವು ಕಾಣಬಹುದು.

ಪಕ್ಕದ ಗ್ರಾಮವೊಂದರ ಭಕ್ತನೊಬ್ಬನ ಮನೆಗೆ ಶ್ರೀಗಳು ಒಮ್ಮೆ ಬಿನ್ನಹಕ್ಕೆ ದಯಮಾಡಿಸಬೇಕಾಗಿತ್ತು. ಆ ಗ್ರಾಮವಿದ್ದುದು ನದಿಯ ಆಚೆದಡದಲ್ಲಿ. ಆ ಹಿಂದಿನ ರಾತ್ರಿ ವಿಶೇಷ ಮಳೆಯಾಗಿದ್ದುದರಿಂದ ನದಿಯಲ್ಲಿ ಪೂರ್ಣ ಪ್ರವಾಹವಿತ್ತು ನದಿಯನ್ನು ದಾಟುವುದು ಅಶಕ್ಯವಾಗಿತ್ತು. ಗಣಪರ್ವದ ಪ್ರಯುಕ್ತ ಬಿನ್ನಹ ಅನಿವಾರ್ಯವಾಗಿತ್ತು. ಮಧ್ಯಾಹ್ನವಾದರೂನದಿಯಲ್ಲಿ ಹಾಯ್ಗಡವಿರಲಿಲ್ಲ. ಶ್ರೀ ಹುಚ್ಚಪ್ಪಸ್ವಾಮಿಗಳು ಅಗಲವಾದ ಬಾಳೆಯೆಲೆಯೊಂದನ್ನು ತರಿಸಿ, ಅದರ ಮೇಲೆ ಕುಳಿತು ಧ್ಯಾನಾಸಕ್ತರಾದರು. ಸ್ವಲ್ಪ ಹೊತ್ತಿನಲ್ಲಿ ನದೀ ಪ್ರವಾಹದಲ್ಲಿ ತೇಲಿ ಆಚೆ ದಡವನ್ನು ನಿರಾತಂಕವಾಗಿ ತಲುಪಿದರು. ಆ ದಿನದ ಅವರ ಬಿನ್ನಹ ಬಿಡುಗಡೆ ಕರ್ತವ್ಯ ಯಶಸ್ವಿಯಾಗಿ ನೆರವೇರಿತು.

ಮತ್ತೊಂದು ದಿನ ಶ್ರೀಗಳು ಹೂದೋಟದಲ್ಲಿ ಅಡ್ಡಾಡುತ್ತಿರುವ ವೇಳೆಯಲ್ಲಿ ನಾಗರಹಾವೊಂದು ಅವರ ಪಾದಾಂಗುಷ್ಠವನ್ನು ಕಚ್ಚಿತು. ಶ್ರೀಗಳು ಅದನ್ನು ವೃಷ್ಟಿಸಿ ನೋಡಿದರು. ಹಾವು ಹೊರಳಾಡಿ ಪ್ರಾಣಬಿಟ್ಟಿತು. ಶ್ರೀಗಳವರಿಗೆ ಯಾವ ತೊಂದರೆಯೂ ಆಗಲಿಲ್ಲ. ಸತ್ತುಬಿದ್ದ ಹಾವನ್ನು ಅವರು ಕರುಣೆಯಿಂದ ವೃಷ್ಟಿಸಿದರು. ಹಾವಿನ ಪ್ರಾಣ ಮರಳಿ, ಅದು ಹರಿದುಹೋಯಿತು, ಅಂದು ಶ್ರೀಗಳು 'ಮಠದ ಎಲ್ಲೆಡೆಯಲ್ಲಿ ಸರ್ಪದಷ್ಟವಾದರೂ ವಿಷವೇರದಿರಲಿ' ಎಂದು ಉದ್ಗರಿಸಿದರಂತೆ! ಅಂದಿನಿಂದ ಮಠದ ಸುತ್ತಣ ಪ್ರದೇಶದಲ್ಲಿ ಇಂದಿಗೂ ಹಾವು ಕಚ್ಚಿದವರು ಮರಣ ಹೊಂದುತ್ತಿಲ್ಲ.

ಶ್ರೀ ಹುಚ್ಚಪ್ಪಸ್ವಾಮಿಗಳ ಈ ಬಗೆಯ ಅನೇಕಾನೇಕ ಮಹಿಮೆಗಳು ಜನಮನದಲ್ಲಿ ಉಳಿದು ಬಂದಿವೆ.

## ಮೈಸೂರು ರಾಜಮನೆತನದವರಿಂದ ಕೊಡುಗೆ

ಆ ವೇಳೆಗೆ ದೇಗುಲ ಮಠದ ಗುರು ಪರಂಪರೆಯ ಪ್ರಭಾವವು ನಾಡಿನ ಎಲ್ಲೆಡೆಯೂ ಹಬ್ಬಿತು. ಈ ಕ್ಷೇತ್ರದ ಮಹಿಮೆ ಮೈಸೂರು ರಾಜಮನೆತನದವರನ್ನೂ ಆಕರ್ಷಿಸಿತು. ಶಾಲಿವಾಹನಶಕ ೧೫೮೯ ಪ್ಲವಂಗ ಸಂ. ಭಾದ್ರಪದ ಶುದ್ಧ ೧೫ ಶುಕ್ರವಾರ (ಕ್ರಿ. ಶ. ೧೬೬೭ ಆಗಸ್ಟ್ ೨೩) ದಲ್ಲಿ ದೊಡ್ಡ ದೇವರಾಜ ಒಡೆಯರು ಮೈಸೂರು ಸಿಂಹಾಸನಾಧೀಶರಾಗಿದ್ದಾಗ, ಅವರ ಸ್ವಬಂಧುವೂ ದಳವಾಯಿಯೂ ಆಗಿದ್ದ ದಳವಾಯಿ ಕುಮಾರಯ್ಯನ ತಾಯಿ ತಿಮ್ಮಮ್ಮಣ್ಣಿಯವರು ದೇಗುಲ ಮಠ*ಕ್ಕೆ ಬಂದು ಶ್ರೀಗಳ ದರ್ಶನಾಶೀರ್ವಾದವನ್ನು ಪಡೆದರು. ಅವರು ಅಂದಿನ ಶ್ರೀಗಳ ಮಹಿಮೆಯನ್ನರಿತು ನಮ್ರ ಭಕ್ತಿಕಾಣಿಕೆಯನ್ನೂ ರಾಜೋಚಿತ ಗೌರವಗಳನ್ನೂ ಗುರುಸನ್ನಿಧಿಗೆ ಅರ್ಪಿಸಿದರು. ಅಲ್ಲದೆ ಮಠವನ್ನು ಕಟ್ಟಿಸಿ ಭೂಸ್ವಾಸ್ತಿಯನ್ನು ದಾನ ಮಾಡಿದರು. *೧

ಕೆಲವು ವರ್ಷಗಳು ಕಳೆದ ನಂತರ ದಳವಾಯಿ ಕುಮಾರಯ್ಯನ ತಾಯಿ ತಿಮ್ಮಮ್ಮಣ್ಣಿಯವರು ಗತಿಸಿದುದರಿಂದ, ಅವರ ಉತ್ತರ ಕರ್ಮಾದಿಗಳ ಸಂಬಂಧವಾಗಿ ಅಸ್ಥಿಶೇಷವನ್ನು ಗಂಧದ ಪೆಟ್ಟಿಗೆಯಲ್ಲಿಟ್ಟು ಅವರ ಪುತ್ರರು ಮತ್ತು ಬಂಧುವರ್ಗದವರು ವಾರಣಾಸಿಗೆ ತೆಗೆದುಕೊಂಡು ಹೋಗುವ ಉದ್ದೇಶದಿಂದ ಕನಕಪುರದ ಶ್ರೀ ಕ್ಷೇತ್ರ ಸಂದರ್ಶನಕ್ಕಾಗಿ ಬಂದರು. ಆಗ ಮಧ್ಯಾಹ್ನ ಸಮಯವಾಗಿತ್ತು. ಅಸ್ಥಿಶೇಷ ಕರಂಡಕವನ್ನು ಮಠದ ಪೂರ್ವಭಾಗದಲ್ಲಿದ್ದ ವೃಕ್ಷದಡಿಯಲ್ಲಿರಿಸಿ, ನದಿಯಲ್ಲಿ

---

* ಆಗ ಅದನ್ನು 'ನಿರ್ವಾಣ ದೇವರ ಮಠ' ಎಂದು ಹೆಸರಿಸಿದ್ದರು.

*೧ ದೇಗುಲ ಮಠದ ಒಂದನೆಯ ಶಾಸನ: ಇದೇ ಗ್ರಂಥದ ''ದೇಗುಲ ಮಠದ ಶಾಸನ ವಿಮರ್ಶೆ'' ಲೇಖನವನ್ನು ನೋಡಿ.

ಸ್ನಾನಾದಿ ಆಹ್ನಿಕಗಳನ್ನು ಮುಗಿಸಿ, ಶ್ರೀಗಳ ಸಂದರ್ಶನ ಮಾಡಿಸಿ ಸಾಷ್ಟಾಂಗ ಪ್ರಣತರಾದರು. ಶ್ರೀಗಳು ರಾಜಬಂಧುಗಳನ್ನು ಯಥೋಚಿತವಾಗಿ ಗೌರವಿಸಿ ಆಶೀರ್ವದಿಸಿದರು. ಪ್ರಸಾದ ಸ್ವೀಕಾರಾನಂತರ ಆದ್ಯ ಶ್ರೀ ನಿರ್ವಾಣ ಸ್ವಾಮಿಗಳ ಗದ್ದುಗೆಗೆ ಸಾಷ್ಟಾಂಗವೆರಗಿ ಹೊರಡಲು ಸಿದ್ಧರಾದರು. ಆ ಸಮಯದಲ್ಲಿ ಅಸ್ಥಿಶೇಷ ಕರಂಡಕವನ್ನೆತ್ತಲು ಅದು ಹೂ ಬುಟ್ಟಿಯಂತೆ ಹಗುರವಾಗಿತ್ತು. ಕರಂಡಕವನ್ನು ತೆರೆದು ನೋಡಲು ಅಸ್ಥಿಶೇಷಗಳು ಸುವಾಸನಾಯುಕ್ತವಾದ ಮಲ್ಲಿಗೆ ಹೂಗಳಾಗಿ ಪರಿವರ್ತಿಸಿರುವುದು ಗೋಚರವಾಯಿತು. ಎಲ್ಲರೂ ಮಹದಾಶ್ಚರ್ಯಪಟ್ಟರು. ಅದೆಲ್ಲವೂ ಆದ್ಯ ಶ್ರೀ ನಿರ್ವಾಣ ಸ್ವಾಮಿಗಳ ಮಹಿಮಾ ಪ್ರಭಾವವೆಂಬ ಅರಿವು ಮೂಡಿತು. ತಿಮ್ಮಮ್ಮಣ್ಣಿಯವರ ಪುಣ್ಯ ಪರಿಪಾಕದಿಂದಾದ ಈ ಆಶ್ಚರ್ಯಕರ ಘಟನೆಯಿಂದ ಅಕೆಯ ಉತ್ತರಕ್ರಿಯೆಯು ಪೂರ್ಣವಾದುದೆಂಬ ಭಾವನೆ ಅರಸು ಮನೆತನದವರಿಗೆ ಉಂಟಾಯಿತು. ಸಮಾಚಾರವನ್ನು ಮೈಸೂರಿಗೆ ತಿಳಿಸಲಾಯಿತು. ಗುರುಹಿರಿಯರ ಅನುಜ್ಞೆಯಂತೆ, ಕರಂಡಕವಿದ್ದ ಸ್ಥಳದಲ್ಲಿಯೇ ಅಂತ್ಯ ವಿಧಿಯನ್ನಾಚರಿಸಿ, ಅಸ್ಥಿಶೇಷ ಕರಂಡಕವನ್ನು ದೇಗುಲ ಮಠದ ಆವರಣದ ಪೂರ್ವಭಾಗದಲ್ಲಿ ಭೂಸ್ಥಾಪನೆ ಮಾಡಲಾಯಿತು.

ಅಘಟಿತ ಘಟನಾ ಸಮರ್ಥರೆಂದು ಹೆಸರು ಗಳಿಸಿದ ಶ್ರೀ ಹುಚ್ಚಪ್ಪ ಸ್ವಾಮಿಗಳು ಪೂರ್ಣಾಯುಗಳಾಗಿ ಲಿಂಗೈಕ್ಯರಾದರು. ಅವರ ಗದ್ದುಗೆ ಮಠದ ಆವರಣದಲ್ಲಿದೆ.

## ಶ್ರೀ ಮರುಳಸಿದ್ಧ ಸ್ವಾಮಿಗಳು

ಶ್ರೀ ಹುಚ್ಚಪ್ಪ ಸ್ವಾಮಿಗಳ ನಂತರ ದೇಗುಲ ಮಠಾಧಿಕಾರವನ್ನು ವಹಿಸಿದವರು ಶ್ರೀ ಮರುಳಸಿದ್ಧ ಸ್ವಾಮಿಗಳು. ಶ್ರೀಗಳು ತಮ್ಮ ಆಶ್ರಮ ಧರ್ಮವನ್ನು ನಿಷ್ಠೆಯಿಂದ ಕಾಪಾಡಿಕೊಂಡವರು. ಸ್ವಾರ್ಥತೆ, ಕೀರ್ತಿಕಾಮನೆಗಳಿಗೆ ಮನವಿತ್ತವರಲ್ಲ. ತತ್ತ್ವಪ್ರಿಯರಾದರೂ ಧರ್ಮದ ಸುಲಭ ಮಾರ್ಗಗಾಮಿಗಳಾಗಿದ್ದರು. ದರ್ಶನಕ್ಕಾಗಿ ಬಂದ ಭಕ್ತರನ್ನು ಪ್ರೀತ್ಯಾದರಗಳಿಂದ ಸಂತೈಸುತ್ತಿದ್ದರು.

ದೈವಲೀಲೆ ! ಶ್ರೀಗಳು ಅಧಿಕಾರ ವಹಿಸಿದ ಕೆಲವು ವರ್ಷಗಳಲ್ಲೇ ಅನಿರೀಕ್ಷಿತ ಘಟನೆಯೊಂದುಂಟಾಯಿತು. ಮೂಲಾನಕ್ಷತ್ರದ ಮಳೆ ವಿಶೇಷವಾಗಿ ಸುರಿದು, ಅರ್ಕಾವತಿಯಲ್ಲಿ ಪೂರ್ಣ ಪ್ರವಾಹವುಂಟಾಯಿತು. ಆ ಪ್ರದೇಶದ ಜನ ಹಿಂದೆಂದೂ ಅಂತಹ ಮಹಾಪೂರವನ್ನು ನೋಡಿರಲಿಲ್ಲ, ಕೇಳಿರಲಿಲ್ಲ. ಚಿಕ್ಕಮಠ, ದೊಡ್ಡಮಠಗಳ ಶಿಲಾ ಕಟ್ಟಡಗಳು ಕೊಚ್ಚಿ ಹೋದವು. ಅದರಿಂದಲೇ ''ಮೂಲದ ಮಳೆ ಹೊಯ್ದು ದೇಗುಲ ಕೊಚ್ಚಿ ಹೋಯಿತು'' ಎಂಬ ಮಾತು ನಾಣ್ನುಡಿಯಾಗಿ ಕನಕಪುರ ಪ್ರಾಂತದಲ್ಲಿ ಈಗಲೂ ಜನಜನಿತವಾಗಿದೆ. ಆ ಕಾಲದಲ್ಲಿ ಪ್ರಸಿದ್ಧವಾಗಿದ್ದು

ಅರ್ಕಾವತಿಯು ಉಪಶಾಖೆಯೊಂದರ ದಡದಲ್ಲಿ ಅರ್ಕಾವತಿ–ಕಾವೇರಿಗಳ ಸಂಗಮಕ್ಕೆ ಅನತಿ ದೂರದಲ್ಲಿರುವ ಮಡಿವಾಳದ ಶಿಲಾಮಠ ಮತ್ತು ಓಂಕಾರೇಶ್ವರ ದೇವಾಲಯಗಳು ಅದೇ ಪ್ರವಾಹಕ್ಕೆ ಸಿಕ್ಕಿ ಕೊಚ್ಚಿ ಹೋದುದರ ಅವಶೇಷಗಳನ್ನು ಈಗಲೂ ಗುರ್ತಿಸಬಹುದಾಗಿದೆ. ಆ ಅನಾಹುತದಿಂದ ದೇಗುಲ ಮಠದಲ್ಲಿ ಶೇಖರವಾಗಿದ್ದ ಅನೇಕಾನೇಕ ತಾಳೇವಾಲೆಗ್ರಂಥಗಳೂ ಅಪೂರ್ಣ ವಸ್ತುಗಳೂ ಪ್ರವಾಹಕ್ಕೆ ತುತ್ತಾಗಿ ನಾಶವಾದುವೆಂದು ತಿಳಿದು ಬಂದಿದೆ.

ಇಷ್ಟಾದರೂ ಶ್ರೀ ಮುರುಳಸಿದ್ಧ ಸ್ವಾಮಿಗಳು ವೀರ ವೈರಾಗ್ಯ ಪ್ರವೃತ್ತಿಯವರಾದ್ದರಿಂದ ಮನಃಕ್ಲೇಶ ಹೊಂದದೆ, ಎಲ್ಲವೂ ಶಿವನ ಲೀಲೆ ಎಂದುಕೊಂಡರು.

ತಮ್ಮ ಹಿರಿಯರು ನಿರ್ಮಿಸಿದ ದೇಗುಲ ಮಠ (ನಿರ್ವಾಣ ದೇವರ ಮಠ)ದ ಶಿಲಾ ಕಟ್ಟಡಗಳು ಮಹಾಪೂರದಿಂದ ಕೊಚ್ಚಿ ಹೋದ ಸಮಾಚಾರವು ಮೈಸೂರಿನ ಅರಸು ಮನೆತನದವರಿಗೆ ತಲುಪಿತು.* ಮಠದ ಜೀರ್ಣೋದ್ಧಾರ ಕಾರ್ಯವನ್ನು ಕೈ ಕೊಳ್ಳುವ ಸದುದ್ದೇಶದಿಂದ ಅರಸು ಮನೆತನದವರು ಈ ಕ್ಷೇತ್ರಕ್ಕೆ ಬಂದರು.

ಕ್ರಿ. ಶ. ೧೬೭೮ನೇ ಏಪ್ರಿಲ್ ೨೮ (ಕಾಳಯುಕ್ತಿ ಸಂವತ್ಸರದ ವೈಶಾಖ ಬಹುಳ ೧೫ ಅಮಾವಾಸ್ಯೆ) ಭಾನುವಾರದಂದು ದಳವಾಯಿ ಕೊಮಾರಯ್ಯನ ತಾಯಿ ತಿಮ್ಮಮ್ಮಣ್ಣಿಯವರ ಅಸ್ಥಿಶೇಷ ಕರಂಡಕವನ್ನು ಭೂ ಸ್ಥಾಪನೆ ಮಾಡಿದ ಸ್ಥಳದಲ್ಲಿ ಶಿಲಾಮಂಟಪವನ್ನು ನಿರ್ಮಿಸಿ, ಅಲ್ಲಿ ವೃಷಭೇಶ್ವರನ ಶಿಲಾಮೂರ್ತಿಯನ್ನು ಪ್ರತಿಷ್ಠಿಸಿದರು. ಎದುರಿಗಿರುವ ಮಹಾಮಹಿಮರಾದ ಶ್ರೀ ಹುಚ್ಚಪ್ಪ ಸ್ವಾಮಿಗಳವರ ಗದ್ದುಗೆಗೆ ಶಿಲಾ ಕಟ್ಟಡವನ್ನು ನಿರ್ಮಿಸಿದರು. ಅಲ್ಲದೆ, ಕೊಚ್ಚಿ ಹೋಗಿದ್ದ ಮಠಗಳೆರಡನ್ನೂ ಪುನರ್ನಿರ್ಮಾಣ ಮಾಡಿಸಿ, ದೇಗುಲ ಮಠಕ್ಕೆ ಮತ್ತೆ ಕೆಲವು ಎಕರೆ ಭೂಮಿಯನ್ನು ದಾನ ಮಾಡಿದರು. ಈ ವಿಷಯವು ಮಠದ ಆವರಣದಲ್ಲಿರುವ ಎರಡನೆಯ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿದೆ.*೧

ಕೆಲವು ವರ್ಷಗಳ ನಂತರ ಶ್ರೀ ಮುರಳಸಿದ್ಧ ಸ್ವಾಮಿಗಳು ಲಿಂಗೈಕ್ಯರಾದರು. ಅವರ ಗದ್ದುಗೆ ಮಠದ ಆವರಣದಲ್ಲಿದೆ.

## ಶ್ರೀ ಚನ್ನಬಸವ ಸ್ವಾಮಿಗಳು

ಶ್ರೀ ಮುರಳಸಿದ್ಧ ಸ್ವಾಮಿಗಳ ಅನಂತರ ಮಠದ ಚರಪಟ್ಟಾಧಿಕಾರವನ್ನು ವಹಿಸಿದವರಲ್ಲಿ ಶ್ರೀ ಚನ್ನಬಸವ ಸ್ವಾಮಿಗಳು ಮುಖ್ಯರು. ಅವರು ಪೂರ್ವಾ

---

* ಆಗ ಮೈಸೂರು ಸಂಸ್ಥಾನವನ್ನು ಆಳುತ್ತಿದ್ದವರು ಚಿಕ್ಕದೇವರಾಜ ಒಡೆಯರು.

*೧ ಈ ಶಾಸನದ ಪೂರ್ಣ ಪಾಠವನ್ನು ಈ ಸಂಪುಟದ "ದೇಗುಲ ಮಠದ ಶಾಸನದ ವಿಮರ್ಶೆ" ಎಂಬ ಲೇಖನದಲ್ಲಿ ನೋಡಬಹುದು.

ಶ್ರಮಂದಲ್ಲಿ ಕನಕಪುರದ ಬಳಿ ಇರುವ ಅರಳಾಳು ಗ್ರಾಮದಲ್ಲಿ ಜನಿಸಿದವರು. ಶ್ರೀಗಳು ಮಠದ ಪುರೋಭಿವೃದ್ಧಿಗಾಗಿ ವಿಶೇಷ ಶ್ರಮ ವಹಿಸಿದರು. ಮಠದ ಸುತ್ತಲೂ ಇದ್ದ ಮಠದ ಮಾನ್ಯ ಭೂಮಿಗಳನ್ನು ರೂಢಿಸುವ ಸಲುವಾಗಿ ರೈತ ವರ್ಗದವರಿಗೆ ಹಂಚಿಕೊಟ್ಟಿದ್ದು ಇವರ ಕಾಲದಲ್ಲೇ. ಶ್ರೀಗಳು ತಮ್ಮ ದೈನಂದಿನ ಪೂಜೆ ಅನುಷ್ಠಾನಗಳನ್ನು ಲೋಪವಿಲ್ಲದಂತೆ ನಡೆಸುತ್ತಿದ್ದುದಲ್ಲದೆ, ಮಠದ ಹೊರ ಗಣ ವ್ಯವಹಾರಗಳನ್ನೆಲ್ಲಾ ದಕ್ಷತೆಯಿಂದ ದೀರ್ಘಕಾಲ ನಿರ್ವಹಿಸಿದರು. ಶ್ರೀಗಳಿಗೆ ಎರಡು ಮಠಗಳ ಕಾರ್ಯ ನಿರ್ವಹಣೆಯ ಜವಾಬ್ದಾರಿ ಹೆಚ್ಚಾದುದರಿಂದ ಅರಳಾಳು ಗ್ರಾಮದ ವಟು ಒಬ್ಬರನ್ನು ಆರಿಸಿ ಅವರಿಗೆ ಚಿಕ್ಕಮಠದ ಆಶ್ರಮಾಧಿಕಾರವನ್ನು ವಹಿಸಿದ್ದರು. ಅವರೇ ಇಮ್ಮಡಿ ಮರುಳ ಸಿದ್ದ ಸ್ವಾಮಿಗಳು.

## ಇಮ್ಮಡಿ ಶ್ರೀ ಮರುಳ ಸಿದ್ಧ ಸ್ವಾಮಿಗಳು

ಶ್ರೀ ಚೆನ್ನಬಸವ ಸ್ವಾಮಿಗಳು ದೊಡ್ಡ ಮಠದಲ್ಲೂ ಇಮ್ಮಡೀ ಶ್ರೀ ಮರುಳ ಸಿದ್ಧಸ್ವಾಮಿಗಳು ಚಿಕ್ಕಮಠದಲ್ಲೂ ವ್ಯವಹಾರಗಳನ್ನು ನಿರ್ವಹಿಸುತ್ತಿದ್ದರು. ಇಮ್ಮಡಿ ಶ್ರೀ ಮರುಳಸಿದ್ದ ಸ್ವಾಮಿಗಳು ಶಿವಪೂಜಾನಿಷ್ಠರು. ಸಾಮಾಜಿಕ ಸಮಸ್ಯೆಗಳನ್ನು ದಕ್ಷತೆಯಿಂದ ಇತ್ಯರ್ಥ ಪಡಿಸುತ್ತಿದ್ದರು. ಶಿಥಿಲವಾಗುತ್ತಿದ್ದ ಮಠದ ಕಟ್ಟಡಗಳನ್ನು ಪುನರುಜ್ಜೀವನಗೊಳಿಸಿದರು.

ಆ ವೇಳೆಗೆ ಶ್ರೀ ಚೆನ್ನಬಸವ ಸ್ವಾಮಿಗಳು ಮುಪ್ಪಿನವರಾಗಿದ್ದುದರಿಂದ ಮಠದ ವ್ಯವಹಾರಗಳನ್ನು ನೋಡಿಕೊಳ್ಳಲು ಉತ್ತರಾಧಿಕಾರಿಗಳನ್ನು ನೇಮಿಸುವ ಅಗತ್ಯ ತೋರಿತು. ಆಗ ಉಭಯ ಶ್ರೀಗಳೂ ಭಕ್ತಮಂಡಳಿಯವರೊಡನೆ ಆಲೋಚಿಸಿ ದೊಡ್ಡ ಮಠಕ್ಕೆ ಐಜೂರಿನ ಶ್ರೀ ಸಾವಂದಪ್ಪನವರ ಕಿರಿಯ ಪುತ್ರರಾದ ಶ್ರೀ ಬಸಪ್ಪ ದೇವರನ್ನು ಉತ್ತರಾಧಿಕಾರಿಗಳನ್ನಾಗಿ ಆರಿಸಿದರು. ಶ್ರೀ ಇಮ್ಮಡಿ ಮರುಳ ಸಿದ್ಧಸ್ವಾಮಿಗಳ ಸಲಹೆಯಂತೆ, ಅರಳಾಳು ಗ್ರಾಮದ ಶ್ರೀ ಕಾಳಪ್ಪನವರನ್ನು ಚಿಕ್ಕ ಮಠದ ಉತ್ತರಾಧಿಕಾರಿಗಳನ್ನಾಗಿ ಆರಿಸಲಾಯಿತು.

## ಇಮ್ಮಡಿ ಶ್ರೀ ನಿರ್ವಾಣ ಸ್ವಾಮಿಗಳು
## ಮತ್ತು
## ಇಮ್ಮಡಿ ಶ್ರೀ ಹುಚ್ಚಪ್ಪ ಸ್ವಾಮಿಗಳು

ಶಾಲೀವಾಹನ ಶಕ ೧೮೨೫ (ಕ್ರಿ. ಶ. ೧೯೦೩)ನೇ ಶೋಭಕೃತು ಸಂವತ್ಸರದ ಮಾಘಮಾಸದಲ್ಲಿ ಉಭಯ ವಟುಗಳೂ ವಿರಕ್ತಾಶ್ರಮಾಧಿಕಾರವನ್ನು ಸ್ವೀಕರಿಸಿದರು. ಶ್ರೀ ಬಸಪ್ಪ ದೇವರಿಗೆ ಇಮ್ಮಡಿ ನಿರ್ವಾಣ ಸ್ವಾಮಿಗಳೆಂದೂ, ಶ್ರೀ ಕಾಳಪ್ಪನವರಿಗೆ ಇಮ್ಮಡಿ ಶ್ರೀ ಹುಚ್ಚಪ್ಪ ಸ್ವಾಮಿಗಳೆಂದೂ ನಾಮಾಂಕಿತವಾಯಿತು. ಉಭಯ

ನೂತನ ಶ್ರೀಗಳೂ "ದೇಹವನ್ನೂ ಆತ್ಮವನ್ನೂ ಶಿವಸ್ವರೂಪಿ ಗುರುಲಿಂಗ ಜಂಗಮಕ್ಕೆ ಸಮರ್ಪಣೆ ಮಾಡಿ, ಆ ಶಿವ ಪ್ರಸಾದಗಳಲ್ಲಿ ಸಮಾಜದ ಹಾಗೂ ದೇಶದ ಏಳಿಗೆಯನ್ನು ಬಯಸುತ್ತಾ, ಶ್ರಮಿಸುತ್ತಾ" ಇರುತ್ತಿದ್ದರು. "ಜನ ಜಂಗುಳಿಯ ನಡುವೆಯಿದ್ದು ಹಿಂದುಳಿದ ಸಮಾಜವನ್ನು ಪ್ರೋತ್ಸಹಿಸಿ ಬೆಳೆಸುವುದು, ಅತಿಥಿ ಅಭ್ಯಾಗತರ ರಕ್ಷಣೆ ಮಾಡುವುದು, ಹಿರಿಯ ಗುರುಗಳ ಆದೇಶದಂತೆ ಸ್ವಸಂಸ್ಕೃತಿ ಪ್ರಸಾರ ಮಾಡುವುದು ಸಹ ತಮ್ಮ ಪಾಲಿನ ಕೆಲಸವೆಂದು ಅವರಿಬ್ಬರೂ ನಂಬಿದ್ದರು....ಸರ್ವಸಂಗ ಪರಿತ್ಯಾಗಿಗಳಾದ ಅವರೀರ್ವರ ಸ್ವಾಭಾವಿಕ ಲಕ್ಷಣವೆಂದರೆ ಸಕಲ ಪ್ರಾಣಿಗಳಿಗೂ ದಯೆ ತೋರುವುದು"*

## ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳ ಶಿವಕ್ಷೇತ್ರಗಳ ಪ್ರವಾಸ

ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳು ಕ್ರಿ. ಶ. ೧೯೦೭ ರಲ್ಲಿ ಕೆಲವು ವಿರಕ್ತ ಮೂರ್ತಿಗಳೊಡನೆ ಶಿವಕ್ಷೇತ್ರಗಳ ಪ್ರವಾಸವನ್ನು ಕೈಕೊಂಡರು. ಉಳವಿ ಶ್ರೀ ಚನ್ನಬಸವೇಶ್ವರ ರಥೋತ್ಸವವನ್ನು ಸಂದರ್ಶಿಸಿ ಹಿಂತಿರುಗಿದರು. ಹಿರಿಯ ಗುರುಗಳಾದ ಶ್ರೀ ಚನ್ನಬಸವ ಸ್ವಾಮಿಗಳು ಪೂರ್ಣಾಯುಗಳಾಗಿದ್ದು ೧೯೧೦ ರಲ್ಲಿ ಲಿಂಗೈಕ್ಯರಾದರು. ಅವರ ಗದ್ದುಗೆ ಶ್ರೀ ಮಠದಲ್ಲಿದೆ.

ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳು ಕ್ರಿ. ಶ. ೧೯೨೦ ರಲ್ಲಿ ಶಿವಕ್ಷೇತ್ರಗಳನ್ನು ನೋಡಲು ಎರಡನೆಯ ಸಾರಿ ಪ್ರವಾಸ ಹೊರಟರು. ಪ್ರಥಮದಲ್ಲಿ ಚಿತ್ರದುರ್ಗದ ಶ್ರೀ ಜಗದ್ಗುರು ಜಯದೇವ ಮುರುಘ ರಾಜೇಂದ್ರ ಮಹಾಸ್ವಾಮಿಯವರ ದರ್ಶನಾಶೀರ್ವಾದವನ್ನು ಪಡೆದು ಉತ್ತರ ಭಾರತದ ವಾರಣಾಸಿ ಮುಂತಾದ ಹಲವಾರು ಕ್ಷೇತ್ರಗಳನ್ನು ಸಂದರ್ಶಿಸಿ ಬಂದರು. ಆ ವೇಳೆಗೆ ಇಮ್ಮಡಿ ಶ್ರೀ ಮುಕ್ತಿಪ್ಪ ಸ್ವಾಮಿಗಳು ಅವಸಾನ ಸ್ಥಿತಿಯಲ್ಲಿದ್ದು ಶ್ರೀಗಳು ಪ್ರವಾಸದಿಂದ ಹಿಂತಿರುಗಿದ ಸ್ವಲ್ಪ ದಿನಗಳಲ್ಲೇ ಲಿಂಗೈಕ್ಯರಾದರು.

ಕ್ರಿ. ಶ. ೧೯೩೩ರಲ್ಲಿ ಶ್ರೀ ಇಮ್ಮಡಿ ಮರುಳಸಿದ್ಧಸ್ವಾಮಿಗಳ ನೇತೃತ್ವದಲ್ಲಿ ಮಠದ ಪರಮ ಶಿಷ್ಯರಾದ ಬೆಂಗಳೂರಿನ ಶ್ರೀ ಗುರುಪಾದಪ್ಪ ಎಂಬ ವೃದ್ಧ ಭಕ್ತರ ಆರ್ಥಿಕ ಸಹಾಯದಿಂದ ಮತ್ತು ಸ್ಥಳೀಯ ಭಕ್ತ ಮಂಡಲಿಯವರ ನೆರವಿನಿಂದ ಮಠದ ಗದ್ದುಗೆ ಕಟ್ಟಡಗಳ ಜೀರ್ಣೋದ್ಧಾರ ಕಾರ್ಯಗಳು ಜರುಗಿದವು. ಕ್ರಿ.ಶ. ೧೯೩೪ ರಲ್ಲಿ ಶ್ರೀ ಇಮ್ಮಡಿ ಮರುಳಸಿದ್ಧ ಸ್ವಾಮಿಗಳು ಲಿಂಗೈಕ್ಯರಾದರು. ಬಳಿಕ ಎರಡು ಮಠಗಳ ವ್ಯವಸ್ಥೆಯನ್ನು ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳೇ ವಹಿಸಿದರು.

ಆ ವೇಳೆಗೆ ಮಠದ ಆವರಣ, ದಾಸೋಹ, ಜಾತ್ರೆ—ಜಾಡುಗಡೆ ಮುಂತಾದ ಕರ್ತವ್ಯನಿರ್ವಹಣೆಯ ಹೊರೆ ಹೆಚ್ಚಿದುದರಿಂದ ಮತ್ತೊಬ್ಬ ಶ್ರೀಗಳ ಅಗತ್ಯ

* "ಯೋಗಭೂಮಿ"—ಪುಟ ೧೩

ತೋರಿತು. ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳು ಸ್ಥಳೀಯ ಭಕ್ತ ಮಂಡಳಿಯವರಲ್ಲಿ ಆಲೋಚಿಸಿ, ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಯೋಗ್ಯ ವಟುವನ್ನು ಆರಿಸತಕ್ಕದ್ದೆಂದು ತೀರ್ಮಾನಿಸಿದರು. ಆ ಕ್ಷೇತ್ರಾಧಿಪತಿಗಳಾದ ಶ್ರೀ ಉದ್ಧಾನ ಸ್ವಾಮಿಗಳವರು ನಿರಂತರ ತಮ್ಮ ಸೇವೆಯಲ್ಲಿದ್ದು ಕೃಪಾಪಾತ್ರರಾಗಿದ್ದ ಶ್ರೀ ಕಾಳಪ್ಪನವರನ್ನು ದೇಗುಲ ಮಠಕ್ಕೆ ಉತ್ತರಾಧಿಕಾರಿಯಾಗಿ ಆಶೀರ್ವದಿಸಿ ಕಳುಹಿಸಿದರು. ನೂತನ ವಟುಗಳಾದ ಶ್ರೀ ಕಾಳಪ್ಪನವರು ತುಮಕೂರು ತಾಲ್ಲೂಕು ಕೆಂಬಳ್ಳು ಗ್ರಾಮದ ಗುರುಲಿಂಗ ಜಂಗಮ ಪ್ರೇಮಿಗಳಾದ ಶ್ರೀ ಸಿದ್ಧಬಸಪ್ಪ ಬಸಮ್ಮ ಅವರ ಸುಪುತ್ರರು. ಶಾಲೀವಾಹನ ಶಕ ೧೮೭೦ ಬಹುಧಾನ್ಯ ಸಂವತ್ಸರದ ಮಾಘಶುದ್ಧ ಸಪ್ತಮಿ (೨೯, ಜನವರಿ ೧೯೪೯) ಯಂದು ಚರಪಟ್ಟಾಧಿಕಾರವು ವಹಿಸಲ್ಪಟ್ಟು ನೂತನ ಶ್ರೀಗಳಿಗೆ ಶ್ರೀ ಚರಮೂರ್ತಿ ಮಹಾಲಿಂಗಸ್ವಾಮಿಗಳೆಂಬ ಅಭಿದಾನವುಂಟಾಯಿತು.

ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳು ತಮ್ಮ ಆಶ್ರಮ ಧರ್ಮವನ್ನು ಕಟ್ಟುನಿಟ್ಟಾಗಿ ಆಚರಿಸಿದವರು. ಶಿವಪೂಜಾನಿರತರು. ನಡೆ ನುಡಿ ಯೊಂದಾದವರು. ಸದಾ ಸಂತೋಷಚಿತ್ತರು. ಮುಗ್ಧಸ್ವಭಾವದವರು, ಮಿತಭಾಷಿಗಳು, ಬಡವರು–ಬಲ್ಲಿದರೆಂಬ ಭೇದವಿಡದೆ ಸರ್ವರನ್ನೂ ಸಮತಾಭಾವದಿಂದ ಕಂಡವರು. ಜೀವನದ ಹಿಗ್ಗು ತಗ್ಗುಗಳಲ್ಲಿ ಸಮಚಿತ್ತರು. ಬಹಳ ಕರುಣಾಶಾಲಿಗಳು. ಕ್ಷುದ್ರಪ್ರಾಣಿಗಳಲ್ಲೂ ವಿಶೇಷ ಮರುಕವುಳ್ಳವರು. ಜಗತ್ತಿನ ವ್ಯವಹಾರಗಳಲ್ಲಿ ಇದ್ದೂ ಇಲ್ಲದಂತಿದ್ದವರು ಶರಣರ ತತ್ತ್ವಾನುಭವದಲ್ಲಿ ಹೆಚ್ಚು ಆಸಕ್ತರು. ಗುರು ಜಂಗಮರಲ್ಲಿ ವಿಶೇಷ ಅಭಿಮಾನ–ಪೂಜ್ಯಭಾವವುಳ್ಳವರು. ಪರಮ ದಾಸೋಹ ಮೂರ್ತಿಗಳು.

ಸಮಕಾಲೀನರಾದ ಚಿತ್ರದುರ್ಗದ ಶ್ರೀ ನಿರಂಜನ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳು, ಕಾಶೀ ವಿಶ್ವಾರಾಧ್ಯಪೀಠದ ಶ್ರೀ ಜಗದ್ಗುರುಗಳು, ಧಾರವಾಡದ ಶ್ರೀ ಮೃತ್ಯುಂಜಯಸ್ವಾಮಿಗಳು, ಸಿದ್ಧಗಂಗಾ ಕ್ಷೇತ್ರದ ಶ್ರೀ ಉದ್ಧಾನ ಸ್ವಾಮಿಗಳು, ಶ್ರೀ ಶಿವಕುಮಾರಸ್ವಾಮಿಗಳು, ಅರಮನೆ ಪಂಚ ಗವಿಮಠದ ಶ್ರೀ ಗೌರೀಶಂಕರಸ್ವಾಮಿಗಳು, ಸುತ್ತೂರು ವೀರಸಿಂಹಾಸನ ಮಠದ ಜಗದ್ಗುರು ಶ್ರೀ ಶಿವರಾತ್ರೀಶ್ವರಸ್ವಾಮಿಗಳು, ಶ್ರೀ ಶಿವರಾತ್ರಿ ರಾಜೇಂದ್ರಸ್ವಾಮಿಗಳು, ಶ್ರೀ ಸಿದ್ಧಮಲ್ಲಿಕಾರ್ಜುನ ಸ್ವಾಮಿಗಳು, ಚನ್ನಪಟ್ಟಣದ ಕುಡಿನೀರು ಕಟ್ಟೆ ಮಠದ ಶ್ರೀ ಚರಮೂರ್ತಿ ಶಿವರುದ್ರಸ್ವಾಮಿಗಳು, ಮರಳೆ ಗವೀಮಠದ ಶ್ರೀ ಚರಮೂರ್ತಿ ಹುಚ್ಚಪ್ಪಸ್ವಾಮಿಗಳು ಮುಂತಾದ ಹರಗುರು ಚರಮೂರ್ತಿಗಳು ಶ್ರೀಗಳ ಪೂಜ್ಯವ್ಯಕ್ತಿತ್ವವನ್ನು ಶ್ಲಾಘಿಸಿರುವರು. ಕ್ರಿ. ಶ. ೧೯೫೨ರಲ್ಲಿ ಮೈಸೂರು ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರು ದೇಗುಲ ಮಠಕ್ಕೆ ಆಗಮಿಸಿ ಶ್ರೀಗಳ ಕೃಪಾಶೀರ್ವಾದವನ್ನು ಪಡೆದರು.

ಶ್ರೀಗಳು ತಮ್ಮ ಜೀವಮಾನಾವಧಿಯಲ್ಲಿ ಅನೇಕ ಮಠಾಧೀಶ್ವರರಿಗೆ ಅವರವರ ಮಠಾಧಿಕಾರ ಮತ್ತು ಷಟ್‌ಸ್ಥಲ ಬ್ರಹ್ಮೋಪದೇಶವನ್ನು ಅನುಗ್ರಹಿಸಿದ್ದರು.

ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳು ತಮ್ಮ ೧೦೩ ನೇಯ ವಯಸ್ಸಿನಲ್ಲಿ ದಿ. ೩೦–೧–೧೯೭೩ ನೇಯ ಭಾನುವಾರ ಲಿಂಗೈಕ್ಯರಾದರು. ಶ್ರೀಗಳ ಅಂತ್ಯದರ್ಶನ ಮತ್ತು ಪ್ರಥಮ ಗಣಾರಾಧನೆಯ ಸಮಾರಂಭಗಳಲ್ಲಿ ಲಕ್ಷಾಂತರ ಮಂದಿ ಪರಗುರು ಚರಮೂರ್ತಿಗಳೂ ಭಕ್ತಾದಿಗಳೂ ಭಾಗಿಗಳಾಗಿದ್ದರು.

## ಇಮ್ಮಡಿ ಶ್ರೀ ಚರಮೂರ್ತಿ ಮಹಾಲಿಂಗ ಸ್ವಾಮಿಗಳು

ಇಮ್ಮಡಿ ಶ್ರೀ ನಿರ್ವಾಣ ಸ್ವಾಮಿಗಳವರು ಹೇಗೆ ತಮ್ಮ ಪವಿತ್ರ ಪರಂಪರೆಯ ಜ್ಯೋತಿಯನ್ನು ಬೆಳಗಿಸಿದರೋ, ಕಲ್ಯಾಣದ ಅಲ್ಲಮಪ್ರಭು ಪರಂಪರಾಗತರಾದ ಆದ್ಯ ನಿರ್ವಾಣಸ್ವಾಮಿಗಳವರ ಆತ್ಮ ಜ್ಯೋತಿಯನ್ನು ನಂದದಂತಿರಿಸಿ, ಭಕ್ತವೃಂದದ ಹೃದಯಾವರಣವನ್ನು ಹೊರಗೂ ಒಳಗೂ ಪ್ರಕಾಶಗೊಳಿಸಿ 'ಸತ್ಯಂ–ಶಿವಂ–ಸುಂದರಂ' ತತ್ತ್ವವನ್ನು ಸಾಕ್ಷಾತ್ಕರಿಸಿದರೋ ಅಂತೆಯೇ ಅದೇ ಹೊಲಬನ್ನು ಹಾದು ಬಂದಿದ್ದಾರೆ ಇಮ್ಮಡಿ ಶ್ರೀಚರಮೂರ್ತಿ ಮಹಾಲಿಂಗಸ್ವಾಮಿಗಳು. ಗುರುಗಳು–ಭಕ್ತಿ–ಶಿವಯೋಗ ನಿಷ್ಠೆಯ ಮೌನಮುದ್ರೆ – ಜ್ಞಾನ ಕ್ರಿಯಾನ್ವಿತ ತತ್ತ್ವನಿಷ್ಠೆ-ಮುಗ್ಧತೆ–ದರ್ಶನ ಮಾತ್ರದಿಂದ ಪವಿತ್ರಗೊಳಿಸುವ ಶಕ್ತಿಯುಳ್ಳವರಾದರೆ, ಅವರ ಕರ ಸಂಜಾತ ಶ್ರೀಗಳು–ಶಿವಪೂಜೆ-ದಾಸೋಹಂ ಭಾವಭಕ್ತಿಯುಕ್ತ ಕಾಯಕನಿಷ್ಠೆ-ನಿಸ್ವಾರ್ಥ ಸಮಾಜಸೇವಾಕೈಂಕರ್ಯ-ಅದೇ ಅವರ ಜೀವನದ ಉಸಿರು. ಈರ್ವರೂ ಪರಮ ವೈರಾಗ್ಯಮೂರ್ತಿಗಳು.

ಇಮ್ಮಡಿ ಶ್ರೀ ಚರಮೂರ್ತಿ ಮಹಾಲಿಂಗ ಸ್ವಾಮಿಗಳಿಗೆ ಗುರುಗಳಲ್ಲಿ ಪರಮ ಭಕ್ತಿ-ಶಂಕುವಾರ್ಣತೆ. ಪೂರ್ವಾಶ್ರಮದಲ್ಲೇ ಶ್ರೀ ಉದ್ಧಾನ ಶಿವಯೋಗಿಗಳ ಸೇವಾಫಲದಿಂದ ಗಟ್ಟಿಗೊಂಡ ಸಂಸ್ಕಾರ ಬಲವುಳ್ಳವರು. ಕಾಲಧರ್ಮಕ್ಕೆ ಹೊಂದುವ ಸಮಾಜ ಹಿತಕಾರ್ಯವೇ ಅವರ ಕಾಯಕಧರ್ಮ. ಧರ್ಮಾಚರಣೆಯಲ್ಲಿ, ತ್ರಿಕಾಲ ಪೂಜಾನುಸಂಧಾನದಲ್ಲಿ ಅಚಲಿತ ಮನಸ್ಸುಳ್ಳವರು ಅವರು ಚರಪಟ್ಟಾಧಿಕಾರವನ್ನು ವಹಿಸಿದ ಕಳೆದ ೩೪ ವರ್ಷಗಳ ಸತತ ಪ್ರಯತ್ನದ ಫಲವಾಗಿ ತಮ್ಮ ಹಿರಿಯ ಗುರುಗಳ ಪೂರ್ಣ ಕೃಪಾಶೀರ್ವಾದದ ಪ್ರಭಾವದಿಂದಾಗಿ ದೇಗುಲ ಮಠದ ಕಾರ್ಯವ್ಯಾಪ್ತಿ ದಿನೇ ದಿನೇ ಬೆಳೆದು ಬಂದಿದೆ. ತಮ್ಮ ಆಶ್ರಮ ಧರ್ಮಕ್ಕನುಗುಣವಾದ ಭಕ್ತರ ಮನೆಯ ಬಿನ್ನಹ–ಬಿಡುಗಡೆ, ದಾಸೋಹ ಕಾರ್ಯಕ್ಕೆ ಪೋಷಕವಾದ ವ್ಯವಸಾಯ ಕ್ಷೇತ್ರ ವ್ಯವಸ್ಥೆ, ಅಂದಿನಿಂದಲೂ ನಡೆದು ಬಂದಿರುವ ದಾಸೋಹ ಕಾರ್ಯ, ಅಷ್ಟೇ ಅಲ್ಲದ, ಆಗಾಗ್ಗೆ ಬಂದೊದಗುವ ಸಾಮಾಜಿಕ ಸಮಸ್ಯೆಗಳನ್ನು ಬಗೆಹರಿಸುವ ಕಾರ್ಯ -ಇವು ಅವರ ಪಾಲಿಗೆ ಬಂದ ಕರ್ತವ್ಯಗಳು. ಗುರುಗಳ ಆಶೀರ್ವಾದದಂತೆ ಸ್ಥಾಪಿ

ನಿರುವ ಶ್ರೀ ನಿರ್ವಾಣ ಸ್ವಾಮಿ ಕೃಪಾವಿದ್ಯಾಪೀಠದ ಆಶ್ರಯದಲ್ಲಿ ಪ್ರೌಢಶಾಲೆಗಳೂ, ಸಂಸ್ಕೃತ ಮತ್ತು ವೇದಪಾಠಶಾಲೆಗಳೂ, ಹಿರಿಯ ಪ್ರಾಥಮಿಕ ಶಾಲೆಯೂ ೬೦೦ ವಿದ್ಯಾರ್ಥಿಗಳಿಗೆ ಪ್ರಸಾದ ವಸತಿಗಳನ್ನು ಒದಗಿಸುತ್ತಿರುವ ಉಚಿತ ಪ್ರಸಾದ ನಿಲಯವೂ ಶ್ರೀಗಳ ಪ್ರಯತ್ನದ ಫಲವಾಗಿವೆ. ಈ ಸಂಸ್ಥೆಗಳಿಗೆ ಮತ್ತು ಮಠದ ಗದ್ದುಗೆಗಳು ಮತ್ತು ಒಳ ಹೊರ ಆವರಣಗಳಿಗೆ ಅಗತ್ಯವಾದ ಭವ್ಯ ಶಿಲಾಮಯ ಕಟ್ಟಡಗಳು ಶ್ರೀಗಳ ಸತತ ಪರಿಶ್ರಮ. ದಕ್ಷತೆ, ಮತ್ತು ಮನೋವೈಶಾಲ್ಯಗಳ ದ್ಯೋತಕವಾಗಿವೆ.

ಹಿಂದಿನಂತೆಯೇ ದಿನಂಪ್ರತಿ ನೂರಾರು ಮಂದಿ ಪ್ರವಾಸಿಗರಿಗೂ ದೀನ ದರಿದ್ರರಿಗೂ ಪ್ರಸಾದವಿನಿಯೋಗವಾಗುತ್ತದೆ. ಆಗಾಗ್ಗೆ ಶಿವಾನುಭವ ಗೋಷ್ಠಿಗಳೂ, ಶಿವಕೀರ್ತನೆ, ಧಾರ್ಮಿಕ ಉಪನ್ಯಾಸಗಳೂ ಯಥೋಚಿತವಾಗಿ ನಡೆಸಲ್ಪಡುತ್ತಿವೆ.

---



ಆದ್ಯ ಶ್ರೀ ನಿರ್ವಾಣ ಸ್ವಾಮಿಗಳ ಗದ್ದುಗೆ (ಕರ್ತೃ ಗದ್ದುಗೆ)



ಶ್ರೀ ದೇಗುಲಮಠ, ಕನಕಪುರ



ಚಿಕ್ಕಮಠದಲ್ಲಿರುವ ಲಿಂಗೈಕ್ಯ
ಶ್ರೀ ಶ್ರೀ ದೇವಲಿಂಗ ಸ್ವಾಮಿಗಳವರ ಗದ್ದುಗೆ



ಲಿಂ. ಶ್ರೀ ನಾಗಲಿಂಗ ಸ್ವಾಮಿಗಳವರ ಗದ್ದುಗೆ

# ಕನಕಪುರ ದೇಗುಲ ಮಠದ ಶಾಸನದ ವಿಮರ್ಶೆ

● ಶ್ರೀ ಆರ್. ಚಕ್ರವರ್ತಿ
ನಿವೃತ್ತ ಸಹಾಯಕ ಸಂಶೋಧಕರು,
ಪ್ರಾಚ್ಯ ಸಂಶೋಧನ ಶಾಖೆ, ಮೈಸೂರು

ಬೆಂಗಳೂರು ಜಿಲ್ಲೆ ಕನಕಪುರದ ದೇಗುಲ ಮಠದ ಶಾಸನಗಳನ್ನು ಪ್ರಕಟಿಸುವುದಕ್ಕೆ ಮೊದಲು ವೀರಶೈವರು ಕರ್ನಾಟಕದಲ್ಲಿ ಸಮಾಜಕ್ಕೆ ಹಿಂದೆ ಮಾಡಿದ ಈಗ ಮಾಡುತ್ತಿರುವ ಸೇವೆಯನ್ನು ಸ್ವಲ್ಪ ಮಟ್ಟಿಗಾದರೂ ತಿಳಿಸದಿದ್ದರೆ ನಮ್ಮ ಇಂದಿನ ಪೀಳಿಗೆಗೆ ಆದರ್ಶವನ್ನು ತೋರಿಸಿಕೊಟ್ಟಂತಾಗುವುದಿಲ್ಲ. ಇದಕ್ಕೆ ಮೊದಲು ಶಿವಪೂಜೆ, ಶೈವಮತ ಅದು ವೀರಶೈವವಾಗಿ ಪರಿವರ್ತನೆ ಹೊಂದಿದ ವಿಷಯಗಳನ್ನು ಸಿಂಹಾವಲೋಕನದಿಂದ ಸ್ವಲ್ಪ ಮಟ್ಟಿಗೆ ತಿಳಿಸದಿದ್ದರೆ ನಮ್ಮ ಉದ್ದೇಶವು ಸಫಲವಾಗುವದಿಲ್ಲ.

ಭಾರತದಲ್ಲಿ ಲಿಂಗಪೂಜೆ ಅನಾದಿಯಾದುದು. ಹರಪ್ಪ ಮಹೇಂಜೋದಾರೋಗಳಲ್ಲಿ ದೊರೆತಿರುವ ಮುದ್ರಿಕೆಗಳಲ್ಲಿ ಧ್ಯಾನಾಸಕ್ತನಾದ ಯೋಗಿಯಾದ ಶಿವಮೂರ್ತಿ ಮತ್ತು ವೃಷಭ ಇದಲ್ಲದೆ ಲಿಂಗಗಳು ಗೋಚರವಾಗಿವೆ. ಇವುಗಳಿಂದ ಕ್ರಿಸ್ತಪೂರ್ವ ನೂರು ಸಾವಿರ ವರ್ಷಗಳ ಹಿಂದೆಯೇ ಅನಾದಿಕಾಲದ ಭಾರತ ನಿವಾಸಿಗಳಾದ ದ್ರಾವಿಡರು ಲಿಂಗೋಪಾಸಕರೆಂದು ಸ್ಪಷ್ಟವಾಗಿ ತಿಳಿದು ಬರುವುದು. ಐತಿಹಾಸಿಕ ಯುಗದಲ್ಲಿ ಆರ್ಯರು ಶಿವ ಮತ್ತು ವಿಷ್ಣುವನ್ನು ಪೂಜಿಸುತ್ತಿದ್ದರು. ಪ್ರಸಿದ್ಧ ವಿಶ್ವಕವಿ ಆದ ಕಾಳಿದಾಸನು ಶೈವನು. ಭಾರತದಲ್ಲೇ ಜನ್ಮತಳೆದ ಜೈನ, ಬೌದ್ಧ ಮತಗಳು ಕ್ರಿಸ್ತಪೂರ್ವ ಐದನೆಯ ಶತಮಾನದಿಂದ ತಮ್ಮ ಮತಗಳ ತತ್ತ್ವಗಳನ್ನು ಸಮಾಜದ ಮೇಲೆ ಬೀರಿ ಕೆಲವು ಕಾಲ ಪ್ರವರ್ಧಮಾನಗಳಾಗಿದ್ದವು. ಬೌದ್ಧಮತವು ಅಶೋಕನ ನೆರವಿನಿಂದ ಭಾರತದಲ್ಲಿ ಹರಡಿದುದಲ್ಲದೆ ಪೂರ್ವಾರ್ಧಗೋಳದಲ್ಲಿಯೂ ವ್ಯಾಪಕವಾಗಿದ್ದು ಶೂನ್ಯಸಿಂಹಾಸನವಾದುದರಿಂದ ಭಾರತದಲ್ಲಿ ಅದರ ಪ್ರಭಾವವು ಕ್ರಮೇಣವಾಗಿ ಕ್ಷೀಣದೆಶೆಗೆ ಬಂದಿತು. ಜೈನಮತವು ಕ್ರಿಸ್ತಪೂರ್ವ ಐದನೆಯ ಶತಮಾನದಿಂದ ಆಧುನಿಕ ಕಾಲದವರೆಗೂ ಭಾರತದಲ್ಲಿ ಅಲ್ಲಲ್ಲೇ ಇರುವುದು. ಕ್ರಿಸ್ತಶಕ ಐದರಿಂದ ಹತ್ತನೆಯ ಶತಮಾನದವರೆಗೆ ಜೈನಮತವು ಕನ್ನಡ ನಾಡಿನಲ್ಲಿ ರಾಜಾಶ್ರಯ ಪಡೆದು ಬಹಳ ಉನ್ನತ ಸ್ಥಿತಿಗೆ ಬಂದಿತು. ಕೊನೆಕೊನೆಗೆ ಶೈವ ಮತ್ತು ವೈಷ್ಣವ ಮತಗಳ ಪ್ರಭಾವದಿಂದ ಬೌದ್ಧ ಮತ್ತು ಜೈನಮತಗಳ ಜನರು ವೈದಿಕಮತಗಳಾದ ಶೈವ ಮತ್ತು ವೈಷ್ಣವ ಮತಗಳನ್ನಾಶ್ರಯಿಸಿದರು.

ಕನ್ನಡ ನಾಡಿನಲ್ಲಿ ಕ್ರಿಸ್ತಪೂರ್ವ ಎರಡನೆಯ ಶತಮಾನದಿಂದ ಕ್ರಿ.ಶ. ಹನ್ನೆರಡನೆಯ ಶತಮಾನದವರೆಗೆ ಶೈವಮತವೇ ಪ್ರಚಾರವಾಗಿದ್ದಿತು. ಕರ್ಣಾಟಕದ ಪ್ರಾಚೀನ ರಾಜರಾದ ಕದಂಬರು ಶೈವರು, ಭಾರತದಲ್ಲೇ ಅತ್ಯಂತ ಪ್ರಾಚೀನವೆಂದು. ಹೇಳಬಹುದಾದ ಶೈವ ದೇವಾಲಯವಾದ ಪ್ರಣವೇಶ್ವರ ದೇವಾಲಯವು ಶಿಕಾರಿಪುರದ ತಾಲ್ಲೂಕು ತಾಳಗುಂದದಲ್ಲಿ ಈಗಲೂ ಇದೆ. ಕ್ರಿಸ್ತಪೂರ್ವ ಎರಡನೆಯ ಶತಮಾನದಲ್ಲಿ ದಕ್ಷಿಣ ಭಾರತದಲ್ಲಿ ರಾಜ್ಯಭಾರ ಮಾಡುತ್ತಿದ್ದ ಆಂಧ್ರ ರಾಜರಾದ ಶಾತಕರ್ಣಿ ಮೊದಲಾದ ರಾಜರು ಈ ದೇವರನ್ನು ಪೂಜಿಸುತ್ತಿದ್ದರೆಂದು ತಾಳಗುಂದದ ಶಾಸನ ತಿಳಿಸುವುದು. ಶೈವಮತಗಳಲ್ಲಿ ಕಾಳಾಮುಖ, ಕಾಪಾಲಿಕ, ಸಾತ್ವಿಕ ಮತವಾದ ವೀರಶೈವ ಎಂಬ ಪ್ರಭೇದಗಳಿವೆ. ಶ್ರೀಮದ್ಭಗವತ್ಪಾದಾಚಾರ್ಯರಾದ ಶಂಕರಾಚಾರ್ಯರು ಅವರ ಕಾಲದಲ್ಲಿದ್ದ ಶೈವ, ವೈಷ್ಣ, ಶಾಕ್ತೇಯ, ಗಾಣಾಪತ್ಯ. ಸೌರ, ಮತ್ತು ಕಾಪಾಲಿಕ ಎಂಬ ಆರು ಮತಗಳು ವೈದಿಕ ಮತವೆಂದು ಸಾರಿ ಷಣ್ಮತಸ್ಥಾಪನಾಚಾರ್ಯರೆಂದು ಪ್ರಸಿದ್ಧರಾದರು. ಈ ಮೇಲೆ ಹೇಳಿದ ಮತ ಪ್ರಚಾರಕರು ತಮ್ಮ ತಮ್ಮ ಮತಗಳ ಉತ್ಕರ್ಷವನ್ನು ಕುರಿತು ಅನೇಕ ಗ್ರಂಥಗಳನ್ನು ಬರೆದು ಪ್ರಸಿದ್ಧರಾಗಿರುವರು.

ವೈದಿಕ ಮತಗಳಲ್ಲಿದ್ದ ಯಜ್ಞಯಾಗಾದಿಗಳು ಶೈವ, ಶಾಕ್ತೇಯ ಮತಗಳಲ್ಲಿದ್ದ ಪಶುವಧೆ ಮೊದಲಾದ ಪ್ರಾಣಿಹಿಂಸೆಗಳು ಬೌದ್ಧ ಜೈನಮತಗಳ ಪ್ರಭಾವದಿಂದ ಜನರಿಗೆ ಅಸಹ್ಯವಾಗಿ ಕಂಡಿತು. ವೈದಿಕ ಮತಗಳಲ್ಲಿ ಯಜ್ಞಕ್ಕೆ ಪ್ರಾಧಾನ್ಯವಿದ್ದಿತು. ಕ್ರಮೇಣ ಯಜ್ಞ ಅಷ್ಟು ಮುಖ್ಯವಲ್ಲ ಗೌಣವೆಂದೂ 'ಯಜ್ಞೋವೈ ವಿಷ್ಣುಃ' ಎಂದು ಹೇಳಿ ವಿಷ್ಣುಪೂಜೆಯೇ ಯಜ್ಞವೆಂದೂ 'ಸ್ವರ್ಗ ಕಾಮೋಯಜೇತ' ಎಂದು ಹೇಳಿ ಮೋಕ್ಷಕಾಮಿಗಳಿಗೆ ಯಜ್ಞ ಬೇಕಾಗಿಲ್ಲವೆಂದೂ ವೈದಿಕ ಮತಗಳು ಸಾರಿದವು. ಶಾಕ್ತೇಯ, ಭೈರವ, ಕಾಪಾಲಿಕ ಮೊದಲಾದ ಮತಗಳಲ್ಲಿದ್ದ ರಾಜಸ ಮತ್ತು ತಾಮಸ ಪೂಜೆಗಳನ್ನು ಖಂಡಿಸಿ ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರು ಸಾತ್ವಿಕ ಪೂಜೆಯಿಂದ ಶಿವನನ್ನು ಆರಾಧಿಸಿ ಕಾಯಕವೇ ಕೈಲಾಸವೆಂದು ಕರ್ಮಯೋಗವನ್ನು ಜನಗಳಿಗೆ ಬೋಧಿಸಿ ಹಿಂದೆ ಇದ್ದ ಕಾಪಾಲಿಕ, ಕಾಳಾಮುಖ, ಶಾಕ್ತೇಯ ಮತಗಳನ್ನೆಲ್ಲಾ ರೂಪಾಂತರಗೊಳಿಸಿ ವೀರಶೈವ ಮತವನ್ನಾಗಿ ಮಾರ್ಪಡಿಸಿದರು.

ಶೈವ ಮತ್ತು ವೈಷ್ಣವ ಮತಗಳು ಒಂದಕ್ಕೊಂದು ಪ್ರತಿಸ್ಪರ್ಧಿಗಳಾಗಿ ಭಾರತದಲ್ಲೆಲ್ಲಾ ತಮ್ಮ ತಮ್ಮ ಪ್ರಭಾವವನ್ನು ಬೀರುತ್ತಿವೆ. ದ್ರಾವಿಡ ದೇಶದಲ್ಲಿ ಆಳ್ವಾರುಗಳು ನಾಥಮುನಿ, ಯಾಮುನಮುನಿ ಮತ್ತು ರಾಮಾನುಜಮುನಿಗಳಿಂದ ಶ್ರೀ ವೈಷ್ಣವ ಮತವು ಅಭಿವೃದ್ಧಿಗೆ ಬಂದಿತು. ಕನ್ನಡ ನಾಡಿನಲ್ಲಿ ಅಲ್ಲಮಪ್ರಭು, ಅಕ್ಕಮಹಾದೇವಿ ಮತ್ತು ಬಸವಣ್ಣನವರ ಉಪದೇಶಗಳಿಂದ ಶೈವವು ಸಾತ್ವಿಕ ಶೈವವಾಗಿ ರೂಪಾಂತರ ಹೊಂದಿ ವೀರಶೈವವಾಗಿ ಕರ್ನಾಟಕದಲ್ಲೆಲ್ಲಾ ಹನ್ನೆರಡನೆಯ ಶತಮಾನ

ನಲ್ಲಿ ಒಂದು ಕ್ರಾಂತಿಯನ್ನುಂಟುಮಾಡಿತು. ಈ ಎರಡು ಮತಗಳಲ್ಲಿ ಉಪಾಸ್ಯ ದೈವ ನಾಮ ವಿಷ್ಣು ಮತ್ತು ಶಿವ ಎಂಬ ಶಬ್ದಗಳಿಗೆ ಪ್ರತಿಯಾಗಿ ದೇವರು ಎಂಬ ಪದ ಪ್ರಯೋಗ ಮಾಡಿದರೆ ಈ ಎರಡು ಮತಗಳು ದೈವ ಸಾಕ್ಷಾತ್ಕಾರಕ್ಕೆ ತೋರಿಸಿರುವ ಮಾರ್ಗವು ಒಂದೇ ಆಗಿದೆ. ಎರಡು ಮತಗಳಲ್ಲೂ ವರ್ಣಾಶ್ರಮ ಧರ್ಮಗಳು ಪ್ರಧಾನವಲ್ಲ. ದೈವಭಕ್ತರಲ್ಲಿ ಭೇದವಿಲ್ಲ ಮುಕ್ತಿಗೆ, ಸ್ತ್ರೀ, ಶೂದ್ರ, ಚಂಡಾಲಾದಿಗಳಿಗೂ ಅಧಿಕಾರವುಂಟು ಎಂದು ಸಾರಿದುವು. ಶ್ರೀ ವೈಷ್ಣವರಿಗೆ ದ್ರಾವಿಡ ಪ್ರಬಂಧಗಳು ದಿವ್ಯ ಗ್ರಂಥಗಳಾದರೆ ವೀರಶೈವರಿಗೆ ಶಿವಶರಣರು ಬರೆದಿರುವ ವಚನ ಸಾಹಿತ್ಯವು ಪವಿತ್ರವಾಯಿತು. ಈ ಎರಡು ಮತಗಳಲ್ಲಿ ಭಕ್ತಿಗೆ ಪ್ರಾಧಾನ್ಯ. 'ಕಾಯಕವೇ ಕೈಲಾಸ' ಎಂದರೆ ಕರ್ಮಯೋಗದಿಂದ ಲೋಕಸೇವೆ, ಗುರುಸೇವೆ, ಸಮಾಜಸೇವೆ ಮಾಡಿ ಭಕ್ತಿಯಿಂದ ಶಿವನನ್ನು ಪೂಜಿಸಿದರೆ ಕೈಲಾಸವಾಗುವುದೆಂದು ವೀರಶೈವರು ಹೇಳಿದರು. ಶ್ರೀ ವೈಷ್ಣವರು ಜನಸೇವೆಯೇ ಜನಾರ್ದನನ ಸೇವೆಯೆಂದು ಭಾವಿಸಿ ಲೋಕಾರಾಧನ ತತ್ಪರರಾಗಿ ಭಕ್ತಿಯಿಂದ ಭಗವಂತನನ್ನಾರಾಧಿಸಿ ಗುರುಮುಖೇನ ಪ್ರಪತ್ತಿಹೊಂದಿ ವಿಷ್ಣುಸಾಯುಜ್ಯವನ್ನು ಪಡೆಯುವರೆಂದು ವೈಷ್ಣವ ಮತವು ಬೋಧಿಸಿತು. ದ್ರಾವಿಡ ದೇಶದಲ್ಲಿ ರಾಮಾನುಜರು ಅಸ್ಪೃಶ್ಯತೆಯನ್ನು ತೊಡೆಯಲು ಪ್ರಯತ್ನಪಟ್ಟಂತೆ ಕನ್ನಡ ನಾಡಿನಲ್ಲಿ ಬಸವಣ್ಣನವರು ಅದೇ ಕೆಲಸ ಮಾಡಲು ಪ್ರಯತ್ನಪಟ್ಟರು.

**ಮಠಗಳ ಉಗಮ:**– ವೇದೋಪನಿಷತ್ತುಗಳ ಕಾಲದಲ್ಲಿ ವಿದ್ಯಾಭ್ಯಾಸವು ಋಷ್ಯಾಶ್ರಮಗಳಲ್ಲಿ ನಡೆಯುತ್ತಿತ್ತು. ಒಬ್ಬೊಬ್ಬ ಪ್ರಸಿದ್ಧರಾದ ಋಷಿಗಳು ಕುಲಪತಿಗಳಾಗಿ ಸಾವಿರಾರು ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸಮಾಡಿಸುತ್ತಿದ್ದರು. ಈ ಗುರುಕುಲಕ್ಕೆ ಚಕ್ರವರ್ತಿಗಳ ಮಕ್ಕಳೇ ಆದಿಯಾಗಿ ಎಲ್ಲಾ ವರ್ಣದವರೂ ಹೋಗಿ ವಿದ್ಯೆಕಲಿತು ತಮ್ಮ ತಮ್ಮ ಜನ್ಮಸ್ಥಳಕ್ಕೆ ಬಂದು ಗೃಹಸ್ಥಾಶ್ರಮವನ್ನು ಸ್ವೀಕಾರ ಮಾಡುತ್ತಿದ್ದರು. ಕಾಲಕ್ರಮೇಣ, ರಾಜರು, ಹಣವಂತರು ತಮ್ಮ ಮಕ್ಕಳುಗಳನ್ನು ಗುರುಕುಲಕ್ಕೆ ಕಳಿಸುವುದಕ್ಕೆ ಮನಸ್ಸಿಲ್ಲದೆ, ತಪಸ್ವಿಗಳು, ಬ್ರಹ್ಮಜ್ಞಾನಿಗಳು, ವಿದ್ಯಾವಂತರು ಸದಾಚಾರ ಸಂಪನ್ನರಾದ ಬ್ರಾಹ್ಮಣರನ್ನು ಪಟ್ಟಣಗಳಿಗೂ ಊರುಗಳಿಗೂ ಕರೆಸಿ ಅವರಿಗೆ ಪ್ರತ್ಯೇಕವಾಗಿ ಮನೆ ಕಟ್ಟಿಸಿಕೊಟ್ಟು ಅಶನವಸನಗಳಿಗೆ ಗ್ರಾಮ ಭೂಮಿಗಳನ್ನು ದಾನ ಮಾಡಿ ನಿರ್ಮಿಸಿದ ಬ್ರಾಹ್ಮಣ ಶ್ರೇಣಿಗಳೇ ಅಗ್ರಹಾರಗಳಾದುವು. ಈ ಅಗ್ರಹಾರ ನಿರ್ಮಾಣವು ಕ್ರಿ. ಶ. ಐದನೆಯ ಶತಮಾನದಿಂದ ಆಧುನಿಕ ಕಾಲದವರೆಗೂ ನಡೆದು ಬಂದಿದೆ. ಈ ಅಗ್ರಹಾರಗಳ ಮಧ್ಯೆ ಒಂದು ವೈಷ್ಣವಾಲಯವು ಈಶಾನ್ಯದಲ್ಲಿ ಒಂದು ಶಿವಾಲಯವೂ ನಿರ್ಮಿತವಾಗಿ ಈ ಆಲಯಗಳ ಅಂಗವಾಗಿ ಮಠಗಳು ಕಟ್ಟಲ್ಪಟ್ಟವು. ಜೈನ ಬೌದ್ಧ ಯತಿಗಳ ವಾಸಸ್ಥಳಗಳಿಗಾಗಿ ಚೈತ್ಯ ವಿಹಾರಗಳನ್ನು ಕಟ್ಟಿ, ಅಲ್ಲಿ ವಾಸಿಸುವ ತಪೋಧನರ ಆಹಾರಾಭಯ ಭೈಷಜ್ಯಕ್ಕಾಗಿ ಗ್ರಾಮ ಭೂಮಿಗಳನ್ನು ಬಿಟ್ಟು ಅಲ್ಲಿಯೂ ವಿದ್ಯಾಭ್ಯಾಸ ಮಾಡಲು ಮಾರ್ಗ ಮಾಡಿದರು. ಶಂಕರ, ರಾಮಾನುಜ

ಮತ್ತು ಮಾಧ್ವ ಮತದವರು ತಮ್ಮ ಸನ್ಯಾಸಿಗಳು ವಾಸಮಾಡಿಕೊಂಡು ತಮ್ಮ ತಮ್ಮ ಸಿದ್ಧಾಂತಗಳನ್ನು ಪಾಠ ಪ್ರವಚನ ಮಾಡುತ್ತಿದ್ದ ಯತಿಗಳ ವಾಸಸ್ಥಳಗಳು ಮಠಗಳಾದವು. ಕರ್ಣಾಟಕದಲ್ಲಿ ಹನ್ನೊಂದರಿಂದ ಹದಿನಾಲ್ಕನೆಯ ಶತಮಾನದವರೆಗೆ ಶೈವ ದೇವಸ್ಥಾನಗಳ ಅಂಗವಾಗಿ ಹುಟ್ಟಿದ ಕಾಳಾಮುಖರ ಮಠಗಳು ಬಹಳ ಪ್ರಸಿದ್ಧವಾದುವು. ಶಿಕಾರಿಪುರದ ತಾಲ್ಲೂಕು ಬಳ್ಳಿಗಾವೆ ಎಂಬ ಊರಿನಲ್ಲಿರುವ ಶಿವದೇವಸ್ಥಾನಗಳ ಅಂಗವಾಗಿ ಅನೇಕ ಮಠಗಳಿದ್ದವು. ಇವುಗಳಲ್ಲಿ ಪಂಚಮಠಗಳು ಪ್ರಸಿದ್ಧವು. ಈ ಮಠಗಳಲ್ಲಿ ಕುಲಪತಿಗಳಾದ ವಾಮಶಕ್ತಿ ರುದ್ರಶಕ್ತಿ ಮೊದಲಾದ ಕಾಳಾಮುಖಿ ಯತಿಗಳು ಸರ್ವಶಾಸ್ತ್ರ ಪಂಡಿತರಾಗಿ ಅನೇಕ ಶಿಷ್ಯರುಗಳನ್ನು ಮಠಗಳಲ್ಲಿ ಇಟ್ಟುಕೊಂಡು ಇಲ್ಲಿಯ ವಿದ್ಯಾರ್ಥಿಗಳ ಆಹಾರಾಚ್ಛಾದನಕ್ಕೆ ದಾನವನ್ನು ಸ್ವೀಕರಿಸಿರುವರು. ಬಳ್ಳಿಗಾವೆ ಶೈವ ಸಂಸ್ಕೃತಿಯ ಕೇಂದ್ರ. ಬಸವಣ್ಣ, ಅಕ್ಕಮಹಾದೇವಿ ಪ್ರಭುದೇವರು ಇಲ್ಲಿಗೆ ಬಂದುದಕ್ಕೆ ಗ್ರಂಥಾಧಾರಗಳಲ್ಲದೆ ಪ್ರಭುದೇವರ ಗದ್ದಿಗೆ ಎಂದು ತೋರಿಸುವ ಸಮಾಧಿಯೂ ಇಲ್ಲಿದೆ. ಇಲ್ಲಿದ್ದ ಮಠಗಳೆಲ್ಲಾ ದೇವಸ್ಥಾನಗಳ ಅಂಗವಾಗಿದ್ದುವು. ಬಸವಣ್ಣನವರ ತರುವಾಯ ಗುರು ಜಂಗಮರ ವಾಸಸ್ಥಾನಗಳೇ ಮಠಗಳಾದುವು. ವೀರಶೈವ ಮಠಗಳು ದೇಶವಲ್ಲೆಲ್ಲಾ ಹುಟ್ಟಿಕೊಂಡವು.* 'ಮಠಛಾತ್ರಾದಿ ನಿಲಯಃ' ಎಂದು ಅಮರಸಿಂಹನು ಹೇಳಿರುವಂತೆ, ಇವು ಬರೀ ಗುರುಗಳ ಕೇವಲ ವಾಸಗೃಹಗಳಾಗಿರದೆ ವಿದ್ಯಾರ್ಥಿಮಂದಿರಗಳೂ ಆಗಿವೆ.

ಕರ್ಣಾಟಕದಲ್ಲಿರುವ ವೀರಶೈವ ಮಠಗಳೇ ಮಠಶಬ್ದ ವಾಚ್ಯಕ್ಕೆ ಯೋಗ್ಯವಾದುವು. ಇತರ ಮತಸ್ಥರ ಮಠಗಳು ದೇವರ ಪೂಜೆಗೂ ನಾಲ್ಕಾರುಜನ ಪಂಡಿತರ ಕಾಲಕ್ಷೇಪಕ್ಕೂ ನೆರವಾಗಿ ಸಾರ್ವಜನಿಕರ ವಿದ್ಯಾಭ್ಯಾಸಕ್ಕೆ ಅಷ್ಟೊಂದು ಪ್ರಯೋಜನವಿಲ್ಲದೆ ಇವೆ. ವೀರಶೈವ ಮಠಗಳು ಅನೇಕ ವಿದ್ಯಾರ್ಥಿಗಳಿಗೆ ಅಶನವಸನಗಳಿಗೆ ಮಾರ್ಗಮಾಡಿಕೊಟ್ಟು ಮಾಧ್ಯಮಿಕ, ಪ್ರೌಢ, ಉಚ್ಚ ಶಿಕ್ಷಣ ಮತ್ತು ತಾಂತ್ರಿಕ ಜ್ಞಾನಕ್ಕೆ ಬೇಕಾದ ಪಾಠಶಾಲೆಗಳನ್ನು ತೆರೆದು ಸಾರ್ವಜನಿಕರ ವಿದ್ಯಾಭ್ಯಾಸಕ್ಕೆ ಮಹೋಪಕಾರ ಮಾಡುತ್ತಿವೆ. ಕನ್ನಡ ನಾಡಿನಲ್ಲಿ ವೀರಶೈವರು ಕಟ್ಟಿಸಿರುವಷ್ಟು ವಿದ್ಯಾರ್ಥಿ ನಿಲಯಗಳೂ ವಿದ್ಯಾಭ್ಯಾಸಕ್ಕೆ ಕೊಡುವ ಪ್ರೋತ್ಸಾಹವೂ ಮತ್ತಾವ ಪಂಗಡದವರಿಂದಲೂ ಆಗುತ್ತಿಲ್ಲ. ವೀರಶೈವ ಗುರುಜಂಗಮರು ಜ್ಞಾನದೀಪವನ್ನು ಹಿಡಿದು ಮನೆ ಮನೆಗೂ ಹೋಗಿ ಅಜ್ಞಾನಿಗಳಿಗೆ ಹಿಂದುಳಿದವರಿಗೆ ಬೆಳಕನ್ನು ಬೀರುತ್ತಿರುವರು. ವಿರಕ್ತರಾದ ಗುರುಜಂಗಮರುಗಳು ಮನೆಯೋ ಪರ್ಣಶಾಲೆಯೋ ಕಟ್ಟಿಕೊಂಡು ತಮ್ಮ ತಪಶ್ಶಕ್ತಿಯಿಂದಲೂ ಯೋಗಬಲದಿಂದಲೂ ಶಿಷ್ಯರ ಮೇಲೆ ಪ್ರಭಾವವನ್ನು ಬೀರಿ ಅವರ ನೆರವಿನಿಂದ ದೊಡ್ಡ ದೊಡ್ಡ ಸಿಂಹಾಸನಗಳನ್ನೇ ಸ್ಥಾಪಿಸಿರುವರು. ಹನ್ನೆರಡನೆಯ ಶತಮಾನದಿಂದ ಆಧುನಿಕ ಕಾಲದವರೆಗೆ ಈ ರೀತಿ ಸ್ಥಾಪಿಸಿದ ವೀರಶೈವ ಸಿಂಹಾಸನಗಳನ್ನೂ ಮಠಗಳನ್ನೂ ಕನ್ನಡ ನಾಡಿನ ಎಲ್ಲಾ ಕಡೆಗಳಲ್ಲೂ

* ತತ್ಪೂರ್ವ ವೀರಶೈವ ಮಠಗಳೂ ಇದ್ದವು—ಸಂ.

ನಾವು ನೋಡಬಹುದು. ಇಂತಹ ಶ್ರೀಮಠಗಳಲ್ಲಿ ಕನಕಪುರದ ದೇಗುಲಮಠವೂ ಒಂದಾಗಿದೆ.

ಬೆಂಗಳೂರಿಗೆ ದೇಗುಲಮಠ ದಕ್ಷಿಣ ಮೂವತ್ತೈದು ಮೈಲಿಗಳೂ ಮೈಸೂರು ಉತ್ತರ ಅರವತ್ತು ಮೈಲಿಗಳ ಅಂತರದಲ್ಲಿ ಕನಕಪುರ ಎಂಬ ಬೆಂಗಳೂರುಜಿಲ್ಲೆಯ ತಾಲ್ಲೂಕು ಕೇಂದ್ರವಿದೆ. ಹದಿಮೂರನೆಯ ಶತಮಾನದಿಂದ ಹದಿನೇಳನೆಯ ಶತಮಾನದವರೆಗೆ 'ಕಾಣಿಕಾರನಹಳ್ಳಿ', ಎಂದೂ ಹದಿನೆಂಟರಿಂದ ಇಪ್ಪತ್ತನೆಯ ಶತಮಾನದ ಪೂರ್ವಾರ್ಧದವರೆಗೆ ಕಾನ್‌ಕಾನ್‌ಹಳ್ಳಿಯೆಂದೂ ಭಾರತಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಕನಕಪುರವೆಂದೂ ಈ ಗ್ರಾಮಕ್ಕೆ ಹೆಸರು. ಪಾಳೇಗಾರರ ಕಾಲದಲ್ಲಿ ಕಟ್ಟಿಸಿದ ಕೋಟೆಯು ಶಿಥಿಲವಾಗಿ ಅಲ್ಲಲ್ಲೇ ಅದರ ಅವಶೇಷಗಳಿವೆ. ಕೋಟೆಯ ಉತ್ತರ ಭಾಗದಲ್ಲಿ ಪೇಟೆ ಇದೆ. ಕೋಟೆಯಲ್ಲಿ ರಂಗನಾಥಸ್ವಾಮಿ ದೇಸ್ಥಾನವಿದೆ. ಕೋಟೆಗೂ ಪೇಟೆಗೂ ಮಧ್ಯೆ ರಾಮದೇವರ ದೇವಾಲಯ, ಆಂಜನೇಯನಗುಡಿ ಮತ್ತು ಸರ್ಕಾರಿ ಕಾರ್ಯಾಲಯಗಳ ಕಟ್ಟಡಗಳಿವೆ. ಕೋಟೆಗೆ ಅರ್ಧ ಮೈಲಿ ಪೇಟೆಗೆ ಎರಡು ಫರ್ಲಾಂಗ್ ಪೂರ್ವಕ್ಕೆ ದೇಗುಲಮಠವಿದೆ.

ಈ ಮಠವಿರುವ ಪ್ರದೇಶವು ಪ್ರಕೃತಿ ದತ್ತವಾದ ಸೌಂದರ್ಯದಿಂದ ಕೂಡಿ ಪ್ರಶಾಂತವಾದ ವಾತಾವರಣದಲ್ಲಿದೆ. ಮಠದ ಬಲಗಡೆ ಪಕ್ಕದಲ್ಲಿ ಅರ್ಕಾವತಿ ನದಿ ಹರಿಯುವುದು. ಕಲ್ಲುಮಠದ ಹಿಂದುಗಡೆ ಆಧುನಿಕ ಗೃಹನಿರ್ಮಾಣ ಸಾಧನಗಳಿಂದ ಕಟ್ಟಿರುವ ಪ್ರೌಢಶಾಲೆಯೂ ಮಠವೂ ಇವೆ. ಈ ಮಠದ ಈಶಾನ್ಯ ಮೂಲೆಯಲ್ಲಿ ಚೌಕವಾದ ಉದ್ದ 62˝xಅಗಲ20˝ ಪ್ರಮಾಣ ಉಳ್ಳ ಒಂದು ಶಾಸನದ ಕಂಬವಿದೆ ಈ ಮಠದ ಆಗ್ನೇಯಕ್ಕೆ ಹತ್ತು ಗದ್ದುಗೆಗಳಿವೆ. ಈ ಮಠದ ಪೀಠಾಧಿಪತಿಗಳಾಗಿದ್ದು ಐಕ್ಯರಾದ ಸ್ವಾಮಿಗಳ ಸಮಾಧಿಗಳು ಈ ಗದ್ದುಗೆಗಳಾಗಿವೆ.

ಮಠದಲ್ಲಿರುವ ದಾಖಲೆಗಳಿಂದ ಈ ಮಠದಲ್ಲಿ ಆದಿ ನಿರ್ವಾಣ ಸ್ವಾಮಿಗಳಿಂದ ಇಲ್ಲಿಯವರೆಗಿನ ಸ್ವಾಮಿಗಳ ಪರಂಪರೆಯನ್ನು ತಿಳಿಯಬಹುದಾಗಿದೆ.

## ಮಠದ ಪೀಳಿಗೆ

೧. ಆದ್ಯ ನಿರ್ವಾಣ (ದೇವರು) ಸ್ವಾಮಿಗಳು ಮೂಲ ಪುರುಷರು
೨. ಸಂಜಯ್ಯ ಸ್ವಾಮಿಗಳು
೩. ಮಹಾಲಿಂಗ ಸ್ವಾಮಿಗಳು
೪. ಹುಚ್ಚಪ್ಪ ಸ್ವಾಮಿಗಳು
೫. ಮರುಳ ಸಿದ್ಧ ದೇವರು
೬. ಚೆನ್ನಬಸವ ಸ್ವಾಮಿಗಳು
೭. ಇಮ್ಮಡಿ ಮರುಳ ಸಿದ್ಧರು
೮. ಇಮ್ಮಡಿ ನಿರ್ವಾಣ ಸ್ವಾಮಿಗಳು

೯. ಇಮ್ಮಡಿ ಹುಚ್ಚಪ್ಪ ಸ್ವಾಮಿಗಳು
೧೦. ಮಹಲಿಂಗ ಸ್ವಾಮಿಗಳು.

### ಗವಿಮಠ ಅಥವಾ ಚಿಕ್ಕಮಠದಲ್ಲಿ

೧. ದೇವಲಿಂಗ ಸ್ವಾಮಿಗಳು
೨. ನಾಗಲಿಂಗ ಸ್ವಾಮಿಗಳು.

ಈಗ್ಗೆ ಕೆಲವು ವರ್ಷಗಳ ಹಿಂದೆ ಶಿವೈಕ್ಯರಾದ
ಶ್ರೀ॥ ನಿ॥ ಪ್ರ॥ ನಿರ್ವಾಣ ಮಹಾಸ್ವಾಮಿಗಳು
ಈಗ ಪೀಠಾಧಿಪತಿಗಳು ಶ್ರೀ॥ ನಿ॥ ಪ್ರ॥ ಮಹಲಿಂಗ ಸ್ವಾಮಿಗಳು.

ಈ ಮಠಾಧಿಪತಿಗಳೆಲ್ಲರೂ ಪವಾಡ ಪುರುಷರು. ಇವರು ಮಾಡಿರುವ ಮಹತ್ಕಾರ್ಯಗಳನ್ನು ಈ ತಾಲ್ಲೂಕಿನ ಹಳ್ಳಿಗಳಲ್ಲೆಲ್ಲಾ ಪ್ರಸಿದ್ಧವಾಗಿ ಜನಜನಿತ ವಾದ ಅನೇಕ ಕಥೆಗಳಿಂದ ಎಲ್ಲರ ಬಾಯಿಂದಲೂ ಕೇಳಬಹುದು.

ಈ ಮಠದ ಶಿಲಾಶಾಸನ,

ದಿವಂಗತ ಬಿ. ಎಲ್. ರೈಸ್ ರವರಿಂದ ಈಗ್ಗೆ ಸುಮಾರು ಎಪ್ಪತ್ತು ವರ್ಷಗಳ ಹಿಂದೆ ದೇಗುಲ ಮಠದ ಶಿಲಾಶಾಸನ ಎಂದು ಶಾಸನಗಳ ಸಂಪುಟ ೯ರಲ್ಲಿ ಕಾನ್ ಕಾನ್‌ಹಳ್ಳಿದೇಗ(ಗು)ಲ ಶಾಸನ ಎಂದು ನಂಬರು ೯೧ ಆಗಿ ಪ್ರಕಟಿಸಿರುವ ಶಾಸನದ ವಾಚಕವನ್ನು ಕೆಳಗೆ ಕೊಟ್ಟಿದೆ.

### ಕಾನ್‌ಕಾನ್‌ಹಳ್ಳಿ ದೇಗಲ ಮಠದ ಕಲ್ಲು 91

1. ಶ್ರೀ ಶ್ರೀ ವಿಜಯ ಜಯುಸ್ತು ಸ್ವಸ್ತಿ ಶಾಲಿವಾ
2. ಹನ ತತ್ಪೂರ್ವಸಂವತ್ಸರ ೧೬೦೫ನೇ ಪ್ಲವಂಗ ಸಂವತ್ಸರ
3. ಜೇಷ್ಠ ಶು ೧೫ ಯಲ್ಲು ಶ್ರೀಮದ್ರಾಜಾಧಿರಾಜ ಪ್ರ
4. ವುಡ ಪ್ರತಾಪ ಶ್ರೀ ವೀರ ಮೈಸೂರ ಸಿದ್ಧ ವಡೆಯರಾದ ದೇವ
5. ದೇವರಾಜವಡೆಯರು ಆಳುತ್ತಿರಲು ವಿರುಪಸಂದ್ರದ
6. ಗ್ರಾಮದಲ್ಲು ದಳವಾಯಿ ಕುಮಾರಯ್ಯನ ತಾ
7. ಯಿ ತಿಮ್ಮಮ್ಮನವರು ಸ್ವಾಸ್ತಿಯನ್ನು
8. ಸ್ಥಿರವಾಗಿ ಆಗುಮಾಡಿ ಮಠವನ್ನು ಸಾಂಗವಾಗಿ
9. ನಡಸುತ್ತಾ ಅನುಭವಿಸುತ್ತಾ ಬರುವುದು.

ಇದರ ಆಂಗ್ಲಭಾಷೆಯ ಭಾಷಾಂತರ. ? 1667 A. D. May it be vitorious. Be it well, on the date (Specified) when the Rajadhiraja praudha pratapa the vira Maisura Siddha vadeyar Devaraja vadeyar was ruling in the Virupasandra Village,

Dalavayi Komaraiya's mother Timmamma made a grant for the matha.

ಹಿಂದೆ ಪ್ರಕಟವಾಗಿರುವ ದೇಗುಲ ಮಠದ ಶಾಸನದ ಪ್ರತಿಯೊಂದು ಪಂಕ್ತಿಯನ್ನು ತಪ್ಪಾಗಿ ಓದಿರುವರು. ನಿರ್ವಾಣ ದೇವರ ಮಠಕ್ಕೆ ಕಲ್ಲು ಮಠ ಕಟ್ಟಿಸಿದ ವಿಷಯ ತಿಳಿಸುವ ಭಾಗವನ್ನೇ ಸರಿಯಾಗಿ ಓದಿಲ್ಲ. ಕಾಲವನ್ನು ತಿಳಿಸುವ ಶಕಸಂವತ್ಸರ ತಪ್ಪು. ಮಾಸ ಓದಿರುವುದೂ ತಪ್ಪು, ಟಿಪ್ಪಣಿ ಬರೆಯುವಾಗ 'ಪ್ಲವಂಗ' ಸಂವತ್ಸರ ಇದ್ದುದನ್ನು ದೇವರಾಜ ವಡೆಯರ ಕಾಲದ ಪ್ಲವಂಗ ಸಂವತ್ಸರ ಯಾವಾಗ ಬರುವುದೆಂದು ಪಂಚಾಂಗ ನೋಡಿ 1667 ಎಂದು ಊಹಿಸಿ ಅದರ ಹಿಂದೆ ಪ್ರಶ್ನಾರ್ಥಕ ಚಿಹ್ನೆ ಹಾಕಿರುವರು. ಶಾಸನದಲ್ಲಿ ವಿರುಪಸಂದ್ರ ಎಂಬ ಗ್ರಾಮದ ಹೆಸರೇ ಇಲ್ಲ. ಕಾಣಿಕಾರನ ಹಳ್ಳಿಯಲ್ಲಿ ಮಾಡಿದ ಧರ್ಮದ ವಿಷಯವನ್ನೂ ತಿಳಿಸುವ ಬರವಣಿಗೆ ಓದಿಲ್ಲ.

ಈ ಕಂಬದ ಶಾಸನದಲ್ಲಿ ಒಟ್ಟು ಮೂವತ್ತೊಂಭತ್ತು ಪಂಕ್ತಿಗಳಿವೆ. ಬೇರೆ ಬೇರೆ ಕಾಲದಲ್ಲಿ ಬರೆದ ಎರಡು ಶಾಸನಗಳಿವೆ. ರೈಸ್ ಸಾಹೇಬರು ಓದಿರುವುದು ಒಂಭತ್ತು ಪಂಕ್ತಿಗಳು ಮಾತ್ರ. ಈ ಶಾಸನವಲ್ಲದೆ ಮತ್ತೆ ಯಾವುದಾದರೂ ಬೇರೆ ಶಾಸನವನ್ನು ಓದಿರಬಹುದೇ ಎಂಬ ಶಂಕೆಗೂ ಅವಕಾಶವಿಲ್ಲ. ಈ ಊರಿನಲ್ಲಿರುವುದು ಇದೊಂದೇ ಶಿಲಾಶಾಸನ. ಇಷ್ಟು ತಪ್ಪುಗಳನ್ನು ಏಕೆ ಮಾಡಿದರೋ ಗೊತ್ತಾಗುವುದಿಲ್ಲ.

ಈ ಕಲ್ಲಿನಲ್ಲಿ ಬರೆದಿರುವ ಭಾಗದ ಛಾಯಾಚಿತ್ರವನ್ನು ವಾಚಕರ ಅವಗಾಹನೆಗಾಗಿ ಇಲ್ಲಿ ಪ್ರಕಾಶ ಪಡಿಸಿದೆ. ಈಗ ಪುನರ್ವಿಮರ್ಶಿಸಿದ ಶಾಸನ ವಾಚಕವನ್ನು ಕೆಳಗೆ ಕೊಟ್ಟಿದೆ.

ಕನಕಪುರ ತಾಲ್ಲೂಕು ಕಸಬಾ ಗ್ರಾಮದ ದೇಗುಲ ಮಠದ ಈಶಾನ್ಯ ಮೂಲೆಯಲ್ಲಿ ನಟ್ಟಿರುವ ಕಲ್ಲುಕಂಬ

ಪ್ರಮಾಣ ಉದ್ದ 63″ x ಅಗಲ 20″

೧ ಸ್ವಸ್ತಿ ಶ್ರೀ ವಿಜೆಯಾಭ್ಯುದಯ ಶಾಲಿವಾಹನಶಕ
೨ ವರುಷ ಸಂದ ೧೫೮೯ ಪ್ಲವಂಗ ಸಂವತ್ಸರದ
೩ ಭಾದ್ರಪದ ಶುದ್ಧ ೧೫ ಲು ಶ್ರೀಮದ್ರಾಜಾಧಿರಾಜ ರಾಜ ಪ
೪ ರಮೇಶ್ವರ ಪ್ರಉಡ ಪ್ರತಾಪ ಶ್ರೀ ವೀರ ಮೈಸೂರ ಸಿಂ
೫ ಹಾಸನಾರೂಢರಾದ ದೇವರಾಜ ವಡೆಯುರವ
೬ ರು ಸುಖದಿಂ ರಾಜ್ಯಂಗೈಉ ತಿರಲು ಹೊಂ ? ಬ
೭ ನಾಡು ಸ್ತಳದ ಕಾಣುಕಾರನಹಳಿ ಗ್ರಾಮದ
೮ ಉ ನಿ (ನೆ) ರುವಾಣ ದೇವರ ಮಠದಲಿ ದಳವಾ
೯ ಯಿ ಕೊಮಾರೈಯನ ತಾಯಿ ತಿಂಮಂಮ

೧೦ ನವರು ಕಟಿಸಿದ ಮಟದ ಧರ್ಮಕೆ
೧೧ ಕಾಣಿ ಕಾರನಹಳಿ ಗ್ರಾಮದಲು ಬೆದ
೧೨ ಲು ಭೂಮಿ ಕಂರ ಗ ೮ ಯಂಟುವರಹ
೧೩ ಭೂಸ್ವಾಸ್ತಿ ಯಂನು ಸಿಲಾಪ್ರತಿಷ್ಟೆ
೧೪ ಯಂ ಮಾಡಿಸಿ ಕೊಟ್ಟೆವಾಗಿ ಯೀ
೧೫ ಸ್ವಾಸ್ತಿಯಂನು ಆಗು ಮಾಡಿ ಮ
೧೬ ಟ ಧರ್ಮ ವಂನು ಸಾಂಗವಾಗಿ ಮಾಡಿ
೧೭ ಕೊಂಡು ಸುಖದಲಿ ಬರೋದು ಎ
೧೮ ಂದು ಬರಸಿ ಕೊಟ್ಟ ಶಿಲಾ ಶಾಸನ
೧೯ ಯೀ ಧ ರ್ಮವುಂ ಆರುಅಪಹರಿಸಿದರು
೨೦ ಕಾಸಿಯಲಿ ಗೋಉ ಕೊಂದಪಾಪಕೆ
೨೧ ಹೋಹರು.

ಇದೇ ಶಾಸನದ ಕೆಳಗಡೆ,

೧ ಕಾಳಾಯುಕ್ತಿ ಸಂವತ್ಸರದ ವೈಶಾ
೨ ಖ ಬ ೧೫ ಲು ಮೈಸೂರು ಚಿಕ ದೇ
೩ ವ ರಾಜು ವಡೆಯರವರು ಪೃಥವಿ
೪ ರಾಜಂಗೈ ವುತಿರಲು ಕಾಣಿ ಕಾ
೫ ರನಹಳಿ ಗ್ರಾಮದ ನಿ...ವಾಣ ದೇವ
೬ ರಮಟದಲು ದಳವಾಯಿ ಕೊಮಾರ್ಯೆಯನ
೭ ತಾಯಿ ತಿಂಮುಂಮ ನವರು ಕಟಿಸಿದ ಮ
೮ ಟ ಹುಚ್ಚು ಹೊಳೆ ಬಂದು ಮಟ ಕೊಚಿ
೯ ಹೋಗಲಾಗಿ ಪ್ರತಿಯಾಗಿ ಕಲ್ಲ ಮಟವಂನು ಕಟ್ಟಿಸಿ
೧೦ ಪುನಃ ಪ್ರತಿಷ್ಟೆಯ ಮಾಡಿ ಆ ಮಟವನು
೧೧ ಕಾಣಿಕಾರನ ಹಳಿಯ ಪಡವಲು ಬಿಟ್ಟ
೧೨ ಬೆದಲು ಭೂಮಿಗ-೯ ಗವಿ ಮಟಕೆ ಬೆದಲು
೧೩ ಭೂಮಿ ಕಂ ೪ ಕೂಡಾ ಕಂ ೧೮ ಪುನ
೧೪ ಹಪ್ರತಿಷ್ಟೆಯಂನು ಮಾಡಿಸಿ ಕೊಟರು
೧೫ ಈ ಧರ್ಮವನು ಯಾರು ಅಪಹರಿಸಿದರು
೧೬ ಕಾಸಿಯಲು ಗೋಉ ಕೊಂದ ಪಾಪಕೆ
೧೭ ಹೋಹರು ಎಂದು ಬರಸಿ ಕೊಟ
೧೮ ಶಿಲಾಶಾಸನ



ಶ್ರೀ ದೇಗುಲಮಠದ ಆವರಣದಲ್ಲಿರುವ ರಾಜಮನೆತನದವರು
ನಿರ್ಮಿಸಿದ ಶಾಸನಗಳ ಸ್ತಂಭ



ರಾಜಮನೆತನದವರು ಕಟ್ಟಿಸಿದ ಶಿಲಾ ಮಂಟಪ, ಶ್ರೀ ದೇಗುಲವಂತ

ಮೇಲ್ಗಡೆ ಬರೆದಿರುವ ಶಾಸನಗಳ ಲಿಪಿಗಳು 1½ ಅಂಗುಲ ಪ್ರಮಾಣದಲ್ಲಿದ್ದು ಕೆಳಗಡೆ ಹೋಗುತ್ತಾ ಚಿಕ್ಕದಾಗುವುದು. ಕೊನೆ ಕೊನೆಗೆ ಕಲ್ಲಿನ ಒಂದೇ ಮುಖ ದಲ್ಲಿ ಪೂರ್ತಿಯಾಗಿ ಶಾಸದ ವಿಷಯ ಮುಗಿಸಲಾಗುವುದಿಲ್ಲವೆಂಬ ಶಂಕೆಯಿಂದ ಕೊನೆಯ ಪಂಕ್ತಿಗಳ ಅಕ್ಷರಗಳು ಬಹಳ ಚಿಕ್ಕವಾಗಿ ಓದಲು ಕಷ್ಟವಾಗಿರುವುದು ಆದರೂ ಈ ಎರಡು ಶಾಸನಗಳನ್ನೂ ಸಾಧ್ಯವಾದ ಮಟ್ಟಿಗೆ ಸರಿಯಾಗಿ ಶುದ್ಧವಾದ ಪ್ರತಿ ಮಾಡಿದೆ.

**ಈ ಎರಡು ಶಾಸನಗಳ ಸಾರಾಂಶ:–** ೧ ದೇವರಾಜವಡೆಯರ ಕಾಲದಲ್ಲಿ ಶಾಲಿವಾಹನಶಕ ೧೫೮೯ ಪ್ಲವಂಗ ಸಂವತ್ಸರ ಭಾದ್ರಪದ ಶು ೧೫ ಕ್ರಿ. ಶ. ೧೬೬೭ ನೆಯ ತಾರೀಖು ಶುಕ್ರವಾರದಲ್ಲಿ ರಾಜಾಧಿರಾಜ ರಾಜ ಪರಮೇಶ್ವರ ವೀರ ಪ್ರತಾಪ ಶ್ರೀ ವೀರ ದೇವರಾಜವಡೆಯರು ಮೈಸೂರು ರಾಜ್ಯವನ್ನು ಆಳುತ್ತಿರುವಾಗ ಅವರ ದಳವಾಯಿ ಕುಮಾರಯ್ಯನ ತಾಯಿ ತಿಮ್ಮಮ್ಮನು ಹೊಂಬನಾಡ ಕಾಣಿಕಾರನಹಳ್ಳಿ ನಿರ್ವಾಣದೇವರ ಮಠವನ್ನು ಕಟ್ಟಿಸಿ ಹೊಲಕಂಗ ಎಂಟು ವರಹ ಭೂಸ್ವಾಸ್ತೆಯನ್ನು ದಾನ ಮಾಡಿದಳು. ಮುಂದೆ ಧರ್ಮಾಪಹಾರ ಮಾಡಿದವರು ಕಾಶಿಯಲ್ಲಿ ಗೋವು ಕೊಂದ ಪಾಪಕ್ಕೆ ಹೋಗುವರು ಎಂದು ಹೇಳಿದೆ.

**ಎರಡನೆಯ ಶಾಸನದಲ್ಲಿ** ಕಾಳಾಯುಕ್ತಿ ಸಂವತ್ಸರದ ವೈಶಾಖ ಬ ೧೫ ಲು ಅಂದರೆ ಕ್ರಿ. ಶ. ೧೬೭೮ ಏಪ್ರಿಲ್ ಇಪ್ಪತ್ತೆಂಟನೆಯ ಭಾನುವಾರ ಅಮಾವಾಸ್ಯೆಯ ದಿನ ಚಿಕ್ಕದೇವರಾಜವಡೆಯರು ಪೃಥ್ವೀರಾಜ್ಯಂಗೆಯುತ್ತಿರಲು ಆದೇ ಕುಮಾರಯ್ಯನ ತಾಯಿ ತಿಮ್ಮಮ್ಮನು ಹಿಂದೆ ಕಟ್ಟಿಸಿದ್ದ ನಿರ್ವಾಣದೇವರ ಮಠವು ಹುತ್ತು ಹೊಳೆ ಬಂದು ಕೊಚ್ಚಿಹೋಗಲು ಪುನಃ ಕಲ್ಲು ಮಂಟಪವನ್ನು ಕಟ್ಟಿಸಿ ಪ್ರತಿಷ್ಠೆ ಮಾಡಿ ಕಾಣಿ ಕಾರನಹಳ್ಳಿ ಗ್ರಾಮದ ಪಶ್ಚಿಮಕ್ಕೆ ಹೊಲ-೯ಗ (ಗದ್ಯಾಣ) ಭೂಮಿಬಿಟ್ಟು ಗವಿಮಠಕ್ಕೆ ಕರ್ನಕೂಡಾ ಒಟ್ಟು ೧೮ 'ಕಂ' ಆಳತೆ ಭೂಮಿಯನ್ನು ಪುನಃ ಪ್ರತಿಷ್ಠೆ ಮಾಡಿ ಕೊಟ್ಟರು. ಮುಂದೆ ಮೇಲಿನಂತೆಯೇ ಫಲ ಶ್ರುತಿ ಇದೆ.

**ಈ ಶಾಸನಗಳ ಭಾಷೆ:**–ರಾಜಾಸ್ಥಾನಗಳಲ್ಲಿರುವ ಪಂಡಿತರು ವಿದ್ವಾಂಸರು ಕವಿಗಳು ಅನೇಕ ಶಾಸನಗಳನ್ನು ಬರೆದು ಲಿಪಿಕಾರನಿಗೆ ಕೊಟ್ಟು ತಾಮ್ರದ ಹಲಗೆ ಅಥವಾ ಕಲ್ಲುಗಳ ಮೇಲೆ ರಾಜಾಧಿರಾಜರು ದಂಡನಾಯಕರು ಶಾಸನಗಳನ್ನು ಬರೆಸು ತ್ತಿದ್ದರು. ಈ ಶಾಸನಗಳನ್ನು ಬರೆದ ಕವಿಗಳ ಹೆಸರೂ ಲಿಪಿಕಾರನ ಹೆಸರೂ ಅನೇಕ ಶಾಸನಗಳಲ್ಲಿ ಉಕ್ತವಾಗಿದೆ. ಹೀಗೆ ಬರೆದ ಅನೇಕ ತಾಮ್ರಶಾಸನಗಳು ಕಲ್ಲುಶಾಸನ ಗಳೂ ಕೂಡ ಒಂದೊಂದು ಚಂಪೂಕಾವ್ಯದಂತೆ ಇವೆ. ಹಳ್ಳಿಗಾಡುಗಳಲ್ಲಿ ಬರೆಸಿರುವ ಶಿಲಾಶಾಸನಗಳು ಜನಗಳು ಮಾತಾಡುವ ವ್ಯವಹಾರ ಭಾಷೆಯಲ್ಲಿದ್ದೂ ಅಕ್ಷರಸ್ಖಾ ಲಿತ್ಯಗಳುಳ್ಳವುಗಳಾಗಿವೆ. ಕನಕಪುರದ ದೇಗುಲ ಮಠದ ಮೇಲಿನ ಎರಡು ಶಾಸನ ಗಳು ವ್ಯವಹಾರ ಭಾಷೆಯಲ್ಲಿ ಗ್ರಾಮಸ್ಥನಾದ ಸಾಮಾನ್ಯ ಮನುಷ್ಯನಿಂದ ರಚಿತವಾ ದುದು. ಮಹಾಪ್ರಾಣಾಕ್ಷರಕ್ಕೆ ಅಲ್ಪಪ್ರಾಣ 'ಮಠ'ಕ್ಕೆ ಪ್ರತಿಯಾಗಿ 'ಮಟ'ವ್ಯಂಜನ

ವಿರುವ ಕಡೆ ಸ್ವರ ಪ್ರವೃಡ-ಪ್ರಉಢ, ಏಂಟು-ಯಂಟು, ಈಧರ್ಮ-ಯೀಧರ್ಮ, ಗೋವ್ರು-ಗೋಉ. ಇವೇಮೊದಲಾದ ವಾಚಕದೋಷಗಳಿವೆ. ಆದರೂ ಈಶಾಸನಗಳು ನೈಜವಾದವು, ಅನೇಕ ಐತಿಹಾಸಿಕ ವಿಷಯುಗಳನ್ನೊಳಗೊಂಡಿವೆ ಇವುಗಳ ಸತ್ಯತೆಯು ವಿಷಯದಲ್ಲಿ ಯಾವ ಸಂದೇಹವೂ ಇಲ್ಲ.

**ಕಾಲ:**-ಮೊದಲನೆಯ ಶಾಸನ ಶಾ. ಶ ೧೫೮೯ ಅಂದರೆ ಕ್ರಿ. ಶ. ೧೬೬೭ ಈ ಕಾಲದಲ್ಲಿ ಮೈಸೂರು ರಾಜ್ಯವನ್ನು ಆಳುತ್ತಿದ್ದವರು ದೊಡ್ಡ ದೇವರಾಜವಡೆಯರು. ಅವರ ದಳವಾಯಿ ಕೊಮಾರಯ್ಯನು ೧೬೬೭ ರಲ್ಲಿ ಅಧಿಕಾರಕ್ಕೆ ಬಂದನು ಇವೆಲ್ಲವೂ ಸತ್ಯಾಂಶಗಳು.

**ಎರಡನೆಯ ಶಾಸನದ ಕಾಲ:**-ಕಾಳಾಯುಕ್ತಿ ಸಂವತ್ಸರವೈಶಾಖ೧೫ ಅಂದರೆ ಕ್ರಿ. ಶ. ೧೬೭೮ ನೆಯ ವರ್ಷ ಏಪ್ರಿಲ್ ಇಪ್ಪತ್ತೆಂಟು ಭಾನುವಾರ ಅಮಾವಾಸ್ಯೆ. ಈ ಕಾಲದಲ್ಲಿ ಚಿಕ್ಕದೇವರಾಜು (ಜ) ವಡೆಯರು ಮೈಸೂರು ರಾಜ್ಯವಾಳುತ್ತಿದ್ದರು. ಇವರಲ್ಲೂ ಕೊಮಾರಯ್ಯ ದಳವಾಯಿ ಆಗಿದ್ದನು. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಬರುವ ಕಾಳಾಯುಕ್ತಿ ಕ್ರಿ. ಶ. ೧೬೭೮ ವಾರದ ಹೆಸರು ಕೊಡದಿದ್ದರೂ ಕುಮಾರಯ್ಯ ನಿರ್ವಾಣ ದೇವರ ಮಠ ತಿಮ್ಮಮ್ಮ ಇವರುಗಳು ಇದ್ದ ಕಾಲದ ಕಾಳಾಯುಕ್ತಿ ೧೬೭೮ ನೆಯ ಸಂವತ್ಸರವೇ ಸರಿ. ದಾನ ಮಾಡಬೇಕಾದರೆ ಸಾಮಾನ್ಯವಾಗಿ ಪರ್ವಕಾಲಗಳು, ಗ್ರಹಣಗಳು. ದ್ವಾದಶಿ, ಮಾತಾಪಿತೃಗಳ ಪುಣ್ಯದಿನಗಳಲ್ಲಿ ಈ ಶಾಸನಗಳು ಪೌರ್ಣಮಿ ಮತ್ತು ಅಮಾವಾಸ್ಯೆ ಪರ್ವಕಾಲಗಳಲ್ಲಿ ದಾನ ಮಾಡಿದ ವಿಷಯುವು ತಿಳಿಯುವುದು.

**ಐತಿಹಾಸಿಕ ವಿಷಯುಗಳು:**-ಮೈಸೂರು ರಾಜ ಮನೆತನದಲ್ಲಿ ದೊಡ್ಡ ದೇವರಾಜವಡೆಯರವರು ಕಂಠೀರವ ನರಸರಾಜವಡೆಯರ ಕಾಲಾನಂತರ ೧೬೫೯ ರಲ್ಲಿ ಪಟ್ಟಕ್ಕೆ ಬಂದು ೧೬೭೩ರವರೆಗೆ ಆಳಿದರು. ಮೈಸೂರು ದೇಶದ ಚರಿತ್ರೆಯಲ್ಲಿ ದೊಡ್ಡ ದೇವರಾಜವಡೆಯರವರ ವಿಷಯ ವಿವರವಾಗಿ ಕೊಟ್ಟಿದೆ. ಇವರು ಮಾಡದ ದಾನವಿಲ್ಲ. ಹೇಮಾದ್ರಿ ಹೇಳಿರುವ ಷೋಡಶಮಹಾದಾನಗಳನ್ನು ಮಾಡಿರುವರು. ಇವರ ಹೆಸರು ಆಚಂದ್ರತಾರಕವಾಗಿನಿಲ್ಲುವಂತೆ ಚಾಮುಂಡಿಬೆಟ್ಟಕ್ಕೆ ಸಾವಿರ ಮೆಟ್ಟಲುಗಳನ್ನು ಮಾಡಿಸಿದರು. ಬೆಟ್ಟದ ಮೇಲಿರುವ ಬಸವಣ್ಣನನ್ನು ಕೆತ್ತಿಸಿದರು. ದೊಡ್ಡ ಕೆರೆ ಕಟ್ಟಿಸಿದರು. ರಾಜನುಡಿಯಂತೆ ಬೆಳಗ್ಗೆ ಎದ್ದು ನಿತ್ಯಕರ್ಮಗಳನ್ನು ಮಾಡಿ ರಾಮಾಯಣ ಮತ್ತು ಸಹಸ್ರನಾಮ ಪಾರಾಯಣ ಮಾಡದೆ ಆಹಾರ ತೆಗೆದುಕೊಳ್ಳುತ್ತಿರಲಿಲ್ಲ. ಇವರು ಧರ್ಮಪ್ರಭುವಾಗಿದ್ದರು.

**ಚಿಕ್ಕ ದೇವರಾಜವಡೆಯರು:**-ಇವರ ಕಾಲ ೧೬೭೩ ರಿಂದ ೧೭೦೪ ಶಾಸನಗಳಲ್ಲಿ ಚಿಕ್ಕದೇವರಾಜುವಡೆಯರು ಎಂದು ಉಲ್ಲೇಖವಿರುವುದು. ರಾಜವಡೆಯರ ಹೆಸರೂ ರಾಜುವಡೆಯರೆಂದು ಬರೆಯಲ್ಪಟ್ಟಿದೆ. ಮೈಸೂರು ರಾಜಮನೆತನದಲ್ಲಿ ಚಿಕ್ಕದೇವರಾಜವಡೆಯರವರೇ ಅತ್ಯಂತ ಪ್ರಸಿದ್ಧರು. ರಾಜ್ಯವನ್ನು ನಾಲ್ಕುಕಡೆಯೂ

ವಿಸ್ತರಿಸಿ ಪಾಳೆ ಪಟ್ಟಣಂತಿದ್ದ ಮೈಸೂರು ರಾಜ್ಯವನ್ನು ಒಂದು ಸಂಸ್ಥಾನದ ಮಟ್ಟಕ್ಕೆ ಏರಿಸಿದರು. ದೇವರಾಜವಡೆಯರವರ ಕಾಲಾನಂತರ ೧೬೭೩ ರಲ್ಲಿ ಮೈಸೂರು ಸಿಂಹಾಸನಾರೋಹಣ ಮಾಡಿ ೧೭೦೪ರವರೆಗೂ ದಕ್ಷತೆಯಿಂದ ರಾಜ್ಯಭಾರ ಮಾಡಿ ಮಧುರೆ ಚೊಕ್ಕನಾಥನನ್ನು ಸೋಲಿಸಿ ಅವನಿಂದ ಕಪ್ಪಕಾಣಿಕೆಗಳನ್ನು ತೆಗೆದು ಕೊಂಡರು. ಮರಾಟೆಯವರನ್ನು ಸೋಲಿಸಿ ಡೆಲ್ಲಿ ಬಾದಷಹಾ ಆಗಿದ್ದ ಔರಂಗ್ ಜೇಬನಿಂದ 'ರಾಜಾ ಜಗದೇವ್' ಎಂಬ ಬಿರುದನ್ನು ಪಡೆದರು. ಇವರ ಆಸ್ಥಾನದಲ್ಲಿ ವಿಶಾಲಾಕ್ಷ ಪಂಡಿತ, ತಿರುಮಲಯ್ಯಂಗಾರ್, ಚಿಕ್ಕುಪಾಧ್ಯಾಯರೇ ಮೊದಲಾದ ಕವಿ ಗಳೂ ಪಂಡಿತರೂ ಇದ್ದರು. ಶಿಂಗಾರಮ್ಮ ಮತ್ತು ಸಂಚಿಯ ಹೊನ್ನಿ ಎಂಬ ಕವಯಿತ್ರಿಯರು ಇವರ ಆಶ್ರಯದಲ್ಲಿದ್ದು ಅನೇಕ ಕೃತಿಗಳನ್ನು ರಚಿಸಿರುವರು. ಸ್ವಯಂ ಕವಿಯಾಗಿ, ಕವಿಗಳಿಗೆ ಆಶ್ರಯ ಕೊಟ್ಟು ಕನ್ನಡಭಾಷೆಯಲ್ಲಿ ಅನೇಕ ಗ್ರಂಥ ಗಳನ್ನು ಬರೆಸಿದರು. ಕನ್ನಡ ಭಾಷೆಯ ಪುನರುತ್ಥಾನ ಇವರ ಕಾಲದಲ್ಲೇ ಆಯಿತು. ಮಠಾಧಿಪತಿಯೂ ಕವಿಯೂ ಉಭಯಭಾಷಾಪಂಡಿತನೂ ಆದ ಷಡಕ್ಷರದೇವ ಇವರ ಸಮಕಾಲೀನನು. ಇವರು ರಾಜ್ಯಕ್ಕೆ ಬರುವ ಮುನ್ನ ತನ್ನ ಆಪ್ತ ಮಿತ್ರರೊಡನೆ ಸೇರಿ ರಾಜ್ಯಕ್ಕಾಗಿ ಬಂಡಾಯ ಮಾಡಿದುದರಿಂದ ಹಂಗಳದಲ್ಲಿ ಸೆರೆಯಲ್ಲಿಡಲ್ಪಟ್ಟಿ ದ್ದರು. ಮೈಸೂರು ರಾಜ್ಯಾಡಳಿತ ಪದ್ಧತಿಯಲ್ಲಿ ಅನೇಕ ಮಾರ್ಪಾಟುಗಳನ್ನು ಮಾಡಿ ರಾಜ್ಯದ ಬೊಕ್ಕಸಕ್ಕೆ ಹಣ ತುಂಬಿಸಿ ನವಕೋಟಿ ನಾರಾಯಣ ಎಂಬ ಬಿರು ದನ್ನು ಪಡೆದರು. ಮೈಸೂರು ರಾಜ್ಯದ ಚರಿತ್ರೆ ಎಂಬ ಅಂತರಿಕ್ಷದಲ್ಲಿ ಬೆಳಗುವ ಧ್ರುವತಾರೆಯಂತೆ ಇವರ ಕೀರ್ತಿಯು ಬೆಳಗುವುದು.

**ಕುಮಾರಯ್ಯ:**—ಇವನು ಕ್ರಿ. ಶ. ೧೬೬೭ರಿಂದ೧೬೮೨ರವರೆಗೂ ಮೈಸೂರು ರಾಜ್ಯದ ದಳವಾಯಿ ಆಗಿದ್ದನು. ಇವನ ಜನ್ಮಸ್ಥಳ ನಂಜನಗೂಡು ತಾಲ್ಲೂಕು ಕಳಲೆಗ್ರಾಮ. ದಳವಾಯಿ ಮನೆತನದವನು ೧೬೮೨ರಲ್ಲಿ ತನ್ನ ದಳವಾಯಿತನಕ್ಕೆ ರಾಜೀನಾಮೆ ಕೊಡುವಾಗ ಇವನು ಮುದುಕನಾಗಿದ್ದನು. ಇವನು ಕಂಠೀರವ ನರಸ ರಾಜವಡೆಯರು, ದೇವರಾಜವಡೆಯರು ಮತ್ತು ಚಿಕ್ಕದೇವರಾಜವಡೆಯರು ಇವರು ಗಳ ಕಾಲದಲ್ಲಿ ಅನೇಕ ಯುದ್ಧಗಳಲ್ಲಿ ಭಾಗವಹಿಸಿ ತನ್ನ ಪರಾಕ್ರಮವನ್ನು ಪ್ರಕಾಶ ಪಡಿಸಿರುವನು. ದೊಡ್ಡ ದೇವರಾಜವಡೆಯರು ಕುಮಾರಯ್ಯನ ಶೌರ್ಯ ಪರಾ ಕ್ರಮಗಳಿಗೆ ಮೆಚ್ಚಿ ಇವನಿಗೆ ೧೬೬೭ ರಲ್ಲಿ ದಳವಾಯಿತನವನ್ನು ಕೊಡುವರು. ಆ ಹುದ್ದೆಯಲ್ಲೇ ಚಿಕ್ಕದೇವರಾಜವಡೆಯರ ಕಾಲದಲ್ಲೂ ೧೬೮೨ರವರೆಗೆ ಮುಂದು ವರಿಸುವನು. ೧೬೭೩ರಲ್ಲಿ ಅರಕಲ್‌ಗೂಡ್, ಆಂಗಡಿ, ಸಕಲೇಶಪುರ ಮತ್ತು ನುಗ್ಗೆಹಳ್ಳಿಗಳ ಪಾಳೇಗಾರರುಗಳನ್ನು ಗೆದ್ದು ಮೈಸೂರು ರಾಜ್ಯಕ್ಕೆ ಆ ಪ್ರಾಂತಗ ಳನ್ನು ಸೇರಿಸಿದನು. ೧೬೮೦ ರಿಂದ ೧೬೮೨ರವರೆಗೆ ದಕ್ಷಿಣ ದಿಕ್ಕಿನಕಡೆ ದಂಡೆತ್ತಿಕೊಂಡು ಹೋಗಿ ಮಧುರೆಯ ಚೊಕ್ಕನಾಥನನ್ನು ಸೋಲಿಸಿ ತಿರುಚಿನಾಪಳ್ಳಿಯವರೆಗೂ ರಾಜ್ಯ ವಿಸ್ತರಣೆ ಮಾಡಿದ್ದಲ್ಲದೆ ಚೊಕ್ಕನಾಥನಿಂದ ಕಪ್ಪಕಾಣಿಕೆ ತೆಗೆದುಕೊಂಡು ಬರು

ವನು. ರಾಜಧಾನಿಯಿಂದ ಬಹಳ ದೂರದವರೆಗೂ ಸೈನ್ಯ ತೆಗೆದುಕೊಂಡು ಹೋಗಿದ್ದುದರಿಂದ ಇವನ ಸೈನ್ಯಕ್ಕೆ ಆಹಾರ ಮತ್ತು ಮದ್ದು ಗುಂಡುಗಳು ಸರಬರಾಜು ಆಗದೆ ಶತ್ರುವಿಗೆ ಸುಳಿವು ತಿಳಿಯದೆ ಹಿಂತಿರುಗಿ ಬರುವನು. ರಾಜಧಾನಿಗೆ ಸಹಾಯ ಕೇಳಿ ಎಷ್ಟು ಪತ್ರ ಬರೆದರೂ ಶತ್ರುಗಳು ಆ ಪತ್ರಗಳು ರಾಜರಿಗೆ ಮುಟ್ಟದಂತೆ ಮಾಡಲು ಮರಾಟೆಯವರು ಇವನನ್ನು ಸೋಲಿಸಿ ಸೆರೆಹಿಡಿದರು. ಬಂಧನದಿಂದ ಮುಕ್ತನಾಗಿ ರಾಜಧಾನಿಗೆ ಹಿಂತಿರುಗಿ, ಇಳಿವಯಸ್ಸಾಗಿದ್ದುದರಿಂದಲೂ ತನ್ನ ಸೋಲಿನಿಂದಲೂ ನಿರುತ್ಸಾಹನಾಗಿ ತಾನೇ ತನ್ನ ಕೆಲಸಕ್ಕೆ ರಾಜಿನಾಮೆ ಕೊಡುವನು. ಕೊಮಾರಯ್ಯನು ಚಿಕ್ಕದೇವರಾಜವಡೆಯರ ದಳವಾಯಿ ಮಾತ್ರವಲ್ಲದೆ ಹೆಣ್ಣು ಕೊಟ್ಟ ಮಾವನೂ ಆಗಿದ್ದನು. ಇವನ ಮಗಳಾದ ದೇವಮ್ಮಣ್ಣಿಯವರು ಚಿಕ್ಕದೇವರಾಜರು ರಾಜ್ಯಕ್ಕೆ ಬರುವುದಕ್ಕೆ ಮೊದಲೇ ವಿವಾಹವಾಗಿದ್ದರು. ಕೊಮಾರಯ್ಯನು ಚಿಕ್ಕದೇವರಾಜರ ಆಪ್ತ ಮಿತ್ರನು, ದಳವಾಯಿಯು ಮತ್ತು ಮಾವನು ಆಗಿದ್ದನು.

**ತಿಮ್ಮಮ್ಮ:**-ಇವಳು ಕುಮಾರಯ್ಯನ ತಾಯಿ, ವೀರಮಾತೆ. ಇವಳೇ ದೇಗುಲ ಮಠಕ್ಕೆ ಎರಡು ಶಾಸನಗಳನ್ನು ಬರೆಸಿ ದಾನಕೊಟ್ಟಿರುವಳು. ಶ್ರೀರಂಗಪಟ್ಟಣದ ರಾಜಾಸ್ಥಾನದಲ್ಲಿದ್ದು ರಾಜನಿಗೆ ಆಜ್ಞೆಯಾಗಿ ನಿರ್ವಾಣ ದೇವರ ಮಠಕ್ಕೆ ದಾನಕೊಡ ಬೇಕಾದರೆ ಇವಳಿಗೂ ನಿರ್ವಾಣದೇವರಮಠದಸ್ವಾಮಿಗಳಿಗೂ ಗುರು ಶಿಷ್ಯ ಸಂಬಂಧ ವಿರಬೇಕು. ತಿಮ್ಮಮ್ಮನಿಗೆ ಆಗಿನ ಸ್ವಾಮಿಗಳು ಗುರುಗಳಾಗಿರಬಹುದು. ಮೊದಲು ೧೬೬೭ ರಲ್ಲಿ ತನ್ನ ಮಗನು ದಳವಾಯಿ ಹುದ್ದೆಗೆ ಬಂದಾಗ ನಿರ್ವಾಣದೇವರ ಮಠ ಕಟ್ಟಿಸಿ ಭೂಮಿ ಕೊಟ್ಟಳು. ಈ ಮಠವು ೧೬೭೭ರಲ್ಲಿ ಮೂಲದ ಮಳೆ ಬಂದು ಮಠ ಕೊಚ್ಚಿ ಹೋಗಲು ಮತ್ತೆ ಮಠಕಟ್ಟಿಸಿ ಭೂಮಿದಾನ ಮಾಡಿರುವಳು. ಮೂಲ ಗುರುಗಳಾದ ನಿರ್ವಾಣದೇವರು ಯೋಗಪುರುಷರಾಗಿ ತಮ್ಮ ಪ್ರಭಾವವನ್ನು ರಾಜಾಸ್ಥಾನದವರೆಗೂ ಬೀರಿದ್ದರೆಂದು ತಿಳಿಯುವುದು. ತಿಮ್ಮಮ್ಮನು ೧೬೭೮ ರಲ್ಲಿ ಹಣ್ಣು ಹಣ್ಣು ಮುದುಕಿಯಾಗಿದ್ದಳೆಂದು ತಿಳಿಯುವುದು. ಕೊಮಾರಯ್ಯನೇ ೧೬೮೨ ರಲ್ಲಿ ಮುದುಕನಾಗಿದ್ದಾಗ ಅವಳ ತಾಯಿ ವಿಷಯ ಹೇಳಬೇಕಾದುದೇ ಇಲ್ಲ.

**ನಿರ್ವಾಣದೇವರು:**—ಇವರು ಹೆಸರು ಕ್ರಿ.ಶ. ೧೬೬೭ರಲ್ಲಿ ಬರೆದ ಮೊದಲನೇ ಶಾಸನದಲ್ಲೂ ಮತ್ತೆ ೧೬೭೮ರಲ್ಲಿ ಬರೆದ ಎರಡನೆಯ ಶಾಸನದಲ್ಲೂ ಬರುವುದು. ಇವರ ಪ್ರಭಾವವು ಕನಕಪುರತಾಲ್ಲೂಕು ಅಲ್ಲದೆ ಮೈಸೂರು ರಾಜ್ಯದಲ್ಲೂ ರಾಜಧಾನಿಯಲ್ಲೂ ಹರಡಬೇಕಾದರೆ ಈ ಶಾಸನಗಳು ಹುಟ್ಟುವ ಮೊದಲೇ ಇವರು ಯೋಗ ಪುರುಷರಾಗಿ, ಪವಾಡಪುರುಷರಾಗಿ ತಮ್ಮ ತಪಶ್ಶಕ್ತಿಯಿಂದ ಖ್ಯಾತಿಗೆ ಬಂದಿದ್ದರೆಂದು ತೋರುವುದು. ಈ ದೇಗುಲ ಮಠಕ್ಕೆ ಇವರೇ ಮೂಲ ಪುರುಷರು-ದೇಗುಲಮಠ ೧೬೫೦ಕ್ಕೆ ಮೊದಲೇ ಸ್ಥಾಪಿತವಾಗಿರುವುದರಲ್ಲಿ ಸಂದೇಹವಿಲ್ಲ * ಶಾಸನದಲ್ಲಿ ನಿರ್ವಾಣ

---

* ಆದ್ಯ ನಿರ್ವಾಣ ಸ್ವಾಮಿಗಳವರು ಕ್ರಿ.ಶ. ೧೪ ನೆಯ ಶತಮಾನದಲ್ಲಿ ಈ ಮಠವನ್ನು ಸ್ಥಾಪಿಸಿಹರು—ಸಂ.

ದೇವರಮಠ ಎಂದು ಇದೆ. ನಿರ್ವಾಣದೇವರ ಜೀವಿತ ಕಾಲದವರೆಗೂ ನಿರ್ವಾಣ ದೇವರಮಠವಾಗಿ ಅನಂತರ ದೇವರಮಠವಾಗಿ ಈಗ ದೇಗುಲಮಠವಾಗಿ ನಾಮಾಂತರಗಳನ್ನು ಹೊಂದಿದೆ.

ಕನಕಪುರ ತಾಲ್ಲೂಕು ಎಲ್ಲಾ ಕಡೆಗಳಲ್ಲೂ ನಿರ್ವಾಣದೇವರ ವಿಷಯಕವಾದ ಪವಾಡಗಳನ್ನು ತಿಳಿಸುವ ಕಥೆಗಳು ಜನಜನಿತವಾಗಿವೆ.

**ಗವಿಮಠ;-** ನಿರ್ವಾಣದೇವರ ಕಾಲದಲ್ಲೇ ಗವಿಮಠವೂ ಇದ್ದಿತೆಂದು ತಿಳಿದು ಬರುವುದು. ಈ ಪರಂಪರೆ ಒಬ್ಬಿಬ್ಬರು ಸ್ವಾಮಿಗಳಾದ ಮೇಲೆ ಮೂಲಮಠದಲ್ಲೇ ಐಕ್ಯವಾಯಿತು.

**ಕಾಣಿಕಾರನಹಳ್ಳಿ:-** ಈಗ ಕನಕಪುರವೆಂದು ಕರೆಯುವ ಊರಿಗೆ ಹದಿಮೂರನೆಯ ಶತಮಾನದಲ್ಲಿ ಕಾಣಿಕಾರನಹಳ್ಳಿ ಎಂದು ಹೆಸರಿದ್ದಿತು. ಈ ಹೆಸರು ಹದಿನೆಂಟನೆಯ ಶತಮಾನದವರೆಗೂ ರೂಢಿಯಲ್ಲಿದ್ದು ಹೈದರ್, ಟಿಪ್ಪೂಸುಲ್ತಾನರ ಕಾಲದಲ್ಲಿ ಅಭಾಸವಾಗಿ ಕಾನ್‌ಕಾನ್‌ಹಳ್ಳಿ ಎಂದು ರೂಪಾಂತರಗೊಂಡಿತು. ಕಾನ್‌ಕಾನ್ ಎಂದರೆ ಯಾವ ಮಹಮದೀಯನೂ ಅಲ್ಲ. ಟಿಪ್ಪುವು ಬ್ರಿಟಿಷರಿಗೆ ಆಹಾರ, ಹುಲ್ಲು, ಸೊಪ್ಪು ಈ ಗ್ರಾಮದಲ್ಲಿ ದೊರೆಯದಿರಲೆಂದು ಈ ಊರನ್ನು ನಾಶಮಾಡಿದನು. ಅವನ ಕಾಲದಿಂದ ಈ ಹೆಸರು ಬಂದಿದೆ. ಮಹಮದೀಯರಿಗೂ ಈ ಊರಿಗೂ ಯಾವ ಸಂಬಂಧವೂ ಇಲ್ಲ. ಕಾಣಿ ಅಂದರೆ ಗದ್ದೆ, ಕಾಣಿಕಾರ ಅಂದರೆ ಗದ್ದೆಯುಳ್ಳವನು ಎಂಬ ಅರ್ಥದಲ್ಲಿ ಕಾಣಿಕಾರನಹಳ್ಳಿ ಎಂಬ ಪದದ ಅನ್ವರ್ಥವಾಗಿ ಹುಟ್ಟಿದೆ. ಭಾರತಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಮೈಸೂರು ಸರ್ಕಾರದವರು ಈ ಊರಿನ ಹೆಸರನ್ನು ಪ್ರಜಾಭಿಪ್ರಾಯದಂತೆ ಕನಕಪುರವೆಂದು ಕರೆದರು.

**ಹುಚ್ಚು ಹೊಳೆ ಬಂದು ಮಠ ಕೊಚ್ಚಿ ಹೋಯಿತು:-** ಇದೊಂದು ಚಾರಿತ್ರಿಕ ಘಟನೆ, ಪ್ರಕೃತಿ ಪ್ರಕೋಪವನ್ನು ತಿಳಿಸುವುದು. ಅರ್ಕಾವತೀ ದಡದಲ್ಲಿ ಕನಕಪುರವೂ ದೇಗುಲ ಮಠವೂ ಇರುವುವು ಈ ನದಿ ಅಷ್ಟು ದೊಡ್ಡ ನದಿಯಲ್ಲ. ಇದರಿಂದ ಈ ಅನಾಹುತ ಆಗಿರಬಹುದೇ? ಎಂಬ ಶಂಕೆ ಬರುವುದು. ಈ ಪ್ರಾಂತದಲ್ಲಿ 'ಮೂಲದ ಮಳೆ ಹೊಯ್ದು ದೇಗುಲ ಕೊಚ್ಚಿ ಹೋಯಿತು' ಎಂಬ ಗಾದೆ ರೂಢಿಯಲ್ಲಿದೆ.

ಈ ಗಾದೆ ಬಹಳ ಹಳೆಯದು. ನಮ್ಮ ಶಾಸನದಲ್ಲಿ ಈ ವಿಷಯ ಉಲ್ಲೇಖವಾಗಿದೆ. ಒಂದೊಮ್ಮೆ ನವೆಂಬರ್ ತಿಂಗಳಲ್ಲಿ ಚಂಡಮಾರುತ ಬೀಸಿ ಚಾಮರಾಜನಗರದ ತಾಲ್ಲೂಕು ಮತ್ತು ತಮಿಳು ನಾಡಿನಲ್ಲಿ ಆದ ಪ್ರವಾಹಗಳ ಹಾವಳಿನಮಗೆ ಇನ್ನೂ ಜ್ಞಾಪಕಕ್ಕೆ ಬರುವುದು. ಆಗಾಗ್ಗ ಈ ರೀತಿಬಾಧೆಗಳು ಆಗುತ್ತಲೇ ಇರುವುದು. ೧೭೭೭ರಲ್ಲಿ ಮೂಲಾ ನಕ್ಷತ್ರದ ಮಳೆಯಿಂದ ಹುಚ್ಚು ಹೊಳೆ ಬಂದು ಮಠಕೊಚ್ಚಿ ಹೋಗಿ ೧೭೭೮ರ ವೈಶಾಖದಲ್ಲಿ ಈ ಮಠವು ಜೀರ್ಣೋದ್ಧಾರವಾಗಿರುವ ವಿಷಯವು ಇದರಿಂದ ವ್ಯಕ್ತವಾಗುವುದು. ಭಾರತದಲ್ಲಿಯೇ 'ವಿ ಶಾ ಖಾ ನ್ಯಾ ನಿ

ಮೇಘಾಃ' ಎಂದು ಕಾಳಿದಾಸನು ಹೇಳಿರುವಂತೆ ವಿಶಾಖೆ ಮಳೆಯೇ ವರ್ಷದ ಕೊನೆ ಮಳೆ. ಮೂಲ ನಕ್ಷತ್ರದ ಮಳೆ ನವೆಂಬರಿನಲ್ಲಿ ಹುಟ್ಟುವುದು ಮಳೆ ಬೀಳುವುದು ಅಪೂರ್ವ. ಹಿಂದೆ ಆದ ದುರಂತವನ್ನು ಈ ಶಾಸನ ತಿಳಿಸುವುದು.

**ದೇಗುಲಮಠದ ಚರಿತ್ರೆ:**-ಈಗ ದೇಗುಲ ಮಠವೆಂದು ಕರೆಯುವ ನಿರ್ವಾಣ ದೇವರ ಮಠವು ೧೪ ನೆಯ ಶತಮಾನದಿಂದ ಪ್ರಾರಂಭವಾಗಿ ವಿಚ್ಛಿತ್ತಿ ಇಲ್ಲದೆ ಇಂದಿನವರೆಗೂ ನಡೆದು ಬಂದಿದೆ. ಈ ಮಠದಲ್ಲಿ ಹಿಂದೆ ಪೀಠಾಧಿಪತಿಗಳಾದ ಅನೇಕ ಮಂದಿಸ್ವಾಮಿಗಳ ಗದ್ದುಗೆ ಈ ಮಠದ ಸುತ್ತಲೂ ಇವೆ. ಒಬ್ಬೊಬ್ಬರೂ ಮಾಡಿರುವ ಮಹತ್ಕಾರ್ಯಗಳನ್ನು ತಿಳಿಸುವ ಜನಜನಿತವಾದ ಅನೇಕ ಕಥೆಗಳು ಈ ಪ್ರಾಂತದಲ್ಲಿ ಎಲ್ಲಾ ಕಡೆಗಳಲ್ಲೂ ಕೇಳಬಹುದು. ಒಂದು ಮಠ ಆರುನೂರು ವರ್ಷಗಳಿಂದ ಇದ್ದು ವಿದ್ಯಾದಾನ, ಪರೋಪಕಾರ, ಜ್ಞಾನೋಪದೇಶ ಮತ್ತು ಅಜ್ಞಾನಿಗಳಿಗೆ ಸನ್ಮಾರ್ಗವನ್ನು ತೋರಿಸುತ್ತಾ ಕೀರ್ತಿಗಳಿಸಬೇಕಾದರೆ ಸಾಮಾನ್ಯ ವಲ್ಲ.

ಈಗ ಪೀಠಾಧಿಪತಿಗಳಾಗಿರುವ ಶ್ರೀ॥ ನಿ॥ ಪ್ರ॥ ಮಹಲಿಂಗಸ್ವಾಮಿಗಳು ಯೋಗಪುರುಷರು. ಶಾಂತಿ, ಶಮ, ದಮಾದಿಗುಣಗಳಿಂದ ಪರಿಪೂರ್ಣರು. ಸರ್ವ ಸಮ ದೃಷ್ಟಿಯುಳ್ಳವರು. ಈಗ್ಗೆ ಕೆಲವು ವರ್ಷಗಳ ಹಿಂದೆ ಶಿವೈಕ್ಯರಾದ ಶ್ರೀ॥ ನಿ॥ ಪ್ರ॥ ನಿರ್ವಾಣ ಮಹಾಸ್ವಾಮಿಗಳ ಗಣಾರಾಧನೆಯಲ್ಲಿ ಕನಕಪುರದ ಸುತ್ತ ಮುತ್ತಲ ಗ್ರಾಮಗಳಲ್ಲಿರುವ ಶ್ರೀ ವೈಷ್ಣವರು, ಸ್ಮಾರ್ತರು, ಮಾಧ್ವರು. ಆದ ತ್ರಿಮಸ್ಥರಿಗಲ್ಲದೆ ಎಲ್ಲಾ ಜಾತಿ ಕೋಮಿನವರಿಗೂ ಘೂತತೃಪ್ತ್ಯರ್ಥವಾಗಿ ಅನ್ನ ದಾನ ಮಾಡಿದ ವಿಷಯವು ಕನಕಪುರದ ಮನೆ ಮನೆಯ ಮಾತಾಗಿದೆ. ಅಲ್ಲದೆ ತಾವು ವಾಸಮಾಡುವ ಮಠದ ಆವರಣದಲ್ಲೇ ಒಂದು ಪ್ರೌಢಶಾಲೆಯನ್ನೂ ಪ್ರಾಥ ಮಿಕ ಮಾಧ್ಯಮಿಕ ಶಾಲೆಗಳನ್ನೂ ಸಂಸ್ಕೃತ ವೇದ ಪಾಠಶಾಲೆಗಳನ್ನೂ ತೆರೆದು ಏಳು ನೂರು ವಿದ್ಯಾರ್ಥಿಗಳಿಗೆ ಪಾಠ ಪ್ರವಚನಗಳು ನಡೆಯಲು ಅನುಕೂಲ ಕಲ್ಪಿಸಿ, ಉಚಿತವಾಗಿ ಅಶನ, ವಸತಿಗಳಿಗೆ ಏರ್ಪಾಡುಮಾಡಿ ವಿದ್ಯಾದಾನ ಮಾಡುವುದು ಸ್ತೋತ್ರಾರ್ಹವಾದುದು. ಕಾಯಕವೇ ಕೈಲಾಸವೆಂದು ಶಿಷ್ಯರುಗಳಿಗೆ ಉಪದೇಶ ಮಾಡುತ್ತಾ, ಲೋಕದ ಸುಧಾರಣೆಯಲ್ಲಿ ಮನಸ್ಸಿಟ್ಟು ಶ್ರಮಿಸುತ್ತಿರುವುದು ಲೋಕಾ ದರ್ಶಪ್ರಾಯವಾಗಿದೆ.

---

# ಪರಮ ವೈರಾಗ್ಯ ಮೂರ್ತಿ
# ಶ್ರೀ ನಿರ್ವಾಣ ಶಿವಯೋಗಿಗಳವರ ಆದರ್ಶ

● ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳು
ಸುತ್ತೂರು ವೀರಸಿಂಹಾಸನ ಮಠ

"ಯೋಗೀಶನ ಸಿರಿಗೆಣೆಯುಂಟೆ। ಮಿಕ್ಕ
ಭೋಗಿಗಳಣುಸಿರಿಯನು ನೋಡಲಹಹಾ ॥ಪ॥
ನಳಿನಜಾಂಡವೆ ಗೇಹ ನಿಳೆಯೊಂದೆ ಮಂಚವು
ಹೊಳೆವ ದಿಕ್ಕುಗಳೆಂಟು ಪರದೆಗಳು
ಕುಳಶೈಲವುಪಧಾನ ಮಭ್ರವೆ ಮೇಲ್ಕಟ್ಟು
ತೊಳಪತಾರೆಯೆ ಪುಷ್ಪಗುಚ್ಛಗಳಹಹಾ......."

ಶ್ರೀಸರ್ಪಭೂಷಣ ಶಿವಯೋಗಿಗಳ ಈ ದಿವ್ಯವಾಣಿ ಯೋಗಜೀವನದ ಮಹತ್ವವನ್ನು ಸ್ಪಷ್ಟಪಡಿಸುತ್ತದೆಯಷ್ಟೆ. ಲಿಂಗೈಕ್ಯರಾದ ಪೂಜ್ಯಶ್ರೀ ನಿರ್ವಾಣಮಹಾಸ್ವಾಮಿಗಳವರ ಜೀವನ ನಿಜವಾಗಿ ಯೌಗಿಕವಾಗಿದ್ದಿತ್ತೇ ಹೊರತು ಲೌಕಿಕವಾದುದಾಗಿರಲಿಲ್ಲ.

ನೂರಮೂರು ವರುಷಗಳ ತುಂಬುಬಾಳಿನಲ್ಲಿ ಆಡಂಬರ ರಹಿತವಾದ ಅವರ ನಿಷ್ಕಾಮ ಕರ್ಮವನ್ನು ಕಂಡು ನಾವೆಲ್ಲ ಅಚ್ಚರಿಪಟ್ಟಿದ್ದೇವೆ. ಈ ಕಾಲದಲ್ಲಿಯೂ ಸದ್ದುಗದ್ದಲವಿಲ್ಲದೆ ಜನರ ಹೃದಯವನ್ನು ಗೆದ್ದು ಸತ್ಪಥವೆಡೆಗೆ ಒಯ್ದ ಪುಣ್ಯಾತ್ಮರಿದ್ದರಲ್ಲ ಎನ್ನುವುದೇ ಆಶ್ಚರ್ಯಕ್ಕೆ ಕಾರಣ!

ಗುರುಕೃಪೆಯನ್ನು ಪಡೆದು ಆಶ್ರಮ ಸ್ವೀಕಾರ ಮಾಡಿದ ತರುಣದಲ್ಲಿಯೇ ಮಠದ ಪವಿತ್ರ ಪರಿಸರದಿಂದ ಅವರಲ್ಲಿ ಸಹಜವಾಗಿದ್ದ ವೈರಾಗ್ಯ ಘನೀಭವಿಸಿ ದೇಶಸಂಚಾರ ಕೈಗೊಳ್ಳುವಂತೆ ಪ್ರೇರೇಪಿಸಿತು. ಅದರಿಂದ ಲಭಿಸಿದ ಲೋಕಾನುಭವದಿಂದ ಮಹಾಸ್ವಾಮಿಗಳವರಿಗೆ ಮರ್ತ್ಯದ ಮಹಿಮೆ ವಿಧಿವತ್ತಾಗಿ ಅರ್ಥವಾಯಿತು. ಬಾಳಿನ ಮಹತ್ವವನ್ನು ಅರಿತಿದ್ದ ಅವರಿಗೆ, ಇದು "ಕರ್ತಾರನ ಕಮ್ಮಟ; ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ, ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ" ಎನ್ನುವ ವಿಷಯ ದೃಢಪಟ್ಟಿತು. ಅವರು ಆರ್ಜಿಸಿದ ಅನುಭವ ಶಿವಾನುಭವವೆನಿಸಿ ಮೂರ್ತಿವೆತ್ತು ನಡೆದು ಬಂದಂತೆ ಗೋಚರಿಸಿತು. ಅಭವನ ಪ್ರತಿರೂಪವೆಂಬಂತೆ ಆಗಮಿಸಿದ ಈ ಮಹಾಮೂರ್ತಿಯನ್ನು ಬರಮಾಡಿಕೊಂಡ ಶ್ರೀ ದೇಗುಲಮಠ ತನ್ನ ಹೆಸರನ್ನು ಅನ್ವರ್ಥವಾಗಿ ಮಾಡಿಕೊಂಡಿತು. "ಕಾಯಕವೇ ಕೈಲಾಸ" ವೆನ್ನುವ

ದಿವ್ಯ ತತ್ವವನ್ನವರು ಕೈಕೊಂಡ ಫಲವಾಗಿ ಆ ಕ್ಷೇತ್ರವು ನೂತನ ಚೈತನ್ಯವನ್ನು ಪಡೆದು ಜನರ ಹೃದಯದಲ್ಲಿ ಧರ್ಮದ ಜ್ಯೋತಿಯನ್ನು ಬೆಳಗಿಸಿತು.

ಸದಾಶಿವಧ್ಯಾನ, ಅನವರತ ಶ್ರಮದ ದುಡಿಮೆ, ಬಡವ–ಬಲ್ಲಿದರೆಂಬ ಭೇದ ವಿಲ್ಲದೆ ಭಕ್ತರ ಮನೆಗಳಿಗೆ ದಯಮಾಡಿಸಿ ತಮ್ಮ ಶಿವಪೂಜಾದಿಗಳಿಂದ ಉದ್ಧರಿಸು ವುದು –ಮುಂತಾದ ಬಿಡುವಿಲ್ಲದ ಕಾರ್ಯಗಳಿಂದ ಶಿವಯೋಗ ಬಲ್ಲಿದರಾದರು.

'ಘಟದಿಂದ ಮಠ' ಎನ್ನುವ ನುಡಿ ಇವರಲ್ಲಿ ಫಲಿಸಿತು.

'ಸತ್ಯಾಯ ಮಿತಭಾಷಿಣಾಮ್' ಎಂದು ಮಹಾಕವಿ ಕಾಳಿದಾಸನು ಒಂದೆಡೆ ಹೇಳಿದಂತೆ ಸತ್ಯದ ಸಂರಕ್ಷಣೆಗೋಸ್ಕರ ಅವರು ಮಿತಭಾಷಿಗಳಾಗಿದ್ದರು. ಎಲ್ಲಕ್ಕಿಂತ ಮಿಗಿಲಾಗಿ ಇವರು ಬಸವಣ್ಣನವರು ಹೇಳಿದ 'ನುಡಿದಂತೆ ನಡೆದರೆ ಇದೇ ಜನ್ಮ ಕಡೆ' ಎಂಬ ವಚನದ ಅಂತರಾರ್ಥವನ್ನು ಅರಿತು 'ನುಡಿಯೊಳಗೆ ನಡೆಯ ಪೂರೈಸಿ' ಜೀವನ ದಲ್ಲಿ ಸಿದ್ಧಿಯನ್ನು ಪಡೆದವರು ಎಂಬುದು ಸತ್ಯಸ್ಯಸತ್ಯ.

ಈಗಿನ ಮಠಾಧಿಪತಿಗಳಾದ ಶ್ರೀ ಮಹಾಲಿಂಗಸ್ವಾಮಿಗಳವರನ್ನು ತಮ್ಮ ಉತ್ತರಾಧಿಕಾರಿಗಳನ್ನಾಗಿ ಆಯ್ಕೆಮಾಡಿದ ಶ್ರೀಗಳವರ ದೂರದೃಷ್ಟಿಯನ್ನು ಯಾರುತಾನೆ ಮೆಚ್ಚುವುದಿಲ್ಲ? ಶ್ರೀ ಸಿದ್ಧಗಂಗಾ ಗುರುಕುಲದಲ್ಲಿ ಅಭ್ಯಾಸಮಾಡು ತ್ತಿದ್ದ ಇವರು ಅನೇಕ ಪುಣ್ಯಜೀವಿಗಳಿಗೆ ಕೃಪೆಗೈದ ಶ್ರೀಮದುದ್ದಾನ ಶಿವಯೋಗಿ ಗಳವರ ಕೃಪೆಗೆ ಪಾತ್ರರಾದವರು. ಆಶ್ರಮ ಸ್ವೀಕರಿಸಿದ ಅಂದಿನಿಂದ ಇಂದಿನ ವರೆವಿಗೆ ಶ್ರೀ ದೇಗುಲಮಠವನ್ನು ಅವ್ಯಾಹತವಾಗಿ ಅನೇಕ ವಿದ್ಯಾಸಂಸ್ಥೆಗಳಿಂದ ಶೋಭಿಸುವಂತೆ ಮಾಡಿ, ಜಾತಿ ಭೇದವಿಲ್ಲದೆ ಅಸಂಖ್ಯಾತ ವಿದ್ಯಾರ್ಥಿಗಳಿಗೆ ಜ್ಞಾನಾನ್ನ ದಾನ ಮಾಡುತ್ತಿರುವುದು ಸರ್ವವಿದಿತವಾಗಿದೆ.

ನಿರ್ವಾಣಶಿವಯೋಗಿಗಳು ನಿಜೈಕ್ಯರಾದಮೇಲೆ ಕೂಡ ಭಕ್ತಕೋಟಿತೋರಿಸು ತ್ತಿರುವ ಭಕ್ತಿದೀಪ್ತಿ ಅವರ ಮಹಿಮಾದ್ಯೋತಕವೆನಿಸಿದೆ. ನಮ್ಮ ಹಾಗೂ ನಮ್ಮ ಪೀಠದ ಬಗೆಗೆ ಶ್ರೀಗಳವರು ತೋರುತ್ತಿದ್ದ ಆದರಾಭಿಮಾನಗಳನ್ನು ನಾವು ಎಂದೂ ಮರೆಯಲಾರೆವು.

ಬಾಹ್ಯಾಡಂಬರಗಳಿಲ್ಲದ, ಬಲಿಬೀಳದ, 'ಗುರೋಸ್ತುಮೌನಂ ವ್ಯಾಖ್ಯಾನಂ ಶಿಷ್ಯಾಸ್ತುಚ್ಛಿನ್ನ ಸಂಶಯಾಃ' (ಗುರುವಿನಮೌನವೇ, ವ್ಯಾಖ್ಯಾನ. ಶಿಷ್ಯರುಗಳ ಸಂಶಯ ಪರಿಹಾರ) ಎನ್ನುವ ಮಾತನ್ನು ಸಾರ್ಥಕಪಡಿಸಿದ ನಿಷ್ಕಾಮ ಕರ್ಮಯೋಗಿಗಳಾಗಿದ್ದ ಮಹಾಸ್ವಾಮಿಗಳವರು ಯತಿಕುಲಕ್ಕೇ ಆದರ್ಶ ಚೇತನವೆಂದರೆ ಅತಿಶಯವೇನಲ್ಲ.

ಇಂತಹ ಆದರ್ಶ ಮಹಾಸ್ವಾಮಿಗಳವರ ಸಂಸ್ಮರಣ ಸಂಚಿಕೆಯನ್ನು ಪ್ರಕಟಿಸಲು ಏರ್ಪಡಿಸಿರುವುದು ಪ್ರಶಂಸನೀಯವಾದುದು. ಶ್ರೀಗಳವರು ಆಚರಿಸಿ ತೋರಿಸಿದ ಆದರ್ಶಪಥದಲ್ಲಿಯೇ ಭಕ್ತವೃಂದದವರು ನಡೆಯುತ್ತಾರೆಂದು ಆಶಿಸುತ್ತೇವೆ.

---



ಲಿಂ. ಶ್ರೀಮನ್ನಿರಂಜನ ಪ್ರಣವ ಸ್ವರೂಪಿಗಳಾದ ಶ್ರೀ ನಿರ್ವಾಣ ಸ್ವಾಮಿಗಳವರು

# ಶ್ರೀ ಮನ್ನಿರಂಜನ ಪ್ರಣವ ಸ್ವರೂಪಿಗಳಾದ
# ಶ್ರೀ ನಿರ್ವಾಣಸ್ವಾಮಿಗಳವರು

---

**ಶ್ರೀ ಬಿ. ನಂಜುಂಡಪ್ಪ**, ಕನಕಪುರ

ದೇವರ ಅಸ್ತಿತ್ವದಲ್ಲಿ ನಂಬಿಕೆಯುಳ್ಳ ಜಗತ್ತಿನ ಯಾವ ಜನಾಂಗವೇ ಆಗಲಿ ತನ್ನ ತಾತ್ತ್ವಿಕ ದೃಷ್ಟಿಯನ್ನು ಸಕ್ರಮ ಶಿಕ್ಷಣದಿಂದಲೇ ಬೆಳೆಸಿಕೊಳ್ಳುತ್ತದೆ. ಭಾರತೀಯ ಸಂಪ್ರದಾಯದಲ್ಲಿ ತಾತ್ತ್ವಿಕ ಶಿಕ್ಷಣಕ್ಕೆ ಅಗ್ರಸ್ಥಾನವಿದೆ. ಈ ಶಿಕ್ಷಣವು ಗುರುವಿನಿಂದ ಪ್ರಾರಂಭಿಸಲ್ಪಡುವುದು.

ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲಾತ್ಮಕವಾದ ವೀರಶೈವ ಧರ್ಮದಲ್ಲಿ ಗುರು, ಲಿಂಗ, ಜಂಗಮರೇ ಪ್ರತ್ಯಕ್ಷ ದೇವರು–ಉಪಾಸ್ಯ ಮೂರ್ತಿಗಳು–ಒಬ್ಬನೇ ಪರಮಾತ್ಮನ ಮೂರು ರೂಪಗಳು, ಬೋಧಾಮೂರ್ತಿಯಾಗಿ ಗುರು, ಪೂಜಾಮೂರ್ತಿಯಾಗಿ ಲಿಂಗ, ಭೋಗ (ಪ್ರಸಾದ ಭೋಗ) ಮೂರ್ತಿಯಾಗಿ ಜಂಗಮ. ಶಿವನು ಪ್ರಸಾದಸ್ವರೂಪನಾದ್ದರಿಂದ ಪ್ರಸಾದಭೋಗವು (ಲಿಂಗ ಭೋಗೋಪಭೋಗವು) ಜಂಗಮ ಮೂರ್ತಿಯಿಂದ ಸಿದ್ಧಿಸತಕ್ಕದ್ದಾಗಿದೆ. ಷಟ್‌ಸ್ಥಲ ಸಾರೋದ್ಧಾರ ಚಕ್ರವರ್ತಿಯೆನಿಸಿದ ಚೆನ್ನಬಸವಣ್ಣನವರು ಜಂಗಮ ಸ್ವರೂಪವನ್ನು ಸಾಧಾರವಾಗಿ ಈ ರೀತಿ ನಿರೂಪಿಸಿದ್ದಾರೆ:

"ಜಂಗಮ ಜಂಗಮವೆಂದರೆ, ಬಾಯಿ ಲೆಕ್ಕಕ್ಕೆ ಜಂಗಮವೇ?
ಜಂಗಮ ಜಂಗಮವೆಂದರೆ ಉಪಾಧಿಕನೆ ಜಂಗಮ?
ಜಂಗಮ ಜಂಗಮವೆಂದರೆ ಸ್ತ್ರೀಲಂಪಟನೆ ಜಂಗಮ?—
ಎನ್ನೆಯು. ಈ ಪಾತಕದ ನುಡಿಯ ಕೇಳಲಾಗದು. ಜಂಗಮನೆಂತಹನೆಂದಡೆ:
ನಿರ್ಲೇಪಕ ಜಂಗಮ, ನಿರುಪಾಧಿಕ ಜಂಗಮ.
ನಿರ್ಭೇದಕ ಜಂಗಮ, ನಿರಾಶ್ರಿತ ಜಂಗಮ.
ನಿರ್ಲಂಪಟ ಜಂಗಮ, ನಿಷ್ಕಾರಣ ಜಂಗಮ (?)
ಈ ಷಡ್ಗುಣ ಭರಿತನಾದಡೆ–ಆತ ನಿಜವಪ್ಪ ಜಂಗಮ

ಸಾಕ್ಷಿ: ನಿಸ್ಸಂಗಂ ನಿರಾಭಾರಂ ನಿಸ್ಪೃಹಂ ನಿರುಪಾಧಿಕಂ
ನಿರ್ದೇಹಂ ನಿರ್ಮಲಂ ನಿತ್ಯಂ ಶಸ್ಯ ಜಂಗಮ ಲಕ್ಷಣಂ॥
ನಿಷ್ಕಲಂ ನಿರಪೇಕ್ಷಂ ನಿರ್ಮಲಂ ನಿತ್ಯಂ ನಿರ್ಗುಣಂ ನಿಸ್ಪೃಹಂ ತಥಾ

ಸತ್ಯ ಪ್ರಜ್ಞ್ಯ ದಯಾಶಾಂತಿ ತಸ್ಯ ಜಂಗಮ ಲಕ್ಷಣಂ॥
ಮುಗ್ಧತ್ವಂ ಮೂರ್ತಿನಾಂ ತತ್ತ್ವಂ ದೇಹ ಮೋಹ ವಿವರ್ಜಿತಃ
ಮಾಯಾದೇಹ ಮಲಂನಾಸ್ತಿ ತಸ್ಯ ಜಂಗಮ ಲಕ್ಷಣಂ॥

"ಇಂತಪ್ಪ ದೇಹಕರಣ ಕಾರಣವಾಗಿ ಪ್ರಭುದೇವರು ಬಸವಣ್ಣನು ಅವರಿಬ್ಬರು ಅವರೊಕ್ಕುದ ಕೊಂಡು ನಾನು ಬದುಕಿದೆನು ಕಾಣಾ ಕೂಡಲ ಚೆನ್ನ ಸಂಗಮ ದೇವಾ." ಈ ಬಗೆಯ ಜಂಗಮದ ಸಾಕಾರಮೂರ್ತಿಯಾಗಿದ್ದರು ಕನಕಪುರ ದೇಗುಲ ಮಠದ ಲಿಂಗೈಕ್ಯ ಶ್ರೀ ಇಮ್ಮಡಿ ನಿರ್ವಾಣಸ್ವಾಮಿಗಳು.

## ದೇಗುಲ ಮಠ

ಬೆಂಗಳೂರು ಜಿಲ್ಲೆಯ ಪ್ರಮುಖ ತಾಲ್ಲೂಕು ಕೇಂದ್ರವಾದ ಕನಕಪುರ (ಹಿಂದಿನ ಕಾಣಿಕಾರನಹಳ್ಳಿ, ಕಾನಕಾನಹಳ್ಳಿ) ಬೆಂಗಳೂರಿಗೆ ದಕ್ಷಿಣದಲ್ಲಿ ೩೫ ಮೈಲಿಗಳ ದೂರದಲ್ಲಿ ಕಾವೇರಿಯ ಉಪನದಿಯಾದ ಅರ್ಕಾವತಿಯ ಬಲದಡದಲ್ಲಿದೆ. ದೇಗುಲ ಮಠವು ಊರಿನ ಪೂರ್ವದಿಕ್ಕಿನಲ್ಲಿ ಹರಿಯುವ ನದಿಯ ತೀರದಲ್ಲಿದ್ದು ಶಿವಯೋಗ ನಿಷ್ಠರಾದ ಹಲವು ಮಂದಿ ಮಹಾಮಹಿಮರ ತಪೋಭೂಮಿಯಾಗಿ ಪವಿತ್ರ ಕ್ಷೇತ್ರವೆನಿಸಿದೆ. ಈ ಮಠವು ಸುಮಾರು ಆರು ಶತಮಾನಗಳ ಹಿಂದೆ ಸ್ಥಾಪಿತವಾದುದೆಂದು ತಿಳಿದು ಬಂದಿದೆ.

ಶೂನ್ಯಸಿಂಹಾಸನಾಧೀಶ್ವರರಾದ ಅಲ್ಲಮಪ್ರಭು ಪರಂಪರೆಯ ಏಳನೆಯ ಪಟ್ಟದ ನಿರಂಜನಸ್ವಾಮಿಗಳು ಕನಕಪುರಕ್ಕೆ ಸು. ೩೫ ಮೈಲಿ ದೂರದ ಅರಣ್ಯ ಮಧ್ಯೇ ಇರುವ ಸೂರೊಂದುಸ್ವಾಮಿ ಬೆಟ್ಟದಲ್ಲಿ ನೆಲಸಿದರು. ಅವರೊಡನೆ ಬಂದ ವಿರಕ್ತಮೂರ್ತಿಗಳಲ್ಲಿ ಕೆಲವರು ಸೇಲಂ ಜಿಲ್ಲೆಯ ಕಡೆ ತೆರಳಿದರು. ಮತ್ತೊಬ್ಬರು ವಾಯವ್ಯಾಭಿಮುಖವಾಗಿ ಹೊರಟು ಅರ್ಕಾವತೀ ತೀರದಲ್ಲಿ ನೆಲಸಿದರೆಂದೂ, ಆ ಮಹಾಮಹಿಮರೇ ಕನಕಪುರ ದೇಗುಲಮಠದ ಮೂಲ ಗುರುಗಳಾದ ಆದ್ಯನಿರ್ವಾಣಸ್ವಾಮಿಗಳೆಂದೂ ಪ್ರತೀತಿ ಇದೆ. ಆದ್ಯ ನಿರ್ವಾಣಸ್ವಾಮಿಗಳು, ಮಹಾಲಿಂಗಸ್ವಾಮಿಗಳು, ಮುಚ್ಚಪ್ಪಸ್ವಾಮಿಗಳು ಮುಂತಾದವರು ಪವಾಡ ಪುರುಷರು. ಅಷ್ಟಸಿದ್ಧಿಗಳು ಅವರನ್ನು ಅಶ್ರಯಿಸಿದ್ದವೆನ್ನುವುದು ಅಶ್ಚರ್ಯವಲ್ಲ. ಲಿಂಗಯೋಗದಲ್ಲಿ ನಿಷ್ಠರಾಗಿದ್ದಷ್ಟೇ ಅವರು ವೀರಸಂಯಮಿಗಳೂ ಬೋಧಾಗುರುಗಳೂ ಆಗಿದ್ದರು. ಅವರ ಯೋಗಪ್ರಭಾವವು ನಾಡಿನ ಎಲ್ಲೆಡೆಯೂ ಹಬ್ಬಿತ್ತು. ಆ ಹಿರಿಯ ಗುರುಗಳ ದರ್ಶನಾಶೀರ್ವಾದಗಳನ್ನು ಪಡೆಯಲು ನಾಡಿನಾದ್ಯಂತ ಭಕ್ತವೃಂದವು ವಿಪುಲವಾಗಿ ಬರುತ್ತಿದ್ದುದರಿಂದ ಶ್ರೀಮಠವು ದೇಗುಲ ಮಠವೆಂದು ಪ್ರಸಿದ್ಧವಾಯಿತು.

ದೊಡ್ಡದೇವರಾಜವಡೆಯರು ಮತ್ತು ಚಿಕ್ಕದೇವರಾಜವಡೆಯರು ಮೈಸೂರು ರಾಜ್ಯವನ್ನು ಆಳುತ್ತಿದ್ದಾಗ-ಈಗ್ಗೆ ಮುನ್ನೂರು ವರ್ಷಗಳ ಹಿಂದೆ. ಚಿಕ್ಕದೇವರಾ

ಪಡೆಯುರ ಮಹಾಪನಾದ ದಳವಾಯಿ ಕೊಮಾರಯ್ಯನ ತಾಯಿ ತಿಮ್ಮಮ್ಮಣ್ಣಿ ಎಂಬುವರು ಮತ್ತು ಇತರ ರಾಜಮನೆತನದವರು ಮಠಕ್ಕೆ ಆಗಮಿಸಿ, ಶ್ರೀಗಳವರ ದರ್ಶನಾಶೀರ್ವಾದ ಪಡೆಯುತ್ತಿದ್ದರು. ಅಲ್ಲದೆ ಈ ಕ್ಷೇತ್ರದಲ್ಲಿ ಶಿಲಾಮಠ ಮತ್ತು ಮಂಟಪವನ್ನು ಕಟ್ಟಿಸಿದುದಲ್ಲದೆ, ನಿತ್ಯದಾಸೋಹ ಪೂಜಾಕಾರ್ಯಗಳು ಯಥೋಚಿತವಾಗಿ ನಡೆಯುವ ಸಲುವಾಗಿ ಮಠದ ಸುತ್ತಲೂ ಇರುವ ಫಲವತ್ತಾದ ಭೂಮಿಯನ್ನು ದಾನವಾಗಿತ್ತರು. ಅದಾದ ಕೆಲವು ವರ್ಷಗಳ ನಂತರ ಘೋರ ಮಳೆ ಮತ್ತು ನದಿಯ ಪ್ರವಾಹದಿಂದಾಗಿ ಮಠವು ಕೊಚ್ಚಿ ಹೋಗಲು, ರಾಜಮನೆತನದವರೆ ಪುನಃ ಮಠವನ್ನೂ ಗದ್ದುಗೆ ಕಟ್ಟಡಗಳನ್ನೂ ಪುನರುದ್ಧಾರ ಮಾಡಿದರೆಂಬ ವಿಷಯವು ಮಠದ ಆವರಣದಲ್ಲಿ ಉಪಲಬ್ಧವಿರುವ ಎರಡು ಶಿಲಾಶಾಸನಗಳಿಂದ ವೇದ್ಯವಾಗುತ್ತದೆ. ಅಲ್ಲದೆ ಅರಮನೆಯಿಂದ ಗೌರವ ಸೂಚಕವಸ್ತುಗಳೂ ಸನ್ನದೂ ಶ್ರೀಮಠಕ್ಕೆ ಅರ್ಪಿಸಲ್ಪಟ್ಟವು.

## ಶ್ರೀ ಇಮ್ಮಡಿ ನಿರ್ವಾಣಸ್ವಾಮಿಗಳವರ ಪೂರ್ವಾಶ್ರಮ ವಿಚಾರ:

### ಪೂರ್ವಿಕರು

ಈ ಪವಿತ್ರ ಪರಂಪರೆಯಲ್ಲಿ ಬಂದವರು ಶ್ರೀ ಇಮ್ಮಡಿ ನಿರ್ವಾಣಸ್ವಾಮಿಗಳವರು. ಬೆಂಗಳೂರು ಜಿಲ್ಲೆ ರಾಮನಗರಂ ತಾಲ್ಲೂಕು ಬಿಜೂರು ಗ್ರಾಮದಲ್ಲಿದ್ದ ಪರಮನಿಷ್ಠ ಗುರುಲಿಂಗಜಂಗಮದಾಸೋಹನಿರತ ವೀರಶೈವ ಕುಟುಂಬದಲ್ಲಿ ಜನಿಸಿದವರು. ಅವರ ಪೂರ್ವಜರು ಮಾಗಡಿ ತಾಲ್ಲೂಕು ಹೊನ್ನಾರನಹಳ್ಳಿಯ ವಾಸಸ್ಥರು. ತಂದೆ ಸಾಮಂದಪ್ಪನವರು ಆ ಗ್ರಾಮದ ಪ್ರಸಿದ್ಧ ವ್ಯಕ್ತಿಗಳು. ಗುರುಲಿಂಗಜಂಗಮ ಸೇವಾ ನಿರತರು ಮತ್ತು ಉದಾರ ಪ್ರವೃತ್ತಿಯವರು. ದೀನದರಿದ್ರರಲ್ಲಿ ವಿಶೇಷ ಕನಿಕರವುಳ್ಳವರು. ತಾಯಿ ಗೌರಮ್ಮನವರು ಫಲಾಹಾರಸ್ವಾಮಿಗಳೆಂಬ ವೀರ ವಿರಕ್ತ ಮೂರ್ತಿಗಳು ಅವರ ಗೃಹದಲ್ಲಿ ಲಿಂಗನಿಷ್ಠೆಯಲ್ಲಿದ್ದರು. ಶ್ರೀ ಸಿದ್ಧಗಂಗಾ ಕ್ಷೇತ್ರದ ಶ್ರೀ ಅಟವಿಸ್ವಾಮಿಗಳು ಅವರನ್ನು ವಿಶೇಷ ಭಕ್ತಿಭಾವದಿಂದ ಗೌರವಿಸುತ್ತಿದ್ದರು.

ನಾಡಿನಲ್ಲಿ [illegible] ಕ್ಷಾಮ ತಲೆದೋರಿದಾಗ ದೇಶಾದ್ಯಂತ ಸಂತ್ರಸ್ತರಿಗೂ ಬಡಬಗ್ಗರಿಗೂ ಗಂಜಿ ಕೇಂದ್ರಗಳು ತೆರೆಯಲ್ಪಟ್ಟವು. ಲಕ್ಷಾಂತರ ಜನಗಳು ಹೊಟ್ಟೆಗಿಲ್ಲದೆ ಸಾವನ್ನಪ್ಪಿದರು. ಆ ಕಷ್ಟಸಮಯದಲ್ಲಿ ಸಾಮಂದಪ್ಪನವರು ಜನತೆಗೆ ತಮ್ಮ ಕೈಲಾದ ಸಹಾಯ ನೀಡಲು ನಿರ್ಧರಿಸಿ, ಬೆಂಗಳೂರಿನ ಸಮಾಜ ಪ್ರಮುಖರಾದ ಬಿಳಿಮಲ್ಲಪ್ಪಶೆಟ್ಟರ ಸಹಕಾರದಿಂದ ಮಾಗಡಿಯಲ್ಲಿ ಅನ್ನಛತ್ರವನ್ನು ತೆರೆದು ಯಶಸ್ವಿಯಾಗಿ ನಡೆಸಿದರು. ಆ ಕಾರ್ಯಕ್ಕಾಗಿ ಸರ್ವಸ್ವವನ್ನೂ ತ್ಯಾಗ ಮಾಡಿದರು. ಅದರಿಂದಾಗಿ ಅವರು ಸಾಲಮಾಡಬೇಕಾಯಿತು. ಜಮೀನುಗಳನ್ನು ಸಾಲಗಾರರಿಗೆ ಹಂಚಿಕೊಟ್ಟರು. ಪರಿಣಾಮವಾಗಿ ತಮ್ಮ ನೈಜದ ಗುರುಲಿಂಗಜಂಗಮ ದಾಸೋಹಕ್ಕೆ ಅವಕಾಶ ದೊರೆಯದ ಕೊರತೆಯೊಂದು ಅವರನ್ನು ಬಾಧಿಸತೊಡಗಿತು. ಬುದ್ಧಿ

ಚಾಂಚಲ್ಯದಿಂದ ಅವರು ಸ್ವಗ್ರಾಮವನ್ನು ಬಿಟ್ಟು ಏಕಾಂಗಿಯಾಗಿ ಹೊರಟರು. ಒಂದುದಿನ ಗ್ರಾಮವೊಂದರಲ್ಲಿ ಮಲಗಿದ್ದಾಗ ಕನಸಿನಲ್ಲಿ ಜಂಗಮಮೂರ್ತಿಯೊಬ್ಬರು ಗೋಚರಿಸಿ "ಯೋಚಿಸಬೇಡ, ನಿನ್ನ ಸ್ವಗ್ರಾಮಕ್ಕೆ ತೆರಳಿ ಕಾರ್ಯನಿರತನಾಗು. ಒಳ್ಳೆಯದಾಗಲಿ!" ಎಂದು ಹರಸಿದಂತಾಗಿ ಎಚ್ಚರಗೊಂಡರು. ಸಾವಂದಪ್ಪನವರ ಹೃದಯದಲ್ಲಿ ಆಶಾಕಿರಣವೊಂದು ಮೂಡಿತು. ಅಲ್ಲಿಂದ ಅವರು ಹೊನ್ನಾರನ ಹಳ್ಳಿಗೆ ತೆರಳಿದರು.

ಆ ವೇಳೆಗೆ ಅವರ ಧರ್ಮಪತ್ನಿ ಗೌರಮ್ಮನವರು ಚಿಕ್ಕಮಕ್ಕಳಾದ ರುದ್ರದೇವರು, ಚನ್ನವೀರದೇವರು ಮತ್ತು ಭದ್ರಕಾಳಮ್ಮ–ಇವರೊಂದಿಗೆ ತಮ್ಮ ತೌರೂರಾದ ಐಜೂರಿಗೆ ಬಂದು, ಬಡ ಕುಟುಂಬದವರಾದ ತಂದೆತಾಯಿಗಳ ಆಶ್ರಯದಲ್ಲಿ ಕಾಲಹರಣ ಮಾಡುತ್ತಿದ್ದರು. ಸಾವಂದಪ್ಪನವರೂ ಬಂದರು. ಕುಟುಂಬದ ಜವಾಬ್ದಾರಿ ವಹಿಸಿ, ಬೇಸಾಯ ವೃತ್ತಿಯನ್ನು ಮತ್ತೆ ಪ್ರಾರಂಭಿಸಿದರು. ಹಿರಿಯ ಪುತ್ರರಿಬ್ಬರ ನೆರವೂ ದೊರೆಯುವಂತಾಯಿತು. ಕೆಲವು ವರ್ಷಗಳನಂತರ ಕಿರಿಯ ಪುತ್ರ ಬಸಪ್ಪದೇವರು ಜನಿಸಿದರು.

## ಜನನ, ಬಾಲ್ಯ–ಸೇವಾಸಕ್ತಿ

ಸಾವಂದಪ್ಪ–ಗೌರಮ್ಮ ದಂಪತಿಗಳ ಕಿರಿಯ ಪುತ್ರ ಬಸಪ್ಪದೇವರು ಜನಿಸಿದ್ದು ಕ್ರಿ. ಶ. ೧೮೬೭ರಲ್ಲಿ. ತಂದೆತಾಯಿಗಳು ಅವರನ್ನು ನಲ್ಮೆಯಿಂದ ಬೆಳಸಿದರು. ಬಾಲ್ಯದಲ್ಲಿ ಅವರಿಗೆ ತಕ್ಕಮಟ್ಟಿನ ಪ್ರಾಥಮಿಕ ವಿದ್ಯಾಭ್ಯಾಸವಾಯಿತು. ಹಿರಿಯ ಸಹೋದರರು ವ್ಯವಸಾಯ ವೃತ್ತಿಯನ್ನವಲಂಬಿಸಿದರು. ಕಿರಿಯ ಬಸಪ್ಪದೇವರು ಮುಗ್ಧತೆಯ ಮೂರ್ತಿ. ಆದರೂ ಅವರ ಒಲವು ದೈವಭಕ್ತಿ, ಸೇವೆಯ ಕಡೆಗೆ. ಮನೆಗೆ ಬಂದ ಜಂಗಮ ಮೂರ್ತಿಗಳ ಮತ್ತು ಅತಿಥಿಗಳ ಸೇವೆ, ಅವರ ಲಿಂಗಪೂಜೆಗೆ ಅಣಿಮಾಡುವ ಕೆಲಸ ಅವರದು. ಆ ಕೆಲಸದಲ್ಲಿ ಅವರು ಬೇಸರವನ್ನೇ ಅರಿಯರು.

ಆ ಸಮಯದಲ್ಲಿ ಶ್ರೀ ಸಿದ್ಧರಾಮಸ್ವಾಮಿಗಳೆಂಬ ನಿಷ್ಠಾವಂತ ಶಿವಯೋಗಿಗಳೊಬ್ಬರು ಅವರ ಗೃಹದಲ್ಲಿ ನೆಲೆಯಾಗಿದ್ದರು. ಅವರ ಸೇವೆಯನ್ನು ಬಸಪ್ಪದೇವರು 'ಅಸಿಧಾರಾವ್ರತ'ದಂತೆ, ಶ್ರದ್ಧೆಯಿಂದ ನಡೆಸುತ್ತಿದ್ದರು. ಸ್ವಾಮಿಗಳಿಗೆ ಮಡಿ ವಸ್ತ್ರಗಳನ್ನು ಸಿದ್ಧಪಡಿಸುವುದು, ಹೂ ಪತ್ರೆ ತರುವುದು, ಸ್ನಾನ ಪೂಜೆಗಳಿಗೆ ಅಣಿಮಾಡುವುದು ಅವರ ದೈನಂದಿನ ಉದ್ಯೋಗ. ಅದರಲ್ಲಿ ಅವರಿಗೆ ಅಪರಿಮಿತ ಉತ್ಸಾಹ. ಹಿರಿಯ ಸಹೋದರಿ ಭದ್ರಕಾಳಮ್ಮನವರೂ ಈ ಸೇವೆಯಲ್ಲಿ ನೆರವಾಗುತ್ತಿದ್ದರು. ಶ್ರೀ ಸಿದ್ಧರಾಮಸ್ವಾಮಿಗಳು ಬಸಪ್ಪದೇವರ ಸೇವಾಸಕ್ತಿ, ವಿನಯ ವೈರಾಗ್ಯಾದಿ ಗುಣಗಳಿಗೆ ಮೆಚ್ಚಿ ಅವರಿಗೆ ಸ್ವಲ್ಪ ಮಟ್ಟಿನ ಆಧ್ಯಾತ್ಮಿಕ ಶಿಕ್ಷಣವನ್ನು ಕೊಟ್ಟರು. ಎಳೆತನದಲ್ಲಿ ದೊರೆತ ಧಾರ್ಮಿಕ ಶಿಕ್ಷಣದಿಂದ ಬಸಪ್ಪದೇವರ ಮನೋಭೂಮಿಕೆ ಸಹಜ ಭಕ್ತಿ ವೈರಾಗ್ಯ ಸಂಪತ್ತಿನ ಸಮೃದ್ಧಿ ಪಡೆಯಿತು.

ಚಿಕ್ಕಂದಿನಿಂದಲೂ ಅವರಿಗೆ ಪಶುಪ್ರಾಣಿಗಳಲ್ಲಷ್ಟೇ ಅಲ್ಲ, ಸಕಲ ಜೀವರಾಶಿಯಲ್ಲೂ ದಯಾಪರತೆ. ಕ್ರಿಮಿಕೀಟಗಳ ಹಿಂಸೆಯೂ ಅವರಿಗೆ ಹಿಡಿಸುತ್ತಿರಲಿಲ್ಲ. ಬಸವಣ್ಣರೆನ್ನುವಂತೆ:

"ದಯವಿಲ್ಲದ ಧರ್ಮವದೇವುದಯ್ಯ ?
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ.
ದಯವೇ ಧರ್ಮದ ಮೂಲವಯ್ಯ.
ಕೂಡಲ ಸಂಗಮನಂತಲ್ಲ ದೊಲ್ಲನಯ್ಯ"

ಎಂಬ 'ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಸಹಜಗುಣ ಕಾಯದೊಡನೆ ಬೆಳೆದು ಬಂದಿತ್ತು. ಹಲವಾರು ವೇಳೆ ದನಕರುಗಳು ಅವರ ಹೊಲಗಳಿಗೆ ನುಗ್ಗಿ ಮೇಯುತ್ತಿರುವುದನ್ನು ಅವರು ಕಣ್ಣಾರ ಕಂಡರೂ ಕನಿಕರದಿಂದ ಅವುಗಳನ್ನು ದೂರ ಅಟ್ಟುತ್ತಿರಲಿಲ್ಲ ಹೀಗೇಕೆ ಮಾಡುವೆಯೆಂದು ಪ್ರಶ್ನಿಸಿದಾಗ "ಪಾಪ, ಬಡಪ್ರಾಣಿಗಳು, ಹೊಟ್ಟೆಗಿಲ್ಲ ಮೇಯಲಿ ಬಿಡಿ" ಎನ್ನುತ್ತಿದ್ದರಂತೆ. ಕಿರಿತನದಲ್ಲೂ ತಂದೆ-ತಾಯಿ, ಸೋದರ-ಸೋದರಿ, ಬಂಧು-ಬಳಗದ ವ್ಯಾಮೋಹ ಅವರಿಗಿರಲಿಲ್ಲ.

## ವಿರಕ್ತಾಶ್ರಮ ಸ್ವೀಕಾರ

ಕಾನಕಾನಹಳ್ಳಿ (ಕನಕಪುರ) ದೇಗುಲಮಠದ ಅಂದಿನ ಹಿರಿಯ ಗುರುಗಳಾದ ಶ್ರೀ ಚನ್ನಬಸವಸ್ವಾಮಿಗಳು ವೃದ್ಧರಾಗಿದ್ದು, ಮಠದ ಜಮೀನುಗಳ ಸಾಗುವಳಿ ವಗೈರೆ ನಡೆಸಲು ಅವಕಾಶವಿಲ್ಲದ್ದರಿಂದ, ಸದರಿ ಜಮೀನುಗಳನ್ನು ರೂಢಿಸುವ ಸಲುವಾಗಿ ರೈತವರ್ಗದವರಿಗೆ ವಹಿಸಿದ್ದರು. ಶ್ರೀಗಳವರ ಇಷ್ಟದಂತೆ ಐಜೂರು ಶ್ರೀ ಸಾವಂದಪ್ಪ ದಂಪತಿಗಳು ಬಸಪ್ಪದೇವರನ್ನು ಒಮ್ಮನದಿಂದ ಶ್ರೀಗಳವರ ಸನ್ನಿಧಿಗೆ ಒಪ್ಪಿಸಿದರು. ಶಾಲಿವಾಹನಶಕ ೧೮೧೬ (ಕ್ರಿಶ. ೧೮೯೪) ಜಯ ಸಂವತ್ಸರದ ಫಾಲ್ಗುಣ ಮಾಸದಲ್ಲಿ ಬಸಪ್ಪದೇವರಿಗೆ ಮಾಹೇಶ್ವರ ದೀಕ್ಷೆಯಾಯಿತು. ಅಂದಿನಿಂದ ಹತ್ತು ವರ್ಷಕಾಲ ಬಸಪ್ಪದೇವರು ದೇಗುಲ ಮಠದಲ್ಲಿದ್ದು ಅತ್ಯಂತ ಶ್ರದ್ಧಾಭಕ್ತಿಯಿಂದ ಗುರುಸೇವೆ ಮಾಡಿದರು. ದೊಡ್ಡಮಠದ ಶ್ರೀ ಚನ್ನಬಸವಸ್ವಾಮಿಗಳೂ ಚಿಕ್ಕಮಠದ ಇಮ್ಮಡಿ ಶ್ರೀ ಮರುಳುಸಿದ್ಧಸ್ವಾಮಿಗಳೂ ಮಠದ ಭಕ್ತಮಂಡಲಿ ಸಹಕಾರದಿಂದ, ದೊಡ್ಡಮಠಕ್ಕೆ ಐಜೂರಿನ ಬಸಪ್ಪದೇವರನ್ನೂ ಚಿಕ್ಕಮಠಕ್ಕೆ ಅರಳಾಳು ಗ್ರಾಮದ ಕಾಳಪ್ಪನವರನ್ನೂ ಉತ್ತರಾಧಿಕಾರಿಗಳನ್ನಾಗಿ ಆರಿಸಿದರು. ಆ ಸನ್ನಿವೇಶದಲ್ಲಿ ಶುಭಾಶೀರ್ವಾದವನ್ನು ಪಡೆಯಲು ಸ್ಥಳದ ಭಕ್ತವೃಂದದ ಪ್ರಮುಖರು ಚಿತ್ರದುರ್ಗದ ಶ್ರೀ ನಿರಂಜನ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳವರಲ್ಲಿ ನಿಯೋಗ ಹೋಗಿದ್ದರು. ಜಗದ್ಗುರುಗಳವರ ನಿರೂಪದಂತೆ ನೂತನ ಉತ್ತರಾಧಿಕಾರಿಗಳ ಆಯ್ಕೆಗೆ ಆಶೀರ್ವಾದ ಲಭಿಸಿತು. ಶ್ರೀಗಳವರ ಮತ್ತು ಭಕ್ತಮಂಡಲಿಯವರ ಅಪೇಕ್ಷೆಯಂತೆ ಉಭಯ ಪಟ್ಟಗಳೂ

ಕ್ರಿ. ಶ, ೧೯೦೩ನೇ (ಶಾ. ಶಕ ೧೮೨೫) ಶೋಭಕೃತು ಸಂವತ್ಸರದ ಮಾಘಮಾಸದಲ್ಲಿ ವಿರಕ್ತಪಟ್ಟಾಧಿಕಾರವನ್ನು ಸ್ವೀಕರಿಸಿದರು. ಶ್ರೀ ಬಸಪ್ಪದೇವರಿಗೆ ಇಮ್ಮಡಿ ನಿರ್ವಾಣ ಸ್ವಾಮಿಗಳೆಂಬುದಾಗಿಯೂ ಶ್ರೀ ಕಾಳಪ್ಪನವರಿಗೆ ಶ್ರೀ ಇಮ್ಮಡಿ ಹುಚ್ಚಪ್ಪಸ್ವಾಮಿಗಳೆಂಬುದಾಗಿಯೂ ನಾಮಾಂಕಿತವಾಯಿತು. ಈ ಉಭಯಮೂರ್ತಿಗಳೂ ಆಯಾಯ ಮಠದಲ್ಲಿದ್ದು ಒಗ್ಗಟ್ಟಿನಿಂದ ದೇಗುಲ ಮಠದ ಉನ್ನತಿಯನ್ನೂ ಸತ್ಸಂಪ್ರದಾಯವನ್ನೂ ಸಾಧಿಸಿ ಯಶಸ್ವಿಗಳಾಗಬೇಕೆಂದು ಸಮಾಜವು ನೂತನ ಶ್ರೀಗಳವರಲ್ಲಿ ಮನವಿ ಮಾಡಿತು. ಮರಳೆಗವಿಮಠದ ನಿ. ಪ್ರ. ಬಸಪ್ಪಸ್ವಾಮಿಗಳೂ, ರಾಜಾಪುರ ಮಠದ ಷ॥ ಬ್ರ॥ ಮುದ್ದು ಬಸವರಾಜಸ್ವಾಮಿಗಳೂ ರೇವಣಸಿದ್ಧೇಶ್ವರ ಬೆಟ್ಟದ ಮಠದ ಶ್ರೀಗಳವರೂ, ಇನ್ನೂ ಕೆಲವು ಮಠಾಧೀಶ್ವರರೂ ಭಕ್ತಮಂಡಲಿಯವರೂ ಈ ಮಹೋತ್ಸವದಲ್ಲಿ ಭಾಗಿಗಳಾಗಿದ್ದರು. ಬೆಂಗಳೂರು ಗುರುವಣ್ಣದೇವರ ಮಠದ ಲಿಂ. ಮಹಾಂತ ಶಾಸ್ತ್ರಿಗಳು ಆಗಮಿಕರಾಗಿಯೂ, ಸುಪ್ರಸಿದ್ಧ ಶಿವಕೀರ್ತನಕಾರರೂ ವರಕವಿಗಳೂ ಆದ ಲಿಂ. ಮೈಸೂರು ಶಿವಯ್ಯಶಾಸ್ತ್ರಿಗಳೂ ಆಗಮಿಸಿದ್ದರು. ಸಮಾರಂಭವು ಅತ್ಯಂತ ವೈಭವದಿಂದ ಜರುಗಿತು.

## ಧಾರ್ಮಿಕ ಶಿಕ್ಷಣ

ಹಿರಿಯ ಗುರುಗಳ ಅನುಜ್ಞೆಯಂತೆ, ನೂತನ ಶ್ರೀಗಳಾದ ಶ್ರೀ ನಿರ್ವಾಣ ಸ್ವಾಮಿಗಳು ಜಡದಿಯ ಬಸಪ್ಪಶಾಸ್ತ್ರಿಗಳಿಂದ ಕೆಲವುಕಾಲ ಮತಗ್ರಂಥಗಳ ಮತ್ತು ಜ್ಯೋತಿಷ ಮತ್ತು ಮಂತ್ರ ಪಾಠಗಳ ಶಿಕ್ಷಣ ಪಡೆದರು. ಅಕ್ಷರಲೋಪವಿಲ್ಲದೆ ಮಹಾಪ್ರಾಣಾಕ್ಷರಗಳ ಸ್ಪಷ್ಟ ಉಚ್ಚಾರಣೆಯಲ್ಲಿ ಅವರಿಗೆ ಹೆಚ್ಚು ಎಚ್ಚರಿಕೆ. ಅದಾದ ಮೇಲೆ ಕೆಲವು ಕಾಲ ಬೆಂಗಳೂರಿನ ತಿಪ್ಪಶೆಟ್ಟಿ ಮಠದ ಚರಮೂರ್ತಿ ಶ್ರೀ ಮಹಾಂತ ಶಿವಯೋಗಿಗಳವರ ಆಶ್ರಯದಲ್ಲಿದ್ದು ಮತಧರ್ಮ ಶಿಕ್ಷಣ ಪಡೆದರು. ಶ್ರೀ ಚರಮೂರ್ತಿ ಮಹಾಂತ ಶಿವಯೋಗಿಗಳು "ಶಿವಶರಣವಿಲಾಸ" ಮುಂತಾದ ಯಕ್ಷಗಾನ ಕಾವ್ಯಗಳನ್ನು ರಚಿಸಿ, ಇಡೀ ಕರ್ಣಾಟಕದಲ್ಲೆಲ್ಲಾ ಹೆಸರಾಂತ ಶಿವ ಕವಿಗಳಾಗಿದ್ದವರು.

ಶಿವಯೋಗ ನಿಷ್ಠರೂ ಪೂರ್ಣಾನುಭವಿಗಳೂ ಆಗಿದ್ದ ಚನ್ನಪಟ್ಟಣದ ಕುಡಿನೀರು ಕಟ್ಟೆ ಮಠದ ಶ್ರೀ ನಿ. ಪ್ರ. ಚರಮೂರ್ತಿ ಶಿವರುದ್ರಸ್ವಾಮಿಗಳ ನಿಕಟವರ್ತಿಗಳಾಗಿ ಶ್ರೀ ನಿರ್ವಾಣಸ್ವಾಮಿಗಳು ಅನೇಕಕಾಲ ಚನ್ನಬಸವೇಶ್ವರರ ಶಿವಾನುಭವ ಶಾಸ್ತ್ರ, ಲಿಂಗಾಂಗ ಸಾಮರಸ್ಯ, ಕರಣಹಸಿಗೆ, ಮುಗ್ಗಿಯ ಮಾಯಿದೇವರ "ಶತಕತ್ರಯ," ಶಾಂತಲಿಂಗಸ್ವಾಮಿಗಳ "ಅನುಭವ ಮುದ್ರೆ," ನಿಜಗುಣರ ಷಟ್ ಶಾಸ್ತ್ರಗಳು, ಸರ್ಪಭೂಷಣಶಿವಯೋಗಿಗಳ "ಕೈವಲ್ಯಕಲ್ಪವಲ್ಲರಿ" ಮುಂತಾದ ತತ್ತ್ವ ಸಾಹಿತ್ಯ ಮತ್ತು ವಚನಗ್ರಂಥಗಳ ಅನುಭವವನ್ನು ಪಡೆದರು.

## ದೈನಂದಿನ ಆಚರಣೆ

ಶ್ರೀ ನಿರ್ವಾಣಸ್ವಾಮಿಗಳ ದೈನಂದಿನ ಆಚರಣೆ ವ್ಯವಸ್ಥಿತವಾಗಿತ್ತು. ಅಧಿನೆಯ ಶ್ರೀ ಮುರುಘೇಂದ್ರ ಶಿವಯೋಗಿಗಳವರ ಆದರ್ಶದಂತೆ, ಆಶ್ರಮ ಸ್ವೀಕರಿಸಿದ ಕೆಲವು ಕಾಲ ಮಠದಲ್ಲಿ ರಜ ಹೊಡೆಯುವುದು, ಸಾರಣೆ ಮಾಡುವುದು, ಪೂಜಾಸಾಮಗ್ರಿಗಳನ್ನು ಸಿದ್ಧಪಡಿಸಿಕೊಳ್ಳುವುದು ಮುಂತಾದ ಎಲ್ಲಾ ಕೆಲಸಗಳನ್ನು ತಾವೇ ಮಾಡಿಕೊಳ್ಳುತ್ತಿದ್ದರು. ಬೇರೆಯವರ ಸಹಾಯಕ್ಕಾಗಿ ಕಾಯುತ್ತಿರಲಿಲ್ಲ. ಗದ್ದುಗೆ ಪೂಜೆ, ಲಿಂಗಪೂಜೆ–ಇವುಗಳನ್ನು ಅರುಣೋದಯಕ್ಕೆ ಮೊದಲೇ ಮುಗಿಸುತ್ತಿದ್ದರು. ತ್ರಿಕಾಲ ಲಿಂಗಪೂಜೆಯನ್ನು ಸುದೀರ್ಘವಾಗಿ ನಡೆಸುತ್ತಿದ್ದರು. ಪೂಜಾನಂತರ ಧರ್ಮ ಗ್ರಂಥಾವಲೋಕನ. ಈ ಮಧ್ಯೆ ದರ್ಶನಾರ್ಥಿಗಳಾಗಿ ಬಂದ ಭಕ್ತ ಸಮೂಹದೊಡನೆ ಕುಶಲ ಸಂಭಾಷಣೆ, ಆಶೀರ್ವಚನ ನೀಡುವುದು. ಒಡನೆ ಬಂದ ಚಿಕ್ಕ ಮಕ್ಕಳಿಗೆ ಹಣ್ಣುಹಂಪಲನ್ನಿತ್ತು, ಕರುಣೆಯಿಂದ, ಮೃದುವಚನಗಳಿಂದ ಮಾತಾಡಿಸುವುದು, ಅತಿಥಿಗಳಿಗೆ ಪ್ರಸಾದ ನೀಡುವುದು, ಇತರ ಮಠಾಧೀಶ್ವರರು ಬಂದರೆ ಅವರೊಡನೆ ತುಂಬು ಹೃದಯದಿಂದ ಸಂಭಾಷಿಸುವುದು, ಗೋವುಗಳಿಗೆ ತಾವೇ ಹುಲ್ಲು ನೀರು ಕೊಡುವುದು–ಇವು ಅವರು ಮಠದಲ್ಲಿದ್ದಾಗ ನಡೆಸುತ್ತಿದ್ದ ದಿನಚರಿಗಳು.

## ಶಿವಕ್ಷೇತ್ರಗಳ ಪ್ರವಾಸ

ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳು ಕೆಲವು ಮಠಾಧೀಶ್ವರರೊಡನೆ ಶಿವಕ್ಷೇತ್ರಗಳ ಪ್ರವಾಸವನ್ನು ಕೈಕೊಂಡರು. ಶಾಲಿವಾಹನ ಶಕ ೧೮೨೯ (ಕ್ರಿ.ಶ. ೧೯೦೭) ಪ್ಲವಂಗ ಸಂವತ್ಸರದ ಕಾರ್ತೀಕ ಮಾಸದಲ್ಲಿ ಶ್ರೀ ಚನ್ನಬಸವೇಶ್ವರ ರಥೋತ್ಸವವನ್ನು ಸಂದರ್ಶಿಸುವ ಸಲುವಾಗಿ ಉಳುವಿಗೆ ಪ್ರಯಾಣ ಮಾಡಿದರು. ಚಿತ್ರದುರ್ಗ, ದಾವಣಗೆರೆ, ಹರಿಹರ, ಹಡಗಲಿ, ಹಾನಗಲ್ಲು, ಮಲ್ಲಾಪುರ, ಗದಗ, ಹುಬ್ಬಳ್ಳಿ, ಮೇಲುಗೈಯಲ್ಲಾಪುರಗಳ ಮಾರ್ಗವಾಗಿ ಉಳುವಿ ಮಹಾಮನೆಯನ್ನು ಸೇರಿದರು. ಶರಣರ ಆ ಮಹಾಕ್ಷೇತ್ರವನ್ನು ಸಂದರ್ಶಿಸಿ, ಅಲ್ಲಿಂದ ಮುಂದೆ ಗೋಕರ್ಣ, ಧರ್ಮಸ್ಥಳ, ಸಿರಸಿ, ಬನವಾಸಿ, ಬೆಳಗಾವಿ, ಬಾದಾಮಿ, ಬಾಗಲಕೋಟೆ, ಕೂಡಲಸಂಗಮ, ಬಾಗೇವಾಡಿ, ಸೊಲ್ಲಾಪುರ, ಕಲ್ಯಾಣ, ಮಿರಜ್, ಅಂಕಲಿ, ಬಂಥನಾಳ, ವಿಜಾಪುರ, ಕಲ್ಬುರ್ಗಿ, ಶ್ರೀಶೈಲ, ಬಳ್ಳಾರಿ, ಉರುವಕೊಂಡ, ಕೊಟ್ಟೂರು, ಸೊಂಡೂರು; ಮುಂತಾದ ಅನೇಕ ಕ್ಷೇತ್ರಗಳನ್ನೂ ಪಟ್ಟಣಗಳನ್ನೂ ಪ್ರವಾಸಮಾಡಿ ಮಠಕ್ಕೆ ಹಿಂತಿರುಗಿದರು.

ಕ್ರಿ. ಶ. ೧೯೧೮ರಲ್ಲಿ ಹಿರಿಯ ಗುರುಗಳಾದ ಶ್ರೀ ಚನ್ನಬಸವ ಸ್ವಾಮಿಗಳು ಲಿಂಗೈಕ್ಯರಾದರು.

ಕ್ರಿ. ಶ. ೧೯೨೦ರ ಆಗಸ್ಟ್ ತಿಂಗಳಲ್ಲಿ ಶ್ರೀಗಳು ಶಿವಕ್ಷೇತ್ರಗಳ ಎರಡನೆಯ ಪ್ರವಾಸವನ್ನು ಕೈಕೊಂಡರು. ಚನ್ನಪಟ್ಟಣದ ಕುಡಿನೀರು ಕಟ್ಟೆಮಠದ ಚರಮೂರ್ತಿ ಶ್ರೀ ಶಿವರುದ್ರಸ್ವಾಮಿಗಳೂ, ಸೇವೆಗಾಗಿ ಐಜೂರಿನ ಶ್ರೀ ವೀರಭದ್ರಪ್ಪನವರೂ ಅವರೊಡನೆ ಪ್ರವಾಸ ಭಾಗಿಗಳಾದರು. ಚಿತ್ರದುರ್ಗಕ್ಕೆ ಪ್ರಯಾಣವಾಡಿ ಅಲ್ಲಿನ ಬೃಹನ್ಮಠದಲ್ಲಿ ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರುಘ ರಾಜೇಂದ್ರ ಮಹಾಸ್ವಾಮಿಗಳವರ ದರ್ಶನ ಪಡೆದರು. ಜಗದ್ಗುರು ಸನ್ನಿಧಿ ಯವರು ಶ್ರೀಗಳವರನ್ನು ವಿಶೇಷವಾಗಿ ಆದರಿಸಿ, ಮೂರು ದಿನಗಳವರೆಗೆ ಅವರನ್ನು ಬೃಹನ್ಮಠದಲ್ಲೇ ಇರಿಸಿಕೊಂಡು, ಶಿವಕ್ಷೇತ್ರಗಳ ಪ್ರವಾಸದ ಬಗ್ಗೆ ಬೇಕಾದ ಸಲಹೆ ಸೌಲಭ್ಯಗಳನ್ನು ನೀಡಿದರು. ಜಗದ್ಗುರುಗಳವರು ಶ್ರೀಗಳ ವ್ಯಕ್ತಿತ್ವದಿಂದ ಆಕರ್ಷಿತ ರಾಗಿ ಅವರೊಡನೆ ಸಾಂಪ್ರದಾಯಕವಾದ ಅನೇಕ ಧಾರ್ಮಿಕ ವಿಷಯಗಳ ವಿನಿಮಯ ಮಾಡಿದರೆಂದು ತಿಳಿದುಬಂದಿದೆ.

ಚಿತ್ರದುರ್ಗದ ಜಗದ್ಗುರು ಸನ್ನಿಧಿಯಿಂದ ಪರಿಚಯ ಪತ್ರಗಳನ್ನು ಪಡೆದು, ಶ್ರೀಗಳವರು ಹುಬ್ಬಳ್ಳಿಯ ಮೂರುಸಾವಿರ ಮಠ, ಸಿದ್ಧಾರೂಢರ ಮಠಗಳಿಗೆ ಭೇಟಿ ಕೊಟ್ಟು ಧಾರವಾಡಕ್ಕೆ ಬಂದರು. ಧಾರವಾಡದ ಶ್ರೀ ಮುರುಘಾಮಠಕ್ಕೆ ಬರುವ ವೇಳೆಗೆ ರಾತ್ರಿ ೩ ಘಂಟೆ ಸಮಯ. ಮಹಾ ಶಿವಯೋಗಿಗಳಾದ ಶ್ರೀ ಮೃತ್ಯುಂ ಜಯ ಸ್ವಾಮಿಗಳವರನ್ನು ಸಂದರ್ಶಿಸಿದ ಕೂಡಲೇ ಉಭಯ ಶ್ರೀಗಳವರೂ ಪರಸ್ಪರ ಸಾಷ್ಟಾಂಗ ಪ್ರಣತರಾಗಿ ಆಲಂಗಿಸಿದರು. ಅದೊಂದು ಭವ್ಯ ಸನ್ನಿವೇಶ ! ವಿದ್ಯಾರ್ಥಿ ಮತ್ತು ಭಕ್ತವೃಂದದೊಡನೆ ಶ್ರೀ ಮೃತ್ಯುಂಜಯಸ್ವಾಮಿಗಳ ಭಜನೆಯ ಆನಂದವೇ ಆನಂದ ! ಮಾರನೆಯ ಬೆಳಿಗ್ಗೆ ಏಕಾದಶ ರುದ್ರಪೂಜೆ ವಿಶೇಷ ವೈಭವಯುಕ್ತವಾ ಗಿತ್ತು. ಶ್ರೀ ನಿರ್ವಾಣಸ್ವಾಮಿಗಳೂ ಪೂಜಾಮೂರ್ತಿಗಳಲ್ಲೊಬ್ಬರು. ಪೂಜಾ ನಂತರ ಹರಗುರು ಚರಮೂರ್ತಿಗಳು ಮತ್ತು ಭಕ್ತ ಸಮೂಹದಿಂದ ನಿಬಿಡವಾದ ಉತ್ಸವವೊಂದು ಶ್ರೀ ಮುರುಘಾಮಠದಿಂದ ಹೊರಟಿತು. ಶ್ರೀ ನಿರ್ವಾಣಸ್ವಾಮಿ ಗಳು ಮಠಾಧೀಶ್ವರರ ಶ್ರೇಣಿಯಲ್ಲಿ ಅಗ್ರಸ್ಥಾನದಲ್ಲಿದ್ದರು. ವಾದ್ಯವೈಭವ ! ವಿಶೇಷವಾಗಿ ಅಲಂಕರಿಸಲ್ಪಟ್ಟ ಸಭಾಭವನದಲ್ಲಿ ನಡೆದ ವಿಶೇಷ ಸಮಾರಂಭದಲ್ಲಿ ಶ್ರೀಗಳು ಭಾಗವಹಿಸಿದರು.

ಮುಂದೆ ಪುಣೆಗೆ ಪ್ರಯಾಣ ಮಾಡಿದರು. ತಾಂಭೀಕರ ಮನೆಯವರು ಅವ ರನ್ನು ಬಹಳವಾಗಿ ಸತ್ಕರಿಸಿದರು. ಸರಳ ಜೀವಿಗಳೂ ಗುರುಲಿಂಗ ಜಂಗಮ ಸೇವಾ ಸಕ್ತರೂ ಆದ ಅವರು ಶ್ರೀಗಳವರನ್ನು ೩ ದಿನಗಳ ಕಾಲ ತಮ್ಮ ಗೃಹದಲ್ಲೇ ಉಪ ಚರಿಸಿದರು. ಮುಂದೆ ಷಹಾಪುರ–ಬೆಳಗಾವಿಗೆ ಪ್ರಯಾಣ. ಜಂಗಮ ಸೇವಾ ನಿರತರೂ

ತತ್ತ್ವಪ್ರೇಮಿಗಳೂ ಆದ ಜಗಜ್ಜಿನ್ನಿಯವರು ಶ್ರೀಗಳವರನ್ನು ೨ ದಿನ ತಮ್ಮ ಗೃಹದಲ್ಲೇ ಇರಿಸಿಕೊಂಡರು. ತತ್ತ್ವವಿಚಾರ ಕೂಟವನ್ನು ಏರ್ಪಡಿಸಿದರು. ಶ್ರೀಗಳವರೂ ಮತ್ತು ಶ್ರೀ ಶಿವರುದ್ರಸ್ವಾಮಿಗಳೂ ವಿಚಾರಗೋಷ್ಠಿಯಲ್ಲಿ ಶ್ರೋತೃಗಳನ್ನು ಆನಂದ ಪರವಶರನ್ನಾಗಿ ಮಾಡಿದರು. ಬಳಿಕ ನಾಸಿಕದ ಮೂಲಕ ಗೋದಾವರೀ ತೀರದ ಪಂಚವಟಿ ಕ್ಷೇತ್ರಕ್ಕೆ ತೆರಳಿ. ಪವಿತ್ರ ಕ್ಷೇತ್ರವಾದ ಅಥಣಿಗೆ ಪ್ರಯಾಣ ಮಾಡಿದರು. ಮಹಾಶಿವಯೋಗೀಶ್ವರರಾದ ಶ್ರೀ ಮುರುಘೇಂದ್ರ ಶಿವಯೋಗಿಗಳ ಗದ್ದುಗೆಯನ್ನು ಸಂದರ್ಶಿಸಿದರು.

ಮುಂಬಯಿಗೆ ಪ್ರಯಾಣ ಮಾಡಿದರು. ನಗರದ ಕಾಳಬಾದೇವಿ ರಸ್ತೆಯ ನಿವಾಸಿಗಳಾದ ಸಂಡೇಪಪ್ಪ ರೇವಪ್ಪನವರು ಶ್ರೀಗಳನ್ನು ಭಕ್ತಿ ಗೌರವಗಳಿಂದ ಸ್ವಾಗತಿಸಿದರು. ಎಂಟುದಿನ ಪರ್ಯಂತ ಅವರ ಆತಿಥ್ಯದಲ್ಲಿ ಉಳಿಯಬೇಕಾಯಿತು. ನಗರದ ಪ್ರಮುಖ ಭಾಗಗಳಿಗೆ ಭೇಟಿಯಿತ್ತು, ಅಲಹಾಬಾದ್ (ಪ್ರಯಾಗ) ಗೆ ಪ್ರಯಾಣ ಮಾಡಿದರು. ಗಂಗಾ ಯಮುನಾ ಸಂಗಮ ಸ್ಥಳವನ್ನು ವೀಕ್ಷಿಸಿ, ವಾರಣಾಸಿ (ಕಾಶಿ) ಗೆ ಹೊರಟರು.

ಕಾಶೀಕ್ಷೇತ್ರದ ಸುರಾಭಾಂಡೇಶ್ವರದಲ್ಲಿ ಶ್ರೀ ಗೌರೀಶಂಕರಸ್ವಾಮಿಗಳು ಶ್ರೀಗಳವರನ್ನು ಬಹಳ ಭಕ್ತಿಗೌರವಗಳಿಂದ ಸ್ವಾಗತಿಸಿದರು. ಶ್ರೀ ಗೌರೀಶಂಕರಸ್ವಾಮಿಗಳು ಮೈಸೂರು ಅರಮನೆ ಪಂಚಗವೀಮಠದ ಅಧಿಪತಿಗಳಾಗಿದ್ದು, ಸುಮಾರು ೪೦ ವರ್ಷ ಕಾಲ ಕಾಶಿಯಲ್ಲಿ ವ್ಯಾಸಂಗಮಾಡಿ ಸಂಸ್ಕೃತ, ಹಿಂದಿ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಪೂರ್ಣ ಪಾಂಡಿತ್ಯವನ್ನು ಗಳಿಸಿದ್ದವರು. ನೈಷ್ಠಿಕ ಬ್ರಹ್ಮಚರ್ಯ, ವೀತ ವೈರಾಗ ವೃತ್ತಿಯುಳ್ಳವರು. ಶ್ರೀ ನಿರ್ವಾಣಸ್ವಾಮಿಗಳು ಅಷ್ಟು ದೂರ ಪ್ರವಾಸಮಾಡಿ ಬಂದು ತಮಗೆ ದರ್ಶನ ವಿತ್ತುದು ಅವರಿಗೆ ಆಶ್ಚರ್ಯವನ್ನೂ ಆನಂದವನ್ನೂ ಉಂಟುಮಾಡಿತು. ಬಳಿಕ ಶ್ರೀಗಳು ಕಾಶೀ ವಿಶ್ವಾರಾಧ್ಯ ಜಗದ್ಗುರು ಪೀಠ ಕ್ಷೇತ್ರವಾದ ಶ್ರೀ ಜಂಗಮವಾಡಿ ಮಠಕ್ಕೆ ತೆರಳಿದರು. ಜಂಗಮವಾಡಿ ಮಠದ ಶ್ರೀಗಳು ಶ್ರೀ ನಿರ್ವಾಣಸ್ವಾಮಿಗಳನ್ನು ಭಕ್ತಿ ವಿಶ್ವಾಸಗಳಿಂದ ಆದರಿಸಿ. ತಮ್ಮ ಮಠದಲ್ಲಿಯೇ ತಂಗಬೇಕೆಂದು ಒತ್ತಾಯಪೂರ್ವಕ ಬಿನ್ನವಿಸಿದರು. ೨೦ ದಿನಗಳ ವರೆಗೆ ಅಲ್ಲಿಯೇ ತಂಗಿದ್ದು, ಕಾಶೀಕ್ಷೇತ್ರದ ಎಲ್ಲಾ ಪ್ರೇಕ್ಷಣೀಯ ಸ್ಥಳಗಳನ್ನು ಸಂದರ್ಶಿಸಿದರು. ಜಂಗಮವಾಡಿ ಮಠದ ಶ್ರೀ ಜಗದ್ಗುರು ವಿಶ್ವಾರಾಧ್ಯ ಪೀಠದ ಶ್ರೀ ಶ್ರೀಗಳವರು ಶ್ರೀ ಇಮ್ಮಡಿ ನಿರ್ವಾಣಸ್ವಾಮಿಗಳವರ ಮುಗ್ಧತೆ ಮಹಿಮಾತಿಶಯಗಳಿಂದ ಆಕರ್ಷಿತರಾಗಿದ್ದರು. ಅಲ್ಲಿ ಉಳಿದಷ್ಟು ದಿನಗಳಲ್ಲೂ ಪ್ರತಿದಿನವೂ ಶಿವಾನುಭವ ತತ್ತ್ವವಿಚಾರ ಮಥನದಿಂದಾದ ಆನಂದಾನುಭವದಿಂದ ಪುಲಕಿತರಾದ ಅವರು ಪರಸ್ಪರ ಅಗಲಲಾರದವರಾದರು. ಅಲ್ಲೇ ಮತ್ತೆ ಕೆಲವು ದಿನ ಉಳಿಯಬೇಕಾಯಿತು. ಕಾಶಿಯನ್ನು ಬಿಟ್ಟು ಹೊರಡುವ ಮುನ್ನ ಶ್ರೀಗಳು ಮತ್ತೆ ಸುರಾಭಾಂಡೇಶ್ವರದಲ್ಲಿ ಶ್ರೀ ಗೌರೀಶಂಕರ

ಸ್ವಾಮಿಗಳು ಅವರನ್ನು ಕುರಿತು "ಬುದ್ಧೀ, ತಾವಿದ್ದ ಕಡೆ ಹುಲಿ ಗೋವುಗಳೂ ಪರಸ್ಪರ ವೈಷಮ್ಯವನ್ನು ಬಿಟ್ಟು ಸಹಜ ಪ್ರೇಮದಿಂದಿರುತ್ತವೆ" ಎಂದುಉದ್ಗರಿಸಿದರಂತೆ !

ಅಲ್ಲಿಂದ ಮುಂದೆ ಕಲ್ಕತ್ತೆಗೆ ಪ್ರಯಾಣಮಾಡಿದರು. ಆ ಮಹಾನಗರದ ಛತ್ರವೊಂದರಲ್ಲಿ ಬಿಡಾರ ಮಾಡಲಾಯಿತು. ಅಲ್ಲಿದ್ದ ಕೆಲವು ಜೈನ ವರ್ತಕರೂ ಮಹಿಳೆಯರೂ ಶ್ರೀಗಳವರನ್ನು ಅನನ್ಯ ಭಕ್ತಿಗೌರವದಿಂದ ಆದರಿಸಿ, ನಗರದ ಪ್ರೇಕ್ಷಣೀಯ ಸ್ಥಳಗಳಿಗೆ ಭೇಟಿಮಾಡಿಸಿದರು. ಕಲ್ಕತ್ತೆಯನ್ನು ಬಿಟ್ಟು, ಬೆಜವಾಡ, ಜಗನ್ನಾಥಗಳ ಮೂಲಕ ಮದರಾಸಿಗೆ ಬಂದು, ಮಠವೊಂದರಲ್ಲಿ ೨ ದಿನ ಬಿಡಾರ ಮಾಡಿ, ನೋಡಬೇಕಾದ ಸ್ಥಳಗಳಿಗೆ ಭೇಟಿಕೊಟ್ಟು, ಬೆಂಗಳೂರಿಗೆ ಹಿಂತಿರುಗಿದರು. ಈ ಪ್ರವಾಸಕ್ಕೆ ಸುಮಾರು ೩ ತಿಂಗಳಕಾಲ ಹಿಡಿಯಿತು. ಶ್ರೀಗಳು ಈ ರೀತಿ ಚರಜಂಗಮ ಕರ್ತವ್ಯವನ್ನು ನೆರವೇರಿಸಿದರು.

ಕಾಶಿಯಿಂದ ಹಿಂತಿರುಗಿದ ವೇಳೆಗೆ ಚಿಕ್ಕ ಮಠದ ಶ್ರೀ ಇಮ್ಮಡಿ ಹುಚ್ಚಪ್ಪ ಸ್ವಾಮಿಗಳು ಅವಸಾನ ಸ್ಥಿತಿಯಲ್ಲಿದ್ದರು. ಶ್ರೀಗಳಿಂದ ಕರ್ಣಮಂತ್ರಜಪೋಚ್ಚಾರಣೆ ವಿಭೂತಿವೀಳೆಯ ಮುಂತಾದ ಸಾಂಪ್ರದಾಯಿಕ ಕಾರ್ಯಗಳಾದ ಬಳಿಕ ಶ್ರೀ ಹುಚ್ಚಪ್ಪ ಸ್ವಾಮಿಗಳು ಲಿಂಗದೊಳಗಾದರು.

## ಪವಾಡ ಪುರುಷರು

ಪ್ರಾಚೀನ ಕಾಲದಿಂದಲೂ ಋಷಿಮುನಿಗಳು ಮಹಾತಪಸ್ವಿಗಳು ನೆಲಸಿದ ಕ್ಷೇತ್ರಗಳಲ್ಲಿ ಪರಸ್ಪರ ವೈರವುಳ್ಳ ಪ್ರಾಣಿವರ್ಗಗಳಲ್ಲಿಯೂ ಪ್ರೇಮಾದರಗಳು ಮೂಡಿ. ಶಾಂತ ವಾತಾವರಣವಿರುತ್ತಿದ್ದಿತೆಂಬುದನ್ನು ಕೇಳಿದ್ದೇವೆ. ರೇಣುಕಾದಿ ಆಚಾರ್ಯರು, ಬಸವಾದಿ ಪ್ರಮಥರು, ಎಡೆಯೂರು ಸಿದ್ಧಲಿಂಗೇಶ್ವರರು, ಮಲೆಯಮಹದೇಶ್ವರರು, ಆದ್ಯ ನಿರ್ವಾಣಸ್ವಾಮಿಗಳು, ಹುಚ್ಚಪ್ಪಸ್ವಾಮಿಗಳು, ಈಚಿನವರಾದ ದೇವನೂರು ಗುರುಮಲ್ಲೇಶ್ವರರು, ಕೆಂಡಗಣ್ಣಸ್ವಾಮಿಗಳು, ಉಜ್ಜಯಿನಿ ಸಿದ್ಧಲಿಂಗಸ್ವಾಮಿಗಳು, ಅಥಣಿಮುರುಘೇಂದ್ರ ಶಿವಯೋಗಿಗಳು, ಅರಭಾವಿ ಮಹಾಂತ ಶಿವಯೋಗಿಗಳು ಮುಂತಾದ ಮಹಾಮಹಿಮರು ತಮ್ಮ ತಪೋಬಲದಿಂದ ತಾವು ಪಾದವೂರಿದ ಕ್ಷೇತ್ರಗಳನ್ನೇ ಪವಿತ್ರಗೊಳಿಸಿದರು. ಶಂಕರದೇವರು ಹೀಗೆ ಹೇಳಿದ್ದಾರೆ.

ನಡೆದೊಡೆ ಭೂಮಿಪಾವನ ಮಹಾಶರಣಂ ಸಹಜಾನುಭಾವದಿಂ–
ನುಡಿದೊಡೆ ಸರ್ವಜೀವಿಗಳ ಜನ್ಮನಿವಾರಣ ವೊಮ್ಮೆನೋಡಿ ಕಂ–
ಡೊಡೆಯುವನೇ ಕೃತಾರ್ಥ ಕರಪಂಕಜ ಮಂಡೆಯ ಮೇಲೆ ಬಂದು ಬಿ
ಳ್ದೊಡೆ ಕುಲಕೋಟಿ ಎಲ್ಲಕೆ ಸಮುದ್ಧರಣಂ ಗುರು ಶಂಕರೇಶ್ವರಾ ॥

ಅಂತಹ ಮಹಾಮಹಿಮರ ಕೃಪೆಯುಂಟಾದಲ್ಲಿ ಪವಾಡಗಳು ತಾವಾಗಿ ನಡೆಯುತ್ತವೆ. ಆದರೆ, ಪವಾಡಗಳನ್ನು ತೋರಿ ಜನಸ್ತೋಮವನ್ನು ಮರುಳುಗೊಳಿಸುವ

ಡಾಂಭಿಕ ವೃತ್ತಿ ಅವರಲ್ಲಿರದಿಲ್ಲ. ಅಷ್ಟಸಿದ್ಧಿಗಳೂ ಪವಾಡಗಳೂ ತಾವಾಗಿಯೇ ಅವರನ್ನು ಆಶ್ರಯಿಸುವುವೆಂಬುದು ಅತಿಶಯೋಕ್ತಿಯಲ್ಲ. ಅವರ ಸನ್ನಿಧಿಯ ಕೃಪೆ ಪಡೆದ ಭಕ್ತವರ್ಗದವರಿಗೆ ಅವರ ಹಿರಿಮೆಗಳು ಗೋಚರವಾಗುತ್ತವೆ.

ಶ್ರೀ ಇಮ್ಮಡಿ ನಿರ್ವಾಣಸ್ವಾಮಿಗಳ ಜೀವನದಲ್ಲಿ, ಅವರ ಹಿಂದಿನ ಪರಂಪರೆಯಲ್ಲಿ ಕಂಡುಬಂದಂತೆ, ಇಂತಹ ಆಶ್ಚರ್ಯಕರ ಘಟನೆಗಳು ಆಗಾಗ್ಗೆ ಕಂಡು ಬರುತ್ತಿದ್ದವು.

ಒಮ್ಮೆ ಮಠದ ಹಿರಿಯ ಗುರುಗಳಾದ ಶ್ರೀ ಚನ್ನಬಸವ ಸ್ವಾಮಿಗಳ ವಾರ್ಷಿಕ ಜಂಗಮಾರಾಧನೆ ನಡೆದಿತ್ತು. ಅನೇಕ ಮಂದಿ ಮಠಾಧೀಶರೂ ಭಕ್ತಬಂಧುಗಳೂ ಭಾಗಿಗಳಾಗಿದ್ದರು. ಎಲ್ಲವೂ ಚಿಕ್ಕ ಮಠದಲ್ಲಿ ವ್ಯವಸ್ಥೆಯಾಗಿತ್ತು. ಅಂದು ರಾತ್ರಿ ಶ್ರೀ ಹುಲ್ಕುಂಟೆ ಚನ್ನಪ್ಪನವರೂ ಶ್ರೀ ಐಜೂರು ರುದ್ರದೇವರೂ ವಿಶ್ರಾಂತಿಗಾಗಿ ದೊಡ್ಡ ಮಠಕ್ಕೆ ಬಂದರು. ಶ್ರೀ ಇಮ್ಮಡಿ ನಿರ್ವಾಣಸ್ವಾಮಿಗಳು ಕುಳಿತಿದ್ದ ಆಸನದ ಸಮೀಪದಲ್ಲಿ ಎರಡು ಸರ್ಪಗಳು ಗೋಚರಿಸಿದವು. ಬಂದ ಭಕ್ತರಿಬ್ಬರೂ ಗಾಬರಿಗೊಂಡು ದೂರ ಸರಿದರು. ಆದರೆ ಶ್ರೀಗಳು ಹೆದರಬೇಡಿರೆಂದು ಅವರಿಗೆ ತಿಳಿಸಿ, ಒಂದು ಬಿದಿರು ಮಕ್ಕರಿಯನ್ನು ತಂದು ಅವುಗಳ ಮೇಲೆ ಬೋರಲು ಹಾಕಿದರು. ಬೆಳಗಾಗುವ ವೇಳೆಗೆ ಮಕ್ಕರಿಯನ್ನು ತೆರೆದು ನೋಡಲು ಹಾವುಗಳೇ ಇರಲಿಲ್ಲ!

ಮತ್ತೊಮ್ಮೆ, ಶ್ರೀಗಳು ಉತ್ತರ ಭಾರತ ಪ್ರವಾಸದಲ್ಲಿದ್ದಾಗ, ಒಂದು ದಿನ ಕೃಷ್ಣಾನದಿಯಲ್ಲಿ ಸ್ನಾನಮಾಡಿ, ನದಿಯ ಮರಳು ದಿಣ್ಣೆಯೊಂದರ ಮೇಲೆ ಕುಳಿತು ಪೂಜಾಧ್ಯಾನಾಸಕ್ತರಾಗಿದ್ದರು. ಆ ಸಮಯದಲ್ಲಿ ಒಂದು ಘಟನೆ ನಡೆಯಿತು. ನದಿಯ ಪ್ರವಾಹ ತೆರೆ ತೆರೆಯಾಗಿ ನುಗ್ಗಿ ಬರುತ್ತಿತ್ತು. ಜತೆಯಲ್ಲಿದ್ದವರು ಗಾಬರಿಯಿಂದ ದಡಕ್ಕೆ ಬಂದರು. ದಡದ ಮೇಲೆ ಬರುವಂತೆ ಶ್ರೀಗಳನ್ನು ಎಷ್ಟು ಪ್ರಾರ್ಥಿಸಿದರೂ ಅವರು ಕದಲದೆ ಸ್ಥಿರಚಿತ್ತರಾಗಿ ಕುಳಿತುಬಿಟ್ಟರು. ಪ್ರವಾಹ ಮೇರೆ ಮೀರಿತು. ಇನ್ನೇನು ಗತಿ-ಎನ್ನುವಂತಾಯಿತು. ಆದರೆ, ಪ್ರವಾಹದ ತೆರೆಗಳು ಶ್ರೀಗಳು ಕುಳಿತ ಸ್ಥಾನವನ್ನು ಮುಟ್ಟದೆ ಇಳಿದುಹೋದವು! ಎಲ್ಲರೂ ಆಶ್ಚರ್ಯ ಚಕಿತರಾದರು. ಶ್ರೀಗಳು ತಮ್ಮ ಆಹ್ನೀಕಗಳನ್ನು ಮುಗಿಸಿ ಹೊರಬಂದರು. ಬಳಿಕ ಮಹಾಪೂರವು ಮೊದಲಿಗಿಂತ ಇಮ್ಮಡಿಸಿ ತುಂಬಿ ಹರಿಯತೊಡಗಿತು.

ಹಲವಾರು ವೇಳೆ ನಡೆದ ಘಟನೆ: ಶ್ರೀಗಳು ಲಿಂಗಪೂಜೆ ಮಾಡುತ್ತಿದ್ದ ಸಮಯದಲ್ಲಿ ಎರಡು ನಾಗಗಳು ಹೆಡೆಯೆತ್ತಿ ಮುಂದೆನಿಂತು, ಪೂಜಾನಂತರ ಹರಿದು ಹೋಗುತ್ತಿದ್ದವು.

ದೇಗುಲ ಮಠದ ಹಳ್ಳಿಯಲ್ಲಿ ಹಾವುಕಡಿದರೆ ವಿಷವೇರದಿರುವುದೂ, ಶವದಹನವಾದರೆ ಶಿರೋಭೇದನ ಶಬ್ದವಾಗದಿರುವುದೂ ಇಂದಿಗೂ ಉಂಟು. ಇಂತಹ ಘಟನೆಗಳು ಈ ಪರಂಪರೆಯ ಹಿಂದಿನ ಶ್ರೀಗಳ ಪವಾಡಗಳ ಐತಿಹ್ಯದಲ್ಲಿವೆ.

ಶ್ರೀಗಳ ಆಶೀರ್ವಾದದಿಂದ ಎಷ್ಟೋ ಮಂದಿ ಭಕ್ತರು ತಮ್ಮ ಮನೋಭೀಷ್ಟಗಳನ್ನು ಸಾಧಿಸಿಕೊಂಡಿದ್ದಾರೆ.

## ಮಠದ ಕೆಲವು ಜೀರ್ಣೋದ್ಧಾರ ಕಾರ್ಯಗಳು

ಚಿಕ್ಕಮಠದ ವೃದ್ಧಗುರುಗಳಾದ ಇಮ್ಮಡಿ ಶ್ರೀ ಮರುಳಸಿದ್ಧಸ್ವಾಮಿಗಳ ನೇತೃತ್ವದಲ್ಲಿ ಮಠದ ಜೀರ್ಣೋದ್ಧಾರ ಕಾರ್ಯಗಳು ನಡೆದವು. ಮಠದ ಗದ್ದುಗೆ ಕಟ್ಟಡ, ಸ್ನಾನ ಪ್ರಸಾದಗೃಹಗಳು ಕೈಸಾಲೆಗಳು ಬಹಳ ಶಿಥಿಲವಾಗಿದ್ದು ಗೋಡೆಗಳು ಬಿರುಕು ಬಿಟ್ಟು ಉರುಳುವ ಸ್ಥಿತಿಯಲ್ಲಿದ್ದವು. ಕ್ರಿ.ಶ. ೧೯೨೩ರಲ್ಲಿ ಬೆಂಗಳೂರು ಗೌಡನಪೇಟೆಯ ಶ್ರೀ ಗುರುಪಾದಪ್ಪ ಎಂಬ ವೃದ್ಧ ಭಕ್ತರು ಮಾಡಿದ ಧನ ಸಹಾಯದಿಂದ ೧೫ ಅಂಕಣಗಳ ಶಿಲಾ ನಿರ್ಮಿತ ಗದ್ದಿಗೆ ಕಟ್ಟಡವೂ ಮಹಾದ್ವಾರವೂ ನಿರ್ಮಾಣವಾದವು. ಈ ಕಾರ್ಯದಲ್ಲಿ ಸ್ಥಳೀಯ ವೀರಶೈವ ಪ್ರಮುಖರಾದ ಶ್ರೀ ಪಂಡಿತ ನಂಜುಂಡಪ್ಪನವರೂ ಶಿಡ್ಲಘಟ್ಟದ ಶ್ರೀ ನಂಜುಂಡಪ್ಪನವರೂ ಮತ್ತು ಇತರ ಪ್ರಮುಖರೂ ವಿಶೇಷ ಶ್ರದ್ಧೆ ವಹಿಸಿದರು. ಈ ನೂತನ ಕಟ್ಟಡಗಳ ಪ್ರಾರಂಭೋತ್ಸವವು ಅತ್ಯಂತ ವಿಜೃಂಭಣೆಯಿಂದ ನಡೆಯಿತು. ಆ ಸಂದರ್ಭದಲ್ಲಿ ನಡೆದ ಏಕಾದಶ ಮಂಟಪ ಪೂಜೆ ಮತ್ತು ಜಂಗಮಾರಾಧನೆಯಲ್ಲಿ ನೂರಾರು ಮಂದಿ ಹರಗುರು ಚರಮೂರ್ತಿಗಳೂ ಭಕ್ತಮಂಡಲಿಯವರೂ ನೆರೆದಿದ್ದರು. ಕೆಲವು ವರ್ಷಾನಂತರ ಸ್ಥಳೀಯ ಪ್ರಮುಖರಾದ ಶ್ರೀ ಗುರಿಕಾರ್ ಚನ್ನಬಸಪ್ಪನವರು ಪ್ರತ್ಯೇಕ ಪೂಜಾಗೃಹವನ್ನು ಕಟ್ಟಿಸಿಕೊಟ್ಟರು.

ಕ್ರಿ. ಶ. ೧೯೨೪ರಲ್ಲಿ ಚಿಕ್ಕಮಠದ ಶ್ರೀ ಇಮ್ಮಡಿ ಮರುಳುಸಿದ್ಧಸ್ವಾಮಿಗಳು ಲಿಂಗೈಕ್ಯರಾದರು. ಎರಡು ಮಠಗಳ ವ್ಯವಸ್ಥೆಯನ್ನೂ ಶ್ರೀಗಳೇ ವಹಿಸಿದರು

## ಶ್ರೀಮಠದ ಮುಂದಿನ ಉತ್ತರಾಧಿಕಾರಿಗಳು

ಶ್ರೀ ಇಮ್ಮಡಿ ನಿರ್ವಾಣಸ್ವಾಮಿಗಳು ಮಠದಉತ್ತರಾಧಿಕಾರಿಗಳನ್ನು ಆರಿಸಲು ಸ್ಥಳೀಯ ಪ್ರಮುಖರೊಡನೆ ಸಮಾಲೋಚಿಸಿದರು ಶ್ರೀಗಳ ಆಜ್ಞಾಪ್ರಕಾರ, ಗಣ್ಯವ್ಯಕ್ತಿಗಳಾದ ಶ್ರೀ ಕೆ. ಪಿ. ಪರಶಿವಯ್ಯನವರ ಮುಂದಾಳತ್ವದಲ್ಲಿ ಸ್ಥಳೀಯ ಸಮಾಜ ಮುಖಂಡರ ನಿಯೋಗವು ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ತೆರಳಿತು. ಶ್ರೀಕ್ಷೇತ್ರದ ಅಧಿಪತಿಗಳೂ ಪರಮ ತಪಸ್ಸಿದ್ಧರೂ ಆದ ಶ್ರೀ ಶ್ರೀ ಉದ್ಧಾನ ಶಿವಯೋಗಿಗಳು ಅವರನ್ನು ಕೃಪಾದೃಷ್ಟಿಯಿಂದ ಬರಮಾಡಿಕೊಂಡರು. ಆವೇಳೆಯಲ್ಲಿ ತುಮಕೂರು ಜಿಲ್ಲೆಯ ಕೆಂಬಳ್ಳಿ ಗ್ರಾಮದ ಗುರುಲಿಂಗ ಜಂಗಮ ಸೇವಾನಿರತರಾದ ಶಿದ್ಧಬಸಪ್ಪ ಬಸಮ್ಮ –ಅವರ ಸುಪುತ್ರರಾದ ಕಾಳಪ್ಪ ಎಂಬುವರು ಆ ಗುರುಕುಲದಲ್ಲಿ ವ್ಯಾಸಂಗ ಮಾಡುತ್ತಿದ್ದು ಗುರುಸೇವಾನಿಷ್ಠರಾಗಿ ಗುರುಗಳಿಗೆ ಅಚ್ಚುಮೆಚ್ಚಿನ ಶಿಷ್ಯರಾಗಿದ್ದರು. ಶ್ರೀ ಉದ್ಧಾನ ಶಿವಯೋಗಿಗಳು ಆ ಆಪ್ತ ಶಿಷ್ಯನೇ ದೇಗುಲಮಠದ ಶ್ರೀ ನಿರ್ವಾಣ ಸ್ವಾಮಿಗಳಿಗೆ ಯೋಗ್ಯ ಉತ್ತರಾಧಿಕಾರಿಯಾಗುವರೆಂಬುದನ್ನು ತಮ್ಮ ದಿವ್ಯದೃಷ್ಟಿ

ಮುಂದ ನಿಶ್ಚಯಿಸಿ, ವಟುವಿಗೆ ಆಶೀರ್ವದಿಸಿ ಕಳುಹಿಸಿಕೊಟ್ಟರು. ಶಾಲಿವಾಹನಶಕ ೧೮೮೦ ಬಹುಧಾನ್ಯ ಸಂವತ್ಸರದ ಮಾಘಶುದ್ಧ ಸಪ್ತಮಿ (ಫೆಬ್ರವರಿ ೧೯೫೯) ಯ ದಿನ ಶುಭ ಮುಹೂರ್ತದಲ್ಲಿ ದೇಗುಲ ಮಠದ ಚರಪಟ್ಟಾಧಿಕಾರ ಮಹೋತ್ಸವವು ವೈಭವದಿಂದ ಜರುಗಿತು. ನಾಡಿನ ನಾನಾ ಕಡೆಗಳಿಂದ ಸಾವಿರಾರು ಮಂದಿ ಮಠಾಧೀಶ್ವರರೂ, ಪ್ರಮುಖರೂ, ವಿದ್ವಾಂಸರೂ, ಅನುಭವಿಗಳೂ, ಭಕ್ತಮಂಡಲಿಯವರೂ ಆ ಮಹೋತ್ಸವದಲ್ಲಿ ಭಾಗಿಗಳಾಗಿದ್ದರು. ನೂತನ ಶ್ರೀಗಳವರಿಗೆ **ಚರಮೂರ್ತಿ ಶ್ರೀ ಶ್ರೀ ಮಹಾಲಿಂಗಸ್ವಾಮಿಗಳೆಂಬ** ಅಭಿದಾನವುಂಟಾಯಿತು. ನೂತನ ಶ್ರೀಗಳವರು ತಮ್ಮ ಪೂಜ್ಯ ಗುರುವರ್ಯರ ಕೃಪಾಶ್ರಯದಲ್ಲಿ ತಮ್ಮ ದಿವ್ಯ ಪರಂಪರೆಯ ಪ್ರಗತಿಯನ್ನು ಗುರುಕೃಪೆಯಿಂದ ಸಾಧಿಸುವ ಸಂಕಲ್ಪವನ್ನು ಕೈಕೊಂಡರು.

## ಶ್ರೀ ನಿರ್ವಾಣಸ್ವಾಮಿಗಳ ವ್ಯಕ್ತಿತ್ವ; ಆಶ್ರಮ ಧರ್ಮ ಪಾಲನೆ

ಶ್ರೀಗಳವರು ತಮ್ಮ ವಿರಕ್ತಾಶ್ರಮ ಧರ್ಮವನ್ನು ನಿಷ್ಠೆಯಿಂದ ಆಚರಿಸಿದವರು, ಶಿವಯೋಗ ನಿಷ್ಠರು, ಜ್ಞಾನಕ್ರಿಯಾ ಸಮನ್ವಿತರು, ಕ್ರಿಯಾಮೂರ್ತಿಗಳು. ನಿರ್ವಾಣವೆಂಬ ಸಾರ್ಥಕ ನಾಮವುಳ್ಳವರು. ಶಾಂತಮಲ್ಲಸ್ವಾಮಿಗಳು ತಮ್ಮ "ಅನುಭವ ಮುದ್ರೆ" ಯಲ್ಲಿ ಹೀಗೆ ಹೇಳಿದ್ದಾರೆ.

"ನಿರ್ವಾಣವೆಂಬುದು ಜೀವೇಶ್ವರ ಸಂಗ
ನಿರ್ವಾಣವೆಂಬುದು ನಿರ್ಗುಣ
ನಿರ್ವಾಣವೆಂಬುದು ಪರಿಪೂರ್ಣ ದೃಷ್ಟಿಯು
ನಿರ್ವಾಣವೆಂಬುದು ಚಿತ್ಪ್ರಭೆ"

"ನಿರ್ವಾಣವು ವ್ಯಾಪಾರ ವಿದೂರವು
ನಿರ್ವಾಣವಾತ್ಮ ವಿಶ್ರಾಂತಿಯು
ನಿರ್ವಾಣವು ತ್ರೈಮಲಗಳ ಗೆದ್ದುದು
ನಿರ್ವಾಣವು ಸಮರಸ ಭಕ್ತಿ"

"ನಿರ್ವಾಣಕೆ ಪೂರ್ವ ಜಡವಾಸನೆಯಿಲ್ಲ
ನಿರ್ವಾಣಕೆ ಭಯ ಲಯವಿಲ್ಲ
ನಿರ್ವಾಣಕೆ ಮಾಯಾ ಭ್ರಾಂತಿಗಳಿಲ್ಲ
ನಿರ್ವಾಣಕೆ ತೆರೆಮರೆಯಿಲ್ಲ

"ಕಣ್ಣೊಳು ಕಾಮವ ಮನದೊಳು ಕೋಪವ
ಹಣ್ಣಿಹ ಮಾಯದ ಜಾಲವ
ಹೆಣ್ಣು ಹೊನ್ನು ಮಣ್ಣುಯೆಂಬ ಪಾಶಂಗಳ
ಹಣ ದಿರಲು ನಿರ್ವಾಣವು"

ನಿರ್ವಾಣದ ಈ ಲಕ್ಷಣಗಳು ಅವರಲ್ಲಿದ್ದುದರಿಂದ ಅವರು ನಿರ್ವಾಣ ಸ್ವಾಮಿಗಳೇ. ಭಕ್ತರ ಸ್ಥಿತಿಗತಿಗಳನ್ನರಿತು, ಅದರಂತೆ ಇದ್ದು, ಅವರ ಕೊರತೆಗಳನ್ನು ಸರಿಪಡಿಸಿ, ಸಂತೋಷಪಡಿಸಿ, ಅವರ ಭಕ್ತಿಯನ್ನು ಸ್ವೀಕರಿಸುತ್ತಿದ್ದರು.

"ಲಿಂಗ ಜಂಗಮು ಭಕ್ತಿಯು ಮಾಡಿಸಿ ಕೊಂಬಲ್ಲಿ ವಿವರವುಂಟು:
ಲೌಕಿಕ, ಅಲೌಕಿಕ, ಸಹಜವೆಂಬ ಮಾಟತ್ರಯುವನರಿದು
ಲೌಕಿಕ ಭಕ್ತರಲ್ಲಿ ಅವರಿಚ್ಛೆಯುಲ್ಲಿರ್ದು ಭಕ್ತಿಯು ಮಾಡಿಸಿಕೊಂಬುದು,
ಅಲೌಕಿಕ ಭಕ್ತರಿಗೆ ತಾ ಕರ್ತನಾಗಿ ಅವರು ಭೃತ್ಯರಾಗಿ
ಭಕ್ತಿಯು ಮಾಡಿಸಿಕೊಂಬುದು.

ಸಹಜ ಭಕ್ತರಲ್ಲಿ ಕರ್ತೃತ್ವ ಭೃತ್ಯತ್ವವಿಲ್ಲದೆ ಭಕ್ತಿಯು ಮಾಡಿಸಿಕೊಂಬುದು
ಇಂತಿದು ಲಿಂಗಜಂಗಮುದ ಜಾಣ್ಮೆ ಕಾಣಿರೋ!
ಹೀಗಲ್ಲದೆ, ಅವರ ಕಾಡಿ, ಕರಕರಿಸಿ, ಅವರ ಭಂಡುಮಾಡಿ,
ತಾ ಭಂಡನಹ ಭಂಡನ ಮುಖವ ತೋರದಿರು
ಕೂಡಲ ಚೆನ್ನಸಂಗಮು ದೇವಾ"

ಎಂಬ ಶ್ರೀ ಚೆನ್ನಬಸವೇಶ್ವರರ ಪ್ರಸಾದ ವಾಣಿಯನ್ನು ಅಕ್ಷರಶಃ ಪಾಲಿಸುತ್ತಿದ್ದರು.

"ಏನೊಂದು ವಸ್ತುವನಾರನು ಬೇಡದೆ
ತಾನಾಗಿ ಬಂದುದ ಕೈಕೊಂಡು
ಜ್ಞಾನಿಗಳೊಡನಾಡಿ ಕರತಳದೊಳು ಲಿಂಗ
ಧ್ಯಾನವುಳ್ಳುದು ನಿರ್ವಾಣವು." (ಅನುಭವ ಮುದ್ರೆ)

ಎಂಬ ಶರಣವಾಣಿಯಂತೆ ನಡೆದವರವರು. "ಧರೆಗೆ ಯಾಚನೆಗಿಂತ ಲಘುತರಮುಂಟೆ" ಎಂಬ ನಿಜಗುಣರ ಅನುಭವೋಕ್ತಿಯನ್ನು ಬಲ್ಲವರು. "ಬಯಸಿ ಬಂದುದು ಅಂಗಭೋಗ, ಬಯಸದೆ ಬಂದುದು ಲಿಂಗಭೋಗ" ಎಂಬುದನ್ನರಿತವರು. ಸಮತೆ ಸಮಾಧಾನ ಚಿತ್ತವುಳ್ಳವರು.

"ಅಂಗೈಯ್ಯ ಲಿಂಗದಲ್ಲಿ ಕಂಗಳು ನಟ್ಟು,
ಎವೆ ಹಳಚದೆ, ಮನ ಕವಲಿಡದೆ,
ಚಿತ್ರದ ರೂಹಿನ ತೆರನಂತೆ,
ಲಿಂಗವ ನೋಡಿ ನೋಡಿ ಕಂಗಳಲ್ಲಚ್ಚೊತ್ತಿ,
ಮನದಲ್ಲಿ ನೆನೆ ನೆನೆದು ಮೆರೆದ
ಲಿಂಗಮುಖಿ ಸಂಪನ್ನರನೇ ಲಿಂಗವೆಂಬೆನು
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ !"

ಸ್ವತಂತ್ರ ಸಿದ್ಧಲಿಂಗೇಶ್ವರರ ಈ ವಚನಾನುಭವದಂತೆ ತ್ರಿಕಾಲ ಲಿಂಗಪೂಜಾ ನಿರತರಾಗಿದ್ದ 'ಲಿಂಗ ಮುಖ ಸಂಪನ್ನರು' ಶ್ರೀಗಳು.

ಲಿಂಗದೊಳಗೆ ಭೋಗವಿಹವು
ಲಿಂಗದೊಡನೆ ಯಾತ್ಮಲೀಲೆ
ಲಿಂಗದೊಡನೆ ಬೆರಗು ಬೆರಗು ಮರುಕಮೋಳವು
ಲಿಂಗದೊಡನೆ ವಿನಯ ಸರಸ
ಲಿಂಗದೊಡನೆ ಸಂಗರತಿಯು
ಲಿಂಗದೊಡನೆ ಚರಿಸುತಿರ್ಪ ಪ್ರಭುವಿರಕ್ತನು "
ಎಂಬ ಶರಣವಾಣಿಯಂತೆ ಲಿಂಗಲೀಲೆಯುಳ್ಳವರು.

ಶ್ರೀ ಷಣ್ಮುಖ ಸ್ವಾಮಿಯವರು ಹೇಳಿರುವಂತೆ :
" ನಡೆಯೊಳಗೆ ನುಡಿತುಂಬಿ
ನುಡಿಯೊಳಗೆ ನಡೆತುಂಬಿ
ನಡೆನುಡಿ ಎರಡನು ಪರಿಪೂರ್ಣತುಂಬಿ
ಲಿಂಗವ ಕೂಡ ಬಲ್ಲಾತನೇ ಶರಣ ನೋಡಾ ಅಖಂಡೇಶ್ವರಾ "
ನಡೆ ನುಡಿ ಒಂದಾದವರು.

ಶ್ರೀಗಳವರು ತಮ್ಮ ಆಶ್ರಮ ಧರ್ಮವಾದ ಕಾಯಕ-ಜಿನ್ನಹ ಜಿಮುಗಡೆಗಳಲ್ಲಿ ಕಿಂಚಿತ್ತೂ ಬೇಸರ ಪಟ್ಟವರಲ್ಲ. ಜಿನ್ನಹ ಒಪ್ಪಿಸಿದ ಭಕ್ತರ ಪ್ರಾರ್ಥನೆಯನ್ನು ಮನ್ನಿಸಿ ದೂರದ ಹಳ್ಳಿಗಳಿಗೂ ಅನೇಕ ವೇಳೆ ಕಾಲು ನಡಿಗೆಯಲ್ಲೇ ಹೋಗಿ ಬರುತ್ತಿದ್ದರು. ದೇಹಕ್ಕೆ ಆಯಾಸವಾದರೂ ಅದನ್ನು ಮನದಲ್ಲಿ ಚಿಂತಿಸಿದವರಲ್ಲ. ಸಂತೋಷ ಚಿತ್ತರಾಗಿ ಪೂಜಾಕಾರ್ಯಗಳನ್ನು ಮುಗಿಸಿ, ಆಶೀರ್ವದಿಸಿ ಹಿಂತಿರುಗುತ್ತಿದ್ದವರು. ಅಂತಹ ಸಮಯದಲ್ಲಿ ಉರಿಬಿಸಿಲಾಗಲೀ ಮೋಡಮಳೆಯಾಗಲೀ ಅವರನ್ನು ತಡೆಯುತ್ತಿರಲಿಲ್ಲ, ದೈಹಿಕ ವಯೋಧರ್ಮವನ್ನು ಮೀರಿ ಕಾಯಕನಿರತರಾಗಿರುತ್ತಿದ್ದರು.

ಶ್ರೀಗಳು ಸರ್ವಸಮತಾಭಾವವುಳ್ಳವರು. ಶಾಂತಮಲ್ಲಸ್ವಾಮಿಗಳೆನ್ನುವಂತೆ

" ತನ್ನ ನಾಡು ತನ್ನ ದೇಶ
ತನ್ನ ಗ್ರಾಮ ತನ್ನ ಮನೆಯು
ತನ್ನ ಮಾತೆ ಜನಕ ಪುತ್ರ ಬಂಧುವರ್ಗವ
ಮುನ್ನ ಭ್ರಾಂತಿಯಿಂದ ಬಿಟ್ಟು
ತನ್ನ ಮನದೊಳವನು ನೋಳ್ಪ
ಭಿನ್ನ ಭಾವಿಗಳನು ನಗುವ ಪ್ರಭು ವಿರಕ್ತನು "

ತಾನು, ತನ್ನದು, ತನ್ನವರು ಎಂಬ ಅಭಿಮಾನವಿಲ್ಲದವರು. ಬಡವರು ಬಲ್ಲಿದರೆಂಬ ತಾರತಮ್ಯವನ್ನು ದೂರೀಕರಿಸಿದವರು. ದೀನದರಿದ್ರರಲ್ಲಿ ಕನಿಕರವುಳ್ಳವರು.

ಭೂತದಯಾ ಪಶ್ಚಾತ್ತಾಪ ಅವರ ಸಹಜಗುಣವಾಗಿತ್ತು. ಬಾಲ್ಯದಿಂದಲೂ ಅವರನ್ನು ಹೊಂದಿದ್ದ ಗುಣ.

"ಎಲ್ಲವನರಿದಲ್ಲಿ ಕಡೆಯಲ್ಲಿ ಕೊಲ್ಲಬೇಕೆಂಬುದೊಂದು ಭೇದವುಂಟೆ ?
ಶಾಸ್ತ್ರವನೆಲ್ಲ ಕಲಿತಲ್ಲಿ ಗೆಲ್ಲ ಸೋಲಕ್ಕೆ ಹೋರಬೇಕೆಂಬುದು
ಕಡೆಯಲ್ಲಿ ಒಂದು ಸೊಲ್ಲುಂಟೆ ? ಪುರಾಣವನೆಲ್ಲವ ನೋದಿದಲ್ಲಿ
ಸರ್ವಜೀವವ ಕೊಲ್ಲು ಕೊರೆ ಎಂಬುದೊಂದು ದಳ್ಳುರಿಯುಂಟೆ?
ಶೃತಿಯು ಕೇಳುವಲ್ಲಿ, ಸ್ಮೃತಿಯುಸಂಗೀಕರಿಸುವಲ್ಲಿ.
ಸರ್ವಹತವ ಮಾಡಬೇಕೆಂಬುದೊಂದು ಗತಿಯುಂಟೆ?
ಇಂತೀ ಆತ್ಮನಲ್ಲಿ ಸರ್ವಭೂತಹಿತವುಳ್ಳವಂಗೆ—ಆತ ಅತೀತ,
ಸ್ವಯಮಸ್ತ ದಸರೇಶ್ವರ ಲಿಂಗವು"

ಎಂದಿದ್ದಾರೆ ಶರಣ ದಸರಯ್ಯನವರು.

ಚಿಕ್ಕಮಕ್ಕಳಲ್ಲಿ ಸಹಜ ಪ್ರೇಮವುಳ್ಳವರಾಗಿ ಅವರನ್ನು ತುಂಬು ಹೃದಯದಿಂದ ಮಾತನಾಡಿಸಿ ತಿಂಡಿ ತಿನಿಸು ಹಣ್ಣು ಹಂಪಲನ್ನು ಕೊಟ್ಟು ಆಶೀರ್ವದಿಸುತ್ತಿದ್ದರು. ಸದಾ ಹರ್ಷಚಿತ್ತರಾಗಿ ಪ್ರಸನ್ನಮುಖಿಗಳಾಗಿ ದರ್ಶನಾರ್ಥಿಗಳನ್ನು ಮೃದುವಚನದಿಂದ ಆಶೀರ್ವದಿಸುತ್ತಿದ್ದರು. ಮಹಾಮಹಿಮರಿಗೆ ಸಹಜವಾದ ದೈವೀತೇಜಸ್ಸು—ಲಿಂಗ ಗುಣಗಳು ಆವರಲ್ಲಿದ್ದುದರಿಂದ, ಅವರ ದರ್ಶನಮಾತ್ರದಿಂದ ದರ್ಶನಾರ್ಥಿಗಳು ಪ್ರಭಾವಿತರಾಗುತ್ತಿದ್ದರು. ತಾನು ತನ್ನಂತೆ ಇರುವರಾದರೂ ಲೋಕಲೌಕಿಕರೊಡನೆ ವರ್ತಿಸುವಾಗ 'ಬೆಂದನುಲಿ'ಯಂತಿದ್ದರು. ಲೌಕಿಕ ವ್ಯವಹಾರಗಳ ತೊಡಕುಗಳನ್ನು ಬಗೆಹರಿಸಿಕೊಂಡು ಗುರುವಿನ ಆಶೀರ್ವಾದ ಬಯಸಿ ಬರುವವರ ಯೋಗಕ್ಷೇಮವನ್ನು ವಿಚಾರಿಸಿ, ಅವರ ಕಷ್ಟ ಸಂಕಷ್ಟಗಳಿಗೆ ಸೂಕ್ತ ಪರಿಹಾರವನ್ನು ಸೂಚಿಸುತ್ತಿದ್ದರು. ಕಟ್ಟಡ ಕಟ್ಟುವುದು, ಗೃಹಪ್ರವೇಶ, ಮದುವೆ ಮುಂಜಿ ಮುಂತಾದ ಶುಭಕಾರ್ಯ ಗಳಿಗೆ, ಕಷ್ಟಗಳ ಭಯನಿವಾರಣೆಗೆ ಶ್ರೀಗಳ ಪ್ರಸಾದವಾಣಿಯನ್ನು ಬಯಸಿ ಭಕ್ತಶ್ರೇಣಿ ಶ್ರೀಮಠಕ್ಕೆ ಬರುತ್ತಲೇ ಇದ್ದಿತು.

## ಪರಮ ದಾಸೋಹ ಮೂರ್ತಿ

ನಿರ್ವಾಣ ಶ್ರೀಗಳ ದಾಸೋಹಆಸಕ್ತಿ ಅಸದೃಶವಾದುದು. ದರ್ಶನಾರ್ಥಿಗಳು ಬಂದಕೂಡಲೇ "ಪ್ರಸಾದ ತೆಗೆದುಕೊಳ್ಳಿ, ನಡೆಯಿರಿ" ಎನ್ನುವುದೇ ಅವರ ಮೊದಲ ವಾಕ್ಯ. ದಾಸೋಹ ಅವರ ಹಿರಿಯ ಕಾಯಕ. ದಾಸೋಹದ ಮಹತ್ತ್ವವನ್ನು ಕುರಿತ ಮಹಾಶರಣರಾದ ಉರಿಲಿಂಗ ಪೆದ್ದಣ್ಣನವರ ವಚನವಿದು.

"ವೇದವನೋದಿ ಕೇಳಿ, ವೇದದ ಮರ್ಮವನರಿದ ಫಲ ದಾಸೋಹವಯ್ಯ.
ಶಾಸ್ತ್ರವನೋದಿ ಕೇಳಿ, ಶಾಸ್ತ್ರದ ಮರ್ಮವನರಿದ ಫಲ ದಾಸೋಹವಯ್ಯ.
ಆಗಮವನೋದಿ ಕೇಳಿ, ಆಗಮದ ಮರ್ಮವನರಿದ ಫಲ ದಾಸೋಹವಯ್ಯ.



ಲಿಂ. ಶ್ರೀ ಮಹಾಲಿಂಗಸ್ವಾಮಿಗಳವರ ಗದ್ದುಗೆ



ಲಿಂ. ಶ್ರೀ ಹುಚ್ಚಪ್ಪಸ್ವಾಮಿಗಳವರ ಗದ್ದುಗೆ



ಚಿಕ್ಕಮಠ



ಲಿಂಗೈಕ್ಯ ಶ್ರೀ ಶ್ರೀ ಮರುಳಸಿದ್ಧಸ್ವಾಮಿ
ಗಳವರ ಗದ್ದುಗೆ

ಪುರಾತನರ ವಚನವನೋದಿ ಕೇಳಿ, ಪ್ರಸಂಗಾನುಭವದಲ್ಲಿದ್ದು
ಅರಿದ ಫಲ ದಾಸೋಹವಯ್ಯಾ.
ವೇದ ಶಾಸ್ತ್ರ ಪುರಾಣಾಗಮಂಗಳ ಪುರಾತನರ
ವಚನಪ್ರಸಂಗವನರಿದು ದಾಸೋಹವಿಲ್ಲದಿರ್ದಡೆ.
ಆ ಓದು ಗಿಳಿಯೋದಿನಂತೆ, ಕೇಳುವೆ ಮರುಳನ ಕೇಳುವೆಯಂತೆ,
ಅವನೇತಕ್ಕೆ ಬಾತೆಯಯ್ಯಾ, ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ"

ಈ ಶರಣವಾಣಿ ವೀರಶೈವ ಸಂಪ್ರದಾಯದ ಸಹಜ ಸ್ಥಿತಿಯನ್ನು ತಿಳಿಸುತ್ತದೆ. ತಂಡೋಪತಂಡವಾಗಿ ಬರುತ್ತಿದ್ದ ಭಕ್ತಾದಿಗಳಿಗೆ ದೀನದರಿದ್ರರಿಗೆ ಪ್ರಸಾದ ನೀಡುವ ವ್ಯವಸ್ಥೆಯ ಬಗ್ಗೆ ಶ್ರೀಗಳು ವಿಶೇಷಾಸಕ್ತಿ ವಹಿಸಿದ್ದರು. ಅನೇಕ ವೇಳೆ ಭಿಕ್ಷುಕರೂ, ದೀನದರಿದ್ರರೂ ಶ್ರೀಗಳ ಹಸ್ತದಿಂದಲೇ ಪ್ರಸಾದ ಪಡೆಯುತ್ತಿದ್ದರು. ರಾತ್ರಿ ಅವೇಳೆಗಳಲ್ಲಿ, ಪರಿಚಾರಕರು ನಿದ್ರಿಸುತ್ತಿರುವಾಗ, ಅನಿರೀಕ್ಷಿತವಾಗಿ ಬಂದವರಿಗೆ ಸ್ವಲ್ಪವೂ ಗದ್ದಲವಿಲ್ಲದೆ ಎದ್ದು ಶ್ರೀಗಳು ಪ್ರಸಾದ ನೀಡುತ್ತಿದ್ದ ಸಂದರ್ಭಗಳೂ ಉಂಟು. ದಾಸೋಹದಲ್ಲಿ ಅವರು ಎಂದೂ ಬೇಸರ ಕಂಡವರಲ್ಲ.

## ಶಿವಾನುಭವದಲ್ಲಿ ವಿಶೇಷ ಆಸಕ್ತಿಯುಳ್ಳವರು

ದಿನಂಪ್ರತಿ ಪೂಜಾನಂತರದಲ್ಲಿ, ಬಿಡುವಿನ ಸಮಯಗಳಲ್ಲಿ ಶ್ರೀಗಳು ಧಾರ್ಮಿಕ ಗ್ರಂಥಗಳನ್ನು ಅವಲೋಕನ ಮಾಡುತ್ತಿದ್ದರು. ಮಹಾನುಭಾವರಾದ ಚನ್ನಬಸವೇಶ್ವರರ ಶಿವಾನುಭವಶಾಸ್ತ್ರ–ಕರಣಹಸಿಗೆ–ಮಿಶ್ರಾರ್ಪಣ–ಶರಣರ ಆಚರಣೆಯ ವಚನಗಳು, ಶಿವಪುರಾಣಗಳು, ಮಗ್ಗೆಯ ಮಾಯಿದೇವರ ಶತಕತ್ರಯ, ಶಾಂತಮಲ್ಲಸ್ವಾಮಿಗಳ "ಅನುಭವ ಮುದ್ರೆ"—ಈ ಗ್ರಂಥಗಳನ್ನು ಅವಲೋಕಿಸುವ ಪರಿಪಾಠವಿತ್ತು. ತಮ್ಮೆಡೆಗೆ ಬಂದ ತತ್ತ್ವಜಿಜ್ಞಾಸುಗಳಿಗೆ ನಿಜಗುಣ ಶಿವಯೋಗಿಗಳ ಷಟ್ಶಾಸ್ತ್ರಗಳು–ಮುಖ್ಯವಾಗಿ "ಕೈವಲ್ಯ ಪದ್ಧತಿ", ಸರ್ಪಭೂಷಣ ಶಿವಯೋಗಿಗಳ "ಕೈವಲ್ಯ ಕಲ್ಪವಲ್ಲರಿ", ಇವುಗಳಲ್ಲಿಯ ಹಾಡುಗಬ್ಬಗಳ ಬಸವಲಿಂಗ ಶರಣರ ಕೃತಿಗಳ ಮತ್ತು ಶಿವಾನುಭವ ಗೀತೆಗಳ ತಾತ್ತ್ವಿಕಾರ್ಥಗಳನ್ನು ವಿವೇಚಿಸುವುದರಲ್ಲಿ ಶ್ರೀಗಳವರಿಗೆ ಹೆಚ್ಚಿನ ಆಸಕ್ತಿ. ಇಂತಹ ತತ್ತ್ವಾರ್ಥ ವಿವೇಚನೆಯ ಒಂದು ಸಂದರ್ಭವನ್ನು ಉಲ್ಲೇಖಿಸುವುದು ಉಚಿತವಾಗಿದೆ.

ಒಮ್ಮೆ, ಶಿವಾನುಭವದಲ್ಲಿ ವಿಶೇಷ ಆಸಕ್ತಿಯುಳ್ಳ ಸಾಧಕರು ಕೆಲವರು ಶ್ರೀಗಳ ಸನ್ನಿಧಿಯಲ್ಲಿ ಕುಳಿತು ವಿಚಾರಮಗ್ನರಾಗಿದ್ದರು. ಮಹನ್ಮೌನಿಗಳಾಗಿ ಲಿಂಗಾನಂದದಲ್ಲಿ ಶ್ರೀಗಳು :

"ಶಿವನಲ್ಲದವನಿಗೆ ಶಿವಸೇವೆ ಘಟಿಸದು
ಶಿವನಿಗೆ ಶಿವಸೇವೆ ಘಟಿಸುಗು

ಶಿವಲಿಂಗವ ಕರದೊಳು ತಾಳಿದಾತನು
ಶಿವನೆಂದು ಶಿವಶಾಸ್ತ್ರ ಹೇಳಿತ್ತು."

"ಶಿವನಿಗೆ ತಾನನ್ಯನಲ್ಲೆಂದು ಲಿಂಗವ
ಶಿವಭಕ್ತನು ಪೂಜಿಸಲಾಗಿ
ಶಿವನೆ ತಾನೆನಿಸುತ್ತ ಪ್ರಮಥ ಕವಳಿಗೆಯೊ
ಳವಿರತವಿರುಹ ಪ್ರಭುರಾಯ"

"ಕಳೆ ಬಲಿದೊನ್ನನು ರಕ್ಷಿಸಬೇಕೆಂದು
ಇಳಿದು ಬಂದು ಪಾಣಿ ತಳದಲ್ಲಿ
ನೆಲೆಸಿತ್ತು ಇಷ್ಟಲಿಂಗಾಕಾರದೊಳೆಂದು
ತಿಳಿದು ಲಿಂಗವ ಪೂಜಿಸಬೇಕು"

"ನಿನಗೆ ನಾನನ್ಯನೆ ಎನಗೆ ನೀನನ್ಯನೆ
ನಿನಗೆ ಎನಗೆ ಏಕತೆಯುಂಟು.
ನಿನಗಾನು ಕಾಯವು ಎನಗೆ ನೀನು ಜೀವವು
ಎನುತೆನ್ನ ಗುರುವು ಪೇಳಿದ ಬೋಧೆ"

ಅನುಭವ ಮುದ್ರೆಯ ಈ ವಚನಾನುಭವವನ್ನು ತಿಳಿಸುತ್ತಿದ್ದ ಪ್ರಸಂಗ ಲಿಂಗಾನುಭಾವಿಗಳ ಹೃನ್ಮಂದಿರವನ್ನು ದೈದೀಪ್ಯಗೊಳಿಸುತ್ತಿತ್ತು.

ಶ್ರೀಗಳವರನ್ನು ಅನೇಕ ದೂರದ ಗ್ರಾಮಗಳ ಭಕ್ತಮಂಡಲಿಯವರು ಆಗಾಗ್ಗೆ ಬಿನ್ನಹಮಾಡಿ, ತಮ್ಮ ಗ್ರಾಮಗಳಿಗೆ ಬಿಜಯಮಾಡಿಸಿ, ಪೂಜೋಪಚಾರ ಹೂವಿನ ಪಲ್ಲಕ್ಕಿ ಉತ್ಸವಗಳನ್ನು ನಡೆಸುತ್ತಿದ್ದರು. ಆ ಸಂದರ್ಭಗಳಲ್ಲಿ ಸಾವಿರಾರು ಮಂದಿ ಭಕ್ತಾದಿಗಳು ದರ್ಶನಭಾಗಿಗಳಾಗುತ್ತಿದ್ದರು. ಶಿವಾನುಭವ ಗೋಷ್ಠಿಗಳು ಶ್ರೀಗಳ ದಿವ್ಯ ಅಧ್ಯಕ್ಷತೆಯಲ್ಲಿ ನಡೆಸಲ್ಪಡುತ್ತಿದ್ದವು. ಅನೇಕ ವಿದ್ವಾಂಸರ ಮತ್ತು ಅನುಭಾವಿಗಳ ಉಪನ್ಯಾಸಗಳು ನಡೆಯುತ್ತಿದ್ದವು. ಉತ್ಸವ ರಾತ್ರಿ ಬೆಳಗಿನವರೆಗೆ ನಡೆಯುತ್ತಿದ್ದರೂ ಶ್ರೀಗಳು ಪ್ರಸನ್ನಚಿತ್ತರಾಗಿಯೇ ಇರುತ್ತಿದ್ದರು. ಮುಪ್ಪಿನ ದೇಹವಿಕಾರಗಳು ಅವರಿಂದ ದೂರವಾಗಿದ್ದವು. ಸದಾ ಲಿಂಗಭೋಗೋಪಭೋಗಿಗಳಾಗಿ ಪ್ರಸನ್ನತೆಯಿಂದಿರುತ್ತಿದ್ದರು. ಅವರ ಮುಗ್ಧ ಮೌನ ತುಂಬು ಹೃದಯದ ವ್ಯಕ್ತಿತ್ವ ಮಹತ್ತ್ವ ಪೂರಿತವಾಗಿರುತ್ತಿತ್ತು.

ಆಗಾಗ್ಗೆ ನಾಡಿನ ಅನೇಕ ಕಡೆಗಳಿಂದ ಗಣ್ಯವ್ಯಕ್ತಿಗಳೂ ಸರ್ಕಾರೀ ಉನ್ನತಾಧಿಕಾರಿಗಳೂ ಸಚಿವರೂ ಶ್ರೀಗಳ ದರ್ಶನಾರ್ಥವಾಗಿ ಬರುತ್ತಿದ್ದರು. ದಿ. ೨-೬-೧೯೫೨ ರಂದು ಮೈಸೂರು ಸಂಸ್ಥಾನದ ಮಹಾರಾಜರಾದ ಶ್ರೀ ಜಯಚಾಮರಾಜ ಒಡೆಯರು ದೇಗುಲ ಮಠಕ್ಕೆ ಆಗಮಿಸಿ, ಶ್ರೀಗಳವರ ದರ್ಶನಾಶೀರ್ವಾದವನ್ನು ಪಡೆದ



೧೯೫೨ ರಲ್ಲಿ ಶ್ರೀ ದೇಗುಲ ಮಠದಲ್ಲಿ ಶ್ರೀ ಶ್ರೀ ನಿರ್ವಾಣ ಸ್ವಾಮಿಗಳವರನ್ನು
ಮೈಸೂರು ಶ್ರೀ ಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರು
ಸಂದರ್ಶಿಸಿದುದು



ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಪುಸ್ತಕ ಭಂಡಾರ ಭವನದ ಶಂಕುಸ್ಥಾಪನೆ
ಸಂದರ್ಭದಲ್ಲಿ ಲಿಂ. ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳವರಿಗೆ
ಭಿನ್ನವತ್ತಳೆಯನ್ನು ಅರ್ಪಿಸುತ್ತಿರುವುದು



ವಿದ್ಯಾರ್ಥಿಗಳಿಗೆ ಪ್ರಸಾದ ವಿನಿಯೋಗದ ಒಂದುದೃಶ್ಯ
ಶ್ರೀ ದೇಗುಲಮಠ

ರಳ್ಳಿದೆ. ಶ್ರೀಗಳವರ ವ್ಯಕ್ತಿತ್ವವನ್ನು ಶ್ಲಾಘಿಸಿದರು. ಚಿತ್ರದುರ್ಗದ ಶ್ರೀ ಶೂನ್ಯಸಿಂಹಾಸನಾಧೀಶ್ವರರಾದ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳು ಶ್ರೀಮಠಕ್ಕೆ ದಯಮಾಡಿಸಿ, ಶ್ರೀಗಳಿಗೂ ಭಕ್ತಾದಿಗಳಿಗೆ ದರ್ಶನಾಶೀರ್ವಾದವಿತ್ತು, ಇಲ್ಲಿನ ದಾಸೋಹ ಕಾರ್ಯಗಳನ್ನೂ ಶ್ರೀಗಳ ವ್ಯಕ್ತಿತ್ವವನ್ನೂ ಪ್ರಶಂಸಿಸಿದರು.

ಭಾರತದ ಶ್ರೇಷ್ಠ ದಾರ್ಶನಿಕರೂ, ಪಂಡಿತೋತ್ತಮರೂ, ಪರಮ ವೈರಾಗ್ಯಮೂರ್ತಿಗಳೂ, ಮಹಾ ಶಿವಯೋಗಿಗಳೂ ಆಗಿದ್ದ ಮೈಸೂರು ಅರಮನೆ ಪಂಚಗವಿ ಮಠಾಧ್ಯಕ್ಷರಾದ ಶ್ರೀ ಶ್ರೀ ಗೌರೀಶಂಕರ ಮಹಾಸ್ವಾಮಿಗಳು ಶ್ರೀಗಳವರಲ್ಲಿ ಅನನ್ಯ ಪೂಜ್ಯಭಾವವುಳ್ಳವರಾಗಿದ್ದವರಾದ್ದರಿಂದ ಶ್ರೀಗಳ ದರ್ಶನಾರ್ಥವಾಗಿ ಹಲವಾರು ವೇಳೆ ಶ್ರೀಮಠಕ್ಕೆ ದಯಮಾಡಿಸಿದರು. ಶ್ರೀಗಳ ಮಹತ್ತ್ವವನ್ನರಿತ ಅವರು "ಉತ್ತರ ಕರ್ನಾಟಕದಲ್ಲಿ ಮುರಗೋಡ ಶ್ರೀ ಮಹಾಂತ ಶಿವಯೋಗಿಗಳೂ ದಕ್ಷಿಣ ಕರ್ನಾಟಕದಲ್ಲಿ ಕನಕಪುರ ದೇಗುಲ ಮಠದ ಶ್ರೀ ನಿರ್ವಾಣ ಶಿವಯೋಗಿಗಳೂ ಅಪೂರ್ವ ವ್ಯಕ್ತಿತ್ತ್ವವುಳ್ಳ ಜೀವಂತರಾಗಿರುವ ಮಹಾ ಶಿವಯೋಗಿಗಳು" ಎಂದು ಅನೇಕ ಸಂದರ್ಭಗಳಲ್ಲಿ ಹೇಳಿದ್ದುಂಟು. ಅಖಿಲ ಭಾರತ ವೀರಶೈವ ಮಹಾಸಭಾಧ್ಯಕ್ಷರಾಗಿದ್ದು, ಪರಮ ದಾಸೋಹ ಮೂರ್ತಿಗಳೂ, ವೀರವೈರಾಗ್ಯ ಸಂಪನ್ನರೂ ಶಿವಯೋಗ ಸಿದ್ಧರೂ ಶ್ರೀ ಸಿದ್ಧಗಂಗಾ ಕ್ಷೇತ್ರಾಧೀಶರೂ ಆದ ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು ಹಲವಾರು ವೇಳೆ ಶ್ರೀಮಠಕ್ಕೆ ಆಗಮಿಸಿ ಶ್ರೀಗಳವರ ದರ್ಶನಭಾಗಿಗಳಾಗಿದ್ದಾರೆ. ಶ್ರೀಗಳವರ ಪುಣ್ಯದರ್ಶನವೇ ಹೃದಯಸ್ಪರ್ಶಿ ಆಶೀರ್ವಚನವೆನ್ನುವಂತಿತ್ತು. ಅಲ್ಲದೆ, ಶ್ರೀಗಳವರು ಅನೇಕ ಮಠಾಧೀಶರಿಗೆ ಆಯಾಯಾ ಮಠದ ಆಶ್ರಮಾಧಿಕಾರವನ್ನು ವಹಿಸಿಕೊಟ್ಟು ಬ್ರಹ್ಮೋಪದೇಶವನ್ನಿತ್ತು ಕೃತಾರ್ಥರನ್ನಾಗಿ ಮಾಡಿದ್ದಾರೆ.

ಹೀಗೆ ಶಿವಯೋಗ ನಿಷ್ಠೆ, ವೀರವೈರಾಗ್ಯ ವೃತ್ತಿ, ಸರಳ ಸಹಜ ಭಾವದಿಂದ ಕೂಡಿದ ಮುಗ್ಧತೆ, ಲಿಂಗಾನಂದ, ದಾಸೋಹಭಾವ ಮತ್ತು ಶರಣರ ಚರಣಗಳಿಂದ ವಿಶಿಷ್ಟ ಮಹತ್ವವನ್ನು ಗಳಿಸಿದ ಶ್ರೀ ಇಮ್ಮಡಿ ನಿರ್ವಾಣಸ್ವಾಮಿಗಳು ಮಹೋನ್ನತ ಸ್ಥಾನವನ್ನು ಪಡೆದಿದ್ದಾರೆ.

ಶ್ರೀಗಳವರು ತಮ್ಮ ೧೦೩ ವರ್ಷಗಳ ತುಂಬು ಜೀವನವನ್ನು ನಡೆಸಿ, ದಿನಾಂಕ ೨೦-೧೧-೧೯೭೬ ಭಾನುವಾರ ಸಂಜೆ ೬.೪೫ ಘಂಟೆ ಸಮಯದಲ್ಲಿ ಶ್ರೀಮಠದಲ್ಲಿ ಲಿಂಗದೊಳಗಾದರು. ಆ ಬೆಳಕು ಮಹಾ ಬೆಳಗಿನೊಳಗಡಗಿತು. ಶ್ರೀಗಳವರ ದಿವ್ಯ ತೇಜೋಮೂರ್ತಿ **'ದೇಗುಲದ ಜ್ಯೋತಿ'** ಯಾಗಿ ಲಿಂಗಾಂಗ ಸಂಗ ಸುಖಿಗಳ ಹೃನ್ಮಂದಿರದಲ್ಲಿ ಸದಾ ಬೆಳಗುತ್ತಿರುವುದು.

ಶ್ರೀಗಳ ಅವಸಾನ ಸಮಯದಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರಾಧೀಶರಾದ ಶ್ರೀಶ್ರೀ ಶಿವಕುಮಾರಸ್ವಾಮಿಗಳೂ, ಕಿರಿಯಸ್ವಾಮಿಗಳಾದ ಚರಮೂರ್ತಿ ಶ್ರೀ ಶ್ರೀ ಮಹಾಲಿಂಗಸ್ವಾಮಿಗಳೂ, ಕಂಚುಕಲ್ ಬಂಡೇಮಠದ ಚರಮೂರ್ತಿ ಶ್ರೀ ಶ್ರೀ ಶಿವರುದ್ರಸ್ವಾಮಿಗಳೂ ಮರಳೆಗವೀಮಠದ ಚರಮೂರ್ತಿ ಶ್ರೀ ಶಿವರುದ್ರಸ್ವಾಮಿಗಳೂ ಇನ್ನೂ ಹಲವಾರು ಮಠಾಧೀಶರೂ ಶ್ರೀಗಳ ಬಳಿ ಇದ್ದರು. ಶಿವಪಂಚಾಕ್ಷರಿ ಮಂತ್ರ ಭಜನೆಯ ಧ್ವನಿ ಮಠದ ಆವರಣವನ್ನೆಲ್ಲಾ ತುಂಬಿತ್ತು. ಶ್ರೀನಿರ್ವಾಣಸ್ವಾಮಿಗಳು ಲಿಂಗೈಕ್ಯರಾದರೆಂಬ ಸುದ್ದಿ ಎಲ್ಲೆಡೆಯೂ ಹಬ್ಬಿತ್ತು. ಭಕ್ತಸಮೂಹ ತಂಡೋಪತಂಡವಾಗಿ ದೇಗುಲದೆಡೆಗೆ ಧಾವಿಸಿತು. ನೂರಾರು ಮಂದಿಹರಗುರು ಚರಮೂರ್ತಿಗಳೂ, ಸಾವಿರಾರು ಮಂದಿ ಗಣ್ಯರೂ, ವಿದ್ವಾಂಸರೂ,ಭಕ್ತಾದಿಗಳೂ ಅಂತ್ಯದರ್ಶನ ಪಡೆದರು. ದಿ. ೬–೧೧–೧೯೭೨ ಸೋಮವಾರಶ್ರೀಮಠದಲ್ಲಿ ಸಾಂಪ್ರದಾಯಿಕ ಸಮಾಧಿ ಕಾರ್ಯಗಳು ವಿಧ್ಯುಕ್ತವಾಗಿ ನಡೆದವು.

ದಿ. ೧೧–೨–೧೯೭೨ ರಂದು ನಡೆದ ಲಿಂಗೈಕ್ಯ ನಿರ್ವಾಣಸ್ವಾಮಿಗಳ ಪ್ರಥಮ ಗಣಾರಾಧನೆಯಲ್ಲಿ ನೂರಾರು ಮಂದಿ ಹರಗುರು ಚರಮೂರ್ತಿಗಳು ನೆರೆದಿದ್ದರು. ಲಕ್ಷಾಂತರ ಭಕ್ತರ ಸಮೂಹವು ಸೇರಿತ್ತು. ಆ ಹಿಂದಿನ ರಾತ್ರಿಯೆಲ್ಲಾ ಶಿವಕೀರ್ತನೆ ಭಜನೆ, ಧಾರ್ಮಿಕ ಪ್ರವಚನಗಳು ನಡೆದವು. ಗದ್ದುಗೆಗೆ ರುದ್ರಾಭಿಷೇಕ, ಜಂಗಮ ಪಾದಪೂಜೆ, ಲಕ್ಷಾಂತರ ಮಂದಿಗೆ ಪ್ರಸಾದ ಸಂತರ್ಪಣೆ ನಡೆದವು. ಆ ಬಳಿಕ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ದಿವ್ಯ ಅಧ್ಯಕ್ಷತೆಯಲ್ಲಿ ಶಿವಾನುಭವದ ಬೃಹತ್ಸಭೆ ನಡೆಯಿತು. ಅನೇಕ ಮಂದಿ ಹರಗುರು ಚರಮೂರ್ತಿಗಳೂ, ವಿದ್ವಾಂಸರೂ ಲಿಂಗೈಕ್ಯ ಶ್ರೀಗಳವರ ವಿಶಿಷ್ಟ ವ್ಯಕ್ತಿತ್ವವನ್ನು ಕುರಿತು ಭಾಷಣ ಮಾಡಿದರು. ಅಂದಿನ ಸಂದರ್ಭ 'ನಭೂತೋ ನಭವಿಷ್ಯತಿ' ಎನ್ನುವಂತಿತ್ತು.

ಲಿಂಗೈಕ್ಯ ಇಮ್ಮಡಿ ನಿರ್ವಾಣ ಸ್ವಾಮಿಗಳವರಲ್ಲಿದ್ದ ಲಿಂಗಪೂಜಾಸಕ್ತಿ ಶಿವಯೋಗ ನಿಷ್ಠೆ, ದಾಸೋಹಂಭಾವ ವೀರವೈರಾಗ್ಯ ಮತ್ತು ತ್ಯಾಗಗುಣಗಳು ಅವರ ನೆಚ್ಚಿನ ಶಿಷ್ಯರಾದ ಶ್ರೀ ಶ್ರೀ ಚರಮೂರ್ತಿ ಮಹಾಲಿಂಗಸ್ವಾಮಿಗಳವರಲ್ಲಿ ಬೆಳೆದು ಬಂದಿವೆ. ಶ್ರೀಗಳವರು ತಮ್ಮ ಪವಿತ್ರ ಗುರು ಪರಂಪರೆಗೆ ಸಹಜವಾದ ಆಧ್ಯಾತ್ಮಿಕ ದಿವ್ಯ ತೇಜಸ್ಸನ್ನು ಪಡೆದವರಾಗಿದ್ದಾರೆ. ಶ್ರೀ ಸಿದ್ಧಲಿಂಗೇಶ್ವರರ ತಪೋಭೂಮಿ ಶ್ರೀ ಸಿದ್ಧಗಂಗಾ ಕ್ಷೇತ್ರದ ಹಿಂದಿನ ಶ್ರೀಗಳೂ ಮಹಾ ತಪಸ್ವಿಗಳೂ ಆಗಿದ್ದ ಶ್ರೀ ಉದ್ಧಾನ ಶಿವಯೋಗಿಗಳವರಲ್ಲಿ ಬಾಲ್ಯದಿಂದಲೂ ಸೇವೆ ಸಲ್ಲಿಸಿ, ಅವರ ಪೂರ್ಣ ಕೃಪಾಶೀರ್ವಾದವನ್ನು ಪಡೆದವರು. ಶ್ರೀಗಳವರು ಲಿಂಗೈಕ್ಯ ಶ್ರೀಗಳಿಂದ ಚರಪಟ್ಟಾಧಿಕಾರವನ್ನು ಸ್ವೀಕರಿಸಿ, ಗುರುಸೇವೆಯನ್ನು ಅವ್ಯಾಹತವಾಗಿ ನಡೆಸುತ್ತ ಬಂದು ಇಂದಿಗೆ ೫೭ ವರ್ಷಗಳು ಸಂದಿವೆ. ಗುರುವಿನ ಆಶೀರ್ವಾದ ಬಲದಿಂದುಂಟಾದ ಅಪಾರ ತತ್ಪರತೆ ಪ್ರಭಾವಗಳಿಂದ ಶ್ರೀಮಠದ ಕಾರ್ಯವ್ಯಾಪ್ತಿ ವಿಪುಲವಾಗಿ

ಬೆಳೆದು ಬಂದಿದೆ. ಶ್ರೀಮಠದ ಬಿಡುವಿಲ್ಲದ ಬಿನ್ನಹಬಿಡುಗಡೆ, ವ್ಯವಸಾಯ ಕ್ಷೇತ್ರದ ಆದರ್ಶ ವ್ಯವಸ್ಥೆ, ಆಗಂತುಕವಾಗಿ ಸಂಭವಿಸುವ ಸಾಮಾಜಿಕ ಸಮಸ್ಯೆಗಳ ಪರಿಹಾರ ಮತ್ತು ಅವ್ಯಾಹತ ದಾಸೋಹ ಕಾರ್ಯಗಳು ಶ್ರೀಗಳವರ ಪ್ರಾಜ್ಞ ನಿಷ್ಠೆಯ ಪ್ರತೀಕಗಳು. ಗುರುಗಳ ಅಪ್ಪಣೆಯಂತೆ ಸ್ಥಾಪಿಸಿದ ಶ್ರೀ ನಿರ್ವಾಣಸ್ವಾಮಿ ಕೃಪಾ ವಿದ್ಯಾಪೀಠದ ಆಶ್ರಯದಲ್ಲಿ ಶ್ರೀ ದೇಗುಲಮಠದಲ್ಲಿ ಒಂದು ಪ್ರೌಢಶಾಲೆ. ಸಂಸ್ಕೃತ ಪಾಠಶಾಲೆ, ವೇದಪಾಠಶಾಲೆ, ಮತ್ತು ಹಿರಿಯ ಪ್ರಾಥಮಿಕ ಶಾಲೆಗಳು ಉತ್ತಮ ರೀತಿಯಲ್ಲಿ ನಡೆಸಲ್ಪಡುತ್ತಿವೆ. ಶ್ರೀಮಠದ ಉಚಿತ ಪ್ರಸಾದ ನಿಲಯದಲ್ಲಿ ಆರುನೂರು ಮಂದಿ ಎಲ್ಲಾ ಕೋಮಿನ ವಿದ್ಯಾರ್ಥಿಗಳಿಗೆ ಪ್ರಸಾದ ಮತ್ತು ವಸತಿ ಸೌಕರ್ಯವಿದೆ. ಈ ಸಂಸ್ಥೆಗಳಿಗಾಗಿ ಸುಭದ್ರ ಭವ್ಯ ಕಟ್ಟಡಗಳು ನಿರ್ಮಿಸಲ್ಪಟ್ಟಿವೆ. ಇವುಗಳಲ್ಲದೆ, ಈ ವಿದ್ಯಾಪೀಠದ ಆಶ್ರಯದಲ್ಲಿ ಮಳವಳ್ಳಿ ತಾಲ್ಲೂಕು ಹಲಸಹಳ್ಳಿ ಮತ್ತು ಮಾಗಡಿ ತಾಲ್ಲೂಕು ವೀರೇಗೌಡನ ದೊಡ್ಡಿಗಳಲ್ಲಿ ಪ್ರೌಢಶಾಲೆಗಳು ಸ್ಥಾಪಿತವಾಗಿ ಉತ್ತಮ ರೀತಿಯ ಶಿಕ್ಷಣವೀಯುತ್ತಿವೆ. ಈ ಎಲ್ಲಾ ಸಂಸ್ಥೆಗಳ ಮೇಲ್ವಿಚಾರಣೆಯೂ ಶ್ರೀಗಳವರಿಗೆ ಸೇರಿದುದಾಗಿದೆ.

ದಿನಂಪ್ರತಿ ನೂರಾರು ಮಂದಿ ಪ್ರವಾಸಿಗರಿಗೂ ಬಡಬಗ್ಗರಿಗೂ ಪ್ರಸಾದ ವಿನಿಯೋಗವಾಗುತ್ತಿರುವುದಂತೂ ಹಿಂದಿನಂತೆಯೇ ಮುಂದುವರಿಯುತ್ತಿದೆ. ಸ್ಥಳೀಯ ಜಾತ್ರೆಕಾಲಗಳಲ್ಲಿಯೂ ವಿಶೇಷ ಕಾರ್ಯಗಳಲ್ಲಿಯೂ ಹತ್ತಾರು ಸಾವಿರ ಮಂದಿಗೆ ಪ್ರಸಾದ ವ್ಯವಸ್ಥೆಯಾಗುತ್ತಿದೆ. ಶ್ರೀಮಠದಲ್ಲಿ ಆಗಾಗ್ಗೆ ಧಾರ್ಮಿಕ ಸಭೆಗಳೂ, ಕೀರ್ತನೆ, ಉಪನ್ಯಾಸಗಳೂ, ಪ್ರತಿ ವಾರವೂ ಶಿವಾನುಭವ ಗೋಷ್ಠಿಯೂ ನಡೆಸಲ್ಪಡುತ್ತಿವೆ.

---

ನಿರುಪಮ ನಿರಾಳನು ನೋಡಾ ಲಿಂಗೈಕ್ಯನು
ನಿಸ್ಸೀಮ ನಿರ್ಜಡನು ನೋಡಾ ಲಿಂಗೈಕ್ಯನು
ನಿಃಕಳಂಕ ನಿಶ್ಶಬ್ದನು ನೋಡಾ ಲಿಂಗೈಕ್ಯನು
ನಿರಾವರಣ ನಿರಂಜನನು ನೋಡಾ-
ಅಖಂಡೇಶ್ವರಾ, ನಿಮ್ಮ ನಿಜಲಿಂಗೈಕ್ಯನು

# ಲಿಂ. ಶ್ರೀ. ನಿ. ಪ್ರ. ಶ್ರೀ ನಿರ್ವಾಣಸ್ವಾಮಿಗಳು
## ಇವರ ಬಹುಮುಖ ಸತ್ಸಂಪ್ರದಾಯಗಳು

---

● **ಡಾ॥ ಜಿ. ಮರುಳಸಿದ್ಧಯ್ಯ,** ಎಂ. ಎ., ಪಿ.ಹೆಚ್‌ಡಿ.
ಪ್ರಾಧ್ಯಾಪಕರು, ಸಂಸ್ಕೃತ ವಿಭಾಗ ಮತ್ತು
ಡೈರೆಕ್ಟರು ಪ್ರಾಚ್ಯ ವಿದ್ಯಾಸಂಶೋಧನಾಲಯ,
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಮಠ ಮತ್ತು ಮಠಾಧಿಪತಿ ಈ ಶಬ್ದಗಳ ಅರ್ಥ ಕಾಲಕಾಲಕ್ಕೂ ಬಣ್ಣ ಬದಲಾಯಿಸುತ್ತಾ ಬಂದಿವೆ. 'ಮಠಃ ಛಾತ್ರಾದಿ ನಿಲಯಃ' ಅಂದರೆ ಒಳ್ಳೆ ಗುರು ಶಿಷ್ಯಾದಿಗಳು ಸದ್ಧರ್ಮ ಸತ್ಸಂಪ್ರದಾಯಗಳನ್ನು ಅಳಿಯದುಳಿಸಿಕೊಂಡು ಹೋಗಬೇಕೆಂದು ತ್ಯಾಗಿಗಳು ಯೋಗಿಗಳು ಸ್ಥಾಪಿಸಿದ ಧರ್ಮ ಸಂಸ್ಥೆಗಳು ಮಠಗಳು ಇವು ಬಸವಾದಿ ಪುರಾತನರ ಕಾಲದಿಂದ ನಡೆದು ಬಂದಿವೆ. ಈ ಸಮಯ-ಸಂಪ್ರದಾಯಗಳಲ್ಲಿ ಅಂತರಂಗ-ಬಹಿರಂಗ ಶುದ್ಧಿಯಿರುವತನಕ ಮಠಗಳು ಬಹುಮುಖ್ಯ ಪಾತ್ರ ವಹಿಸಿ ವೀರಶೈವವನ್ನು ಕಾಪಾಡಿದವು. ಅವಕ್ಕೂ ರಾಜಕೀಯ ಪಿಡುಗು ಬಡಿದ ಈ ಮಠಗಳ ಮಹಾತ್ಮೆ ವೈವಿಧ್ಯದಲ್ಲಿದೆ. ಅಂತೆಯೇ, ಕನಕಪುರದ ದೇಗುಲಮಠ ಪುರಾತನ ಮಠ (ಕ್ರಿ.ಶ.ಸು.೧೪೦೦). ಅಲ್ಲಿ ಶ್ರೀ ನಿರ್ವಾಣ ಸ್ವಾಮಿಗಳು ಕ್ರಿ. ಶ. ಸು. ೧೯೦೩ ರಿಂದ ಶ್ರೀಮಠವ ಅಧಿಕಾರ ವಹಿಸಿಕೊಂಡು ಈ ಸಂಸ್ಥೆಯನ್ನು ತಮ್ಮದೇ ವೈಶಿಷ್ಟ್ಯದಿಂದ ನಡೆಸಿಕೊಂಡು ಬಂದರು. ಶ್ರೀಗಳವರು ಲಿಂಗೈಕ್ಯರಾದದ್ದು ದಿ. ೩೦-೧-೧೯೭೨.

ಮಠದಿಂದ ಸ್ವಾಮಿಗಳೋ ? ಸ್ವಾಮಿಗಳಿಂದ ಮಠವೋ ? ಈ ಪ್ರಶ್ನೆಗೆ ಉತ್ತರ ಇನ್ನೂ ಬಹುಕಾಲ ಎರಡು ವಿಧವಾಗಿಯೇ ಇರುತ್ತದೆ.

ಶ್ರೀ ನಿ॥ ಪ್ರ॥ ಮಹಾಲಿಂಗಸ್ವಾಮಿಗಳು ಈ ಸಂಸ್ಥೆಯ ಪುರೋಭಿವೃದ್ಧಿಗೆ ಕಾರಣರಾಗಿರುವರು. ಅದರ ಹಿನ್ನೆಲೆಯಲ್ಲಿ ಲಿಂ॥ ಶ್ರೀ ನಿ॥ ಪ್ರ॥ ನಿರ್ವಾಣಸ್ವಾಮಿಗಳ ವ್ಯಕ್ತಿತ್ವ, ಪ್ರೇರಕ-ತಾರಕಶಕ್ತಿ. ಅದು ಒಡೆದು ಕಾಣದಿದ್ದರೂ ರೂಢಮೂಲವಾಗಿ ಅಡಗಿದೆ. ಎಲ್ಲ ಸ್ವಾಮಿಗಳಂತಲ್ಲ ಲಿಂಗೈಕ್ಯ ಶ್ರೀಗಳ ಕಾಯಕ. ಸತ್ಯ ಶುದ್ಧ ಸಾತ್ವಿಕಕಾಯಕ ಅವರದು. ಸಾಕಾರಸತ್ವ, ಸಾತ್ವಿಕವೇ ಸಾಕಾರಮೂರ್ತಿಯಾಗಿ ರೂಪುತಾಳಿದಂತೆ ಅವರು ದೇಗುಲಮಠವನ್ನು ನಿಜವಾದ ದೇಗುಲ ಮಾಡಿದರು. ಅಚ್ಛ ಸ್ವಚ್ಛ ತ್ರಿಕರಣ ಶುದ್ಧಿ, ಎನಗಿಂತ ಕಿರಿಯರಿಲ್ಲವೆಂಬ ಹಿರಿತನದ ಪ್ರಜ್ಞೆ,

ನಿರಾಡಂಬರ ಪ್ರವೃತ್ತಿ ಮೈಯುಂಡ ವಿರಕ್ತಿ, ಸರ್ವರಲಿ ಸಮಭಾವ, ಲಿಂಗನಿಷ್ಠೆ, ಸೇವಾಮನೋಭಾವ, ಸರಸ ಸಂಭಾಷಣೆ, ಗಂಡು–ಹೆಣ್ಣು ಭಕ್ತ ಸಮೂಹದಲ್ಲಿ ಪಕ್ವಬುದ್ಧಿ, ಯಾರೇ ಬರಲಿ–ಗುರುತಿರಲಿ–ಗುರುತಿಲ್ಲದಿರಲಿ, 'ಏನು ಬಂದಿರಿ', 'ಊಟ ಮಾಡಿರಿ' ಈ ಪಂಚಾಕ್ಷರೀ ಪಠಣ ಅವರದು. ಎಲ್ಲಕ್ಕೂ ಮಿಗಿಲಾಗಿ ಅವರದೇ ಆದ ಅಕೃತ್ರಿಮ ನಗುಮುಖ. ಮಾನುಷ ಅಪರಿಪಕ್ವತೆಯೆಲ್ಲಾ ಶ್ರೀ ನಿರ್ವಾಣ ಸ್ವಾಮಿಗಳಲ್ಲಿ ನಿರ್ವಾಣ (ನಾಶ) ವಾಗಿ ಕೇವಲ ಶರಣ ಸಂಪ್ರದಾಯಗಳೇ ಬೆಳೆಯುತ್ತಿದ್ದವು. ಇಂಥ ವಿಚಿತ್ರ ಸಂಪ್ರದಾಯದ ವಿಶಿಷ್ಟ ಮೂರ್ತಿಯನ್ನು ನಾನು ನೋಡಿಲ್ಲ! ನೋಡಲಾರೆ!

**ಮೊದಲ ನೋಟ :** ಶ್ರೀಗಳ ಪರಿಚಯವಿಲ್ಲದವರು ಅವರನ್ನು ಮೊಟ್ಟ ಮೊದಲು ಕಂಡಾಗ ಅವರು ಯಾವ ಅಧಿಕಾರ, ಬೂಟಾಟಿಕೆ, ದರ್ಪ, ಜೋರು ಇತ್ಯಾದಿಗಳೊಂದೂ ಇಲ್ಲದ್ದರಿಂದ 'ಯಾವೂರು? ಏನು ಬಂದಿರೆ'ಂದಾಗ ಯಾರು ಈ ಕಂತೆ ಅಯ್ಯನವರು ಎನ್ನುವಷ್ಟು ಸರಳಸ್ವರೂಪ ಸ್ವಭಾವದವರವರು. ಬಹುಮಾನಕ್ಕೆ ಬೆರಗಾಗಿ ಅವಮಾನಕ್ಕೆ ಪಕ್ಕಾಗತಕ್ಕ ಸ್ವಭಾವವೇ ಇಲ್ಲ. ಒಮ್ಮೊಮ್ಮೆ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಅವರು ಉತ್ಸವಾದಿಕಾಲದಲ್ಲಿ ಬಂದಾಗ ಜನರು ಗಲಾಟೆಯಲ್ಲಿ ಇವರನ್ನು ಒತ್ತಟ್ಟಿಗೆ ಪ್ರತ್ಯೇಕಿಸಿದಾಗ ಶುದ್ಧ ಶ್ರಮಣರಂತೆ ನಕ್ಕು ಸುಮ್ಮನಿರುತ್ತಿದ್ದರಲ್ಲದೆ, ನಾನು ಸ್ವಾಮಿ, ನನಗವಮಾನವಿದೆಂದು ಭಾವಿಸಿದವರೇ ಅಲ್ಲ. ಇವರು ಬಂದಾಗ ಜನ ಏಳಲಿ, ನಮಸ್ಕರಿಸಲಿ, ಬಿಡಲಿ, ಅವರು ಯಾವುದೇ ಭಂಗಿಯಲ್ಲಿರಲಿ, ಇವರು ಅತ್ತ ಗಮನಿಸುವವರೇ ಅಲ್ಲ. 'ಪರಚಿಂತೆ ನಮಗೇಕೆ–ನಮ್ಮ ಚಿಂತೆ ನಮಗೆ' ಎಂಬಂತಿರುತ್ತಿದ್ದರು.

ಒಮ್ಮೊಮ್ಮೆ ವಿನೋದಪ್ರಿಯರಾದರೂ ಕಾಡಹರಟೆಯವರಲ್ಲ. ಮಕ್ಕಳು, ಹುಡುಗರು, ಹೊಸಬರು ಬಂದಾಗ 'ಅವರು ಹೇಗಿದ್ದಾರೆ? ಚೆನ್ನಾಗಿ ಊಟ ಮಾಡುವರೋ ಇಲ್ಲವೋ? ಅವರೆ, ಎಳ್ಳು, ಕಡಲೆಕಾಳು ತಿನ್ನುವರೋ? ಖಾರ-ಸಿಹಿ ಹೇಗೆ, ತಿನ್ನದಿದ್ದರೆ ಬದುಕುವುದು ಹೇಗೆ?' ಇತ್ಯಾದಿ ನಿಷ್ಕಲ್ಮಷ ವಿನೋದವೂ ಉಂಟು. ಯಾರನ್ನೇ ಆಗಲಿ ತಾಮಸ, ತಳಮಳ, ಬಾಳ ಮುಂಚಿನಿಂದ ಮನಸಾ ಕಂಡವರಲ್ಲ. ಯಾರ ಪ್ರಶಸ್ತಿ ಏನೇ ಇರಲಿ, ಇವರಲ್ಲಿ ಮಾತ್ರ ಎಲ್ಲರಲ್ಲೂ ಸಹಜ ವರ್ತನೆ. ಇವರಂತೆ ಅಜಾತಶತ್ರು ಸ್ವಾಮಿಗಳಿನ್ನೊಬ್ಬರಿರಲಾರರು.

**ಕಾಯಕ:** ಶ್ರೀಗಳ ಕಾಯಕ ಎಲ್ಲಾ ಶರಣರ ಕಾಯಕಕ್ಕಿಂತ ವಿಚಿತ್ರ; ಸ್ವಲ್ಪ ಹಸಿ, ಸ್ವಲ್ಪ ಹಾಲದು ಅನಿಸುತ್ತದೆ. ಆದರೆ ಇವರದೇ ಒಂದು ಏಕಮೇವಾದ್ವಿತೀಯಂ ಕಾಯಕ ಈ ಮಠದ ಸ್ವಾಮಿಗಳಲ್ಲಿ ಬಿನ್ನಹಪೂರ್ವಕವಾಗಿ ವಿನಮ್ರ ಭಾವದಿಂದ ಅರಿಕೆ ಮಾಡುವುದೆಂದರೆ ಈ ಮಠದಲ್ಲಿ ನಡೆದು ಬಂದಿರುವ "ಬಿನ್ನಹ ಕಾಯಕ." ಇದು ಬೇರೆಡೆ ಅಸಾಧ್ಯ. ಈ ಕಾಯಕಕ್ಕೆ ಕರ್ತವ್ಯತಾನಿಷ್ಠೆಯನ್ನು ಕೊಟ್ಟವರು

ಲಿಂಗೈಕ್ಯ ಗುರುಗಳು. 'ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ! ಎಂದು ಗೀತೆಯಲ್ಲಿರುವ ವಾಕ್ಯದ ಸ್ವಾರಸ್ಯವನ್ನಿಲ್ಲಿ ನೋಡಬೇಕು. ಇದೇನಿದು ಎಷ್ಟು ಬಹುದು ಉಳಿದ ಸಪಕ್ಷ. ಆದರೆ ಇಲ್ಲಿ ಅದು ಕೇವಲ ಸಮಯ, ಸಂಪ್ರದಾಯವಲ್ಲ. ಅದು ಕಾಯಕ.

ಅಂತಿಮದಿನವೂ ಶ್ರೀಗಳಿಗೆ ಜಿನ್ನಹಿಡಿದಿದ್ದದ್ದು, ಆ ಅನಾರೋಗ್ಯದಲ್ಲೂ 'ಸ್ವಾಮಿಗಳೇ ನೀವು ಹೋಗಿ ಬನ್ನಿ' ಎಂದದ್ದು ಇದಕ್ಕೆ ಸಾಕ್ಷಿ. ಕಾರಿನ ಯುಗವಿರಲಿ, ಕಾಲಿನ ಕಾಲ್ನಡಗೆ ಯುಗದಲ್ಲಿ, ಒಂದು ದಿನಕ್ಕೆ ೩೦ ಮೈಲಿ ಮೇಲಿಲ್ಲದೆ, ೬೦ ಜನರನ್ನು ತುಂಬಿಕೊಂಡು ಹೋಗುವ ಬಸ್ ರೈಲುಗಳಲ್ಲಿ, ಕುದುರೆ ಮೇಲೆ ಇತ್ಯಾದಿ ತಮ್ಮ ಮಡಿಗಂಟನ್ನು ತಾವೇ ಹೊತ್ತು, ಶಿಷ್ಯನಿಲ್ಲದೆ ತಾನೇ ಗುರು, ತಾನೇ ಶಿಷ್ಯ, ತಾನೇ ಮಠ, ತಾನೇ ಭಕ್ತನಾಗಿದ್ದಾಗ ಒಂದು ಕಾಸಿನಿಂದ ಒಂದುರೂ. ಗೇರದೆ ನಡುದಾರಿಯಲ್ಲಿ ಮನೋ ತಕ್ಕಡಿ ಅಲುಗಾಡುತ್ತಿದ್ದ ಕಾಲ. ಭೂಮ್ಯಾಕಾಶಗಳ ಭೀಕರತೆಯನ್ನು ಎದುರಿಸುವ ಕಾಲ. ಪೀಠ, ಸಿಂಹಾಸನ, ಕುಲ, ಛಲ, ಬಲ, ಮಲ ಈ ಮಹಾಸಂಕರಗಳ ಮಹಾಸಾಂಕರ್ಯದ ಕಾಲದಲ್ಲಿ ಎಲ್ಲಕ್ಕೂ ನುಣುಚಿಕೊಂಡು ಪಂಚೇಂದ್ರಿಯಗಳನ್ನು ಅವರವರ ಕೆಲಸ ಮಾಡದಂತೆ ಹೇಳಿ, ಶಿವನ ಇಚ್ಛೆಯಿಂದು ಬಂದದ್ದೇನೆ ಇರಲಿ, ಅದೇ ಮಹಾಪ್ರಸಾದವೆಂದು, ಶಿವಾ ನಿನ್ನ ಪಾದವೆಂದು ನೆಲವೋ, ಮರವೋ, ಮಂಚವೋ, ಚಿಂದಿಯೋ, ಬಂತೆಯೋ, ಮನೆಯೋ, ಮಠವೋ, ನೆಲವೇ ಹಾಸಿಗೆ. ಬಾನೇ ಹೊದಿಕೆಯಾಗಿ ನಿರಾಂತಕವಾಗಿ ನಿದ್ರಿಸಿದ ಕಾಲ. ಮಠ ಸೋರಲಿ, ಸುಣ್ಣ ಹೊಡೆಯಲಿ ಬಿಡಲಿ, ಪಾವೋ, ಸೇರೋ, ಮೂಟೆಯೋ, ಖಂಡುಗವೋ ಏನೇ ಇರಲಿ ಎಲ್ಲವನ್ನೂ ಎಲ್ಲರೂ ಸೇರಿ ಒಪ್ಪಮಾಡಿ ದಾಸೋಹ ಮಾಡಿದ ಕಾಲ. ಕಸ ಗುಡಿಸಿ, ಮುಸುರೆ ಉಜ್ಜಿ, ತರಕಾರಿ ಹೆಚ್ಚಿ ಕೊಟ್ಟು, ಯಾರೋ ಏನೋ, ನಮ್ಮವರೋ, ನಿಮ್ಮವರೊ, ಗಂಡೋ, ಹೆಣ್ಣೋ?. ಎಲ್ಲರೂ ಸೇರಿ ಅಡಿಗೆ ಮಾಡಿ ಉಣ ಬಡಿಸಿದ ಕಾಲ. ಹಾಸಿಗೆಯೇ ಖಜಾನೆ, ಮೂಲೆಯೇ ಉಗ್ರಾಣ. ಜೋರು ಮಾತಾಡುವವರೇ ಏಜೆಂಟರು. ಯಾರಿಗೆ ಯಾವ ಅಧಿಕಾರ ಬೇಕಾದರೂ ಅದನ್ನು ಅವರೇ ಅನುಭವಿಸಬಹುದು. ಬಿಡಬಹುದು. ಕೊಡುವರಿಲ್ಲ ಅದನ್ನು ಕೊಂಡವರೂ ಇಲ್ಲ. ಬೀಗವಿಲ್ಲದೆ ಉಗ್ರಾಣ. ಸರ್ವರಿಗೂ ಸಮಪಾಲು. ಕಂಡರೂ ಕಾಣದಂತೆ ಅಪರಾಧವನ್ನು ಬಾಯಿಂದ ಸಾರದ ಮಹಾಸಾತ್ವಿಕಮೂರ್ತಿ. ಏನು ಬುದ್ಧಿ ಇದು. ಹೇಳೋರುಕೇಳೋರುಇಲ್ಲ. ತಾವುಸುಮ್ಮನಿದ್ದರೆ ಹೇಗೆ? ಏನುಎಂದರೆ ಅದೇ? ಇದೆಲ್ಲಾ ಚೆಲ್ಲಾಪಿಲ್ಲಿ ಆಯ್ತು? ಎಂದರೆ ಹಾಗೋ, ಸರಿ, ಬನ್ನಿ ಕುಳಿತುಕೊಳ್ಳಿ ಎನ್ನುತ್ತಿದ್ದರು.

ಯಾರೇನು ಬೇಕಾದರೂ ಮಾಡಬಹುದು. ಅದನ್ನು ಕಂಡೂ ಕಾಣದಂತೆ, ಅವರೊಡನೆ ದುಡಿದು ದಾಸೋಹ ಮಾಡುವ ಮಹಾನುಭಾವತೆಯ ಸ್ವಾಮಿಗಳು. ಈ ಕಾಯಕದವರಾರೂ ಇಲ್ಲ.

**ನಾನು ಇತರರ ಸೇವೆಗಾಗಿ–:**ಮಠದಲ್ಲಿ ಪ್ರಾತಃ ಎದ್ದು ಶ್ರೀಗಳು ಮಾಡುತ್ತಿದ್ದುದು ಗೃಹಿಣಿಯ ಕೆಲಸ. ಎದ್ದ ಕೂಡಲೆ ನೀರೊಲೆಗೆ ಬೆಂಕಿಹಾಕಿ, ಉಳಿದವರ ಸ್ನಾನಕ್ಕೆ ಅಣಿಮಾಡುತ್ತಿದ್ದರು. ಕಸಗುಡಿಸುವುದು. ಕರುಬಿಟ್ಟು ಹಾಲುಕರೆಯುವುದು-ಕರೆಸುವುದು. ಎದ್ದು ಹಾಸಿಗೆ ಸುತ್ತಿ ಅಣಿಮಾಡಿದರೂ ಆಯಿತು, ಹಾಗೇ ಇದ್ದರೂ ಆಯಿತು. ಹಾಸಿಗೆ ಹಾಕೆಂದು ಒಂದು ದಿನ ಒಬ್ಬರಿಗೆ ಹೇಳಿದ್ದು ನನಗೆ ತಿಳಿಯದು. ಆ ಮೇಲೆ ಪರಾರಿ ಬಿಡಿಸಿ ಕೊಡುವುದು. ಅನಂತರಮಠಾಧಿಪತಿಗಳು ತಮ್ಮ ಸ್ಥಾನ ಏನೇ ಇರಲಿ, ಮಾನಕ್ಕಾಗಿ ತಲೆಹೊಡೆದುಕೊಳ್ಳುತ್ತಾರೆ. ಇವರಿಗೆ ಆ ಹಮ್ಮು ಬಿಮ್ಮುಗಳ ಬಿಗುಮಾನ ಹತ್ತಿರ ಸುಳಿಯದು. ಸಾತ್ವಿಕಶಿರೋಮಣಿ. ಬಂದ ಅತಿಥಿಗಳು ನಮಸ್ಕರಿಸಿದರೂ ಸರಿ, ನಮಸ್ಕರಿಸದಿದ್ದರೂ ಸರಿ, ಏನೂ ಪರವಾಇಲ್ಲ. ಸದಾ ಅವರ ಸೇವೆಗಾಗಿ ಸಿದ್ಧ. ಮಧ್ಯೇ ಮಧ್ಯೇ ಬರುವ ನ್ಯಾಯ ಪಂಚಾಯಿತಿಗಳಿಗೇನು ಕಡಿಮೆ ಇಲ್ಲ. ಪತ್ರಿಕಾಪಠದಿ, ಸುದ್ದಿ ಸಂಗ್ರಹ ಎಲ್ಲಾ ಉಂಟು. ಆದರೆ ಅದು ಕಾಡಹರಟೆ-ಟೀಕೆಮಾತಿನ ಮಟ್ಟಕ್ಕೆ ಎಂದೂ ಹೋಗುತ್ತಿರಲಿಲ್ಲ. ಶ್ರೀಗಳ ಸ್ನಾನ ಪೂಜೆ-ಪ್ರಸಾದವೆಂದರೆ ಹತ್ತುಘಂಟೆ ಮೇಲೆ. ಎಲ್ಲವೂ ಅವರ ದೈನಂದಿನ ಕಾಯಕವಾಗಿತ್ತು. ಚಿಕ್ಕಸ್ವಾಮಿಗಳಿಗೆ ನೀರು ಕಾಯಿಸುವುದು, ಉಪಾಹಾರ, ಕಾಫಿಗೆ ಅಣಿಮಾಡುವುದು. ಇನ್ನೆಲ್ಲೂ ಇಲ್ಲ. ಇಂಥ ಗುರುಗಳನ್ನು ಪಡೆದ ಶ್ರೀ॥ನಿ॥ಪ್ರ॥ ಮಹಾಲಿಂಗ ಸ್ವಾಮಿಗಳು ಪುಣ್ಯಾತ್ಮರು. ಎಲ್ಲಾ ಉಪಚಾರವಾದ ಮೇಲೆ ಅವರಿಗೆ ಅರಿವಾಗುವುದು ಅದು ತಮ್ಮ ಗುರುಗಳ ಉಪಚಾರವೆಂದು. ಏನೂ ಮಾಡುವಂತಿಲ್ಲ ಬೇಡವೆನ್ನುವಂತಿಲ್ಲ. ಬಿಡುವಂತಿಲ್ಲ. ಈ ಸೇವೆಯಿಂದ ಅನಂತ ಜನಸ್ತೋಮದ ಹೃನ್ಮನಗಳನ್ನು ಸೂರೆಗೊಂಡು ಅವರ ಸದಾಶಯಗಳಿಂದ ಶ್ರೀ॥ ಮಹಾಲಿಂಗ ಸ್ವಾಮಿಗಳು ಸಂಸ್ಥೆಯನ್ನು ಮುಂದುವರಿಸುವಂತೆ ಮಾಡಿತು ಈ ಸೇವಾಮನೋಭಾವ. ಅವರ ಉಡುಪು ಸಾಮಾನ್ಯ. ಹರಿದಿರಲಿ, ಚೆನ್ನಿರಲಿ. ಹೊಸದಿರಲಿ ಹಳೆಯದಿರಲಿ, ಪೇಟ ಸರಿಯಿರಲಿ ಬಿಡಲಿ. ಯಾವುದೋ ಪ್ರೇರಣೆಯಿಂದ ಸಂಚರಿಸುತ್ತಿದ್ದರು. ಇವರಲ್ಲಿ ತಿರಸ್ಕಾರ ಪುರಸ್ಕಾರ–ನಮಸ್ಕಾರ ಯಾವುದಕ್ಕೂ ಜವಾಬಿರ್ಚಿರಲಿಲ್ಲ. 'ಉರಿಬರಲಿ-ಸಿರಿಬರಲಿ' ಯಾರಿಗೂ ತಮ್ಮ ಕಷ್ಟ ತೋಡಿಕೊಂಡವರಲ್ಲ. ಯಾರಲ್ಲೂ ತಮ್ಮ ಸಂಪತ್, ಸಮೃದ್ಧಿ, ಸಂತೋಷ ಈ ಬಗ್ಗೆ ಬಡಾಯಿ ಕೊಚ್ಚುವಂತಿಲ್ಲ. ಕೇಳಿದ ಪ್ರಶ್ನೆಗೆ ಉತ್ತರ ತಕ್ಷಣ. ಆದರೆ ಯಾರಿಗೂ ದಕ್ಕಿದವರಲ್ಲ. ಯಾರನ್ನು ಧಿಕ್ಕರಿಸಲಿಲ್ಲ. ಎಲ್ಲರಲ್ಲೂ ಹಸನ್ಮುಖಿ. ಎಲ್ಲರಲ್ಲೂ ಮಮತೆ. ಶ್ರಮಜೀವನ. ಇಂಥ ಅಶ್ರಮಜೀವನ ಅವರ ಸೇವಾ ಮನೋಭಾವ.

**ಅಂದ ಮೇಲೆ ಅವರು ಮುಗ್ಧಸಂಗಯ್ಯನವರೆ ?** :–ಈ ಪ್ರಶ್ನೆಗೆ ಉತ್ತರ ನನ್ನಿಂದ ಸಾಧ್ಯವಿಲ್ಲದಿದ್ದರೂ ಇದಕ್ಕೆ ಹೌದು–ಅಲ್ಲ ಎಂದು ಎರಡುತ್ತರವನ್ನು ಕೊಡುತ್ತೇನೆ. ಆಧುನಿಕ ನಾಗರಿಕರಿಗೆ ಅವರು ಒಂದು ರೀತಿ 'Out of Fashion' ಎನ್ನಿಸು

ತ್ತಿದ್ದರು. ನಾಯಿ ಬೊಗಳಿದರೆ ಸ್ವರ್ಗಕ್ಕೆ ಕುಂದಿಲ್ಲ. ಅವರ ಮುಂದೆ ಬೀಡಿ ಸಿಗರೇಟು ಸೇದಲಿ, ಅವರು ಮಾತನಾಡುತ್ತಿರಲಿಲ್ಲ. ಹರಟೆ, ಅವಿಧೇಯತೆ ಮಾಡಲಿ, ಬೇಡ ವೆನ್ನುತ್ತಿರಲಿಲ್ಲ. ಈ ಗೂಢ ತಪಶ್ಚರ್ಯೆ ಅವರನ್ನು ಧಿಕ್ಕರಿಸುವವರಿಗೆ ಸಾಕಷ್ಟು ಹೆದರಿಕೆ ಕೊಡುತ್ತಿತ್ತು. ಆದರೂ ಸಹ 'ಮಹಾಮೋಹೇ ನಿಲೀಯಾಮಹೇ' ಎಂಬುದೇ ಪರತತ್ತ್ವ. ಆ ಮಹಾಮೋಹದಲ್ಲಿ ಲೀನರಾಗಿ, ತನ್ನ ಲಿಂಗನಿಷ್ಠೆ, ತನ್ನ ಆಚಾರ-ವಿಚಾರ ಶುದ್ಧ ವಿರಿಸಿ, ಲೋಕವಿಗರ್ಭಣೆಗೆ ಅಂಜಿ-ಅಳುಕಿ ತಳುಕುಮಾಡಿದವರಲ್ಲ. ಅತ್ತ ಕಡೆ ನಮ್ಮಂತೆ ಇಣಿಕಿನೋಡಿದವರೂ ಅಲ್ಲ. ಅರಿಷಡ್ವರ್ಗಗಳು ಅವರನ್ನು ಯಾವುದಕ್ಕೂ ನಾಲಾಯಕ್ ಎಂದು ಬಿಟ್ಟುಬಿಟ್ಟು ಲಾಯಕ್ಕಾದ ನಮ್ಮಂತಹವರನ್ನವಲಂಬಿಸಿವೆ. ಈಗಿನ ಕಾಲದ ಆನಂದಜಿ, ಆಚಾರ್ಯಜಿ, ಸರಸ್ವತಿಜಿ, ಪಾದಂಗಳುಜಿ, ಮಹಾಸ್ವಾಮಿಜಿ, ತಾತಯ್ಯಾಜಿ, ಬಾಬಜೀ ಜೀಯುಜಿ ಮುಂತಾದವರೆಲ್ಲಾ ಅರಿತು ಮರೆತ ಮಹಾಶೈವ ಸಂಪ್ರದಾಯ ಅವರದು. ಈ ಮಹಾ ಸಂಪ್ರದಾಯಗಳಿಂದ ನಾವು ಅರಳು-ಮರುಳಿನಿಂದ ಅವರನ್ನು ಮುಗ್ಧಸಂಗಯ್ಯನವರನ್ನು ಮಾಡಿದ್ದೇವೆ. ತತ್ತ್ವತಃ ಅವರು ಧಗ್ಧ-ಸಂಗಯ್ಯಗಳು. ಕೂಡಲಸಂಗನ ಅಂಗವಾದ ಬಸವಾದಿ ಪ್ರಮಥರ ಮಹಾಶರಣರ ಬಹುಮುಖ ಪ್ರತಿಭೆ, ಕಾಯಕ, ವಿಚಾರನಿಷ್ಠೆ ಸೇವಾಕಾಂಕ್ಷೆ ಅವರದು. ಲಿಂಗ ಮೆಚ್ಚುವಂತಿರಬೇಕೆಂದೆನ್ನುವ ಅಣ್ಣನ ಮಾತು ಅಲ್ಲಿದೆ. "ಬಿಡು ಬಾಹ್ಯದೊಳು ಡಂಭವ........ಜನರೇನು ಬಲ್ಲರು ಒಳಗಾಗೋ ಕೃತ್ಯವ ಚಿನುಮಯ ಶಿವನೇನಲ್ಲರಿಯನೆ ಮರುಳೇ" ಎಂಬ ಸರ್ಪಭೂಷಣರ ಉಕ್ತಿಯಂತೆ ಅವರದಿನಚರಿ.

ವೀರಶೈವದಲ್ಲಿ ಸೋಽಹಂಗಿಂತ ದಾಸೋಽಹಂ ಎಂಬುದಕ್ಕೆ ಮನ್ನಣೆ. ಹಾಲ ನೇಮ, ಹಾಲಕೆನೆಯ ನೇಮದವರಲ್ಲ. ಅಂಬಲಿಯ ನೇಮದವರು. ಶರಣರನ್ನು ಮರಣದಲ್ಲಿ ನೋಡೆಂಬಂತೆ ಶ್ರೀಗಳ ಸಾಮಾನ್ಯ ಸರಳ ಜೀವನದಲ್ಲಿ ಸಿದ್ಧಿಸಿದ ಸತ್ಯ ಶುದ್ಧಕಾಯಕ, ಸಾತ್ವಿಕಸಿದ್ಧಿ, ಆತ್ಮನಿಷ್ಠೆ, ಅವರು ಶಿವಾಧೀನವಾದಾಗ (ಒಂದುದಿನದಲ್ಲಿ ಬಂದ ಎಪ್ಪತ್ತು ಸಹಸ್ರ ಮೊಬಲಗೇ ಸಾಕ್ಷಿ.) ಕಾಡದೇ ಕೇಳದೇ ಬಂದು ಬಿದ್ದ ರಾಶಿರಾಶಿ ತರಕಾರಿ, ಸೌದೆ, ಸೇವಕರು ಇತ್ಯಾದಿ, ಸಂಭಾರ ಸಂಗ್ರಹಣೆ ಎಲ್ಲರನ್ನೂ ದಿಗ್ಭ್ರಾಂತರನ್ನಾಗಿ ಮಾಡಿತು. ಹಿರಿಯರು, ಸಾಹುಕಾರರು, ಸುಸಂಸ್ಕೃತರು, ಕಿರಿಯರು ಬಡವರು, ಅಸಂಸ್ಕೃತರು ಎಲ್ಲರಿಗೂ ಅವರು ತೋರಿದ ಸಮದೃಷ್ಟಿ ಅವರನ್ನು 'Unrecognised Jagadguru' ಮಾಡಿತು. ವೀರಶೈವರೂ, ಅವೀರಶೈವರೂ, ಎಲ್ಲರೂ ಅವರ ಆದರ್ಶವನ್ನು ಮನಸಾ ಗೌರವಿಸಿದರು.

**ವಿದ್ಯೆಯಿಲ್ಲದ ವಿದ್ಯಾವಂತರು :-** ಓದು ಕಲಿತು ಪದವಿಪಡೆಯದಿದ್ದರೂ, ಕಲಿತು ಬಲಿತ ಕಲಾವಿದರಲ್ಲಿ ಮೇಲ್ಮಟ್ಟದವರು. ಒಮ್ಮೊಮ್ಮೆ ಸೋಽಹಂ... ಇದು ಹೀಗಲ್ಲವೇ ಹಾಗಲ್ಲವೇ ಎಂದಾಗ ಹಿರಿಯ ವಿದ್ವಾಂಸರಂತೆ ನನಗೆ ಹೀಗೆನ್ನಿಸು

ತ್ತದೆ ಎಂದು ವಿವರಿಸಿದಾಗ ಎಲ್ಲಾ ನಿಮಗೆ ಗೊತ್ತು ಎಂದು ವಿದ್ವಾಂಸರು ಮಾತು ಮುಗಿಸುತ್ತಿದ್ದರಂತೆ. ಲೇಖಕನ ವಿಷಯದಲ್ಲಿ ಅವರು ತುಂಬಾ ಸಾವಧಾನಿಗಳು. ಅವಕಾಶ ಅತಿ ವಿರಳವಾಗಿ ಅವರ ಪ್ರಭಾವ ಹೆಚ್ಚಿಲ್ಲ. ಎಲ್ಲಾ ಕರ್ಣಾಕರ್ಣಿಕೆ. ಆದರೂ ಕವಿತೆಗವಕಾಶವಿತ್ತಿಲ್ಲ ಇಲ್ಲಿ. ಲಿಂಗೈಕ್ಯಗುರುಗಳು ಮತ್ತು ಶ್ರೀ ಸಿದ್ಧಗಂಗಾ ಕ್ಷೇತ್ರದ ಲಿಂ॥ ಶ್ರೀ॥ ಸಿ॥ ಪ್ರ॥ ಉದ್ಧಾನಸ್ವಾಮಿಗಳು ಹಿಂದಿನ ಸತ್ಸಂಪ್ರದಾಯದ ಎರಡು ಮುಖಗಳು. ಈರ್ವರೂ ಪರಸ್ಪರ ಗೌರವಾದರಗಳವರು. ಅದೇ ಕಾರಣ ಅಲ್ಲಿಂದ ಉತ್ತರಾಧಿಕಾರಿಯನ್ನಿರಿಸಿದ್ದು ಲಿಂಗೈಕ್ಯ ಶ್ರೀಗಳು. ಉತ್ತರಾಧಿಕಾರಿಗಳಾದ ಶ್ರೀ॥ಸಿ॥ಪ್ರ॥ ಮಹಾಲಿಂಗ ಸ್ವಾಮಿಗಳು ತಮ್ಮ ಗುರುಗಳಿಗೆ ಪೀಠಕ್ಕೆ ತಕ್ಕ ಸತ್ಸಂಪ್ರದಾಯ, ಸಂಸ್ಕಾರಗಳನ್ನು ಬೆಳೆಸಿಕೊಂಡು, ಮಠದ ಮರ್ಯಾದೆ, ಆರ್ಥಿಕ ಸುಭದ್ರತೆ, ವಿದ್ಯಾದಾನ ಇತ್ಯಾದಿಗಳ ಕಡೆ ಬಹಳ ಸುಧಾರಿಸಿದ್ದಾರೆ. ಈ ಸುಧಾರಣೆಯನ್ನು ಕಂಡು ನಿಜಕ್ಕೂ ಹಿಗ್ಗಿದ್ದಾರೆ ಲಿಂಗೈಕ್ಯಗುರುಗಳು. ಅವರ ಹಾರ್ದ ಆಶೀರ್ವಾದ ಈಗಿನ ಶ್ರೀಗಳಿಗಿದೆ. "ಹುಲಿಯ ಹಾಲು ಹುಲಿಗಲ್ಲದೆ ಹೊಲದ ಹುಲ್ಲೆಯ ಮರಿಗುಂಟೇ ?"

**ಶ್ರೀ॥ ನಿ॥ ಪ್ರ॥ ಸ್ವ॥ ನಿರ್ವಾಣ ಸ್ವಾಮಿಗಳ ವ್ಯಕ್ತಿತ್ವ :–** ಈ ಮಠಾಧಿಪತಿಗಳ ವ್ಯಕ್ತಿತ್ವ ಇತರರಂತಲ್ಲ, ಅವರಿಲ್ಲದಿದ್ದರೇನೂ ಇರುತ್ತಿರಲಿಲ್ಲ. ಅವರೇ ಮಠಕ್ಕೆ ಒಂದು ನಿಧಿ. ಇಷ್ಟು ಮಾತ್ರ ಮುಖ್ಯ. ಉಳಿದ ಕೀರ್ತಿವಾರ್ತೆಗಳು ಲಿಂಗಕ್ಕೆ ದೂರ. ಅಣ್ಣನ ಮಾತಿನಲ್ಲಿ ಹೇಳುವುದಾದರೆ "ಲಿಂಗವನು ನುಡಿಸಿಂ ಭೋ ". ಇದೇ ಮಠಾಧಿಪತಿಗಳನ್ನಳೆವ ಮಾನದಂಡ. ಲಿಂಗದ ನೆಲೆಯ ಕಂಡರೆ? ಲಿಂಗ ಸನ್ನಿಹಿತವಾದರೆ? ಲಿಂಗ ಆಯತರಾದರೆ? ಇಷ್ಟು ಮುಖ್ಯ. ಉಳಿದವೆಲ್ಲಾ ಜನರಂಜನೆ. ನಿರಂಜನರಾಗಬೇಕಾದರೆ ಅಷ್ಟಾವರಣ ಪಂಚಾಚಾರ ಷಟ್ಸ್ಥಲ ಷಟ್ತ್ರಿಂಶತ್‌ತತ್ವಾದಿಗಳ ಬಹಿರಂಗ ಆಚರಣೆ ಮಾತ್ರವೇ ವೀರಶೈವದ ಕುರುಹಲ್ಲ, ಹಾವ ಹಿಡಿಯದೆ ಹುತ್ತಬಡಿವ ನಮ್ಮಂತೆ. ಅವರು ವೀರವ್ರತಿಗಳು, ತ್ರಿಕರಣಪೂತರು, ಲಿಂಗಸಾಕ್ಷಿ ವಿಧೇಯನ್ನಿಸಿಕೊಳ್ಳದವರು. ಸೋಹಂದೂರರಾಗಿ ದಾಸೋಹಂ ಭಾವಿಗಳು. ಕುರುಹೇನೊ ತೋರದೆ ಬಿರದೇಕರಾದ ನಮ್ಮ ಲಿಂಗೈಕ್ಯ ಶ್ರೀಗಳವರಂತಿರಬೇಕು. ಇವರು ಅಂತರಂಗ ಬಹಿರಂಗ ಶುದ್ಧರು. ಎಂದೂ ಅವರಲ್ಲಿ ಭೇದಭಾವವನ್ನು ಯಾರೂ ಕಂಡು ಬೆರಳೆಣಿಪರಿಲ್ಲ. ಸದಾ ಸತ್ಯ ಶುದ್ಧ ಸೇವಾಕಾಯಕ. ಸತ್ಸಂಪ್ರದಾಯಕ್ಕಾಗಿ ಬಿನ್ನಹಕಾಯಕ ಅನಿವಾರ್ಯ. ಆ ಕಾಯಕದಲ್ಲಿ ಈ ಮಠದ ಮೂರ್ತಿಗಳು ಉನ್ನತ ಮಟ್ಟದವರು. ಅದೊಂದು ಪವಾಡ. ಆ 'ಮುಳಾಳಿವಿಗೆ' ಕಾಯಕದಲ್ಲಿ ಅವರು ಜಯಿಸಿ ಧೀರರಾದರು ಮೂರ್ತಿಗಳು ಪಾದಪೂಜೆಯಲ್ಲಿ ಧ್ಯಾನಮಗ್ನರಾದಾಗ ಅವರ ಮನೋಮೀನ ನಿಸ್ಪಂದ ಚಂಚಲವೇ ಎಂಬುದನ್ನು ಅನೇಕರು ತಿಳಿಯಬಲ್ಲರು. ಪಾದಪೂಜೆ ನಾಯಕ ಪೂಜೆಯೆಂದೇ ಅನೇಕರ ಅಭಿಮತ. ಅಲ್ಲಿ ವೀರಶೈವದ ಅಂತಸ್ಸಾರವಾದ ಭೇದಾ

ಘೋಷತತ್ವ ಅಡಗಿದೆ. ಅದು ಪರುಷ ಕಬ್ಬಿನ ವಿಧಿಯೆಂದು ಕೆಲವರೇ ಭಾವಿಸುತ್ತಾರೆ. ಈ ಪವಿತ್ರತತ್ವ ವೀರಶೈವದಲ್ಲಿ ಅರ್ಥಿಕ ಹಾಗೂ ವೈಯಕ್ತಿಕವಾಗಿಯೇ ಉಳಿದಿದೆ ಬಹುಪಾಲು.

ಲಿಂಗೈಕ್ಯ ಶ್ರೀಗಳ ಪಾದಪೂಜೆಯಲ್ಲಿ ಅವರ ಏಕಾಗ್ರತೆ, ಸಮತೆ, ಶಾಂತಿ, ಸಾಮರಸ್ಯ, ಅನುಗ್ರಹ, ಪ್ರಾರ್ಥನೆ ಅವರ ಮುಖ ಭಾವದಲ್ಲಿ ಹೊರಸೂಸುತ್ತಿದ್ದವು. ನಾನು, ನನ್ನ ಪಾದವೆನ್ನದೆ ಶಿವಾ, ನಿನ್ನ ಪಾದವೆಂಬುದೇ ಅವರ ತಾರಕ ಮಂತ್ರ. ಈ ತತ್ವನಿಷ್ಠೆಯನ್ನು ಇವರಲ್ಲಿ ಹಾಗೂ ಅವರ ಉತ್ತರಾಧಿಕಾರಿಗಳಲ್ಲಿ, ವಿಶೇಷವಾಗಿ ಶ್ರೀ ಸಿದ್ಧಗಂಗಾ ಕ್ಷೇತ್ರದ ಹಿಂದಿನ ಹಾಗೂ ಇಂದಿನ ಶ್ರೀಗಳವರಲ್ಲಿ ಕಾಣಬಹುದು. ಮನಸ್ಸು ಗುಣಾಕಾರ, ಗೋಪುರ ಕಟ್ಟಬಾರದು. ಆಗ "ಜನರೇನ ಬಲ್ಲರು ಒಳಗಾಗೋ ಕೃತ್ಯವ ಚಿನುಮಯ........". ಅಲ್ಲದೆ ಲಿಂ॥ ಶ್ರೀಗಳು ವೀರಶೈವದ ಅನೇಕ ವಿಧಿಗಳನ್ನು ಚೆನ್ನಾಗಿ ಅರಿತಿದ್ದರು. ಅವರೊಡನೆ ಅನೇಕ ಸಮಯಾಚಾರಗಳು ಹೋದವೆಂದು ಲೇಖಕ ಕೇಳಬಲ್ಲ.

ದುಡ್ಡಿನವರಲ್ಲ, ದೊಡ್ಡವನೆನ್ನಿರೆಂದವರಲ್ಲ. ಕಂತೆ ಬೊಂತೆಯ ಜಂಗಮರಂತೆಯೇ ಕಾಲ ಕಳೆದರು ಅವರು. ಒಂದು ದಿನ ವೃಥಾ ಕಾಲಯಾಪನೆ ಮಾಡಿದವರಲ್ಲ. ಎಲ್ಲವನ್ನೂ ಮಾಡುವುದಾಗಿ ಕೂಗಾಡಿದವರಲ್ಲ. ಶಿವನಲ್ಲಿ ಶ್ರದ್ಧೆಯೋ ಅಥವಾ ಅಶ್ರದ್ಧೆಯೋ ಏನೋ ಒಂದು ವಿಷಯವನ್ನೂ ತಲೆಗೆ ಹಚ್ಚಿಕೊಂಡು ಆತುರರಾಗದೆ ತಮ್ಮ ಪಡಸಾಲೆ ಸಿಂಹಾಸನದಲ್ಲಿ ಅತಿಥಿಗಳ ಸೇವೆಯಲ್ಲಿಯೇ ಅವರು ಕಾಲ ಹಾಕಿದರು. ಕರಕಂಜಾತ ಸಂಜಾತರನ್ನೇ ಹಿರಿಯರನ್ನಾಗಿ ಮಾಡಿ, ಅವರನ್ನು ಕೇಳಿ, ಅವರನ್ನು ನೋಡಿರೆಂದು ತನ್ನದೇನೂ ಇಲ್ಲವೆಂಬ ಮಹಾನುಭಾವರನ್ನು ಇನ್ನೂ ಕಾಣಬೇಕಾಗಿದೆ. ಅದರ ಮರ್ಮವನ್ನರಿತ ಅವರ ಉತ್ತರಾಧಿಕಾರಿಗಳು ಎಲ್ಲವೂ ಅವರದೇ ಎನ್ನುವ ಪರಸ್ಪರ ಅರಿವು, ಸೌಜನ್ಯ ಅತಿ ವಿರಳ. ಉತ್ಸವಾದಿಗಳಲ್ಲಿ ಇಷ್ಟವಿಲ್ಲದಿದ್ದರೂ ಇವರ ಹಿರಿತನಕ್ಕಾಗಿ ಇವರನ್ನು ಉತ್ಸವ ಮಾಡುತ್ತಿದ್ದರು. ವಿರಕ್ತರು, ಪಟ್ಟದವರು ಚರಂತರು ಮಹಂತರು ಇತ್ಯಾದಿ ವೈವಿಧ್ಯತೆಗಳು ಇವರ ಕಿವಿಯಲ್ಲಲ್ಲದೆ ಹೊಟ್ಟೆ ಹೊಕ್ಕಿರಲಿಲ್ಲ. ತನುವಿನಲ್ಲಿ ಶುಚಿ, ಮನದಲ್ಲಿ ಮೈಲಿಗೆಯಿಲ್ಲ. ಲಿಂಗನಿಷ್ಠೆ ಸೇವಾ ಭಾವ, ಮೃದು ವಚನ, ದಯಾಮಯತೆ, ಕಿಂಕರಭಾವ ಭಾವಪೂಜೆಯಲ್ಲದೆ ಮಂತ್ರ ತಂತ್ರಗಳ ಸೊಲ್ಲಿಲ್ಲ. ಜಾತಿ ಮತಗಳ ಅರಿವೆ ಇಲ್ಲ. "ಎನ್ನ ವಾಮ–ಕ್ಷೇಮ ನಿಮ್ಮದಯ್ಯ. ಎನ್ನ ಹಾನಿ ವೃದ್ಧಿ ನಿಮ್ಮದಯ್ಯ" ಎಂದೇ ಹೆಜ್ಜೆ ಹೆಜ್ಜೆಗೂ ಇವರ ತಾರಕ ಮಂತ್ರವಿರಬೇಕು. ಇದಕ್ಕಿಂತ ಮಿಗಿಲಾದ ವೀರಶೈವ ವ್ರತಿ, ವೀರವಿರಕ್ತ, ಲಿಂಗಾಯತರು ಯಾರು ಈ ಕಾಲದಲ್ಲಿ ! ಅಂಥವರಿಗೆ ನಮೋ ನಮೋ.

**ಸವಿ ನೆನಪುಗಳು:**–"ಎನ್ನ ವಾಮ–ಕ್ಷೇಮ ನಿಮ್ಮದಯ್ಯ" ಎಂಬ [illegible] ಲಿಂಗಿಸ್ಥಳದ ಮಾತೋ ಅಲ್ಲವೋ ಈ ಕೆಲವು ಸವಿ ನೆನಪನ್ನು ಪರೀಕ್ಷಿಸಿ.

ಲಿಂ॥ ಶ್ರೀ॥ ಸಿ॥ ಪ್ರ॥ ನಿರ್ವಾಣ ಸ್ವಾಮಿಗಳದು ಒಂದು ಮಂಚ. ಅದು ಮಠದ ಮುಂದಿಲ್ಲ ಹಿಂದೆ ಪಡಸಾಲೆಯಲ್ಲಿ. ಬಂದು ಹೋಗುವವರಿಗೆ ಸಿಂಹಾಸನವಿರಬೇಕೆಂಬುವರು ಇತ್ತ ಗಮನಿಸಬಹುದು. ಆ ಸಿಂಹಾಸನದಲ್ಲಿ (ಮಂಚ) ಹಾಸಿಗೆ ಹೊದಿಕೆ ಉಡುಪು ದುಡ್ಡು ಇತ್ಯಾದಿ ಎಲ್ಲ ಸಂಬಾರಗಳು. ಒಮ್ಮೆ ಅವರು ಹಾಸಿಗೆಯಲ್ಲಿದ್ದಾಗ, ಸುತ್ತಲೂ ದನಗಳ ಮೇವು, ತರಕಾರಿ, ಪಡಿತರ ಇತ್ಯಾದಿ ಎಲ್ಲ ಇದ್ದುದ್ದರಿಂದ ಬಂದು ಹಾವು ಆ ಹಾಸಿಗೆಯಲ್ಲಿ ಹೇಗೋ ಸೇರಿತು. (ತೋಟ ಸಮೀಪವಾದ್ದರಿಂದಿರಬಹುದು) ಶ್ರೀಗಳು ಎಂದಿನಂತೆ ಏನೋ ಯೋಚಿಸುತ್ತ ಕುಳಿತಿದ್ದರು ಹಾಸಿಗೆಯಲ್ಲಿ. ಹಾವು ಹೊರಗೆ ಸರಿಯಿತು. ಹತ್ತಿರವಿದ್ದವರು ಬುದ್ಧೀ ಹಾವು ಹಾವೆಂದು ಚೀರಿದರು. ಎಲ್ಲೋ? ಎಂದು ಎಂದಿನಂತಿದ್ದ ಗಾಬರಿಗೊಳ್ಳದ ಶ್ರೀಗಳು ಅತ್ತಿತ್ತ ಕದಲದೆ ಕೇಳಿದರು. "ಅಗೋಳ್ಳಿ ಬುದ್ಧಿ, ನಿಮ್ಮ ಹಿಂದೆ" ಎಂದು ತಕ್ಷಣ ದೊಣ್ಣೆ ಪಗ್ಗರೆ ತಂದು ಯುದ್ಧಕ್ಕೆ ಸಿದ್ಧರಾದರು. ಹಾವು ಸರಿಯುತ್ತಿದ್ದರೆ ಶ್ರೀಗಳು ಸ್ಥಿರಾಸನದಲ್ಲೇ ಕುಳಿತು, ಹೋಗಲಿ ಬಿಡೋ. ಅದನ್ನೇಕೆ ಸಾಯಿಸುತ್ತೀ? ಎಂಬ ಮಾತು. ಇದನ್ನು ಅಂಗಸ್ಥಳದಿಂದ ಲಿಂಗಸ್ಥಳದಲ್ಲಿ ಬೆರೆತು ಕಗ್ಗೆರೆಯ ಸಮಾಧಿಯಲ್ಲಿದ್ದ ಶ್ರೀ ತೋಂಟದ ಸಿದ್ಧಲಿಂಗರು ಹುತ್ತ ಅಗೆಯುತ್ತಿದ್ದವರನ್ನು ಕುರಿತು "ಇನ್ನೆಂಟು ದಿವಸ ಮುಂದೆ ಅಗೆಯಬೇಡಿ. ಇಲ್ಲಿರುವ ಹಾವು–ಪಕ್ಕಿಗಳು ತಮ್ಮ ಮರಿಯೊಡನೆ ಹೊರಗೆ ಹೋಗಲಿ" ಎಂದ ಮಾತಿಗೆ ಹತ್ತಿರವಾಗುವುದು. ಈ ಸ್ಥಿತಪ್ರಜ್ಞೆ ನಮ್ಮೆಲ್ಲರಿಗೂ ಬಾರದು.

ಉತ್ತರಾಧಿಕಾರದ ಸಮಯ. ಎಲ್ಲಾ ಅಣಿಯಾಗುತ್ತಿದೆ. ಶ್ರೀ ಕೆ. ಪಿ. ಪರಶಿವಯ್ಯನವರೇ ಮುಂದಾಳುಗಳು. ಅವರು ಬಂದು "ಬುದ್ಧಿ! ಅಕ್ಕಿ ಸಾಲೋದಿಲ್ಲ. ಮಿನಿಸ್ಟರ್ ಬಂದರೆ ಎಲ್ಲಿ ಇಳಿಯುವುದು? ದುಡ್ಡು ಇನ್ನೂ ಹೆಚ್ಚು ಬೇಕಾಗುತ್ತೆ" ಇತ್ಯಾದಿ ಗಾಬರಿಯಿಂದ ಹೇಳಿದರಂತೆ. ಅದಕ್ಕೆ ಶ್ರೀಗಳು ಮುಗ್ಧ ಮಧುರ ಹಾಸದಿಂದಿತ್ತ ಉತ್ತರ "ಆಗಲಿ. ಪರಶಿವಯ್ಯನವರೇ ದುಡ್ಡಿಲ್ಲ ತಡೆದು? ಆಗಲಿ ಏನುಮಾಡೋಕೋ ಮಾಡಿ. ಶಿವನಿದ್ದಾನೆ." ಈ ರೀತಿ ಉತ್ತರಿಸಿದರೆ, ಅವರ ಅಲಿಪ್ತತೆ ಯಾವ ಮಟ್ಟದಲ್ಲಿತ್ತು ಎಂಬುದು ಅರ್ಥವಾಗುವುದು. ಊರ ಸುದ್ದಿಗೆ ಹೋದವರಲ್ಲ. ರಂಧ್ರಾನ್ವೇಷಣೆ, ಅಸೂಯೆ, ದ್ವೇಷ, ಆತುರ, ದುರಾಶೆ ಇತ್ಯಾದಿಗಳು ಅವರನ್ನು ಕಾಣವು. ಹೊಸಬರಾಗಲಿ ಹಳೇರಾಗಲಿ ಯುಕ್ತವೋ ಅಯುಕ್ತವೋ, ಏನೋ ಪ್ರಶ್ನೆ ಹಾಕಲಿ, ಆದರೆ ಉತ್ತೀರ್ಣ, ಇಲ್ಲದಿದ್ದರೆ ಉತ್ತರವೇ ಇಲ್ಲ. ತಾವೂ ಸಹ ಅಷ್ಟೇ: ವಿನೋದವಾಗಿ ಅಪಾರ್ಥ ಬರುವಂತೆ ಪ್ರಶ್ನೆಗಳನ್ನು ಹಾಕುವುದು. ಹುಡುಗಾಟ ಆಡಿದಂತೆ ನಟಿಸುವುದು, ಇವೆಲ್ಲಾ ಅವರ ವಿನೋದವೋ, ಮುಗ್ಧತೆಯೋ! ಎಲ್ಲವೂ ಒಂದು ಬಗೆ.

ಹೆಚ್ಚಿಗೆ ಲೇಖಕನಿಗೆ ತಿಳಿಯದು. ಇಂತಹ ಹಲವಾರು ಪ್ರಸಂಗಗಳು, ಅವರ ಅಲಿಪ್ತತೆ, ಶಿವನೇ ಗತಿ ಇತ್ಯಾದಿಗಳನ್ನು ಸೂಚಿಸುವುವು. ಲಂಬಿಸಿದರೆ ಅತ್ಯುಕ್ತಿ ಪುನರುಕ್ತಿ ಹೆಚ್ಚಾದೀತು. ನಮ್ಮ ಕಾಲದಲ್ಲಿ ಇಂಥ ಒಂದು ಪವಾಡ ವ್ಯಕ್ತಿ ಅಥವಾ ಒಗಟೆ ವ್ಯಕ್ತಿ (Mystic) ನಮ್ಮ ಕಣ್ಣಿಗೆ ಬಿದ್ದಿತು. ಅವರ ದರ್ಶನವಾದರೂ ನಮಗಾಯಿತು. ಆಶೀರ್ವಾದ ಕೊಡುವುದೂ ಕೊಂಬುದೂ ದೊಡ್ಡ ಮಾತು. ಕನಕಪುರದಲ್ಲಿ ಇಂಥ ಒಂದು ಮಠವನ್ನು ಪ್ರಥಮ ದರ್ಜೆಗೆ ಏರಿಸುವುದಕ್ಕೆ ಲಿಂ॥ ಶ್ರೀಗಳ ತಪಸ್ಸು ಈಗಿನ ಶ್ರೀಗಳ ಸತತ ಶ್ರಮ ಎರಡೂ ಮುಖ್ಯ ಕಾರಣ. ಅವರ ವ್ಯಕ್ತಿತ್ವದ ಬಗ್ಗೆ ಲೇಖಕನ ಮಾಹಿತಿ ಅತ್ಯಲ್ಪವಾಗಿ ಆತನ ಅಲ್ಪಕಾಣಿಕೆ ಶ್ರೀಗಳ ಪಾದಕ್ಕೆ ಅರ್ಪಿತ.

---

ಭಕ್ತನು ಶಾಂತನಾಗಿರಬೇಕು.
ತನ್ನ ಕುರಿತು ಬಂದ ಠಾವಿನಲ್ಲಿ ಸತ್ಯನಾಗಿರಬೇಕು.
ಭೂತಹಿತ ವಚನವ ನುಡಿಯಬೇಕು.
ಲಿಂಗ ಜಂಗಮದಲ್ಲಿ ಕುಂದು ನಿಂದೆಗಳಿಲ್ಲದಿರಬೇಕು.
ಸಕಲ ಪ್ರಾಣಿಗಳ ತನ್ನಂತೆ ಭಾವಿಸಬೇಕು.
ತನ್ನು ಮನ ಧನದ ಗುರುಲಿಂಗ ಜಂಗಮಕ್ಕೆ ಸಮರ್ಪಿಸಬೇಕು.

ಅ ಪಾತ್ರ ದಾನಗೆಯ್ಯದಿರಬೇಕು.
ಸಕಲ ಇಂದ್ರಿಯಂಗಳೂ ತನ್ನ ವಶಗತವಾಗಿರಬೇಕು.
-ಇದೇ ಮೊದಲಲ್ಲಿ ಬೇಹ ಶೌಚ ನೋಡಾ.
ಲಿಂಗವ ಪೂಜಿಸಿ ಪ್ರಸಾದವ ಪಡೆವಡೆ,
ಎನಗಿದೇ ಸಾಧನವು ನೋಡಾ ಕೂಡಲಾ ಸಂಗಮದೇವಾ.

—**ಬಸವಣ್ಣನವರು**

# "ನಾ ಕಂಡ ನಿರ್ವಾಣ ಬುದ್ಧಿಯವರು"

● **ಶ್ರೀ ಎಸ್. ರಾಜಶೇಖರಯ್ಯ** ಬಿ.ಎ. ಬಿ.ಎಡ್.,
ಮುಖ್ಯೋಪಾಧ್ಯಾಯರು,
ಆರ್. ಆರ್. ಪ್ರೌಢಶಾಲೆ, ಅಂಕನಹಳ್ಳಿ-ಗವೀಮಠ
ಕುಣಿಗಲ್ ತಾಲ್ಲೂಕು.

ಭಾರತಭೂಮಿ ಸನಾತನವಾದುದು. ಅಂತೆಯೇ ಪವಿತ್ರವಾದುದು. ಈ ಭೂಮಿಯ ಪ್ರತಿ ಮಣ್ಣಿನ ಕಣವೂ ಪಾವನವಾದುದು. ಇದಕ್ಕೆ ಕಾರಣ ಇಲ್ಲಿ ಜನ್ಮ ತಾಳಿದ ಅನೇಕ ಋಷಿಮುನಿಗಳು, ಸಾಧು ಸಂತರು, ಶಿವಶರಣರು ಹರಿದಾಸರುಗಳೇ. ಭಾರತದೇಶದ ಉದ್ದಗಲಕ್ಕೂ ಅನೇಕ ಧರ್ಮಕ್ಷೇತ್ರಗಳಿವೆ. ಒಂದೊಂದು ಕ್ಷೇತ್ರವೂ ಸಾಧುಸಂತರ ತಪೋಭೂಮಿಯೇ. ಅವರು ನಡೆಸಿದ ಪಾವನಜೀವನದಿಂದ ಅವು ಗಳೆಲ್ಲ ಪುಣ್ಯಕ್ಷೇತ್ರಗಳಾಗಿ ಕಂಗೊಳಿಸುತವೆ. ಈ ವಿಜ್ಞಾನ ಯುಗದಲ್ಲಿಯೂ ಧರ್ಮದ ಬಗೆಗೆ, ಪುಣ್ಯಕ್ಷೇತ್ರಗಳ ಬಗೆಗೆ ಅಭಿಮಾನಿಗಳು ಕಡಿಮೆಯಿಲ್ಲ. ಒಂದೊಂದು ರಾಷ್ಟ್ರದ ಜನಾಂಗಕ್ಕೆ ತನ್ನದೇ ಆದ ರೀತಿನೀತಿಗಳು, ಧಾರ್ಮಿಕವಿಧಿ ನಿಯಮಗಳಿರುತ್ತವೆ. ಪಾಶ್ಚಾತ್ಯ ದೃಷ್ಟಿ, ವೈಜ್ಞಾನಿಕವೂ, ಭೌತಿಕವೂ (Materialistic) ಆದರೆ, ಭಾರತೀಯ ದೃಷ್ಟಿ ಬಹುಮಟ್ಟಿಗೆ ಆಧ್ಯಾತ್ಮಿಕ (Spiritual) ವಾದುದು. ಪ್ರತಿ ಭಾರತೀಯನ ಧಮನಿಯಲ್ಲಿಯೂ, ಇಂತಹ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಜೀವನಪರವಾದ ಚೈತನ್ಯ ಪ್ರವಹಿಸುತ್ತದೆ. ಭಾರತೀಯ ಸಂಸ್ಕೃತಿಯಲ್ಲಿ "ಅನೇಕತೆಯಲ್ಲಿ ಏಕತೆಯನ್ನೂ ಕಾಣಬಹುದು." "**ಏಕಂಸದ್ವಿಪ್ರಾ ಬಹುಧಾ ವದಂತಿ**" ಇದು ವೇದಕಾಲದ ಸುಂದರ ಸಮನ್ವಯ ಸೂತ್ರ.

ಆತ್ಮಜ್ಞಾನವೇ ನಿಜವಾದ ಜ್ಞಾನ. ಅದು ಮಾನವನ ಇಹಲೋಕ ಯಾತ್ರೆಯನ್ನು ಪವಿತ್ರಗೊಳಿಸುತ್ತದೆ. ಅಂಥಹ ಆತ್ಮಜ್ಞಾನವನ್ನು ಜೀವನದಲ್ಲಿ ಅಳವಡಿಸಿಕೊಂಡು ನಡೆಯುವ ಮಹಾತ್ಮರ ಜನನ ಮಹತ್ತರವಾದದ್ದು. ಬಹುಕಾಲದ ಪುಣ್ಯವು ಪಕ್ವವಾದಾಗ ಸಮರ್ಥರಾದ ಆತ್ಮಜ್ಞಾನಿಗಳ ಉದಯವಾಗುತ್ತದೆ. ಹತ್ತೊಂಭತ್ತನೆ ಶತಮಾನದ ಅಂತ್ಯದಲ್ಲಿ ಜನ್ಮತಾಳಿ ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಕಣ್ಮರೆಯಾದ ಶ್ರೀ॥ ಮ॥ ನಿ॥ ಪ್ರ॥ ಸ್ವ॥ ನಿರ್ವಾಣಬುದ್ಧಿಯವರು ಮಹಾ ಆತ್ಮಜ್ಞಾನಿಗಳು. ಸರ್ವಜ್ಞ ಕವಿಯ "**ಬ್ರಹ್ಮವನು ಅರಿದಿಹರೆ ಸುಮ್ಮನಿದ್ದಿರಬೇಕು**" ಎಂಬ ಉಕ್ತಿಯಂತೆ, ಬ್ರಹ್ಮಜ್ಞಾನವನ್ನು ಅರಿತೂ ಅರಿಯದವರಂತಿದ್ದ ಮಹಾಮೌನಿಗಳು.

ಬೆಂಗಳೂರು ಜಿಲ್ಲಾ ರಾಮನಗರಂ ತಾಲ್ಲೋಕು, ಬಿಜೂರು ಎಂಬ ಚಿಕ್ಕ ಗ್ರಾಮದಲ್ಲಿ ಗುರುಲಿಂಗಜಂಗಮ ನಿಷ್ಠಾವಂತ ವೀರಶೈವ ಮನೆತನದಲ್ಲಿ, ತಂದೆ ಶ್ರೀ ಸಾಮಂದಯ್ಯ–ತಾಯಿ ಶ್ರೀಮತಿ ಗೌರಮ್ಮ ಇವರ ಗರ್ಭಾಂಬುಧಿಯಲ್ಲಿ ಜನಿಸಿದರು. ಇವರ ಪೂರ್ವಾಶ್ರಮದ ಹೆಸರು ಬಸಪ್ಪದೇವರು. ಚಿಕ್ಕಂದಿನಿಂದಲೂ, ದೇವರು, ತಂದೆ ತಾಯಿಗಳು ಮತ್ತು ಗುರುಹಿರಿಯರಲ್ಲಿ, ಅಪಾರ ಭಕ್ತಿಯನ್ನಿಟ್ಟು, ತಮ್ಮ ಸಾತ್ವಿಕ ನಡೆನುಡಿಗಳಿಂದ, ವ್ಯಾಸಂಗದಲ್ಲಿ, ಕಾಯಕದಲ್ಲಿ ಹೆಚ್ಚು ಶ್ರದ್ಧಾಸಕ್ತಿಗಳನ್ನು ತೋರಿಸುತ್ತ ಎಲ್ಲರಿಗೂ ಅಚ್ಚುಮೆಚ್ಚಿನ ಬಾಲಕರಾಗಿ ಬೆಳೆದರು. ಆದರೆ **'ಬೆಳೆಯುವ ಪೈರು ಮೊಳಕೆಯಲ್ಲಿ ಕಾಣುವುದು'** ಎಂಬ ನಾಣ್ಣುಡಿಯಂತೆ, ಬಾಲ್ಯದಿಂದಲೂ ಊಟ ಉಪಚಾರ ಉಡಿಗೆ–ತೊಡಿಗೆಗಳ ವಿಷಯದಲ್ಲಿ ಉದಾಸೀನರಾಗಿರುತ್ತಿದ್ದರು. ವೈರಾಗ್ಯ ಅವರಲ್ಲಿ ಅಂಕುರಿಸಿದ್ದಿತು. ಅವರು ಜನಿಸಿದ ಮನೆತನ, ಅಷ್ಟು ಸಿರಿವಂತಿಕೆಯ, ವಿದ್ಯಾವಂತ ಮನೆತನವಲ್ಲ. ಆದರೆ ಆಚಾರ-ವಿಚಾರಾದಿ ಸಂಸ್ಕೃತಿಯುಳ್ಳ ಸುಸಂಸ್ಕೃತ (cultured) ಮನೆತನ. ಆಗಿನ ಕಾಲದ ಅಯ್ಯಗಳ ಬಳಿಯಲ್ಲಿ ವಿದ್ಯಾಭ್ಯಾಸ, ಆ ಕಾಲಕ್ಕೆ ಲಭ್ಯವಿದ್ದಷ್ಟು ಶಿಕ್ಷಣವನ್ನು ಜಾಣತನದಿಂದ ಜಾಗ್ರತೆಯಾಗಿ ಮುಗಿಸಿದರು. ಅನಂತರ ದೇಗುಲ ಮಠಕ್ಕೆ ವಟುವಾಗಿ ದಯಮಾಡಿಸಿದರು. ಚಿಕ್ಕ ಸಂಸಾರವನ್ನು ತೊರೆದು ಜಗತ್ ಸಂಸಾರದ ಹೊರೆಯನ್ನು ಹೊತ್ತರು. ಇದು ದೇವನಾಣತಿ. ಅಂದಿನ ಶ್ರೀ ಮ।।ನಿ।।ಪ್ರ।।ಸ್ವ।। ಬಸವಲಿಂಗ ಸ್ವಾಮಿಗಳವರ ಸೇವೆಯಲ್ಲಿ ನಿರತರಾದರು.

ಮಾನವನ ಜೀವನ ಹಸನಾಗಬೇಕಾದರೆ ಜೀವನದಲ್ಲಿ ಬರುವ ಎಡರು ತೊಡರುಗಳನ್ನು ಎದೆಗಾರಿಕೆಯಿಂದ ಸಹಿಸಿ ಎದುರಿಸಬೇಕು. ಸಾಣೆ ಶ್ರೀಗಂಧವನು ಮಾಣದೆ ತೇದರೂ ಅದರ ಪರಿಮಳ ಮತ್ತಷ್ಟು ಹರಡುವಂತೆ. ಶರಣನು ಜೀವನದಲ್ಲಿ ಬಂದ ಎಡರು ತೊಡರುಗಳನ್ನು ಸಹಿಸಿದರೆ ತಾನೆ, ಮುಂದಿನ ಜೀವನ ಪರಿಪಕ್ವವಾಗುವುದು. ದೇವರದಾಸಿಮಾರ್ಯರು ಹೇಳುವಂತೆ, "ಹರ ತನ್ನ ಭಕ್ತರನ್ನು ವಿವಿಧ ರೀತಿಯಲ್ಲಿ ಪರೀಕ್ಷಿಸುತ್ತಾನೆ."

"ಹರ ತನ್ನ ಭಕ್ತರ ತಿರಿವಂತೆ ಮಾಡುವ,
ಒರೆದು ನೋಡುವ ಸುವರ್ಣದ ಚಿನ್ನದಂತೆ.
ಅರೆದು ನೋಡುವ ಚಂದನದಂತೆ,
ಅಗಿದು ನೋಡುವ ಕಬ್ಬಿನಂತೆ,
ಬೆದರದೆ ಬೆಚ್ಚದೆ ಇದ್ದರೆ
ಕರವಿಡಿನೆತ್ತಿಕೊಂಬ ನಮ್ಮ ರಾಮನಾಥ"

ಎಂದರೆ–ದೇವನೊಲುಮೆಯುಂಟಾಗುವುದು ಹೀಗಿದ್ದರೆ ಮಾತ್ರ. ನಿದಾನ ಬುದ್ಧಿಯವರು ತಮ್ಮ ಸ್ವಾಮಿತ್ವದ ಪ್ರಾರಂಭಿಕ ಜೀವನದಲ್ಲಿ ಅನೇಕ ಸಂಕಷ್ಟಗಳನ್ನು

ಅನುಭವಿಸಬೇಕಾಯಿತು. ಅಂದಿನಿಂದಲೇ ಅವರ ಮುಂದಿನ ಬಾಳು ಹಸನಾಯಿತು.

ನಾನು ಶ್ರೀಗಳವರನ್ನು ನೋಡಿದ್ದು ೧೯೪೨ ರಲ್ಲಿ. ಅಷ್ಟರ ವೇಳೆಗಾಗಲೇ ಅವರಿಗೆ ಎಪ್ಪತ್ತಮೂರು ವರುಷ ಸಂದಿತ್ತು. ಅವರ ಕರಸಂಜಾತರಾದ ಶ್ರೀ|| ನಿ|| ಪ್ರ|| ಸ್ವಾ|| ಮಹಾಲಿಂಗಸ್ವಾಮಿಗಳವರು ಆಶ್ರಮವನ್ನು ಸ್ವೀಕರಿಸಿದ್ದರು. ಅವರೂ ಶ್ರೀ ನಿರ್ವಾಣ ಬುದ್ಧಿಯವರನ್ನು ನಾನು ಕಂಡಾಗ ಅವರಿಗಿನ್ನೂ ೪೦ ವರ್ಷಗಳಿರಬೇಕೆಂಬ ಭಾವನೆ. ಇನ್ನು ನಿಜಕ್ಕೂ ಅವರ ತಾರುಣ್ಯದಲ್ಲಿ ಸದೃಢ–ಸುಂದರದೇಹಿಗಳಾಗಿರಬೇಕು. ಶ್ರೀಗಳವರು ದೀರ್ಘದೇಹಿಗಳು, ಆಜಾನುಬಾಹುಗಳು, ದಷ್ಟಪುಷ್ಟವಾಗಿ ಮೈತುಂಬಿಕೊಂಡಿಲ್ಲದಿದ್ದರೂ ನೋಡಲು ಅಂದವಾದ ದೇಹ. ಮೈಬಣ್ಣ ನಸುಗೆಂಪು. ಅಂತರಂಗದ ಅರಿವು ಅವರ ಮುಖದ ಮೇಲೆ ಎದ್ದು ಕಾಣುತ್ತಿತ್ತು. ಈಗಿನ ಬಿ. ಎ., ಎಂ. ಎ. ಪದವಿಗಳನ್ನು ಲಗತ್ತಿಸಿಕೊಂಡಿಲ್ಲದಿದ್ದರೂ, ಕನ್ನಡದಲ್ಲಿ ಶರಣಸಾಹಿತ್ಯ, ಉಪನಿಷತ್ತಿನ ಯಾಜ್ಞವಲ್ಕ್ಯ ಗಾರ್ಗೇಯಿ ಸಂವಾದದ ಬಗೆಗೆ ಆಳವಾದ ಅನುಭವವಿದ್ದಿತು. ಈಗಿನ ವಿದ್ಯಾವಂತರಂತೆ ಅವರು ವಾಗ್ಮಿಗಳಲ್ಲ. ವಿತಂಡ ವಾದಿಗಳ ಗುಂಪಿನಿಂದ ಬಲುದೂರ. ಹಸುಗೂಸಿನಂಥ ಮನಸ್ಸು, ಅಪಾರ ಶಿಷ್ಯವಾತ್ಸಲ್ಯ. ನಿಕಟ ಸಂಪರ್ಕವುಳ್ಳ ಶಿಷ್ಯರೊಡನೆ ನಗುವಿನೊಡನೆ ಕೂಡಿದ ಮೃದು ಮಾತು. ಆ ಮಾತುಗಳು ವಾತ್ಸಲ್ಯವುಳ್ಳ ಮಾತೆಯ ಮಮತೆಯ ನಲ್ನುಡಿಯಂತೆ ಅತಿಮಾತಾಡದೆ ಮಿತವಾದ ಮಾತುಗಳಿಂದಲೇ ವ್ಯವಹಾರ. ಸದಾ ಕಾಯಕನಿರತವಾದ ದೇಹ; ಒಂದು ನಿಮಿಷವೂ ವ್ಯರ್ಥ ಕಾಲಾಪಹರಣ ಮಾಡಿದವರಲ್ಲ. ಶ್ರೀ ದೇಗುಲಮಠಕ್ಕೆ ಅವರು ಮಾತೃದೇವತೆ ಇದ್ದ ಹಾಗೆ. ಶ್ರೀ ಮಠಕ್ಕೆ ಆಗಮಿಸಿದ ಅತಿಥಿಗಳಿಗೆ ಅನುಕೂಲವಾಗಿ ಉಣಬಡಿಸಿ. ಅತಿಥಿಗಳು ತೃಪ್ತರಾದ ನಂತರ ಸ್ನಾನಾಹ್ನಿಕಗಳನ್ನು ಶ್ರೀಗಳವರು ಮುಗಿಸುತ್ತಿದ್ದರು. ಶರಣರ ಕಾಯಕ ನಿಷ್ಠೆ, ದಾಸೋಹಗಳನ್ನು ಜೀವನದಲ್ಲಿ ಅಳವಡಿಸಿಕೊಂಡಿದ್ದವರು ಶ್ರೀ ನಿರ್ವಾಣ ಬುದ್ಧಿಯವರು. ಅವರು ನಡೆದಾಡುವ ಕಾಯಕದಂತಿದ್ದರು. ಸೋಮಾರಿಗಳಿಗೆ ಅವರ ದರ್ಶನವೇ ಒಂದು ಜ್ವಲಂತ ಉದಾಹರಣೆ.

ಕಾಯಕದಿಂದ ಮನುಷ್ಯನಿಗೆ ತೃಪ್ತಿಯೂ, ಆ ಮೂಲಕ ಜೀವನದಲ್ಲಿ ಸುಖವೂ ಉಂಟಾಗುತ್ತದೆ. ತನ್ಮೂಲಕ ಮನಸ್ಸಿಗೆ ಆನಂದವಾಗುತ್ತದೆ. ಕಾಯಕದಿಂದ ಮನುಷ್ಯನಿಗೆ ಶಾಂತಿ, ಕಷ್ಟಗಳನ್ನೂ ಸಹಿಸಿಕೊಳ್ಳುವ ಧೈರ್ಯ, ಸುಖದುಃಖಗಳಲ್ಲಿ ಸಮಚಿತ್ತತೆ ಬರುತ್ತವೆ ಎಂಬುದನ್ನು ಶ್ರೀಗಳವರ ಜೀವನದಿಂದರಿಯಬಹುದು.

ಗುರು ಎಂಬ ಶಬ್ದ ಅಧಿಕವಾದುದು. ನಿಜವಾದ ಗುರು ಯಾರು ? ಗೀತೆ ಹೇಳುವಂತೆ, ಗುರುಪರಿಪೂರ್ಣ ಮಾನವ ಅವನ ಮನಸ್ಸು, ಬುದ್ಧಿಯಲ್ಲಿ ನೆಲೆಸಿರುತ್ತದೆ. ಲೋಕಹಿತಾರ್ಥಕ್ಕಾಗಿ. ಅತನ ಶಿಷ್ಯ ವ್ಯಯವಾದರೂ ಸಮಚಿತ್ತದಿಂದಿರುತ್ತಾನೆ. ಉಪನಿಷತ್ ಹೇಳುವಂತೆ, ಗುರುವಿಗೆ ಎರಡು ಅರ್ಹತೆಗಳಿರಬೇಕು. ಶಾಸ್ತ್ರಗಳ

ಸರಿಯಾದ ತಿಳಿವು ಮತ್ತು ಬ್ರಹ್ಮನಿಷ್ಠೆ, ಶಾಸ್ತ್ರಗಳ ಸರಿಯಾದ ತಿಳಿವಿಲ್ಲದ ಗುರುವು ತಾನರಿತ ತಿಳಿವಿನ ಬೆಳಕನ್ನು ತನ್ನ ಶಿಷ್ಯರಿಗೆ ಸರಿಯಾದ ರೀತಿಯಲ್ಲಿರುಹ ಲಾರನು. ಆದರೆ ಕೇವಲ ಪುಸ್ತಕಜ್ಞಾನ ಒಂದೇ ಸಾಲದು. ವ್ಯಕ್ತಿಗತವಾದ ವಿದ್ಯೆ ಎಂದರೆ ಪ್ರತಿಭೆ ಗರಿಗೆದರಬೇಕಾದರೆ ವ್ಯಕ್ತಿಯು ಅಂತರಂಗ ಯಥಾರ್ಥವಾಗಿದ್ದರೆ ಮಾತ್ರ ಸಾಧ್ಯ. ಬಹುಮಂದಿ ಬಲ್ಲಿದರಿರುತ್ತಾರೆ, ಅವರು ತಾವರಿತ ಜ್ಞಾನವನ್ನು ಮತ್ತೊಬ್ಬರಿಗರುಹುವಾಗ ಮೌನದಿಂದಲೇ ಅದನ್ನರುಹುತ್ತಾರೆ. ಅಂಥಹವರು ಮೌನಿಗಳು. ಬುದ್ಧಿಗೆ ಸಿಲುಕದ ವಿಷಯಗಳನ್ನು ಗುರುವು ಸುಲಭವಾಗಿ ಶಿಷ್ಯರಿಗೆ ತಿಳಿಸುತ್ತಾನೆ. ಇಂಥಹ ಮೌನಿಗಳು ಶ್ರೀ ನಿರ್ವಾಣ ಬುದ್ಧಿಯವರು.

ಅತ್ಯುತ್ತಮ ಶರಣರು ಶ್ರೀಗಳವರು. ಕಾಯಕದ ಘನತೆಯನ್ನರಿತು ಅದರಂತೆ ಆಚರಿಸಿದವರು ಅವರು. ಶರಣರ ಜೀವನವೇ ಅಂಥದು. ಸೋಮಾರಿತನವೆನ್ನುವುದು ಶರಣರಿಗೆ ಸೇರದ ಮಾತು. ದುಡಿಮೆಯೇ ಜೀವನದ ಕರ್ತವ್ಯ. ಪರಾವಲಂಬನೆ ಅವರಿಗೆ ಸೇರದು. "ಕಾರೇಸೊಪ್ಪಾಗಲಿ ಕಾಯಕ ಮುಖದಿಂದಲೇ ; ಇದಿಲ್ಲದೆ ಲಿಂಗಕ್ಕೆ ಸಲ್ಲದು" ಎಂಬುದು ಅವರ ವಿಚಾರ ಕ್ರಾಂತಿ. ದುಡಿಯದೆ, ಬೆವರುಸುರಿ ಸದೆ ತಿನ್ನುವ ಅನ್ನ ಸಾರ್ಥಕವಿಲ್ಲ. ಸಮಾಜಕ್ಕೆ ಹೊರೆಯಾಗಬಾರದು. ಸಮಾಜದ ಋಣವನ್ನು ಸಾಧ್ಯವಾದ ಮಟ್ಟಿಗೆ ತೀರಿಸಬೇಕು. ಕ್ರಿಯಾರಹಿತವಾದ ಜೀವನ ಜೀವನವಲ್ಲ-ಎಂಬುದನ್ನು ಶರಣರೇ ತಮ್ಮ ವಚನ ಸಂದೇಶದಲ್ಲಿ ಸಾರಿದ್ದಾರೆ :

"ಕೃಷಿಯ ಮಾಡಿ ಉಣ್ಣದೆ ಹಸಿವು ಹರಿವ ಪರಿ ಇನ್ನೆಂತೋ ?
ಕರ್ಮಯೋಗವ ಮಾಡದೆ ನಿರ್ಮಲ ಸುಚಿತ್ತವನರಿವ ಪರಿ ಇನ್ನೆಂತೋ ?
ಬೇಯದ ಅಶನವನುಂಬ ಠಾವಾವುದು? ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗಕ್ಕೆ"

ಕ್ರಿಯಾರಹಿತವಾದ ಜೀವನವನ್ನು ಶರಣರೆಂದಿಗೂ ಒಪ್ಪರು. ಇವುಗಳ ಹಿನ್ನೆಲೆ ಯಲ್ಲಿ ನೋಡಿದಾಗ "ಶರಣಮಾರ್ಗಕ್ಕೂ ಇಂದಿನ ಪ್ರಜಾಪ್ರಭುತ್ವಕ್ಕೂ ಎಷ್ಟು ನಿಕಟಸಂಬಂಧ. ಸಮಾಜದಲ್ಲಿ ಪ್ರತಿಯೊಬ್ಬನೂ ಹಳಿಗೆಯಾಗಬೇಕು. ಇದೇ ಶರಣ ಮಾರ್ಗ. ತಾವು ಒಬ್ಬ ಮಠಾಧಿಪತಿಗಳೆಂಬ **ಹಮ್ಮು-ಬಿಮ್ಮು** ಶ್ರೀ ನಿರ್ವಾಣ ಬುದ್ಧಿಯವರ ಬಳಿಸುಳಿಯುತ್ತಿರಲಿಲ್ಲ. ಹಗಲಿರುಳ-ಕಾಯಕ-ದಾಸೋಹ, ಬಂದವರಿಗೆ ಪ್ರಸಾದ ವಿನಿಯೋಗ. ಅದನ್ನು ಕಣ್ಣಾರ ಕಂಡವರಿಗೆ ಎಂದೆಂದಿಗೂ ಮರೆಯಲಾಗದ ದೃಶ್ಯ. ಪೂಜೆ-ಪ್ರಸಾದಗಳ ನಂತರ ಮಂಚದ ಮೇಲೆ 'ಸ್ವಲ್ಪ ವಿಶ್ರಾಂತಿ ತೆಗೆದು ಕೊಳ್ಳುವ ಪದ್ಧತಿ. ಆ ಸಮಯದಲ್ಲಿ ಶಿಷ್ಯಸಮೂಹದೊಡನೆ ವಾತ್ಸಲ್ಯ ಪೂರಿತ ಮಾತು. ಆ ಮಾತುಗಳಲ್ಲಿ ಮಿಡಿಯುತ್ತಿದ್ದ ಆತ್ಮೀಯತೆ ಹಾಗೂ ಅತ್ಯಂತ ಪ್ರೀತಿ ಎಂಥಹವರ ಮನಸ್ಸನ್ನಾದರೂ ಆಕರ್ಷಿಸುತ್ತಿದ್ದವು.

ಮಕ್ಕಳೆಂದರೆ ಶ್ರೀ ಸ್ವಾಮಿಜಿಯವರಿಗೆ ಅತ್ಯಂತ ಪ್ರೀತಿ. ಆಶ್ರಮದ ವಿದ್ಯಾರ್ಥಿ ಗಳೇ ಅವರ ಮಕ್ಕಳು. ಅವರೊಡನೆ ಆನಂದ ತುಂಬಿದ ಕೃಪಾದೃಷ್ಟಿಯಿಂದ ಮಾತ

ನುಡಿಯುತ್ತಿದ್ದರು. ಆಶ್ರಮಕ್ಕೆ ಬಂದವರೊಡನೆ, ಅವರ ಯೋಗಕ್ಷೇಮಗಳನ್ನು ಆತ್ಮೀಯ ಬಾಂಧವರಿಗಿಂತ ಆತ್ಮೀಯವಾಗಿ ವಿಚಾರಿಸುತ್ತಿದ್ದರು. ಅವರ ಸರಳ ಶಾಂತ ಸ್ವಭಾವಗಳು ಆದರ್ಶನೀಯವಾದವುಗಳು. ಉತ್ತಮ ಗುಣಗಳೆಲ್ಲ ಅವರಲ್ಲಿ ಮೈಗೂಡಿದ್ದವು. ಸಂಸಾರ ಪ್ರಪಂಚದಿಂದ ದೂರ ಸರಿದು ಗುಹೆ–ಗಹ್ವರಗಳಲ್ಲಿ ತನ್ನೊಬ್ಬನ ಆತ್ಮೋದ್ಧಾರ ಚಿಂತನೆಯನ್ನು ಮಾಡಿ ಎಂದು ಹೇಳಿದವರಲ್ಲ, ಬಾಳಿನಲ್ಲಿ ಬದುಕಿಗೆ ಬೆನ್ನು ತಿರುಗಿಸುವ ಹವ್ಯಾಸ ಅವರದಲ್ಲ. ಸಮಾಜದಲ್ಲಿದ್ದು ಜನತೆಯ ಸೇವೆಯನ್ನು ಸಲ್ಲಿಸುತ್ತಾ ಸಮಾಜದ ಕಲ್ಯಾಣಕ್ಕಾಗಿ ದುಡಿಯಬೇಕೆಂಬುದೇ ಅವರ ಸಂದೇಶ. ಈ ಜಗತ್ತು ಸತ್ಯ. ಇದು ಎಷ್ಟರ ಮಟ್ಟಿಗೆ ಸತ್ಯ ? ಇದರ ಸ್ವರೂಪವೇನು ? ಎಂಬ ಪ್ರಶ್ನೆಗಳಿಗೆ ಉತ್ತರ ಏನೇ ಇರಲಿ, **"ಇಲ್ಲಿ ನಾನು ಬಾಳಬೇಕಾಗಿದೆ, ಆ ಮೂಲಕ ಗುರಿಯನ್ನು ಕಂಡುಕೊಳ್ಳಬೇಕಾಗಿದೆ"**-ಎಂಬುದನ್ನಂತೂ ಯಾರೂ ಮರೆಯುವಂತಿಲ್ಲ ಮತ್ತು ಪ್ರಶ್ನಿಸುವಂತಿಲ್ಲ. ಆದುದರಿಂದ ಜಗತ್ತು ತ್ಯಾಜ್ಯವಾದುದಲ್ಲ. ಈ ಜೀವನ ಒಂದು ಕನಸೆಂದು ಬಾಳುವಂತಿಲ್ಲ. ಇದು ಪವಿತ್ರವಾದದ್ದು. ಅರಿವನ್ನು ಪಡೆಯುವ ಸಾಧನ. ಹಾಗಾಗುವಂತೆ ಬಳಸಿಕೊಂಡಾಗಲೇ ಇದರ ಸಾರ್ಥಕತೆ–ಇದು ಶರಣರು ಕಂಡ ಮಾನವನ ಸಮಸ್ಯೆಗೆ ಮೂಲದೃಷ್ಟಿ. ಅವರ ಅಮರಸಂದೇಶ ಇದನ್ನೇ ಸಾರುತ್ತದೆ.

**" ಮರ್ತ್ಯಲೋಕನೆಂಬುದು ಕರ್ತಾರನ ಕಮ್ಮಟವಯ್ಯ ;**
**ಇಲ್ಲಿಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ....ಕೂಡಲಸಂಗಮದೇವ "**

ಈ ಶರಣ ಸಂದೇಶದ ಅಂತರಾರ್ಥವನ್ನರಿತಿದ್ದವರು ಶ್ರೀ ನಿರ್ವಾಣಬುದ್ಧಿಯವರು. ಅಂತರಂಗ ಸದಾ ಶಾಂತವಾದದ್ದು. ಆ ದಿವ್ಯತತ್ತ್ವದಿಂದ ಅವರ ಮುಖದ ಮೇಲೆ ಸದಾ ಮಂದಹಾಸ ವ್ಯಕ್ತವಾಗುತ್ತಿತ್ತು. ಶ್ರೀಯವರ ದೃಷ್ಟಿಯಲ್ಲಿ ಮಾನವರೆಲ್ಲರೂ ಸಮಾನರು ಎಂಬ ಭಾವನೆಯಿದ್ದಿತು. ಅವರ ದೃಷ್ಟಿಯಲ್ಲಿ ಬಡವ ಬಲ್ಲಿದನೆಂಬ ಭಾವನೆಯು ಇರಲಿಲ್ಲ. ಸರ್ವ ಸಮತಾ ಭಾವನೆ ವಿಶ್ವಭ್ರಾತೃತ್ವ ವಿಶ್ವಪ್ರೇಮ ಒಡಮೂಡಿದ್ದವು. ಆದುದರಿಂದಲೇ ಯಾರೇ ಆಗಲಿ ಅವರನ್ನು ಭಕ್ತಿಯಿಂದ ಕಾಣುತ್ತಿದ್ದರು.

ಶ್ರೀ ಸ್ವಾಮಿಗಳವರು ಸರ್ವಸಂಗ ಪರಿತ್ಯಾಗಿಗಳು, ಕಾಮಿನಿ ಕಾಂಚನವನ್ನು ಗೆದ್ದವರು. ಶೀಲ ಸಂಪನ್ನರು, ದಯಾಪರರು. ಮತ್ತು ಶಿವಯೋಗಿಗಳು. ಆದರ್ಶಪ್ರಾಯವಾದ ನಿಸ್ಪೃಹ ನಡೆ ನುಡಿವಂತರು. ಸ್ವಾವಲಂಬಿಗಳಾದ ಸರಳ ಜೀವಿಗಳು. ಅಗಲವಾದ ಹಣೆಯಲ್ಲಿ ಯಾವಾಗಲೂ ವಿಭೂತಿಯು ಶೋಭಿಸುತ್ತಿದ್ದಿತು. ತಲೆಯಲ್ಲಿ ಅವರದೇ ಆದ ರೀತಿಯ ಪೇಟ ಕಂಗೊಳಿಸುತ್ತಿತ್ತು. ಬಹು ವಿನಮ್ರಶಾಲಿಗಳು, ಉಪಕಾರಿಗಳು, ಮೃದುಭಾಷಿಗಳು, ತುಂಬಾ ಕ್ಷಮಾಶೀಲರು. ಸಾಧು ಸತ್ಪುರುಷರನ್ನು ಕಂಡರೆ ತುಂಬಾ ಅಕ್ಕರೆಯಿಂದ ಆತ್ಮೀಯವಾಗಿ ಮಾತನಾಡಿ ಆಡಿಸುತ್ತಿದ್ದರು.

ಶ್ರೀಗಳವರ ಭೂತದಯಾಪರತೆಗೆ ಒಂದು ನಿದರ್ಶನ: ಸಾವಿರದ ಒಂಭೈನೂರ ನಲವತ್ತೊಂಭತನೆಯ ಇಸ್ವಿ. ಆ ವರ್ಷ ಮಳೆ ವಿಶೇಷವಾಗಿ ಬಿದ್ದು ತಾಯಿ ಅರ್ಕಾವತಿ ಪೂರ್ಣ ಪ್ರವಾಹ ಬಂದಿತು. ಅರ್ಕಾವತಿ ತೀರದ ಮೇಲಿರುವ ಶ್ರೀ ದೇಗುಲಮಠಕ್ಕೂ ನೀರೇರಿತು. ಅಂದು ಗೋವುಗಳನ್ನು ಹೊರಗೆ ಬಿಡಲಾಗಲಿಲ್ಲ. ವಿದ್ಯಾರ್ಥಿಗಳಾದ ನಾವೆಲ್ಲಾ ಶ್ರೀಮಠದ ಮೇಲ್ಚಾವಣಿಯನ್ನೇರಿ ಕುಳಿತೆವು. ಶ್ರೀಗಳವರು ತಮ್ಮಲ್ಲಿದ್ದ ಸುಮಾರು ಮೂವತ್ತು ಹಸುಗಳಿಗೆ ರಾಗಿಯ ಹಸಿ ಹಿಟ್ಟನ್ನು ಉಣಬಡಿಸಿದರಲ್ಲದೆ, ದಯಾರ್ದ್ರ ಹೃದಯರಾಗಿ ಅವುಗಳಮೈದಡವಿದರು. ಶ್ರೀಗಳವರ ಕೂಗು ಭಗವಂತನನ್ನು ಮುಟ್ಟಿತೋ ಎನ್ನುವ ಹಾಗೆ ಆಕಾಶ ನಿರ್ಮಲವಾಯಿತು. ಮಳೆ ಕಡಿಮೆಯಾಯಿತು. ನದಿಯಲ್ಲಿ ನೀರಿಳಿಯಿತು. ನಾವೆಲ್ಲಾ ಆನಂದದಿಂದ ನಲಿದಾಡಿದೆವು. ಶ್ರೀಗಳವರ ಹೃದಯ ಎಷ್ಟು ಮೃದುವಾದುದೆಂದರೆ ಹಸುಗಳಿಗೆ ಮೂಗುದಾರವನ್ನು ಹಾಕುವುದನ್ನು ಸಹಿಸುತ್ತಿರಲಿಲ್ಲ. ನೊಂದುಕೊಳ್ಳುತ್ತಿದ್ದರು. ಇದನ್ನು ಕಂಡಾಗ 'ಅಹಿಂಸಾ ಯೋಗಿ' ದಸರಯ್ಯನ ನೆನಪಾಗದಿರದು. ಆತನ ಅಹಿಂಸಾಧರ್ಮವನ್ನು ಷಡಕ್ಷರ ಕವಿ ಬಹಳ ಸೊಗಸಾಗಿ ಚಿತ್ರಿಸಿದ್ದಾನೆ. ಆತನು ನಡೆಯುವಾಗ ತನ್ನ ಪದಹತಿಯಿಂದ ಕ್ರಿಮಿ ಕೀಟಗಳು ಮಡಿಯುವುದೆಂದು ನಡಿಗೆ ಹಾಕುತ್ತಿದ್ದರು. ಅದನ್ನು ಕವಿಯ ಕಾವ್ಯವಾಣಿಯಲ್ಲಿಯೇ ಕೇಳಬೇಕು:

"ನಡೆವೆಡೆಯೊಳ್ ಪದಹತಿಯಿಂ
ಮಡಿಗುಂ ಕ್ರಿಮಿ ಸಮಿತಿಯೆಂದು ಬಗೆದಾರಯ್ದು।
ತ್ತುಡಿಯಿಡುವ ನೊಯ್ಯ ನೊಯ್ಯನೆ
ಪೊಡವಿಯೊಳಾ ದಸರನತಿ ದಯಾರಸ ಭರಿತಂ।

ಇಷ್ಟಕ್ಕೆ ದಸರಯ್ಯನವರ ಅಹಿಂಸಾ ಧರ್ಮ ಮುಗಿಯಲಿಲ್ಲ. ಆತನ ಹೃದಯ ಬಹು ಕೋಮಲವಾದದ್ದು. "ಸಕಲ ಜೀವಾತ್ಮರಿಗೆ ಲೇಸ ಬಯಸುವುದೇ" ಶರಣ ಸಂದೇಶ. ಗಿಡಮರಬಳ್ಳಿಗಳಿಂದ ಪುಷ್ಪಗಳನ್ನು ಬಿಡಿಸಿದರೆ ಅವುಗಳಿಗೆ ನೋವಾಗುವುದೆಂಬ ಮನೋಭಾವ. ಈ ತತ್ತ್ವದ ಹಿಂದಿರುವ ಭಾರತೀಯ ಸಂಸ್ಕೃತಿಯ ಸಾರ ಅಪಾರವಾದದ್ದು. ಶರಣ ದಸರಯ್ಯನವರ ಹೂವೆತ್ತುವ ರೀತಿ ಜಗಕೆ ನವೀನವಾದದ್ದು:

"ಹರಚರಣಾರ್ಚನಕ್ಕೆ ಪೊಸಪೂದಿರಿಯಲ್ಬನಕೆಯ್ದೆ ಪೂಗಳಂ
ತುರಿಸದೆ ನೀಳ್ದು ಕೊಯ್ಯೆ ಸೆಳೆ ಗೊಂಬುಡಿದಾಯಡೆಯಿಂದೆನತ್ತರೂ
ತ್ತರಿಸುತೆ ಸೂಸೆ ಜೊರ್ರೆನುತೆ ಪೂಗಿಡನೊಂದೆನೆನುತ್ತಳಲ್ದು ಸು
ತ್ತರೆ ನಡೆ ನೋಡಿ ನೊಂದು ಬಿಸುಟಾ ಕುಸುಮಾವಳಿಗುಬ್ಬೆ ಕಜ್ಜಮಂ॥

ಕುಸುಮಾವಳಿಕೊಯ್ವ ಕಾರ್ಯವನ್ನು ಬಿಡಲು ಸಾಧ್ಯವಿಲ್ಲ. ಭಗವಂತನ ಪೂಜೆ ನಡೆಯಬೇಕಲ್ಲ. ಅದಕ್ಕೋಸ್ಕರ ಸಮೀಚಿನವಿಧಾನದಿಂದ ಕುಸುಮವನ್ನು ಕೊಯ್ವ ಕಾರ್ಯ ಪ್ರಾರಂಭವಾಗುತ್ತದೆ.

“ಮರದಡಿಯೊಳ್ ಗೋಮಯದಿಂ
ವಿರಚಿಸಿ ಸಾರಣೆಯನಲ್ಲಿ ಮರೆಗಟ್ಟುತೆ ಕ।
ಮ್ಮರಲುದುರೆ ಕೊಂಡವಂ ಸ
ಚ್ಚರಿತಂ ಶಿವಪೂಜೆಗೆಯ್ವ ನೋಜೆಯೊಳನಿಶಂ॥

ವಿಜ್ಞಾನಯುಗದ ಭೌತಿಕವಾದಿಗಳಿಗೆ ದಸರಯ್ಯನವರ ರೀತಿ ವಿಪರೀತವಾಗಿ ಕಾಣಬಹುದು. ಆದರೆ ನಡೆ–ನುಡಿ ಭಾರತೀಯ ಸಂಸ್ಕೃತಿ ಚೌಕಟ್ಟಿನಲ್ಲಿದೆ. ಈ ಮೇಲಿನ ಸಾಮ್ಯ–ಸಾದೃಶ್ಯಗಳಲ್ಲಿ. ಶ್ರೀ ನಿರ್ವಾಣಬುದ್ಧಿಯವರು ಶರಣ ದಸರಯ್ಯನವರನ್ನು ಹೋಲುತ್ತಿದ್ದರು.

ಶ್ರೀ ನಿರ್ವಾಣ ಸ್ವಾಮೀಜಿಯವರ ಶಿಷ್ಯವಾತ್ಸಲ್ಯ ಮೆಚ್ಚತಕ್ಕಂತಹುದು. ಅವರಿಗೆ ಅಪಾರವಾದ ಭಕ್ತ ವೃಂದವಿದೆ. ಮೈಸೂರು ಸೀಮೆಯ ದಕ್ಷಿಣ ಭಾಗದಲ್ಲಿ ಅವರು ದಯಮಾಡಿಸದ ಮನೆಯೇ ವಿರಳ. ಯಾವಭಕ್ತನೇ ಆಗಲಿ, ಬಂದು ಬಿನ್ನಹ ಮಾಡಿದರೆಂದರೆ, ಅವನ ಸಿರಿ–ಸಂಪತ್ತುಗಳ ಪರಿವೆಯಿಲ್ಲದೆ, ಆತನ ಮನೆಗೆ ದಯಮಾಡಿಸುತ್ತಿದ್ದರು. ಈಗಲಾದರೂ ವಾಹನ ಸೌಕರ್ಯವಿರುವ ಕಾಲ. ಮೂವತ್ತು ವರ್ಷಗಳ ಹಿಂದೆ, ಶ್ರೀಗಳವರಿಗೆ ಸ್ವಂತವಾಹನ ಸೌಕರ್ಯವಿರಲಿಲ್ಲ. ಅಪ್ಪಿ–ತಪ್ಪಿ ಓಡಾಡುತ್ತಿದ್ದ ಕೆಲವೇ ಮೋಟಾರುಗಳು. ಅವುಗಳನ್ನವಲಂಬಿಸಿ ದೂರ ಪ್ರಯಾಣ ಮಾಡುತ್ತಿದ್ದರು. ಇನ್ನೂ ಮೂರು ನಾಲ್ಕು ಮೈಲಿ, ಅಷ್ಟೇಕೆ ಕೆಲವು ವೇಳೆ ಹತ್ತು ಮೈಲಿದೂರವನ್ನು ಕಾಲ್ನಡಿಗೆಯಲ್ಲಿಯೆ ನಡೆದು, ಭಕ್ತರ ಮನೆಗೆ ದಯಮಾಡಿಸಿ ಅವರ ಅಭೀಷ್ಟಗಳನ್ನು ನೆರವೇರಿಸುತ್ತಿದ್ದರು. ಶಿಷ್ಯರು ಕೊಡುವ ಅಲ್ಪ ಕಾಣಿಕೆ ಅಷ್ಟರಿಂದಲೇ ತೃಪ್ತಿ–ಸಂತೋಷ. ಇಷ್ಟೇ ಕಾಣಿಕೆ, ಇಂಥದೇ ಭೋಜನ ಎಂದು ನಿಗದಿಯಿರಲಿಲ್ಲ. ಶ್ರೀ ನಿರ್ವಾಣಬುದ್ಧಿಯವರೆಂದರೆ ಎಂತಹ ಹಸುಗೂಸಿಗೂ ಆನಂದ. ಅವರು ದೀನವರಿಪ್ರಿಯ ದೈವದಂತಿದ್ದರು. **“ನುಡಿದಂತೆ ನ ಡೆ ದು ತೋರಿಸಿದ ಮಹಾಶರಣರು”** ಬಹುಮುಗ್ಧ ಜೀವಿಗಳು. ಬಡ ಭಕ್ತರ ಮನೆಗೆ ದಯಮಾಡಿಸಿದಾಗ, ಅವರ ಕುಟುಂಬದ ಯೋಗ ಕ್ಷೇಮವನ್ನೆಲ್ಲಾ ವಿಚಾರಿಸಿ, ಮಕ್ಕಳನ್ನೆಲ್ಲಾ ವಾತ್ಸಲ್ಯದಿಂದ ಮೈದಡವಿ ಮುಂದಿನ ಕಾರ್ಯವನ್ನು ನೆರವೇರಿಸುತ್ತಿದ್ದರು. ಶ್ರೀ ನಿರ್ವಾಣಬುದ್ಧಿಯವರು ದಯಮಾಡಿಸಿದರೆಂದರೆ ಜನಕ್ಕೆ ಸಂಭ್ರಮ, ಸಡಗರ ನಿರ್ಭೀತಿಯಿಂದ ಮಾಡಿ ನೀಡುತ್ತಿದ್ದರು

ಶ್ರೀಗಳವರು ಮುಗ್ಧಜೀವಿಗಳಾದರೂ ವ್ಯವಹಾರದಲ್ಲಿ ಚತುರರು. ಸಮಯ ಮಿತಮಾತನಾಡುತ್ತಿದ್ದರು. ಮಾತಾಡುವುದು ಕಡಿಮೆಯಾದರೂ ಆಡಿದಮಾತುಗಳು

ಮುತ್ತಿನಂಥವು. ಒಮ್ಮೆ ಆಗಿನ ಮೈಸೂರು ರಾಜರಾದ ಶ್ರೀ ಜಯಚಾಮರಾಜ ಒಡೆಯರವರ ಸವಾರಿ ಶ್ರೀ ದೇಗುಲ ಮಠಕ್ಕೆ ದಯಮಾಡಿಸಿತು.

ಆಗಿನ ಕಾಲ ರಾಜರೆಂದರೆ ಬಹಳ ಗೌರವವಿದ್ದ ಕಾಲ. ವೇಳೆಗೆ ಸರಿಯಾಗಿ ರಾಜರು ದಯಮಾಡಿಸಿದರು. ಶ್ರೀ ನಿರ್ವಾಣಬುದ್ಧಿಯವರಿಗೂ ವಿಷಯ ತಿಳಿದಿದ್ದಿತು. ಸಾಮಾನ್ಯವಾದ ನಾವೆಲ್ಲ ತಿಳಿದಂತೆ, ಸ್ವಾಮೀಜಿಯವರು ಮುಗ್ಧರು, ರಾಜರೊಡನೆ ಯಾವರೀತಿಯಲ್ಲಿ ಸಂಭಾಷಿಸಿ ವ್ಯವಹರಿಸಬಲ್ಲರೆಂಬ ಆತಂಕ. ಶ್ರೀ ಮಠದಲ್ಲಿ ಸಕಲ ಏರ್ಪಾಡುಗಳೆಲ್ಲ ಸರಿಯಾಗಿ ಸಾಗಿದ್ದವು. ರಾಜರು ಬಂದನಂತರ ಶ್ರೀಸ್ವಾಮೀಜಿಯವರು ದಯಮಾಡಿಸಿದರು. ಬಂದೊಡನೆಯೇ ರಾಜರನ್ನು ಕುರಿತು ಆತ್ಮೀಯವಾಗಿ, ಅವರ ಯೋಗಕ್ಷೇಮ ಅವರ ಕುಟುಂಬದ ಯೋಗಕ್ಷೇಮಗಳನ್ನೆಲ್ಲಾ ವಿಚಾರಿಸಿದರು. ರಾಜರು ಶ್ರೀಗಳವರ ಮುಂದೆ ಹಸುಗೂಸಿನಂತಾಗಿ ಉತ್ತರವಿತ್ತರು. ಅಲ್ಲಿದ್ದವರಿಗೆಲ್ಲಾ ಆಸಂದಾಶ್ಚರ್ಯಗಳು ಏಕಕಾಲದಲ್ಲಾದವು. ಆಮುಗ್ಧ ಹೃದಯದಲ್ಲಿ ಎಂಥಹ ಚತುರತೆಯಿದೆ ಎಂದು ಕೊಂಡಾಡಿದರು.

ಶ್ರೀ ನಿರ್ವಾಣ ಬುದ್ಧಿಯವರು ಸಾಮಾನ್ಯರ ದೃಷ್ಟಿಗೆ ಸಾಮಾನ್ಯರೇ. **'ಬಲ್ಲವರೇ ಬಲ್ಲರು ಬೆಲ್ಲದ ಸವಿಯ'** ಎಂಬಂತೆ ಆ ಮಹನೀಯರನ್ನರಿಯಲು ಅಂಥವರೇ ಆಗಬೇಕು. ಭೌತಿಕ ಲಾಲಸೆಗಳಿಗೆ ಅಂಟಿಕೊಂಡು ತೊಳಲಾಡುವವರಿಗೆ ಅವರನ್ನರಿಯಲು ಸಾಧ್ಯವಿಲ್ಲ. ನಾನು ಮಹಾರಾಜರವರ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ಪೂಜ್ಯ ಶ್ರೀ ಗೌರೀಶಂಕರಸ್ವಾಮಿಯವರ ಸಾನ್ನಿಧ್ಯ-ಸಂದರ್ಶನಕ್ಕೆ ಹೋಗಿ ಬರುವ ಸುಯೋಗ ಒದಗಿದ್ದಿತು. ೧೯೪೯–೫೦ರ ಸರಿಸುಮಾರು. ಒಂದು ದಿವಸ ಶ್ರೀ ಗೌರೀಶಂಕರಸ್ವಾಮಿಗಳವರು ನನ್ನ ಸ್ನೇಹಿತರನ್ನೂ ಹಾಗೂ ನನ್ನನ್ನೂ ಕುರಿತು ಆತ್ಮೀಯ ಭಾವನೆಯಿಂದ "ಮಗು ಕನಕಪುರದ ನಿರ್ವಾಣ ಬುದ್ಧಿಯವರನ್ನು ನೋಡಿದ್ದೀಯಾ?" ಎಂದರು. "ನೋಡಿದ್ದೇನೆ ಬುದ್ಧಿ" ಎಂದು ಉತ್ತರಿಸಿದೆ. ಆದಕ್ಕೆ ಆ ಮಹಾ ಶಿವಶರಣರಿಂದ ಬಂದ ಉದ್ಗಾರ **"ಎಂಥಾ ಮುಗ್ಧ ಜೀವಿಗಳಪ್ಪ, ಕಾಯಕದ ಸಾಕಾರದ ಸರಳ ಮೂರ್ತಿಗಳವರು ಅವರ ದರ್ಶನ ಭಾಗ್ಯವೇ ಅತಿ ಹೆಚ್ಚಿನದು. ಅಂಥಹ ಶಿವಶರಣರು ಅತಿ ವಿರಳ"** ಎಂದವರೇ ಧ್ಯಾನಮಗ್ನರಾದವರಂತೆ ಕಣ್ಮುಚ್ಚಿದರು. ಶ್ರೀ ಗೌರೀಶಂಕರ ಸ್ವಾಮಿಗಳೆಂದರೆ ಮೂವತ್ತು ಮೂರು ವರ್ಷ ದೀರ್ಘಕಾಲ ಸಂಸ್ಕೃತ, ಇಂಗ್ಲಿಷ್. ಹಿಂದಿ, ಪಾಳೀ ಭಾಷೆ. ಇನ್ನೂ ಹಲವಾರು ಭಾಷೆಗಳಲ್ಲಿ ವ್ಯಾಸಂಗ ಮಾಡಿದ ಪ್ರಕಾಂಡ ಪಂಡಿತರು. ಇವರ ಪಾಂಡಿತ್ಯ ಪ್ರತಿಭೆ, ಆಚಾರ-ವಿಚಾರ ಸಂಪನ್ನತೆ ಮತ್ತು ಬೋಧನ ಕೌಶಲವನ್ನು ಕಂಡು ಕಾಶೀ ಹಿಂದೂ ವಿಶ್ವ ವಿದ್ಯಾನಿಲಯದವರು, ಇವರನ್ನು ಗೌರವ ಪ್ರಾಧ್ಯಾಪಕರನ್ನಾಗಿ ಆಹ್ವಾನಿಸಿ ನೇಮಿಸಿದ್ದರು. ಮೂರು ನಾಲ್ಕು ಗಂಟೆಗಳಕಾಲ ವೇದೋಪನಿಷತ್, ರಾಮಾಯಣ–ಮಹಾಭಾರತ ಮತ್ತು ಶಿವಶರಣರ ಬಗೆಗೆ, ಸಂಸ್ಕೃತ

ಹಾಗೂ ಕನ್ನಡ ಭಾಷೆಗಳಲ್ಲಿ ತನ್ಮಯತೆಯಿಂದ ವಿದ್ವತ್ ಸಭೆಗಳಲ್ಲಿ ಭಾಷಣ ಮತ್ತು ವ್ಯಾಖ್ಯಾನ ಮಾಡುತ್ತಿದ್ದರು. ಅಂಥವರು ಶ್ರೀ ನಿರ್ವಾಣ ಬುದ್ಧಿಯವರ ವಿಷಯದಲ್ಲಿ ಈ ಮಾತುಗಳನ್ನಾಡುವುದೆಂದರೆ ಮತ್ತಾರಿಂದಲೂ ಯೋಗ್ಯತಾಪತ್ರ ಅನಾವಶ್ಯಕ. **ಇಂಥ ಶರಣವರೇಣ್ಯರು ಶ್ರೀ ನಿರ್ವಾಣ ಬುದ್ಧಿಯವರು.**

ಮೊದಲೇ ಹೇಳಿರುವಂತೆ ಶ್ರೀ ನಿರ್ವಾಣ ಬುದ್ಧಿಯವರು ಹಲವನೋದಿದವರಲ್ಲ. ಅವರೆ ಆತ್ಮವಿಚಾರದಲ್ಲಿ ಆಳವಾಗಿ ಮುಳುಗಿದ್ದವರು. ಯಾವಾಗಲೂ ಆತ್ಮರತರು. ಹಲವನೋದಿ ಹಂಬಲಿಸುವವಗೆ ಶರಣರು ಮನಂಬುಗುವಂತೆ ಹೇಳಿರುವ ಮಾತಿದು:

"ಹಲವನೋದಿದೊಡೇನು ಹಲವ ಕೇಳಿದೊಡೇನು, ಹಲವ
ನೆನೆಸಿದೊಡೇನು; ಹಲವ ಗುಣಿಸಿದೊಡೇನು; ದೆಸೆದೆಸೆಗೆ
ಹಂಬಲಿಸಿದೊಡೇನು, ಮುಂದು ಹಿಂದೆನ್ನದೆ, ಸಂದು
ಸಂದೇಹಿಸದೆ ನಂಬು ನಂಬಲೆ ಮನವೇ. ನಂಬಿದ ಭಕ್ತರಿಗೆ
ಕಣ್ಣನಿತ್ತ, ನಂಬಿದ ಭಕ್ತರಿಗೆ ಕಾಲನಿತ್ತ, ನಂಬಿದ ಭಕ್ತರಿಗೆ
ಹೊನ್ನನಿತ್ತ. ನಂಬಿದ ಭಕ್ತರಿಗೆ ತನ್ನನಿತ್ತ ಕೂಡಲ ಸಂಗಯ್ಯ"

ಶ್ರೀಗಳವರು ಹಲವಕ್ಕೆ ಹಂಬಲಿಸದೆ ಆತ್ಮಲಿಂಗದಲ್ಲಿ ಅಚಲ ನಂಬಿಕೆ ಉಳ್ಳವರು. ಆದುದರಿಂದಲೇ, ಅವರು ಹಿಡಿದ ಕೆಲಸಗಳೆಲ್ಲಾ ಸುಗಮ. ನಡೆದ ದಾರಿಯೆಲ್ಲಾ ಪಾವನ. ಅವರ ಶಿವಯೋಗ ಬಲದಿಂದಲೇ ಅವರ ಉತ್ತರಾಧಿಕಾರಿಗಳಾದ ಶ್ರೀ॥ ಮ॥ ನಿ॥ ಪ್ರ॥ ಸ್ವ॥ ಮಹಾಲಿಂಗಸ್ವಾಮಿಗಳಂಥವರು ದೊರೆತದ್ದು. ಶ್ರೀ ನಿರ್ವಾಣ ಬುದ್ಧಿಯವರು ಶಾಂತ ಸ್ವಭಾವದ ಮಂದಗಾಮಿಗಳಾದರೆ, ಶ್ರೀ ಮಹಾಲಿಂಗಸ್ವಾಮಿಗಳವರು ಉತ್ತಮ ವ್ಯವಹಾರಿಗಳು. ಕಾರ್ಯತತ್ಪರರು, ಕಾಯಕದಲ್ಲಿ ಅಚಲ ನಿಷ್ಠೆಯುಳ್ಳವರು. ಅವರಲ್ಲಿರುವ ಬುದ್ಧಿ–ಭಾವನೆಗಳು ಅಸಾಧಾರಣವಾದವು. ೧೯೪೨ ರಲ್ಲಿ ಕೆಲವೇ ಮಂದಿ ವಿದ್ಯಾರ್ಥಿಗಳಿಂದ ಪ್ರಾರಂಭವಾದ ಶ್ರೀ ನಿರ್ವಾಣೇಶ್ವರ ವಿದ್ಯಾರ್ಥಿ ನಿಲಯದಲ್ಲಿ ಇಂದು ೭೦೦ ಕ್ಕೂ ಹೆಚ್ಚಿನ ವಿದ್ಯಾರ್ಥಿವೃಂದವಿದೆ. ಇವರ ನೇತೃತ್ವದಲ್ಲಿ ಪ್ರಾಥಮಿಕ, ಮಾಧ್ಯಮಿಕ ಹಾಗೂ ಪ್ರೌಢಶಾಲೆಗಳಿವೆ ಮತ್ತು ವೇದ ಸಂಸ್ಕೃತ ಪಾಠಶಾಲೆಗಳು ನಡೆಯುತ್ತಿವೆ. ಶ್ರೀ ಮಹಾಲಿಂಗಸ್ವಾಮಿಗಳವರ ಕಾರ್ಯತತ್ಪರತೆಯಿಂದಾಗಿ, ಮಾಗಡಿ ತಾಲ್ಲೂಕಿನ ವೀರೇಗೌಡನ ದೊಡ್ಡಿ, ಮಂಡ್ಯಜಿಲ್ಲೆಯ ಮಳವಳ್ಳಿ ತಾಲ್ಲೂಕಿನ ಹಲಸಹಳ್ಳಿಯಲ್ಲಿ ಗ್ರಾಮಾಂತರ ಪ್ರೌಢಶಾಲೆಗಳನ್ನು ಸ್ಥಾಪಿಸಿ ನಾಡಿನ ಜನತೆಗೆ ವಿದ್ಯೆ ಬುದ್ಧಿಯ ಪ್ರಚಾರ ನಡೆಯುತ್ತಿದೆ. ಇವಕ್ಕೆಲ್ಲಾ ಶ್ರೀ ನಿರ್ವಾಣ ಬುದ್ಧಿಯವರ ಕೃಪಾಶೀರ್ವಾದದ ಬಲವೇ ಮುಖ್ಯ ಕಾರಣ.

ನನ್ನ ಬಾಳಿನ ಅತಿ ಪ್ರಮುಖ ಘಟನೆ ನನ್ನ ಪಾಲಿನ ದೈವ ನನ್ನನ್ನು ಕರೆದು ಕೊಂಡುಹೋಗಿ ಶ್ರೀ ದೇಗುಲ ಮಠದಲ್ಲಿ ಶ್ರೀ ನಿರ್ವಾಣ ಬುದ್ಧಿಯವರ ಮತ್ತು ಶ್ರೀ ಮಹಾಲಿಂಗ ಸ್ವಾಮಿಗಳವರ ಬಳಿಯಲ್ಲಿ ಬಿಟ್ಟಿದ್ದು. ಅವರ ವಾತ್ಸಲ್ಯ ಪೂರ್ಣ ವಾದ ಸಾನ್ನಿಧ್ಯದಲ್ಲಿ ನನ್ನನ್ನು ನಾಲ್ಕು ವರ್ಷಗಳ ಕಾಲ ಇರಿಸಿದ್ದು, ಇದು ನನ್ನ ನಂಬಿಕೆ. ಎಲ್ಲಿಯೋ ಹುಟ್ಟಿ ಹೇಗೋ ಬೆಳೆದು, ಯಾವನೋ ಆಗಿದ್ದ ನನಗೆ, ಅವರ ದಿವ್ಯ ಸಾನ್ನಿಧ್ಯ ದೊರೆತದ್ದು **''ಎತ್ತಣ ಮಾಮರ, ಎತ್ತಣ ಕೋಗಿಲೆ, ಎತ್ತಣಿಂದೆತ್ತ ಸಂಬಂಧವಯ್ಯ"** ಎಂಬಂತೆ ದೈವ ವಿಲಾಸ ನನ್ನ ಪಾಲಿಗೆ ನನ್ನನ್ನು ಉದ್ಧರಿಸುವ ಶಕ್ತಿಯಾಗಿ ಪರಿಣಮಿಸಿತು. ಅವರ ಉಪದೇಶ-ಆಚಾರ-ವಿಚಾರವೆಲ್ಲವೂ ನನ್ನಲ್ಲಿದ್ದ ಕೊಂಕುಗಳನ್ನು ಸವರಿ ನನಗೆ ಬಾಳುವ ಮಾರ್ಗವನ್ನು ತೋರಿಸಿ ಕೊಟ್ಟವು.

ಸುಮಾರು ನೂರಮೂರು ವರ್ಷಗಳ ಸುದೀರ್ಘ ಕಾಲದವರೆವಿಗೆ ಶಿವಯೋಗಿಗಳವರು ಜೀವಿಸಿದ್ದರು. ಭಾರತದ ಮಠಗಳ ಇತಿಹಾಸದಲ್ಲಿ ಅವರ ಪವಿತ್ರ ನಾಮ "ಮಹಾ ಶಿವಯೋಗಿಗಳೆಂದು" ಚಿರಂತನವಾಯಿತು. ಇಷ್ಟು ದೀರ್ಘಕಾಲ ಬದುಕಿದ್ದರೂ ಅವರ ಬಾಳು ಉಪಯುಕ್ತವಾದದ್ದು. ಶತಮಾನವನ್ನು ಕಳೆದಿದ್ದರೂ ಅನಾರೋಗ್ಯದಿಂದ ನರಳಿದವರಲ್ಲ. ತಮ್ಮ ಪ್ರೀತಿಯ ಕಾಯಕವಾದ "ಬಿನ್ನಹ" ಗಳನ್ನು ಬಿಟ್ಟವರಲ್ಲ. ಶ್ರೀಗಳವರು ಲಿಂಗೈಕ್ಯರಾಗುವುದಕ್ಕೆ ಹಿಂದಿನ ದಿನ, ಬಿಜ್ಜಳ್ಳಿಯ ಭಕ್ತರ ಮನೆಗೆ ದಯಮಾಡಿಸಿದ್ದರು. ಅಲ್ಲಿಂದ ಹಿಂತಿರುಗಿದ ನಂತರ, ಪೂಜಾದಿ ನಿತ್ಯವಿಧಿಗಳನ್ನು ಮುಗಿಸಿ ಮಲಗಿದರು. ಬೆಳಿಗ್ಗೆ ಬಹಳ ವೇಳೆಯಾದರೂ ಏಳಲಿಲ್ಲ. ಎಚ್ಚರಿಸಲು ಹೋದವರನ್ನು 'ಚಿಕ್ಕ ಶ್ರೀಗಳವರು ದಯಮಾಡಿಸಿದಾರೆಯೆ ?' ಎಂದು ವಿಚಾರಿಸಿಕೊಂಡರು. ಹಿಂದಿನದಿನ ಚಿಕ್ಕಶ್ರೀಗಳವರು ಮೈಸೂರಿನ ಹತ್ತಿರಕ್ಕೆ ಭಕ್ತರ ಮನೆಗೆ ದಯಮಾಡಿಸಿದ್ದರು. ಹಿರಿಯ ಶ್ರೀಗಳವರ ಸ್ಥಿತಿಯನ್ನು ಕಂಡು, ಮಠದ ಸಿಬ್ಬಂದಿವರ್ಗ ಗಾಬರಿಗೊಂಡು ವೈದ್ಯರನ್ನು ಕರೆತಂದರು. ವೈದ್ಯರು ಶ್ರೀಗಳವರನ್ನು ನೋಡಿ ಶ್ರೀಗಳವರು ಲಿಂಗಾನಂದದಲ್ಲಿ ತಲ್ಲೀನರಾಗಿದ್ದಾರೆ. ಯಾವುದೋ ಅಪೂರ್ವ ವ್ಯಕ್ತಿಯ ಆಗಮನಕ್ಕಾಗಿ ಕಾಯುತ್ತಿದ್ದಾರೆ. ಅವರ ಈ ಲೋಕದ ಚಿಂತೆಯನ್ನು ಬಿಡಿ ಎಂದು ಜನಗಳಿಗೆ ತಿಳಿಸಿದರು. ಹಾಗಾದರೆ ಅವರು ನಿರೀಕ್ಷಿಸುತ್ತಿದ್ದ ಅಪೂರ್ವ ವ್ಯಕ್ತಿಗಳಾರು? ಅವರೇ ಚಿಕ್ಕ ಶ್ರೀಗಳಾದಂಥಾ ಶ್ರೀ॥ ಮ॥ ನಿ॥ ಪ್ರ॥ ಸ್ವ॥ ಮಹಾಲಿಂಗಸ್ವಾಮಿಗಳವರು. ಹೀಗಿರಬೇಕು ಗುರು–ಶಿಷ್ಯರ ವಾತ್ಸಲ್ಯ. ಶ್ರೀಗಳಿಬ್ಬರ ಗುರು – ಶಿಷ್ಯ ಸಂಬಂಧ ಅತಿಮಧುರವಾದುದು. ಆದರ್ಶನೀಯವಾದುದು ಹಾಗೂ ಅನುಕರಣೀಯವಾದುದು. ಶ್ರೀಗಳಿಬ್ಬರ ಪ್ರೇಮ ಜನಜನಿತವಾಗಿದ್ದಿತು. 'ಚಿಕ್ಕ ಶ್ರೀಗಳವರು ಮಠಕ್ಕೆ ದಯಮಾಡಿಸಿದರು' ಎಂದ ಮೇಲೆ ಸಂಜೆ ೬-೪೫ ಗಂಟೆಯಲ್ಲಿ ಶ್ರೀ ನಿರ್ವಾಣ ಬುದ್ಧಿಯವರು ಲಿಂಗೈಕ್ಯ

# “ಜನತೆಯ ಕಲ್ಯಾಣಮೂರ್ತಿ, ಶ್ರೀ ನಿರ್ವಾಣ ಮಹಾಸ್ವಾಮಿಗಳು”

● ವಿದ್ವಾನ್. ಜಿ. ವಿ. ಶಿವಸ್ವಾಮಿ
ಬೆಂಗಳೂರು

ಧರ್ಮ ಸಂಸ್ಕೃತಿಗಳಿಗೆ ತವರುನಾಡೆಂದು ಕೀರ್ತಿಪಡೆದ ಕರ್ನಾಟಕ ದೇಶವು ಅನೇಕ ಶಿವಯೋಗಿಗಳಿಗೆ ತಪೋಭೂಮಿಯಾಗಿದೆ. ಬೆಂಗಳೂರು ಜಿಲ್ಲಾ ಕನಕಪುರದ ಶ್ರೀ ದೇಗುಲಮಠವು ಅರ್ಕಾವತೀ ನದಿಯದಡದಲ್ಲಿ ಪ್ರಕೃತಿ ಸೌಂದರ್ಯದಿಂದ ಕೂಡಿ ಮಹಾ ಮಹಿಮರ ಕ್ಷೇತ್ರವಾಗಿದೆ. ತಪೋಧನರಾದ ಶ್ರೀ ನಿರ್ವಾಣ ಸ್ವಾಮಿಗಳವರ ತಪಸ್ಸಿನಿಂದ ಚೇತನ ಪಡೆದು ದಾರ್ಶನಿಕರನ್ನು, ಯೋಗಿಗಳನ್ನು, ಭಕ್ತಿಯುಳ್ಳ ಶಿಷ್ಯರನ್ನು, ದೇಶಪ್ರೇಮಿಗಳನ್ನು ಆಕರ್ಷಿಸಿ, ಅವರ ಆತ್ಮವನ್ನು ಪವಿತ್ರಗೊಳಿಸಿ ಆನಂದವನ್ನು ನೀಡಿದ ಪವಿತ್ರ ಕ್ಷೇತ್ರವಾಗಿದೆ.

ಈ ಕ್ಷೇತ್ರದಲ್ಲಿ ನಡೆಯುವ ಜ್ಞಾನ–ದಾಸೋಹ ಮತ್ತು ಇತರ ಎಲ್ಲಾ ಕಾರ್ಯಗಳಿಗೂ ಶಿವಯೋಗಿ ಶ್ರೀ ನಿರ್ವಾಣಸ್ವಾಮಿಗಳವರ ತಪೋಶಕ್ತಿಯು ಹಿನ್ನೆಲೆಯಲ್ಲಿ ನಿಂತು ಕೆಲಸಮಾಡುತ್ತಿರುವುದಾಗಿ ಶ್ರೀ ಮಠದ ಎಲ್ಲಾ ಭಕ್ತರು ತಿಳಿದಿರುತ್ತಾರೆ.

“ಒಮ್ಮೆ ಸಂಗನ ಬಸವಣ್ಣ ಬಂದು ಕಲ್ಯಾಣದಲ್ಲಿ ಒಂದು ಮನೆಯ ಕಟ್ಟಿದರೆ ಮರ್ತ್ಯಲೋಕವೆಲ್ಲವೂ ಭಕ್ತಿ ಸಾಮ್ರಾಜ್ಯವಾಯಿತು. ಆ ಮನೆಗೆ ತಲೆಬಾಗಿ ಹೊಕ್ಕವರೆಲ್ಲರೂ ನಿಜಲಿಂಗಪದವಂ ಪಡೆದರು” ಎಂಬ ವಚನದಂತೆ ಶಿಷ್ಯರು ಶ್ರೀ ಮಠಕ್ಕೆ ಬಂದು ಶ್ರೀಗಳ ದರ್ಶನ ಆಶೀರ್ವಾದ ಪಡೆದು ತಮ್ಮ ತಮ್ಮ ಮನೋಭಿಲಾಷೆಗಳನ್ನು ನೆರವೇರಿಸಿಕೊಳ್ಳುತ್ತಿದ್ದರು. ಶ್ರೀಗಳು ತಮ್ಮ ತಪಃಶಕ್ತಿಯನ್ನು ನಾಡಿನ ಎಲ್ಲಾ ವರ್ಗದ ಭಕ್ತರ ಕಲ್ಯಾಣಕ್ಕಾಗಿ ಧಾರೆ ಎರೆದು, ತಾವು ನಿಂತ ಕ್ಷೇತ್ರವನ್ನೇ ಭಕ್ತರ ಮುಕ್ತಿಯ ಕ್ಷೇತ್ರವನ್ನಾಗಿ ಮಾಡಿದರು.

**ಶ್ರೀಗಳ ಪ್ರತಿಭೆ** :–ಜ್ಞಾನಯೋಗಿಗಳಾದ ಶ್ರೀ ನಿರ್ವಾಣಸ್ವಾಮಿಗಳು ಬಡವ ಬಲ್ಲಿದ, ಉಚ್ಚ-ನೀಚನೆನ್ನದೆ ಮಾನವ ಕುಲವನ್ನೇ ಪ್ರೀತಿಸುತ್ತಿದ್ದರು. ಮಂತ್ರಮಯವಾದ ಅವರವಾಣಿ ಬಂದ ಭಕ್ತರಿಗೆ ಬದುಕಿನ ನೂತನ ಮಾರ್ಗವನ್ನೇ ತೋರುತ್ತಿತ್ತು. ಶ್ರೀಗಳ ತೇಜೋಕಾಂತಿಯನ್ನು ನೋಡಿದ ಎಂತಹ ನಾಸ್ತಿಕನೂ ಭಕ್ತಿಯಿಂದ ತಲೆಬಾಗುತ್ತಿದ್ದನು. ಶ್ರೀಗಳ ದಿವ್ಯ ವ್ಯಕ್ತಿತ್ವ, ಹೃದಯ ನೈರ್ಮಲ್ಯ, ಶಾಂತಗುಣ, ಸರಳಸ್ವಭಾವವೂ ತ್ರಿವೇಣಿ ಸಂಗಮದಂತೆ ಪವಿತ್ರವಾಗಿತ್ತು. ಬೆಳಗಿನ ಶಿವಪೂಜೆ ಮುಗಿಸಿ ಬಂದ ಭಕ್ತರ ಯೋಗಕ್ಷೇಮವನ್ನು ವಿಚಾರಿಸಿ. ನಾನು ಸ್ವಾಮಿ ಅವನು

ಭಕ್ತ ಎಂಬ ಭಾವನೆಯನ್ನೇ ತೋರಿಸಿಕೊಳ್ಳದೆ, ಅವರ ಬೇಡಿಕೆಗಳನ್ನೆಲ್ಲಾ ಶಾಂತವಾಗಿ ವಿಚಾರಿಸಿ, ಅವರವರ ಮನೋಗತಕ್ಕನುಸಾರವಾಗಿ ಉಪದೇಶಮಾಡಿ, ಅವರನ್ನು ತೃಪ್ತಿಗೊಳಿಸಿ ಹರ್ಷದಿಂದ ಕಳುಹಿಸುವುದು ಶ್ರೀಗಳ ದೈನಂದಿನ ಕಾಯಕವಾಗಿತ್ತು.

ಶ್ರೀ ನಿರ್ವಾಣ ಸ್ವಾಮಿಗಳು ತಮ್ಮ ಆಶ್ರಮೋಚಿತವಾದ ಧರ್ಮ ಕರ್ಮ ಪರಾಯಣರಾಗಿ ಪರಮಾತ್ಮನ ಪಾದಾರವಿಂದದಲ್ಲಿ ತಮ್ಮ ಅಂತರಿಂದ್ರಿಯವನ್ನು ನಿಲ್ಲಿಸಿ ಸಿದ್ಧ ಪುರುಷರಾಗಿ ಕಷ್ಟಕಾರ್ಪಣ್ಯಗಳಿಂದ ಕಂಗೆಟ್ಟು ಬಂದ ಮಾನವನಿಗೆ ತಪೋಬಲದಿಂದ ಅನುಗ್ರಹಿಸುತ್ತಿದ್ದರು. ಆದ್ದರಿಂದಲೇ ಶ್ರೀಗಳ ಪ್ರತಿಭೆ ಕರ್ನಾಟಕಾದ್ಯಂತ ಆವರಿಸಿ ಇಪ್ಪತ್ತನೆ ಶತಮಾನದ 'ಜನತೆಯ ಕಲ್ಯಾಣಮೂರ್ತಿ' ಎಂದು ಜನರು ಗುಣಗಾನ ಮಾಡುತ್ತಿದ್ದರು.

"ಮೊಸರು ಕಡೆಯಲು ಬೆಣ್ಣೆ । ಯೊಸೆದು ತೋರುವ ತೆರದಿ
ಹಸನಪ್ಪ ಗುರುವಿನುಪದೇಶದಿಂದ ಮುಕ್ತಿ । ವಶವಾಗದಿಹುದೆ ಸರ್ವಜ್ಞ ॥"

ಮೊಸರು ಕಡೆಯಲು ಚೆನ್ನಾಗಿ ಬೆಣ್ಣೆ ಗೋಚರವಾಗುವಂತೆ, ಒಳ್ಳೆಯ ಗುರುವಿನ ಉಪದೇಶದಿಂದ ಮುಕ್ತಿಯು ದೊರೆಯದೆ ಇರಲಾರದು ಎಂದು ಭಕ್ತರು ತಿಳಿದು, ಬಂದು ಶ್ರೀಮಠದಲ್ಲಿ ತಿಂಗಳು ಗಟ್ಟಲೆ ನಿಂತು ಸೇವೆಮಾಡಿ ಅವರ ಅನುಗ್ರಹಕ್ಕೆ ಕಾಯುತ್ತಿದ್ದರು.

ದಿವಾ ಪ್ರಕಾಶಕಃ ಸೂರ್ಯಃ ಶಶೀ ರಾತ್ರೌ ಪ್ರಕಾಶಕಃ ।
ಗೃಹಪ್ರಕಾಶಕೋ ದೀಪಸ್ತಮೋ ನಾಶಕರಃ ಸದಾ ॥
ರಾತ್ರೌದಿವಾಗೃಹಸ್ಯಾಂ ತೋಗುರುಃ ಶಿಷ್ಯಂಸದೈವಹಿ ।
ಅಜ್ಞಾನಾಖ್ಯಂ ತಮಸ್ತಸ್ಯಗುರುಃ ಸರ್ವಪ್ರಕಾಶಯೇತ್ ॥
ತಸ್ಮಾದ್ಗುರುಃ ಪರಂ ತೀರ್ಥಂ ಶಿಷ್ಯಾಣಾಮವನೀಪತೇ ।

(ಪದ್ಮ ಪುರಾಣ)

'ಸೂರ್ಯನು ಹಗಲಿನಲ್ಲಿ ಬೆಳಗುವನು, ಚಂದ್ರನು ರಾತ್ರಿಯಲ್ಲಿ ಬೆಳಗುವನು. ದೀಪವು ಮನೆಯನ್ನು ಬೆಳಗಿಸುವುದು. ಗುರುವು ಹಗಲಿನಲ್ಲಿಯೂ ರಾತ್ರಿಯಲ್ಲಿಯೂ ಸದಾ ಶಿಷ್ಯನ ಹೃದಯ ಮಂದಿರದಲ್ಲಿರುವ ಅಜ್ಞಾನಾಂಧಕಾರವನ್ನು ನಿವಾರಿಸುವನು. ಆದುದರಿಂದ ಗುರುವಿಗಿಂತ ಹೆಚ್ಚಿನದಾದ ತೀರ್ಥವು ಬೇರಿಲ್ಲ. ಗುರುದೇವನ ಚರಣವನ್ನು ಶರಣುಹೊಂದಿದ ಮಾನವನು ಗುರುವಿನ ಅನುಗ್ರಹದಿಂದ ಪಾವನನಾಗುತ್ತಾನೆ.

ಆದುದರಿಂದಲೇ ಅನೇಕ ಚರಮೂರ್ತಿಗಳು, ಮಠಾಧೀಶ್ವರರು, ಭಕ್ತರು ಬಂದು ಶ್ರೀ ನಿರ್ವಾಣ ಸ್ವಾಮಿಗಳನ್ನು ಆಶ್ರಯಿಸುತ್ತಿದ್ದರು. ಹೀಗೆ ಬಂದ ಜಗದ್ಗುರು ಚರಮೂರ್ತಿಗಳಿಗೂ, ಭಕ್ತರಿಗೂ ಶ್ರೀಗಳು ಶಿವಾದ್ವೈತ ತತ್ತ್ವಗಳನ್ನು,

ಪರಿಣಾಮಕಾರಿಯಾಗಿ ಬೋಧಿಸಿ ಅವರನ್ನು ಉತ್ತಮವಾದ ಧರ್ಮಮಾರ್ಗದಲ್ಲಿ ನಡೆಯುವಂತೆ ಪ್ರೇರೇಪಿಸಿರುತ್ತಾರೆ. ಶ್ರೀಗಳ ನುಡಿಯಿಂದ ಚೇತನಗೊಂಡ ಅನೇಕ ಮಠಾಧೀಶ್ವರರು ನಾಡಿನ ನಾನಾಜಿಲ್ಲೆಗಳಲ್ಲೂ ಶ್ರೀಗಳ ಪ್ರತಿಭೆಯನ್ನು ಪ್ರಚಾರ ಪಡಿಸಿದ್ದಾರೆ.

## ಅನ್ನ ಮತ್ತು ವಿದ್ಯಾದಾನ

ಶ್ರೀಗಳ ನಡೆ ನುಡಿಯೆಲ್ಲವೂ ಆದರ್ಶಮಯವಾದುದು. "ಪರೋಪಕಾರಾಯ ಸತಾಂ ವಿಭೂತಯಃ" ಎಂಬ ನುಡಿಯಂತೆ ಅವರ ಜೀವನ ಪರೋಪಕಾರಕ್ಕಾಗಿಯೇ ಎಂಬುದು ಕೃತಿಯಲ್ಲಿ ಎದ್ದು ಕಾಣುತ್ತಿತ್ತು.

ಸ್ವಾಮಿಗಳವರು ತಮ್ಮ ಅಧಿಕಾರ ಅವಧಿಯಲ್ಲಿ ದೇಗುಲಮಠವನ್ನು ಸರ್ವತೋಮುಖ ಅಭಿವೃದ್ಧಿ ಮಾಡಿ, ಆ ನಾಡಿನ ಮಕ್ಕಳ ಜ್ಞಾನಾಭಿವೃದ್ಧಿಗಾಗಿ ಸಂಸ್ಕೃತ ಮತ್ತು ವೇದ ಪಾಠಶಾಲೆ, ಮಾಧ್ಯಮಿಕ ಶಾಲೆ. ಅನೇಕ ಪ್ರೌಢಶಾಲೆಗಳನ್ನು ತೆರೆದು ಜನತೆಗೆ ಉಪಕಾರ ಮಾಡಿದ್ದಾರೆ. ಎಲ್ಲಾ ಮತೀಯ ಸುಮಾರು ೭೦೦ ಜನ ವಿದ್ಯಾರ್ಥಿಗಳಿಗೆ ಉಚಿತ ಪ್ರಸಾದ ನಿಲಯವನ್ನು ತೆರೆದು ಪ್ರಸಾದಕ್ಕೆ ಅನುಕೂಲ ಮಾಡಿದ್ದಾರೆ. ಎಲ್ಲಾ ದಿನಗಳಲ್ಲಿಯೂ ಪ್ರಸಾದ ನಡೆಯುತ್ತಲೇ ಇರುತ್ತದೆ.

ಅನ್ನದಾನಗಳಿಂದ । ಇನ್ನು ದಾನಗಳಿಲ್ಲ ।
ಅನ್ನಕ್ಕೆ ಮಿಗಿಲು ಇನ್ನಿಲ್ಲ ಜಗದೊಳಗೆ ।
ಅನ್ನವೇ ಪ್ರಾಣ ಸರ್ವಜ್ಞ ॥

ಅನ್ನದಾನಕ್ಕಿಂತ ಹೆಚ್ಚಾದ ದಾನವು ಯಾವುದೂ ಇರುವುದಿಲ್ಲ. ಅಲ್ಲದೆ ಅನ್ನಕ್ಕಿಂತ ಮಿಗಿಲಾದುದು ಯಾವುದೂ ಇಲ್ಲ. ಆದ್ದರಿಂದ ಜನತೆಗೆ ಅನ್ನವೇ ಪ್ರಾಣ ಎಂದು ತಿಳಿದ ಶ್ರೀಗಳು ಎಂಥಾ ಕ್ಷಾಮ ಕಾಲದಲ್ಲೂ ದಾಸೋಹವನ್ನು ನಿಲ್ಲಿಸಿದವರಲ್ಲ. ಮಠಕ್ಕೆ ಬಂದ ಭಕ್ತಾದಿಗಳು ಶ್ರೀಗಳನ್ನು ಹೀಗೆ ಕೇಳುತ್ತಿದ್ದರು. "ಬುದ್ಧಿ, ತಾವು ಎಲ್ಲಾ ವರ್ಗದ ವಿದ್ಯಾರ್ಥಿಗಳಿಗೂ ಅನ್ನವನ್ನು ನೀಡುತ್ತೀರಿ ತಮಗೆ ಎಷ್ಟು ವೆಚ್ಚವಾಗುತ್ತದೆ ? ಇವರೆಲ್ಲ ತಮ್ಮಲ್ಲಿ ಭಕ್ತಿ, ಗೌರವದಿಂದ ನಡೆದುಕೊಳ್ಳುವರೇ? ತಮಗೆ ಏತಕ್ಕೆ ಇಷ್ಟು ತೊಂದರೆ?" ಎಂದು ಕೇಳಿದರೆ,

ಶ್ರೀಗಳು ನಕ್ಕು, ಕೇಳಿದ ಭಕ್ತರಿಗೆ 'ಎಲ್ಲರೂ ಶಿವನ ಮಕ್ಕಳು, ಅವರನ್ನು ಚೆನ್ನಾಗಿ ಊಟ ಮಾಡಿಸಿ, ಓದಿಸುವುದಕ್ಕಿಂತ ಒಳ್ಳೆಯ ಕಾರ್ಯ ಯಾವುದು ?

ಅನ್ನವನು ಇಕ್ಕುವ । ಅನ್ಯ ಜಾತನೆ ಕುಲಜ
ಅನ್ನವನು ಇಕ್ಕದುಣುತಿಪ್ಪ ಕುಲಜತಾ ।
ಅನ್ಯರೆಂದರಿಗು ಸರ್ವಜ್ಞ ॥

'ಅನ್ನವನು ಇಕ್ಕುವವನು ಅವನು ಯಾವ ಜಾತಿಯವನೇ ಇರಲಿ ಒಳ್ಳೆಯವನೆಂದು ತಿಳಿಯುತ್ತೇವೆ. ಅನ್ನವನೀಯದೆ ತಾನೇ ತಿನ್ನುವಂಥ ಸ್ವಜಾತೀಯನು ಕೂಡ ಪರದೇಶಿಯೇ ಶಿವ. ಅವನು ಸ್ವಜನನಲ್ಲ! ಸರ್ವಜ್ಞ ಹೇಳಿಲ್ಲವೇ?, ಎಂದು ಉತ್ತರಿಸುತ್ತಿದ್ದರು. ಕೇಳಿದ ಭಕ್ತರು ಆಗ ಸುಮ್ಮನಿರುತ್ತಿದ್ದರು.

ಶ್ರೀ ನಿರ್ವಾಣಸ್ವಾಮಿಗಳು ವಿದ್ಯಾರ್ಥಿಗಳಿಗೆ ದಾಸೋಹದ ಜೊತೆಯಲ್ಲಿ, ಸಾಹಿತ್ಯ, ದೈವಭಕ್ತಿ, ಸಮಾಜ ಪ್ರೇಮ, ಜೀವನದಲ್ಲಿ ಕಾಯಕನಿಷ್ಠೆ, ತ್ಯಾಗಮಯ ಜೀವನ, ಸಮಾನತೆ, ಇತ್ಯಾದಿ ವಿಷಯಗಳನ್ನು ಉಪದೇಶ ಮಾಡಿ ಅವರನ್ನು ಉತ್ತಮ ಸುಸಂಸ್ಕೃತರನ್ನಾಗಿ ಮಾಡಿರುತ್ತಾರೆ.

## ಶಿವನ ಚಿಂತನೆ

ಶಿವಯೋಗಿ ಶ್ರೀ ನಿರ್ವಾಣಸ್ವಾಮಿಗಳು ಶಿವನಲ್ಲಿ ಬೆರೆಯಲು ತಮ್ಮ ಅಮೂಲ್ಯ ವೇಳೆಯನ್ನೆಲ್ಲ ಶಿವನ ಚಿಂತನೆಯಲ್ಲಿಯೇ ಕಳೆಯುತ್ತಿದ್ದರು.

ಸುಖದುಃಖಾದಿಯೋಗೇಷು ನಾಭಾವೋ ಭಾವಾ ಏವವಾ ।
ವಿದ್ಯೇತೇ ಚಿತ್ಸ್ವರೂಪಸ್ಯ ನಿರ್ಲೇಪಸ್ಯ ಮಹಾತ್ಮನಃ।

ಎಂಬ ಶ್ರೀ ರೇಣುಕಾಚಾರ್ಯರ ವಾಣಿಯಂತೆ, ಚಿತ್ಸ್ವರೂಪನೂ ನಿರ್ಲಿಪ್ತನೂ ಆದ ಶಿವಯೋಗಿಗೆ ಸುಖದುಃಖಾದಿ ಸಂಬಂಧಗಳಿಲ್ಲ. ಸುಖದುಃಖಗಳು ನನಗುಂಟೆಂಬ ಭಾವನೆಯಾಗಲಿ, ನನಗಿಲ್ಲವೆಂಬ ಅಭಾವವಾಗಲಿ, ಯಾವುದೂ ಇರುವುದಿಲ್ಲ. ಅದರಂತೆ ಶಿವಯೋಗದಲ್ಲಿಯೇ ಶ್ರೀಗಳು ತಮ್ಮ ವೇಳೆಯನ್ನೆಲ್ಲ ವ್ಯಯಮಾಡ ತೊಡಗಿದರು. "ಲಿಂಗ ವಿಕಾರಿಗೆ ಅಂಗ ವಿಕಾರವೆಂಬುದಿಲ್ಲ, ಜಂಗಮ ವಿಕಾರಿಗೆ ಧನ ವಿಕಾರವೆಂಬುದಿಲ್ಲ, ಪ್ರಸಾದವಿಕಾರಿಗೆ ಮನವಿಕಾರವೆಂಬುದಿಲ್ಲ. ಇಂತೀ ತ್ರಿವಿಧ ಗುಣವನರಿತಾತನು, ಅಚ್ಚ ಲಿಂಗೈಕ್ಯನು ಕೂಡಲಸಂಗಮದೇವಾ."

ಲಿಂಗವನು ನಂಬಿದವಗೆ ಅಂಗದ, ಜಂಗಮವನ್ನು ನಂಬಿದವಗೆ ಧನದ, ಪ್ರಸಾದವನ್ನು ನಂಬಿದವಗೆ ಮನವಿಕಾರವೆಂಬುದು ಇರುವುದಿಲ್ಲ. ಅದಕ್ಕಾಗಿ, ಓ ಕೂಡಲಸಂಗಮ ದೇವಾ! ಈ ತ್ರಿವಿಧ ಗುಣಗಳನ್ನು ಅರಿತಂಥವನು ನಿಜಕ್ಕೂ ಲಿಂಗೈಕ್ಯನು ಎಂಬ ಬಸವಣ್ಣನವರ ನುಡಿಯಂತೆ ಶ್ರೀಗಳು ಶಿವಮಂತ್ರ, ಶಿವಭಜನೆ, ಶಿವಸ್ಮರಣೆ, ಶಿವಾರ್ಚನೆ, ಶಿವಾರ್ಪಣೆ ಕಡೆಗೆ ತಮ್ಮ ಮನಸ್ಸನ್ನು ಕೊಟ್ಟು ಶಿವಯೋಗದಲ್ಲಿಯೇ ಮಗ್ನರಾದರು. ಯಾವ ಶಿವನನ್ನು ಪೂಜಿಸುತ್ತಿದ್ದರೋ ಆ ಶಿವನಲ್ಲಿಯೇ ಆನಂದದಿಂದ ೧೯೭೩ನೇ ಜನವರಿ ೩ರಂದು ಶ್ರೀಗಳು ಐಕ್ಯವಾದರು.

## ನಾಡಿನ ಜ್ಯೋತಿ ದಿವ್ಯಜ್ಯೋತಿಯಲ್ಲಿ ಐಕ್ಯವಾಯಿತು

ಜನವರಿ ೩ರಂದು ಎಂದೂ ಇಲ್ಲದ ಅಂಧಕಾರ ಶ್ರೀ ದೇಗುಲ ಮಠದಲ್ಲಿ. ಶಿಷ್ಯಂದಿರ ಕೂಟದ ಮಹಾಜಾತ್ರೆ. ಎಲ್ಲರ ಮುಖದಲ್ಲೂ ಶ್ರೀಗಳ ಸ್ಮರಣೆ,

ಶಿವಭಜನೆ. ತಾವು ನಿಂತ ಸ್ಥಳವನ್ನೇ ಶಿವನ ತಾಣವನ್ನಾಗಿ ಮಾಡಿದ ನಮ್ಮ ಶಿವ ಯೋಗಿ ಎಂದು ಗುಣಗಾನ. 'ತಾಯಿಯನ್ನು ಕಳೆದುಕೊಂಡ ಮಗುವಿನಂತೆ' ಶಿಷ್ಯರ ಮುಖದಲ್ಲಿ ದುಃಖ ಮೂಡಿಬರುತ್ತಿತ್ತು. ಅಣ್ಣನವರ ನುಡಿ ನನಗೆ ದಿವ್ಯಾಮೃತ "ಮರಣವೇ ನನಗೆ ಮಹಾನವಮಿ" ಎಂದು ಹೇಗೆ ನುಡಿಯುತ್ತಿದ್ದರೋ ಆ ಮಹಾ ನವಮಿಯನ್ನು ನೋಡೇಬಿಟ್ಟರು. ಅವರ ಬಾಳಿನ ಜ್ಯೋತಿ ಶಿಷ್ಯರ ಕಣ್ಣಿಗೆ ಕಾಣದಾಯಿತು. ಅವರ ಆತ್ಮಜ್ಯೋತಿ ಆ ದಿವ್ಯಜ್ಯೋತಿಯಲ್ಲಿ ಐಕ್ಯವಾಯಿತು. ಶ್ರೀಗಳು ಜಗಜ್ಯೋತಿಯಾದರು.

---

ಮರ ಮರ ಮಥನಿಸಿ ಕಿಚ್ಚು ಹುಟ್ಟಿ
ಸುತ್ತಣ ತರುಮರಾದಿಗಳ ಸುಡಲಾಯಿತ್ತು
ಆತ್ಮವಾತ್ಮ ಮಥನಿಸಿ ಅನುಭಾವ ಹುಟ್ಟಿ
ತನುಗುಣಾದಿಗಳ ಸುಡಲಾಯಿತ್ತು.
ಇದು ಕಾರಣ ನಿಮ್ಮ ಮಹಾನುಭಾವಿಗಳ
ಅನುಭಾವವ ತೋರಿ
ಎನ್ನೊಡಲನುಳುಹಿಕೊಳ್ಳಾ ಚೆನ್ನಮಲ್ಲಿಕಾರ್ಜುನಾ.

—**ಮಹಾದೇವಿಯಕ್ಕ**

ನೆರೆಕೆನ್ನೆಗೆ, ತೆರೆಗಲ್ಲಕ್ಕೆ, ಶರೀರಗೂಡುವೋಗದ ಮುನ್ನ,
ಹಲ್ಲುಹೋಗಿ ಬೆನ್ನುಬಾಗಿ ಅನ್ಯರಿಗೆ ಹಂಗಾಗದ ಮುನ್ನ,
ಕಾಲಮೇಲೆ ಕೈಯನೂರಿ ಕೋಲ ಹಿಡಿಯದ ಮುನ್ನ,
ಮುಪ್ಪಿಂದೊಪ್ಪವಳಿಯದ ಮುನ್ನ
ಮೃತ್ಯು ಮುಟ್ಟದ ಮುನ್ನ
ಪೂಜಿಸು ನಮ್ಮ ಕೂಡಲ ಸಂಗಮ ದೇವನ.

# ಶ್ರೀ ಶ್ರೀ ನಿರ್ವಾಣ ಶಿವಯೋಗಿ

● ಶ್ರೀಮತಿ ಸ್ವರ್ಣಮ್ಮ
ಬೆಂಗಳೂರು

ನೂರರ ಗಡಿಯನ್ನು ದಾಟಿದ ವಯಸ್ಸು. ಬಾಗಿದ ಬೆನ್ನು. ಕಾವಿಯ ಸರಳ ಉಡಿಗೆ, ವಿಭೂತಿಯಿಂದ ರಾರಾಜಿಸುವ ಲಲಾಟ, ಮಂದಹಾಸವನ್ನು ಸೂಸುವ ಮುಖ ಕಮಲ, ಅರ್ಧ ನಿಮೀಲಿತ ನೇತ್ರಗಳು, ಕಂಠದಲ್ಲಿ ಶೋಭಿಸುವ ರುದ್ರಾಕ್ಷಿ ಮಾಲೆ, ಕೈಯಲ್ಲಿ ಯೋಗದಂಡವೋ ! ಎನಿಸುವ ಊರೆಗೋಲು, ಇದು ಕನಕಪುರದ ಶ್ರೀ ದೇಗುಲ ಮಠಾಧ್ಯಕ್ಷರಾದ ಶ್ರೀ ಶ್ರೀ ನಿರ್ವಾಣ ಶಿವಯೋಗಿಗಳ ಬಾಹ್ಯ ಚಿತ್ರ. ಈ ಪುಣ್ಯಮೂರ್ತಿಯ ದರ್ಶನ ಪಡೆದವರು, ಶರಣಾದವರು ಪುಣ್ಯಜೀವಿಗಳು ಎಂದರೆ ಅತಿಶಯೋಕ್ತಿಯಾಗಲಾರದು. ಇನ್ನು ಶ್ರೀಗಳವರ ಆತ್ಮಶ್ರೀಯನ್ನು ಅರ್ಥಮಾಡಿಕೊಳ್ಳುವುದು ಸಮುದ್ರವನ್ನು ಅಳೆಯುವ ಸಾಹಸದಂತೆ. ಅವರವರ ಭಾವಕ್ಕೆ ತಕ್ಕಂತೆ. ಶ್ರೀ ಶ್ರೀಗಳವರ ಜೀವನ ಒಂದು ತಪೋರಂಗ. ಅವರು ಲೋಕದಲ್ಲಿ ಇದ್ದೂ ಇಲ್ಲದಂತಿದ್ದರು. 'ಸಮತೆ ಎಂಬ ಕಂತೆಯ ತೊಟ್ಟು, ಸುಬುದ್ಧಿ ಎಂಬ ಟೊಪ್ಪರವ ಸಿಕ್ಕ' ಕಾರಣ ಮಾತ್ರದಿಂದ ಇಳೆಗೆ ಬಂದ ಪುಣ್ಯ ಪುರುಷರು. ಶಿವಯೋಗ ಸಂಪನ್ನರಾದ ಶ್ರೀಗಳವರು ಆಡಂಬರದ ಜೀವನಕ್ಕೆ ಬಹುದೂರವಾದವರು. ಅವರ ಶಿವಪೂಜಾ ವಿಧಾನ, ಉಡಿಗೆ ತೊಡಿಗೆ ಪ್ರಸಾದ ಇವು ತೀರಾ ಸಾಮಾನ್ಯದಾದುವು. ಅವರು ಯಾವ ಸಭೆಗಳಲ್ಲೂ ಭಾಗವಹಿಸುತ್ತಿರಲಿಲ್ಲ. ಭಾಷಣ ಮಾಡುತ್ತಿರಲಿಲ್ಲ. ಶಾಂತ ಸರೋವರದಂತೆ ಅವರ ಬಗೆ. ಅಲ್ಲಿ ಭೋರ್ಗರೆದು ಬರುವ ಅಲೆಗಳಿಲ್ಲ, ಧುಮುಕುವ ಜಲಪಾತವಿಲ್ಲ. ಅವರ ಹೃದಯ ಮುಗಿಲಿನಷ್ಟು ವಿಶಾಲ. ಅಲ್ಲಿ ಎಲ್ಲರಿಗೂ ಸಮಾನ ಸ್ಥಾನವುಂಟು. ಕೋಪ ತಾಪಗಳನ್ನು ಎಂದೂ ಕಂಡರಿಯದ ಜೀವ ಅದು. ಬೇಕು- ಬೇಡವೆಂದ ಅಜ್ಞಾನವಾಗಲಿ, ಮೇಲು ಕೀಳು ಎಂಬ ಭೇದ ಭಾವವಾಗಲಿ ಅವರಿಗೆ ಇರಲಿಲ್ಲ. ಮಗುವಿನಂತೆ ಸರಳವಾಗಿ ಎಲ್ಲರೊಡನೆ ಬೆರೆಯುತ್ತಿದ್ದರು. ಸದಾ ಸೌರಭವನ್ನು ಸೂಸುವ ಮಂದಮಾರುತದಂತೆ ಬಳಿಗೆ ಬಂದವರಿಗೆ ತಂಪೆರೆಯುತ್ತಿದ್ದರು. ಊಟಕ್ಕೆ ಬಡಿಸುವಾಗ ಅನ್ನಪೂರ್ಣೆಯಂತೆ ತಾವೇ ಕೈತುಂಬ ಪ್ರಸಾದ ನೀಡುತ್ತಿದ್ದರು. ಈ ಬಗೆಯ ಸಮತಾ ಭಾವ ಅತಿವಿರಳ. ಇದು ಜ್ಞಾನಿಗಳಿಗೆ ಮಾತ್ರ ನಿಲುಕುವ ಭಾವ. ಶ್ರೀ ಶ್ರೀಗಳವರು ಶಿವೈಕ್ಯರಾದ ಸಮಯದಲ್ಲಿ ಹಿಂದುಗಳು ಮಾತ್ರವಲ್ಲದೆ ಮುಸಲ್ಮಾನರೂ ಕೂಡ ಭಕ್ತಿ ಗೌರವಗಳನ್ನು ಸಲ್ಲಿಸಿದರು.

## ಶ್ರೀ ದೇಗುಲ ಮಠದ ಪರಂಪರೆಯಲ್ಲಿ
# ಚರಮೂರ್ತಿ ಇಮ್ಮಡಿ ಮಹಾಲಿಂಗ ಸ್ವಾಮಿಗಳು

● ಎನ್. ಮಹಾದೇವಪ್ಪ, ಎಂ. ಎ., ಬಿ.ಎಡ್

ಕರ್ನಾಟಕದ ರಾಜಧಾನಿ ಬೆಂಗಳೂರು ನಗರದ ದಕ್ಷಿಣ ದ್ವಾರದ ರಾಜ್ಯ ಹೆದ್ದಾರಿಯಲ್ಲಿ ದಕ್ಷಿಣಾಭಿಮುಖವಾಗಿ ಮೂವತ್ತೈದು ಮೈಲಿಗಳ ಪ್ರಯಾಣ ಬೆಳೆಸಿದರೆ ಜಿಲ್ಲೆಯ ದೊಡ್ಡ ತಾಲ್ಲೂಕಾದ ಕನಕಪುರತಾಲ್ಲೂಕಿನ ಕೇಂದ್ರವಾದ ಕನಕಪುರವನ್ನು ಮುಟ್ಟುತ್ತೇವೆ. ಊರಿನ ಉತ್ತರದ ದಿಡ್ಡಿ ಬಾಗಿಲಿನಿಂದ ಪೂರ್ವಾಭಿಮುಖವಾಗಿ ಎರಡು ಫರ್ಲಾಂಗ್ ದೂರ ಸಾಗಿದರೆ ಕಾಣುವ ದೊಡ್ಡ ಆಶ್ರಮವೇ ಶ್ರೀ ದೇಗುಲ ಮಠ.

ಅರ್ಕಾವತಿ ನದಿಯ ಪಶ್ಚಿಮ ದಂಡೆ. ನಿತ್ಯ ಹಸುರಾದ, ಪಕ್ಷಿಗಳ ಇಂಚರದಿಂದ ಕರ್ಣಾನಂದಕರವಾದ, ಸತ್ಯವನ್ನು ಎತ್ತಿ ನಿಂತ ಶ್ರದ್ಧಾಳುವಿನಂತೆ ಫಲಭಾರದಿಂದ ತೂಗುತ್ತಾ ಸಮೀರಣನಿಂದ ತೊನೆಯುತ್ತಾ ಗರಿಗೆದರಿ ಗಗನ ಚಾಮರವಿಡಿದ, ನಿಂತಿರುವ ನಾರಿಕೇಳಗಳ, ಹಿಡಿದರೆ ರಸಬಿಡುವ ಕಬ್ಬು, ರೇಷಿಮೆಯ ಹೊಳಪನ್ನು ಪತ್ರದಲ್ಲಿಯೇ ರಂಜಿಸುವ ಉಪ್ಪುನೇರಳೆ, ಕಿರಾತನಾರಿಯ ಜಡೆಗೆ ಹಚ್ಚಿದ ಜಡೆಬಿಲ್ಲೆಗಳಂತೆಸೆವ ಪನಸುಗಳ, ಆಮ್ರ, ಹುಳಿ, ನೇರಳೆ, ದ್ರಾಕ್ಷಿ, ನಿಂಬೆ, ಸೀಬೆ, ಕದಳೀ ಮುಂತಾದ ಬಗೆಬಗೆಯ ಫಲವೃಕ್ಷಗಳ ; ಸುರಹೊನ್ನೆ, ಮೊಲ್ಲೆ, ಮಲ್ಲಿಗೆ, ಕಣಗಿಲೆ, ಪಾರಿಜಾತ, ಶಿರೀಷ, ಕರ್ಣಕುಂಡಲಾದಿ ಪುಷ್ಪಗಳ ; ಬನ್ನಿ, ಲಕ್ಕಿ, ಬಿಲ್ವಾದಿ, ಪತ್ರಗಳ ; ದೇವಮಾತೃಕ ನದೀಮಾತೃಕಾದಿಗಳ ನೀರುಂಡು ಬೆಳೆದು ಬಾಗಿ ನಿಂತು ಸುಳಿಗಾಳಿಗೆ ಹಸಿರು ತೆರೆಗಳಂತೆ ಮರಳಿವ ಬತ್ತ, ರಾಗಿ, ಜೋಳಾದಿ ಪೈರು ಪಚ್ಚೆಗಳಿಂದ ಕಂಗೊಳಿಸುವ ಗದ್ದೆ-ತೋಟಗಳ ಮಧ್ಯೆ, ಪುರದ ಹೆಮ್ಮೆಯಂತೆ ಪುಣ್ಯದ ಗೊತ್ತಿನಂತೆ, ಮುಕ್ತಿಯ ಮೌಕ್ತಿಕದಂತೆ, ಸಾಧನೆಯ ಸಾಮ್ರಾಜ್ಯದಂತೆ, ಸಿದ್ಧಿಯ ಮುದ್ದೆಯಂತೆ, ಅರಿವಿನ ಆಗರದಂತೆ, ಭಕ್ತರ ಬೀಡಿನಂತೆ, ಗರ್ವವನು ಮುರಿದಂತೆ, ಮರ್ಮವನು ಭೇದಿಪಂತೆ, ಬಡವರ ಬಂಧುವಿನಂತೆ, ಬಿದ್ದವರನುದ್ಧರಿಪಂತೆ, ಶರಣರಂತಃಕರಣ ಪರಿಮಳದಂತೆ ಕಣ್ಣಿಗಂದವಾಗಿ ಮನಕ್ಕೆ ನೆಮ್ಮದಿಯ ನೆಲೆಯಾಗಿ ನಿಂತಿದೆ ಶ್ರೀ ದೇಗುಲಮಠ. ಶ್ರೀ ದೇಗುಲದ ಭವ್ಯತೆಗೆ ಭಂಗತಾರದೆ ನವ್ಯತೆಯು ಅಳವಟ್ಟಿದೆ–ಹಳತು ಹೊಸತರ ಸಂಗಮದಂತೆ. ಹಿರಿಯರ ತಪೋಬಲ ಕಿರಿಯರ ಓಜಸ್ಸನ್ನು ಪೋಷಿಸಿ ಬೆಳೆಸುತ್ತಿದೆ. ಧರ್ಮದ ಅಭಿವೃದ್ಧಿ, ಕಾಯಕದ ಪ್ರೇಮ, ಸಹಬಾಳ್ವೆಯ ಸಂಜೀವನ, ಅಂತರಂಗ-ಬಹಿರಂಗಗಳ ಸಮನ್ವಯ, ಅನ್ನಬ್ರಹ್ಮನೊಡನೆ



ಶ್ರೀ ಮ. ನಿ. ಪ್ರ. ಚರಮೂರ್ತಿ ಶ್ರೀ ಮಹಾಲಿಂಗ ಸ್ವಾಮಿಗಳವರು

ಕಾದಾಟ, ಅಜ್ಞಾನ ರಕ್ಕಸನೊಡನೆ ಹೋರಾಟ. ಸಮಾಜ ಕಲ್ಯಾಣಾದಿ ನಾನಾ ಗುರಿಗಳನ್ನು ಮುಂದಿರಿಸಿಕೊಂಡು, ಶ್ರೀಮಠ ಇಂದು ತನ್ನ ಕಾರ್ಯಸಾಧನೆಯಲ್ಲಿ ತೊಡಗಿದೆ.

ಸಮಾಜದ ಎಲ್ಲಾ ವರ್ಗಗಳ ಮಕ್ಕಳೂ ಒಂದೇ ಬಗೆಯ ವಸ್ತ್ರ ಧರಿಸಿ, ಒಂದೇ ಪ್ರಸಾದ ಭುಂಜಿಸಿ, ಒಂದೇ ತೀರ್ಥ ಸವಿದು, ಆಡುತ್ತಾ, ಹಾಡುತ್ತಾ, ಓದುತ್ತಾ, ಬರೆಯುತ್ತಾ ಮಾನವ ಕುಸುಮಗಳಂತೆ ನಕ್ಕು ನಲಿಯುವ ದೃಶ್ಯ, ತಾಯ ಮೊಲೆಹಾಲುಂಡು, ಹಸಿರು ಹುಲ್ಲು ತಿಂದು, ತಿಳಿನೀರ ಕುಡಿದು ಸಂತಸದಿಂದ ಕುಣಿದಾಡುವ ಪ್ರಾಣಿಶಿಶುಗಳು, ಮರಿ-ಕರುಗಳನ್ನೇ ದಿಟ್ಟಿಸಿ ನೋಡುತ್ತಾ ಹೂಂಕರಿಸುವ ತಾಯಿ ಪ್ರಾಣಿಗಳು, ದರ್ಪದ ದಿಟ್ಟಿಯಿಂದ ಗುಟರಿಡುವ ಗೂಳಿಗಳು, ಇವೆಲ್ಲವನ್ನೂ ನೋಡಿದಾಗ ಪ್ರಾಚೀನ ಕಾಲದ ಋಷ್ಯಾಶ್ರಮಗಳ ವರ್ಣನೆಯ ದೃಶ್ಯಗಳನ್ನು ಪ್ರತ್ಯಕ್ಷ ಕಂಡಂತಾಗುತ್ತದೆ.

## ಶ್ರೀ ಮಠದ ಆದಿ ಮತ್ತು ಇಮ್ಮಡಿ ಶ್ರೀ ನಿರ್ವಾಣಸ್ವಾಮಿಗಳು

ಹನ್ನೆರಡನೆಯ ಶತಮಾನದ ಅಂತ್ಯಕ್ಕೆ ಕಲ್ಯಾಣದ ಕ್ರಾಂತಿಯಾಗಿ ಶಿವಶರಣರು ನಾಡಿನ ಮೂಲೆ ಮೂಲೆಗಳಿಗೂ ಚದುರಿದರು. ಅಂದು ಈ ತಾಣ ಜುಳಜುಳನೆ ಹರಿವ ನದಿ, ಬೆಳೆದು ನಿಂತ ಹೆಮ್ಮರಗಳು, ಹಾಡುವ ಗಿಳಿ–ಕೋಗಿಲೆಗಳು, ಗರಿಗೆದರಿ ಕುಣಿವ ನವಿಲು, ಚಿಮ್ಮಿ ಹರಿವ ಚಿಗರೆಗಳು, ಹೆಡೆಬಿಚ್ಚಿ ಆಡುವ ನಾಗಗಳು, ಝೇಂಕರಿಸುವ ದುಂಬಿಗಳು, ಘೀಳಿಡುವ ಆನೆಗಳು ಮೊದಲಾದ ವನ್ಯ ಮೃಗಪಕ್ಷಿ ಗಣಗಳ ಝೇಂಕಾರದಿಂದ ಕೂಡಿತ್ತು. ಉತ್ತರದಿಂದ ಚದುರಿದ ಶರಣರ ಬಳಗದ ಒಬ್ಬೊಬ್ಬರು ಕ್ರಮೇಣ ಇತ್ತ ಆಗಮಿಸಿ ತಮ್ಮ ತಪಸ್ಸಿನ ಓಂಕಾರವನ್ನೂ ಕೂಡಿಸಿದರು. ಆ ಆದಿಗುರುಗಳೇ ಶ್ರೀ ಆದ್ಯನಿರ್ವಾಣಸ್ವಾಮಿಗಳವರು. ಅಂದಿನಿಂದ ಇಂದಿನ ಇಮ್ಮಡಿ ಶ್ರೀ ನಿರ್ವಾಣಸ್ವಾಮಿಗಳವರು ಹಾಗೂ ಇಮ್ಮಡಿ ಶ್ರೀ ಮಹಾಲಿಂಗಸ್ವಾಮಿಗಳವರ ವರೆವಿಗೆ ಪರಂಪರೆಯ ಅನೇಕ ಗುರುವರ್ಯರುಗಳ ಪಾವನ ಪಾದಸ್ಪರ್ಶದಿಂದ ಈ ಕ್ಷೇತ್ರ ಪವಿತ್ರತಮವಾಗಿದೆ.

ಈ ಪರಂಪರೆಯಲ್ಲಿ ಈಚೆಗೆ ಲಿಂಗೈಕ್ಯರಾದ ಇಮ್ಮಡಿ ಶ್ರೀ ನಿರ್ವಾಣಸ್ವಾಮಿಗಳವರು, ಮಾತಿನ ಬಣ್ಣನೆಗೆ ನಿಲುಕದ ಎತ್ತರವನ್ನು ಮುಟ್ಟಿಬಿಟ್ಟಿದ್ದರು. ಅವರಿಗೆ ಅದೂ ಪೂರ್ಣ ಇದೂ ಪೂರ್ಣ ಎಲ್ಲಾ ಪೂರ್ಣವಾಗಿತ್ತು. ಅವರಿಗೆ ಮೇಲು ಕೀಳುಗಳು, ಧರ್ಮ ಭೇದಗಳ, ಏರುಪೇರುಗಳ, ವಾದ ವಿವಾದಗಳ, ಒಳಿತು ಕೆಡುಕುಗಳ ಬಿರುಕೇ ಕಾಣಿಸುತ್ತಿರಲಿಲ್ಲ. ದುಷ್ಟ ಘಟನೆಯ ಹುತ್ತದಲ್ಲಿ, ಘೋರ ಸಂಗ್ರಾಮರಂಗದ ವೀರಯೋಧನ ಕೋಟೆಯ ಮೊನೆಯಲ್ಲಿ, ಕಳ್ಳನೊಡನೆ, ಬೆಳ್ಳನೊಡನೆ, ಮೂರ್ಖನೊಡನೆ, ಧೂರ್ತನೊಡನೆ, ಯಾರೊಂದರವರೊಡನೆ, ಎಲ್ಲೆಂದರಲ್ಲಿ, ನಿರ್ಬಾಧಿತರಾಗಿ ಸ್ವಚ್ಛಂದರಾಗಿ ವಿಹರಿಸಬಲ್ಲವರಾಗಿದ್ದರು. ಲೋಕ ವ್ಯವಹಾರ ಗಣಿತದಂತೆ ಅವರು

ಶತಾಯುಷಿಗಳಾಗಿದ್ದರೂ ಭಾವದಲ್ಲಿ ಮಾತ್ರ ಶುದ್ಧ ಮುಗ್ಧ ಶಿಶು. ಅವರು ಅರಸನೊಡನೆ ಸಂಭಾಷಿಸಿದಷ್ಟೇ ಪ್ರೀತಿ ಆದರಗಳಿಂದ, ನಗುಮುಖದಿಂದ, ತಿರುಕನೊಡನೆಯೂ ಸಂಭಾಷಿಸುತ್ತಿದ್ದರು. ಅರಸನ ಅರಮನೆಯಷ್ಟೇ ತಿರುಕನ ಮುರುಕು ಗುಡಿಸಲಿನಲ್ಲೂ ಸಂತೃಪ್ತಿ ಕಾಣುತ್ತಿದ್ದರು.

## ಇಮ್ಮಡಿ ಶ್ರೀ ಮಹಾಲಿಂಗ ಸ್ವಾಮಿಗಳವರು

ಶ್ರೀ ನಿರ್ವಾಣಸ್ವಾಮಿಗಳವರ ಕರಕಮಲ ಸಂಜಾತರಾದ ಪೂಜ್ಯ ಶ್ರೀ ಶ್ರೀ ಮಹಾಲಿಂಗಸ್ವಾಮಿಗಳವರೇ ಇಂದು ಶ್ರೀ ದೇಗುಲಮಠದ ಸೂತ್ರಧಾರರಾಗಿದ್ದಾರೆ. ಒಂದು ದಶಕ ಕಾಲದ ಸೇವಾವಧಿಯಲ್ಲಿ ನಾನು ಕೇಳಿದಂತೆ, ಪ್ರತ್ಯಕ್ಷ ಕಂಡಂತೆ, ಅನುಭವಿಸಿದಂತೆ ಇಂದಿನ ಶ್ರೀ ದೇಗುಲ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಮಹಾಲಿಂಗಸ್ವಾಮಿಗಳವರ ವ್ಯಕ್ತಿತ್ವವನ್ನು ಕಿಂಚಿತ್ ಪರಿಚಯ ಮಾಡಿಕೊಡಲೆತ್ನಿಸಿದ್ದೇನೆ. ಅವರದೇ ಆದ ಶ್ರೇಷ್ಠ ಭಾವನೆ, ಬದುಕು, ಉಪದೇಶಗಳಿಗೆ ನಾನು ಒದಗಿಸಿರುವುದು ಕೇವಲ ನನ್ನ ಬಾಲಭಾಷೆಯಷ್ಟೆ. ಶ್ರೀಗಳವರನ್ನು ಹತ್ತಿರದಿಂದ ಬಲ್ಲವರಿಗೆ ನನ್ನ ಈ ಅನಿಸಿಕೆಗಳು ಅತ್ಯುಕ್ತಿಯಾಗಿಯಾಗಲೀ, ಅತಿಶಯೋಕ್ತಿಯಾಗಿಯಾಗಲೀ ಆಗಿ ಕಾಣಲಾರವೆಂಬುದೇ ನನ್ನ ನಂಬಿಕೆ.

ಆದಿಗುರು ಶ್ರೀ ನಿರ್ವಾಣಸ್ವಾಮಿಗಳವರಾದಿಯಾಗಿ ಮೊನ್ನೆತಾನೇ ಲಿಂಗೈಕ್ಯರಾದ ಇಮ್ಮಡಿ ಶ್ರೀ ನಿರ್ವಾಣಸ್ವಾಮಿಗಳವರವರೆಗೂ ಆ ಗುರುವರ್ಯರುಗಳೆಲ್ಲಾ ಅಪೇಕ್ಷಿಸಿದ್ದಿರಬಹುದಾದ ಶ್ರೀಮಠದ ಸ್ವರೂಪವನ್ನು ಕೃತಿಗಿಳಿಸುತ್ತಿರುವ ಕೀರ್ತಿ ಶ್ರೀ ಮಹಾಲಿಂಗ ಸ್ವಾಮಿಗಳವರಿಗೇ ಸೇರಬೇಕಾದುದು ನಿರ್ವಿವಾದ.

ಶ್ರೀ ಮಹಾಲಿಂಗ ಸ್ವಾಮಿಗಳವರು, ಶ್ರೀ ಸಿದ್ಧಗಂಗಾ ಕ್ಷೇತ್ರದ ಸಿದ್ಧಪುರುಷರಾದ ಶ್ರೀ ಉದ್ಧಾನ ಶಿವಯೋಗಿ ಮಹಾಸ್ವಾಮಿಗಳವರು ಕನಕಪುರದ ಅರ್ಕಾವತೀ ತೀರದ ಶ್ರೀ ನಿರ್ವಾಣಸ್ವಾಮಿಗಳವರ ತೋಟದಲ್ಲಿ ನೆಟ್ಟ ಸಸಿ. ಹಸನಾದ ಬೀಜ, ಹದವಾದ ತೋಟ, ಸಂದರ್ಭೋಚಿತ ಮಳೆ, ಅಪ್ರತಿಮ ತೋಟಗಾರರು. ಇನ್ನು ಕೇಳಬೇಕೆ ದರ್ಶನ ಸವಿ! ಸವಿದವರ ಪುಣ್ಯ!! ಶ್ರೀ ಮಹಾಲಿಂಗಸ್ವಾಮಿಗಳವರಲ್ಲಿ ಶ್ರೀ ಉದ್ಧಾನ ಸ್ವಾಮಿಗಳವರ ಆಶೀರ್ವಾದ ಶಕ್ತಿ, ಶ್ರೀ ನಿರ್ವಾಣಸ್ವಾಮಿಗಳವರ ತಪಶ್ಶಕ್ತಿ ಹಾಗೂ ತಮ್ಮದೇ ಆದ ಕ್ರಿಯಾಶಕ್ತಿಗಳ ತ್ರಿವೇಣೀ ಸಂಗಮವು ತ್ರಿಕರಣಗಳಲ್ಲೂ ರಸದುಂಬಿದೆ. ಇಂದಿನ ದಿವಸಕ್ಕೆ, ಸಿದ್ಧಗಂಗೆಯ ಶರಣರ ಗರಡಿಯಲ್ಲಿ ತಯಾರಾದ ಪಟುಗಳಲ್ಲಿ ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು ಮೊದಲಿಗರಾದರೆ, ವ್ಯಕ್ತಿತ್ವದಲ್ಲಿ ಶ್ರೀ ಮಹಾಲಿಂಗಸ್ವಾಮಿಗಳವರೇ ಎರಡನೆಯವರು.



ಶ್ರೀ ಸಿದ್ಧಗಂಗಾ ಕ್ಷೇತ್ರಾಧಿಪತಿಗಳಾದ
ಲಿಂಗೈಕ್ಯ ಶ್ರೀ ಶ್ರೀ ಉದ್ಧಾನ ಶಿವಯೋಗಿಗಳವರು



ಶ್ರೀ ಮ. ನಿ. ಪ್ರ. ಚರಮೂರ್ತಿ ಮಹಾಲಿಂಗ ಸ್ವಾಮಿಗಳವರು          ಶ್ರೀ ಜಗದ್ಗುರು ಸನ್ನಿಧಿಯವರು

ಮಧ್ಯೆ: ಕರ್ತೃಗದ್ದುಗೆ.

ದಿ. ೧೭–೧೧–೯೭೪ ರಂದು ಚಿತ್ರದುರ್ಗ ಬೃಹನ್ಮಠದ ಶ್ರೀ ಮನ್ನಿರಂಜನಜಗದ್ಗುರು
ಶ್ರಿ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳವರು
ಶ್ರೀ ದೇಗುಲ ಮಠಕ್ಕೆ ಸಂದರ್ಶನವಿತ್ತ ಸಂದರ್ಭದಲ್ಲಿ

## ಜನನ, ಬಾಲ್ಯ, ವಿದ್ಯಾಭ್ಯಾಸ

ತುಮಕೂರು ಜಿಲ್ಲೆಯ ಕೆಂಬಳ್ಳು ಗ್ರಾಮದ ಭಕ್ತವರೇಣ್ಯರೂ ಗುರು ಲಿಂಗ ಜಂಗಮ ಸೇವಾಕಾಂಕ್ಷಿಗಳೂ ಆದ ಶ್ರೀ ಸಿದ್ಧಬಸಪ್ಪ–ಶ್ರೀಮತಿ ಬಸಮ್ಮ ಎಂಬುವರ ಸುಪುತ್ರರೇ ಕಾಳಪ್ಪನವರು. ತುಂಬಿದ ಮನೆ. ವ್ಯವಸಾಯವೇ ಕಾಯಕ. ಅಪಾರವಾಗಿ ಗುರುಲಿಂಗ ಜಂಗಮರ ಸೇವೆಯನ್ನೆಸಗುತ್ತಾ, ಜೀವನದಲ್ಲಿ ಹಿರಿಯ ಮೌಲ್ಯಗಳನ್ನುಳಿಸಿಕೊಂಡು, ನಿಷ್ಠೆಯಿಂದ ದುಡಿದು ಬದುಕುತ್ತಿದ್ದ ಮನೆತನ ಅದು.

ಕಾಳಪ್ಪನವರು ತಮ್ಮ ಚಿಕ್ಕ ವಯಸ್ಸಿನಲ್ಲಿಯೇ ವಿದ್ಯಾರ್ಜನೆಗಾಗಿ ಶ್ರೀ ಸಿದ್ಧಗಂಗಾ ಕ್ಷೇತ್ರದ ಗುರುಕುಲವನ್ನು ಸೇರಿದರು. ಪ್ರಾಥಮಿಕ ಮಾಧ್ಯಮಿಕ ವಿದ್ಯಾಭ್ಯಾಸ ಮುಗಿಯುವಷ್ಟರಲ್ಲಿ ಸಂಸ್ಕೃತ ಕಾವ್ಯ ಪರೀಕ್ಷೆಯೂ ಮುಗಿಯಿತು. ಮುಂದಿನ ವಿದ್ಯಾಭ್ಯಾಸಕ್ಕಾಗಿ ಪ್ರೌಢಶಾಲೆಯನ್ನೂ ಸೇರಿದರು.

ಓದು ಬರಹದಲ್ಲಿ ಎಂತೋ ಆಟಗಳಲ್ಲಿಯೂ ಅಷ್ಟೇ ಆಸಕ್ತಿ. ವಾಲೀಬಾಲ್ ಅವರ ಮೆಚ್ಚಿನ ಆಟ. ಸೈಕಲ್, ಕುದುರೆ ಸವಾರಿಗಳಂತೂ ಬಹಳ ಇಷ್ಟವಾಗಿದ್ದುವು. ಎಂತಹ ತುಂಟ ಕುದುರೆಯನ್ನಾದರೂ ಏರಿ ಸವಾರಿ ಮಾಡುವ ಧೈರ್ಯ ಗೆಳೆಯರ ಮೆಚ್ಚುಗೆಗೆ ಪಾತ್ರವಾಗಿಸಿತ್ತು. ಶ್ರೀಮಠದ ಯಾವುದೇ ಕೆಲಸ ಕಾರ್ಯಗಳಿಗೂ ಇವರದೇ ಓಡಾಟ, ಮುಂದಾಳುತ್ವ. ತಮ್ಮ ಚುರುಕು ಬುದ್ಧಿ, ವಾಕ್ಚಾತುರ್ಯ, ಕಾರ್ಯ ಕೌಶಲ್ಯ, ಸಂಘಟನಾ ಶಕ್ತಿ, ದಕ್ಷತೆ, ಕಾರ್ಯತತ್ಪರತೆ, ಸೇವಾನಿಷ್ಠೆ, ಮಿಗಿಲಾದ ಧಾರ್ಮಿಕ ಶ್ರದ್ಧೆ ಮುಂತಾದ ಸದ್ಗುಣಗಳಿಂದಾಗಿ ಇವರು ಶ್ರೀ ಉದ್ಧಾನಸ್ವಾಮಿಗಳವರ ದೃಷ್ಟಿಗೆ ಬೀಳುವುದು ತಡವಾಗಲಿಲ್ಲ. ಶ್ರೀ ಉದ್ಧಾನಸ್ವಾಮಿಗಳವರು ಪವಾಡ ಪುರುಷರೆಂಬುದು ಲೋಕವಿದಿತವೂ ನಿರ್ವಿವಾದವೂ ಆದ ಮಾತು. ಅವರಿಗೆ ಇವರಲ್ಲಿ ಅಪಾರ ಪ್ರೀತಿ-ವಾತ್ಸಲ್ಯಗಳು. ಏನು ಕೆಲಸವಿರಲಿ, ಇಲ್ಲದಿರಲಿ ಇವರು ಅವರ ಸಮೀಪದಲ್ಲಿದ್ದರೆ ಬಹಳ ಸಂತೋಷ. ಅವರು ಯಾವಾಗ ಕೇಳಿದರೂ ಶ್ರೀಮಠದಲ್ಲಿ ಇವರು ಗೈರುಹಾಜರಾಗದಂತಿರಬೇಕು. ಸಂದರ್ಶಕರೊಡನೆ ಶ್ರೀಗಳವರು ತಮ್ಮ ಶಿಷ್ಯನನ್ನು ಪ್ರಶಂಸಿಸಿ, ಪ್ರೋತ್ಸಾಹಿಸಿ, ಮಾತನಾಡುತ್ತಿದ್ದರಂತೆ. ಪ್ರೀತಿಗಾಗಿ 'ಏ ಅಶ್ವಾ' ಎಂದು ಕರೆಯುತ್ತಿದ್ದುದನ್ನು ಸ್ಮರಿಸಿಕೊಂಡು ಇಂದೂ ಪುಳಕಿತರಾಗುತ್ತಾರೆ. ಇವರಿಗಾದರೋ ಶ್ರೀ ಉದ್ಧಾನ ಸ್ವಾಮಿಗಳವರಲ್ಲಿ ಅಷ್ಟೇ ಪ್ರೇಮ, ಭಕ್ತಿ. ಅವರ ಅಷ್ಟೇ ಭಯ. ಯಾವುದೇ ಗುರುತರವಾದ ಕಾರ್ಯವನ್ನಾಗಲೀ ಇವರಿಗೆ ವಹಿಸಿದರೆ, ಅಥವಾ ಇವರು ವಹಿಸಿಕೊಂಡಿದ್ದಾರೆಂದು ತಿಳಿದು ಬಂದರೆ ಆಗಲೇ ಶ್ರೀಗಳವರಿಗೆ ತೃಪ್ತಿ, ಸಮಾಧಾನ. ಯಾವುದೇ ವಿಚಾರದಲ್ಲಿ ಇವರ ವರದಿ, ಸಲಹೆಗಳಿಗೆ ಶ್ರೀಗಳವರ ಬಳಿ ಪುರಸ್ಕಾರ ದೊರೆಯುತ್ತಿತ್ತು. ಆದರೆ ಇವರೂ ಅಷ್ಟೇ ನಿಷ್ಠೆ, ನಿಸ್ವಾರ್ಥ, ನಿರ್ಮಲಚಿತ್ತದಿಂದ ತಮ್ಮ ಭಕ್ತಿಯಿಂದ ಗುರುಗಳನ್ನು ಸೇವಿಸುತ್ತಿದ್ದರು.

ಪ್ರೌಢ ವ್ಯಾಸಂಗ ಮಾಡುತ್ತಿದ್ದ ಕಾಲದಲ್ಲಿಯೇ ತಮ್ಮ ಅಪಾರವಾದ ಶ್ರದ್ಧೆ, ಚುರುಕು ಬುದ್ಧಿಗಳಿಂದ ವೇದ, ಆಗಮ ಶಾಸ್ತ್ರಗಳನ್ನೂ, ಪುಣ್ಯಪುರುಷರ ಶರಣ ವರೇಣ್ಯರ ಜೀವನ ಚರಿತ್ರೆಗಳನ್ನೂ ಚೆನ್ನಾಗಿ ಅಭ್ಯಾಸ ಮಾಡಿದರು. ಪರಿಣಾಮವಾಗಿ ಲೌಕಿಕ ವಿದ್ಯೆಗಿಂತ ಆಧ್ಯಾತ್ಮಿಕ ಜ್ಞಾನ, ಸಮಾಜ ಸೇವೆಗಳತ್ತ ಇವರ ಒಲವು ಹೆಚ್ಚಿತು. ಶರಣರ ಸೇವೆಯನ್ನೆಸಗುತ್ತಾ, ದೀನದಲಿತರ ಕಷ್ಟಕಾರ್ಪಣ್ಯಗಳನ್ನು ಕಣ್ಣಿಂದ ಕಾಣುತ್ತಿದ್ದ ಇವರ ಮನಸ್ಸಿಗೆ ತಮ್ಮೊಬ್ಬರ ಉದ್ಧಾರ ಹಿರಿದಲ್ಲ, ಸಮಾಜದ ಉದ್ಧಾರ, ಸೇವೆ ದೊಡ್ಡದು ಎಂದು ತೋರಿತು. ಅಂತಹ ಸತ್‌ಸಂಕಲ್ಪ ಅವರಲ್ಲಿ ಮೂಡಿದುದು ನಾಡಿನ ಭಾಗ್ಯ.

ಶ್ರೀ ಉದ್ಧಾನ ಸ್ವಾಮಿಗಳವರ ಕರಕಮಲ ಸಂಜಾತರೂ, ಇಂದಿನ ಕರ್ನಾಟಕದ ಗುರುವರ್ಗದಲ್ಲಿ ಅಗ್ರಪಂಕ್ತಿಯಲ್ಲಿರುವವರೂ, ಶ್ರೀ ಸಿದ್ಧಗಂಗಾಕ್ಷೇತ್ರದ ಕೀರ್ತಿಯನ್ನು ತಮ್ಮ ಪವಾಡ ಸದೃಶ ಕಾರ್ಯಗಳಿಂದ ಔನ್ನತ್ಯಕ್ಕೇರಿಸಿರುವವರೂ, ತಪೋಮೂರ್ತಿಗಳೂ, ಜ್ಞಾನ ಭಂಡಾರಿಗಳೂ ಆಗಿರುವ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರಿಗೆ ಕಾಳಪ್ಪನವರು ಅಂದು ಬಹಳ ಆತ್ಮೀಯರೂ ಆಪ್ತ ಸಲಹೆಗಾರರೂ ಆಗಿದ್ದರು. ಹಿರಿಯ ಹಾಗೂ ಕಿರಿಯ ಶ್ರೀ ಶ್ರೀ ಗಳೀರ್ವರ ನಡುವಣ ಏಕೈಕ ಮೆಚ್ಚಿನ ಅಂತರಂಗ ಸಚಿವರಂತಿದ್ದರು. ಇಂದಿಗೂ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ಅಂತರಂಗಕ್ಕೆ ಅತ್ಯಂತ ನಿಕಟವಾಗಿದ್ದಾರೆ.

ಅಷ್ಟರಲ್ಲಿ, ಕನಕಪುರದಶ್ರೀದೇಗುಲಮಠದ ಉತ್ತರಾಧಿಕಾರಿಗಳ ಅನ್ವೇಷಣೆಯಲ್ಲಿದ್ದ ಶ್ರೀ ನಿರ್ವಾಣ ಸ್ವಾಮಿಗಳವರು, ಆ ಊರಿನ ಭಕ್ತ ಮುಖಂಡರೊಡನೆ ಸಿದ್ಧಗಂಗೆಗೆ ದಯಮಾಡಿಸಿದರಂತೆ. ರೈಲು ಇಳಿದು ಹೊರಟ ಅನತಿ ದೂರದಲ್ಲಿಯೇ ಅವರನ್ನು ಸ್ವಾಗತಿಸಲೋ ಎಂಬಂತೆ ಶ್ರೀ ಉದ್ಧಾನ ಶಿವಯೋಗಿಗಳವರು ತಮ್ಮ ಶಿಷ್ಯನೊಡನೆ ಎದುರಾಗಿ ದಯಮಾಡಿಸಿದರಂತೆ. ಶ್ರೀ ನಿರ್ವಾಣ ಸ್ವಾಮಿಗಳವರೂ ಬಹಳ ಆಶ್ಚರ್ಯವನ್ನೂ ಆನಂದವನ್ನೂ ಅನುಭವಿಸಿದರಂತೆ. ಶ್ರೀ ನಿರ್ವಾಣ ಸ್ವಾಮಿಗಳವರ ಅಭೀಷ್ಟವನ್ನರಿತ ಶ್ರೀ ಉದ್ಧಾನ ಸ್ವಾಮಿಗಳವರು ತಮ್ಮ ಅಚ್ಚು-ಮೆಚ್ಚಿನ ಶಿಷ್ಯರಾದ ಕಾಳಪ್ಪನವರನ್ನೇ ಶ್ರೀ ದೇಗುಲ ಮಠದ ಉತ್ತರಾಧಿಕಾರಿಗಳನ್ನಾಗಿ ಆರಿಸಿಕೊಳ್ಳಲು ಸೂಚಿಸಿದರು. ಶ್ರೀ ನಿರ್ವಾಣಸ್ವಾಮಿಗಳವರೂ ಸಂತೋಷದಿಂದ ಒಪ್ಪಿದರು. ಆದರೆ ಕಾಳಪ್ಪನವರು ಬೆಚ್ಚಿದರು. ಅವರಿಗೆ ಜಂಗಮ ಜೀವನದ ನಿಷ್ಠೆ, ನೇಮ, ಕಾಠಿಣ್ಯತೆ, ಖಡ್ಗಧಾರಾವ್ರತದ ಅರಿವಿತ್ತು. ಆ ಜೀವನದ ವ್ಯಾಪ್ತಿ ಜವಾಬ್ದಾರಿಗಳ ಅರಿವೂ ಇತ್ತು. ಅಲ್ಲದೆ ಗುರುಸೇವೆಯೇ ಅವರ ಜೀವನದ ಪರಮ ಗುರಿಯಾಗಿತ್ತು. ಆದ್ದರಿಂದಲೇ ಅವರು ಈ ಗುರುತರ ಜವಾಬ್ದಾರಿಯನ್ನು ಹೊರಲು ಕಿಂಚಿತ್ ಹಿಂಜರಿದರು. ಆದರೆ ಶಿಲ್ಪಿ ಅರಿಯನೇ ಶಿಲೆಯ ಗುಣ ಮಹತ್ವಗಳನ್ನು! ಋಷಿಪ್ರ ಜ್ಞಾನಿಗಳಾದ ಅವರು ಧೈರ್ಯ ಹೇಳಿ, ಆಶೀರ್ವದಿಸಿ ಆಶ್ರಮ ಸ್ವೀಕಾರಕ್ಕೆ ಆಜ್ಞೆಕೊಟ್ಟು ಒಪ್ಪಿಗೆಯ ನಮಸ್ಕಾರ ಹಾಕಿಸಿಕೊಂಡರಂತೆ.

ಅದೇನು ಎಂದು ನಮಗೆ ಸೋಜಿಗವಾಗಬಹುದು. ಶ್ರೀ ಉದ್ಧಾನ ಸ್ವಾಮಿಗಳವರ ಆತ್ಮಶಕ್ತಿಯನ್ನು ಬಲ್ಲವರಿಗೆ ಇದು ಹೆಚ್ಚೆಂದು ತೋರದು. ಇಂದಿನ ಕನಕಪುರದ ಶ್ರೀ ದೇಗುಲ ಮಠದ ರೂಪ ವಿನ್ಯಾಸಗಳನ್ನು ಶ್ರೀ ಉದ್ಧಾನ ಶಿವಯೋಗಿಗಳವರು ಅಂದೇ ಅರಿದು ಸೂಚಿಸಿದ್ದಾರೆ. ಅವರ ಸಂಕಲ್ಪದ ಆಳತೆಯಲ್ಲಿ ಇನ್ನೆಷ್ಟು ಹೊತ್ತುವಿದೆಯೋ ಬಲ್ಲವರಾರು!

ಕಾಳಪ್ಪನವರನ್ನು ಶ್ರೀ ಶಿವಯೋಗಿಗಳವರು ಹರಸಿ ಕಳುಹಿಸಿ ಕೊಟ್ಟರು. ಶಾ. ಶ. ೧೮೬೦ನೆಯ ಬಹುಧಾನ್ಯ ಸಂವತ್ಸರ (ಫೆಬ್ರವರಿ ೧೯೩೯) ಮಾಘ ಶುದ್ಧ ಸಪ್ತಮಿಯ ದಿನ ಶುಭ ಮುಹೂರ್ತದಲ್ಲಿ ಶ್ರೀ ದೇಗುಲ ಮಠದ ಚರಪಟ್ಟಾಧಿಕಾರ ಮಹೋತ್ಸವವು ಬಹಳ ವೈಭವದಿಂದ ಜರುಗಿ, ನೂತನ ಶ್ರೀಗಳವರಿಗೆ ಚರಮೂರ್ತಿ ಶ್ರೀ ಶ್ರೀ ಮಹಾಲಿಂಗಸ್ವಾಮಿಗಳವರೆಂಬ ಅಭಿದಾನವಾಯಿತು. ಅಂದು ಸಂನ್ಯಾಸಾಶ್ರಮದ ಅಪರಿಮಿತವಾದ 'ಶ್ರಮ' ಶ್ರೀ ಮಹಾಲಿಂಗಸ್ವಾಮಿಗಳವರ ಹೆಗಲಿನಲ್ಲಿ ರಾರಾಜಿಸತೊಡಗಿತು. 'ಆ—ಶ್ರಮ' ಹೊರಲು ಅವರು ಅರ್ಹರೆಂಬುದೇ ಶ್ರೀ ಉದ್ಧಾನ ಸ್ವಾಮಿಗಳವರ ದಿವ್ಯದೃಷ್ಟಿಯ ನಿಶ್ಚಯವೂ ಆಗಿತ್ತು. ಶ್ರೀಗಳವರು ಪಂಚಾಂಗವನ್ನು ನೋಡದೆಯೇ ಆಶ್ರಮ ಕೊಡುವ ಲಗ್ನವನ್ನು ನಿರ್ಧರಿಸಿ ಅಪ್ಪಣೆ ಕೊಟ್ಟರಂತೆ. ಅನಂತರ ಪಂಚಾಂಗ ಹುಡುಕಿದರೆ ಅದಲ್ಲದೆ ಬೇರೆ ಲಗ್ನವೇ ಕೂಡಿ ಬರಲಿಲ್ಲವಂತೆ.

ಶ್ರೀ ನಿರ್ವಾಣ ಸ್ವಾಮಿಗಳು ಮತ್ತು ಶ್ರೀ ಮಹಾಲಿಂಗಸ್ವಾಮಿಗಳವರ ಗುರು ಶಿಷ್ಯ ಸಂಬಂಧ ಅಪೂರ್ವವೂ, ಅನನ್ಯವೂ, ಮಾದರಿಯೂ ಆದುದು. ನಾವು ಕೈಗೊಳ್ಳುವ ಪ್ರತಿಯೊಂದು ಕಾರ್ಯವೂ ನಮ್ಮ ಗುರು ಪರಂಪರೆಯ ಕೀರ್ತಿ ಹಬ್ಬಿ ಪಸರಿಸಲು, ಸಮಾಜದೇಳಿಗೆಯಾಗಲು ಸಾಧಕವಾಗಬೇಕೆನ್ನುತ್ತಾರೆ. ನಮಗೆ ಉಪದೇಶವಿತ್ತು ಸಲಹಿದ ಗುರುಗಳ ಮುಂದೆಗೆ ಹೂವು ತರಬೇಕಲ್ಲದೆ ಮುಳ್ಳು ತರುವುದು ಸಲ್ಲದೆನ್ನುತ್ತಾರೆ.

ಶ್ರೀ ನಿರ್ವಾಣ ಸ್ವಾಮಿಗಳವರು ತಮ್ಮ ಕೊನೆಯ ಎರಡು ದಶಕಗಳನ್ನು ನೆಮ್ಮದಿಯಾಗಿ ಪೂಜೆ, ಧ್ಯಾನಗಳಲ್ಲಿ ಕಳೆದರು. ಆದರೆ ಅವರಿಗೆ ನೆಮ್ಮದಿ ನೀಡುವಲ್ಲಿ ಶ್ರೀ ಮಹಾಲಿಂಗಸ್ವಾಮಿಗಳವರು ಮೂರು ದಶಕಗಳ ಕಾಲ ಶ್ರಮ ಪಟ್ಟಿರುವರೆಂಬುದು ಇಲ್ಲಿನ ಸನ್ನಿವೇಶ ಬಲ್ಲವರಿಗೆ ಮಾತ್ರ ವೇದ್ಯ.

ದೊಡ್ಡವರಲ್ಲಿ ಚಿಕ್ಕಸ್ವಾಮಿಯವರಿಗೆ ಅಪಾರವಾದ ಗೌರವ, ಭಕ್ತಿ. ಆದರೆ ಅಷ್ಟೇ ಭಯ. ದೊಡ್ಡವರು ಬಿನ್ನಹಗಳಿಗೆ ದಯಮಾಡಿಸಿ ಆಗಮಿಸುವುದು ಕಿಂಚಿತ್ ತಡವಾದರೆ ಚಿಕ್ಕವರು ತಳಮಳಗುಟ್ಟುತ್ತಾ ಕುಳಿತಲ್ಲಿ ಕೂರದೆ ನಿಂತಲ್ಲಿ ನಿಲ್ಲದೆ ದಾರಿಯನ್ನೇ ನಿರೀಕ್ಷಿಸುವರು. ದೊಡ್ಡವರಾದರೂ ಶಿಷ್ಯರನ್ನು ಪಾಲಿಸುವಂತಹ ವಾತ್ಸಲ್ಯಮಯಿಗಳು. ಚಿಕ್ಕವರ ಆಗಮನ ಹತ್ತು ನಿಮಿಷ ತಡವಾದರೆ ಅಕ್ಕಪಕ್ಕದವರನ್ನು ಇಪ್ಪತ್ತುಸಲ ವಿಚಾರಿಸುತ್ತಿದ್ದರು. ಚಿಕ್ಕವರು ದಯಮಾಡಿಸಿ

ದರು. ಸ್ನಾನ ಮಾಡಿದರು ಎಂದಾಗಲೇ ತೃಪ್ತಿ. ಅಂತ್ಯದಲ್ಲಿಯೂ ಸಹ ದೊಡ್ಡ ವರು ತಾವು ಲಿಂಗದೊಳಗಾಗುವ ಮೊದಲ ದಿನ ಭಕ್ತರ ಮನೆಯಲ್ಲಿ ಚಿಕ್ಕವರಿಂದ ಪಾದಪೂಜೆಯ ಸೇವೆ ಸ್ವೀಕರಿಸಿದ್ದಾರೆ. ಲಿಂಗೈಕ್ಯರಾದ ದಿನವಂತೂ ಚಿಕ್ಕವರು ಬಿನ್ನಹ ತೀರಿಸಿಕೊಂಡು ದಯಮಾಡಿಸುವವರೆಗೂ ಆತ್ಮಜ್ಯೋತಿ ಲಿಂಗದಲ್ಲಿ ಲೀನ ವಾಗಲಿಲ್ಲ.

ದೊಡ್ಡವರು ಮತ್ತು ಚಿಕ್ಕವರ ಗುರುಶಿಷ್ಯ ಸಂಬಂಧ ಹೃದಯ-ರಕ್ತ ನಾಳ ಗಳಂತೆ, ಜ್ಞಾನ-ಕ್ರಿಯಾ ವಾಹಿನಿಗಳಂತೆ, ಮೂಲ-ವಿಗ್ರಹ ಉತ್ಸವ ಮೂರ್ತಿಗಳಂತೆ ಸೌಂದರ್ಯ-ಲಾವಣ್ಯಗಳಂತೆ, ಪುಷ್ಪ-ಪರಿಮಳಗಳಂತೆ, ಅರುಣ-ಕಿರಣಗಳಂತೆ, ಸಕ್ಕರೆ -ಸವಿಗಳಂತೆ ಅನ್ಯೋನ್ಯವಾಗಿತ್ತು. ಈ ಆದರ್ಶ ಗುರು ಶಿಷ್ಯ ಸಂಬಂಧ ಪರಮಹಂಸ ವಿವೇಕಾನಂದರನ್ನು ನೆನಪಿಗೆ ತರುತ್ತದೆ.

ಶ್ರೀ ಮಹಾಲಿಂಗ ಸ್ವಾಮಿಗಳವರು ಬಹಳ ಚುರುಕು ಬುದ್ಧಿಯುಳ್ಳವರು. ಒಳ್ಳೆಯ ಮಾತುಗಾರರು. ಹಾಸ್ಯಪ್ರಿಯರು. ಲೀಲಾಜಾಲವಾಗಿ ಸ್ವಾರಸ್ಯವಾಗಿ ಎದು ರಿಗಿರುವವರು ಮೆಚ್ಚಿ ತಲೆದೂಗುವಂತೆ, ಎದುರಿಗಿರುವವರ ಮನಂಬುಗುವಂತೆ ಮಾತ ನಾಡುವುದು ಅವರಜಂಮಪ್ರೈಶಿಷ್ಟ್ಯ ಸಹನೆ, ಸಹಿಷ್ಣುತೆಗಳು ಅವರಲ್ಲಿ ನೈಜ ಗುಣಗಳು. ಅನ್ಯ ಧರ್ಮಗಳಲ್ಲಿ ಗೌರವ. ಮಾತಿನಲ್ಲಿ ಎಂತೋ ಕಾರ್ಯದಲ್ಲಿಯೂ ಅಷ್ಟೇ. ಪಾದರಸ ದಂತೆ ಚುರುಕು. ಧೈರ್ಯ. ದಕ್ಷತೆ. ವಿಚಕ್ಷಣತೆ, ಶ್ರದ್ಧೆ, ಶಿಸ್ತು, ಎಲ್ಲಕ್ಕೂ ಕಳಶವಿಟ್ಟಂತೆ ಅವರ ಶಿವಾರ್ಪಿತ ಹಾಗೂ ನಿಸ್ವಾರ್ಥ ಮನೋಭಾವಗಳು. ಅವರ ಅನುಭವ ಅಪಾರ ಭೂ ವ್ಯವಸಾಯದಿಂದ ಹಿಡಿದು ಆತ್ಮ ವ್ಯವಸಾಯದವರಿಗೂ ಅವರದು ಸಿದ್ಧಹಸ್ತ. ಆಕಾಶದತ್ತ ಕೆಲವು ಕ್ಷಣ ದೃಷ್ಟಿ ಹಾಯಿಸಿ 'ಇಂದು ಮಳೆ ಬರುತ್ತದೆ' ಎಂದರೆ ಅಂದು ಮಳೆ ತಪ್ಪಿದುದು ನನಗೆ ನೆನಪಿಲ್ಲ. ಎತ್ತು, ಎಮ್ಮೆ, ಕುದುರೆಗಳನ್ನು ಒಮ್ಮೆ ದಿಟ್ಟಿಸಿ ನೋಡಿದರೆ ಸಾಕು ಅದರ ಜಾತಿ, ಗುಣ ಸ್ವಭಾವಗಳ ಬಗ್ಗೆ ಹೇಳಿಬಿಡುತ್ತಾರೆ. ಶಿವಪೂಜಾ ಸುಖ ಸಾಮ್ರಾಜ್ಯದಲ್ಲಿ ಅವರು ಅನುಭವಿಸುವ ಆನಂದ ನನ್ನಂಥ ಅಲ್ಪನ ಕಲ್ಪನೆಗೂ ನಿಲುಕುವ ವಿಚಾರವಲ್ಲ. ಆ ಸುಖವೇ ಅವರ ಸರ್ವಶಕ್ತಿಗಳಿಗೂ ಸರ್ವ ಕಾರ್ಯಗಳಿಗೂ ಸರ್ವ ಸಿದ್ಧಿಗಳಿಗೂ ಮೂಲವೆಂದು ಈ ಜಗತ್ತಿನಲ್ಲಿ ಆ ಸುಖಕ್ಕೆ ಸಾಟಿಯಿಲ್ಲವೆಂದೂ ಕೇಳಿ ಮಾತ್ರ ಬಲ್ಲೆ.

ತಮ್ಮ ಗುರುಪುಂಗವರಂತೆ ಶ್ರೀ ಮಹಾಲಿಂಗಸ್ವಾಮಿಗಳವರದು ಅತ್ಯಂತ ಕನಿಕರ ಸ್ವಭಾವ. ಅಪಾರ ಭೂತದಯೆ ಶ್ರೀ ಮಠದಶ್ವಾಪದಗಳಿಗೆ ಏನಾದರೂ ತೊಂದರೆಯಾ ದರೆ, ನಾವು ನಮ್ಮ ಆತ್ಮೀಯ ಮಿತ್ರರ ಕಷ್ಟದಲ್ಲಿಯೂ ಪಡಲಾರದಷ್ಟು ನೋವು ಅನುಭವಿಸುತ್ತಾರೆ. ಸೇವಕರು ಮೈಮರೆತಾರೆಂದು ರಾತ್ರಿಯಲ್ಲಿಯೂ ಅನೇಕ ಸಲ ಎದ್ದು ನೋಡಿ ಅವುಗಳ ಬಗ್ಗೆ ವಿಚಾರಿಸುತ್ತಿರುತ್ತಾರೆ. ಶ್ರೀ ಮಠದಲ್ಲಿ ಆಶ್ರಯ ಪಡೆದ ರೋಗಿಗಳು, ಅಶಕ್ತರನ್ನು ಹೋಗುತ್ತಾ ಬರುತ್ತಾ ವಿಚಾರಿಸಿ ಧೈರ್ಯ ಹೇಳುತ್ತಾರೆ.

ಆದರೆ ಹಿಂದೆ ಮುಂದಿನ ನಿಟ್ಟುಸಿರು ಬಿಡುತ್ತಾರೆ. ಶ್ರೀ ಮಠದ ದನಕರುಗಳಿಗೆ ಅವರು ಸ್ವಹಸ್ತದಿಂದ ಉಪಚರಿಸುತ್ತಿಲ್ಲ. ಆದರೆ ಆ ಪ್ರಾಣಿಗಳು ಅವರು ಕುಳಿತಲ್ಲಿಗೆ, ಆಡ್ಡಾಡುವಲ್ಲಿಗೆ, ಬಂದು ನೆಕ್ಕಿ, ಮೂಸಿನೋಡಿ ಅವರು ಮೈದಡವಿದ ಮೇಲೆ ತೃಪ್ತಿಯಿಂದ ಮುಂದೆ ಸಾಗುವುದು, ನಮಗೆ ನಿತ್ಯದ ನೋಟ. ಅವರ ಸಾತ್ವಿಕಗುಣದೆದುರು ಮದಿಸಿದ ಗೂಳಿಗಳೂ ಕುದುರೆಗಳೂ ತಣ್ಣಗಾಗಿ ಅವರಬಳಿ ಬಂದು ನಿಲ್ಲುತ್ತವೆ. ಇದನ್ನೆಲ್ಲಾ ಗಮನಿಸಿದಾಗ ಅವರಂತರಂಗದ ಭೂತದಯಾದರ್ಶನವಾಗಿ ಎಂತಹ ನಾಸ್ತಿಕನಾದರೂ ಪುಳಕಿತನಾಗದಿರಲಾರ.

ಶ್ರೀ ಮಹಾಲಿಂಗಸ್ವಾಮಿಗಳವರದು ತುಂಬಾ ಸೌಜನ್ಯಶೀಲತೆ. ಭಕ್ತರು, ಅತಿಥಿಗಳನ್ನು ನಗುಮುಗದಿಂದ, ಪ್ರೀತಿಯಿಂದ ಕುಶಲ ಪ್ರಶ್ನೆ ಮಾಡುತ್ತಾರೆ. ಶ್ರೀ ಮಠದ ಏಳಿಗೆಗಾಗಿ ತಮ್ಮ ಸಹಕಾರ–ಸೇವೆಗಳನ್ನು ಅರ್ಪಿಸಿದ ಊರಿನ ಹಾಗೂ ತಾಲ್ಲೂಕಿನ ಮುಖಂಡರನ್ನು ಇಂದಿಗೂ ಸ್ಮರಿಸಿಕೊಳ್ಳುತ್ತಾರೆ. ಶ್ರೀ ಮಹಾಲಿಂಗಸ್ವಾಮಿಗಳವರ ಮತ್ತೊಂದು ಶ್ರೇಷ್ಠಗುಣ ಅವರ ಕ್ಷಮಾಶೀಲತೆ. ಎಂತಹ ಘೋರ ಅಪರಾಧವೆಸಗಿದವರನ್ನೂ ಅವರು ಖಂಡಿಸುವುದಿಲ್ಲ. ಶ್ರೀ ರಾಮಕೃಷ್ಣಪರಮಹಂಸರು ದೃಷ್ಟಾಂತ ಕಥೆಗಳನ್ನು ಹೇಳುತ್ತಿದ್ದಂತೆ, ತಾವು ಕಂಡು ಕೇಳಿದ ತಮ್ಮ ಅನುಭವದ ಸನ್ನಿವೇಶಗಳನ್ನು ನಿದರ್ಶನವಾಗಿ ಬಳಸಿಕೊಂಡು ಬಹಳ ಪರಿಣಾಮಕಾರಿಯಾಗಿ, ಮನಂಬುಗುವಂತೆ, ವ್ಯಕ್ತಿಯಲ್ಲಿ ಆಲೋಚನಾ ತರಂಗಗಳೆದ್ದು, ಪರಿವರ್ತನೆಯ ಹಾದಿಹಿಡಿಯುವಂತೆ ಮಾರ್ಮಿಕವಾಗಿ ಹೇಳುತ್ತಾರೆ. ಆಗ ಅವರ ಉಪದೇಶ 'ಮಿತ್ರ ಸಂಹಿತೆ'ಯಂತೆ ಭಾಸವಾಗುತ್ತದೆ. ತಪ್ಪಿತಸ್ಥನನ್ನು ತಾವು ಕ್ಷಮಿಸಿಬಿಡುತ್ತಾರೆ. ತಪ್ಪಿಗೆ ಶಿಕ್ಷೆ ವಿಧಿಸಲು ಭಗವಂತನಿದ್ದಾನೆ, ಆ ಚಿಂತೆ ನಮಗೇಕೆ ಎನ್ನುತ್ತಾರೆ.

ಶ್ರೀ ಮಹಾಲಿಂಗಸ್ವಾಮಿಗಳವರು ನ್ಯಾಯ ತೀರ್ಪಿನಲ್ಲಿ ನಿಷ್ಪಕ್ಷಪಾತಿಗಳು. ಅನೇಕ ಕ್ಲಿಷ್ಟಕರವಾದ ವ್ಯಾಜ್ಯಗಳೂ ಉನ್ನತ ನ್ಯಾಯಾಲಯಗಳ ಮೆಟ್ಟಿಲೇರಿ ಬಂದಂತಹವೂ ಶ್ರೀಗಳವರಿಂದ ತೀರ್ಮಾನಿಸಲ್ಪಟ್ಟಿವೆ. ಇಂದಿಗೂ ಅನೇಕವ್ಯಾಜ್ಯಗಳು ಇತ್ಯರ್ಥವಾಗುತ್ತಿರುವುದನ್ನು ಕಾಣುತ್ತೇವೆ. ಪರಸ್ಪರ ಸೋದರರಲ್ಲಿ ವೈಮನಸ್ಯವುಂಟಾಗಿ ಒಬ್ಬರು ಮಾತ್ರವೇ ಶ್ರೀಮಠಕ್ಕೆ ನೀಡ ಬಂದ ಭೂದಾನವನ್ನು ಶ್ರೀಗಳವರು ಎಲ್ಲರೂ ಒಪ್ಪಿ ಒಮ್ಮನದಿಂದ ನೀಡಿದರೆ ಅದು ಸಕ್ರಮ, ಶಿವಾರ್ಪಿತ. ಒಬ್ಬರ ಮನ ನೋಯಿಸಿ ಇನ್ನೊಬ್ಬರು ನೀಡುವ ದಾನದಿಂದ ಯಾರಿಗೂ ಶ್ರೇಯಸ್ಕರವಲ್ಲ ಎಂದು ಹೇಳಿ ತಿರಸ್ಕರಿಸಿಬಿಟ್ಟರು.

ದೀನ ದಲಿತರು, ಹಿಂದುಳಿದವರಲ್ಲಿ ಶ್ರೀ ಮಹಾಲಿಂಗಸ್ವಾಮಿಗಳವರಿಗೆ ಅಪಾರವಾದ ಕರುಣೆ. ಒಮ್ಮೆ ಸಂಭಾಷಣೆ ನಡೆಸುವಾಗ ನಾನೊಂದು ಅರಿಕೆ ಮಾಡಿಕೊಂಡೆ. "ನಾವು ಜಾಣರೂ, ಉತ್ತಮ ಅಂಕಗಳನ್ನು ಗಳಿಸಿರುವವರೂ ಆದ ವಿದ್ಯಾರ್ಥಿಗಳನ್ನೇ ನಮ್ಮ ಸಂಸ್ಥೆಗೆ ಸೇರಿಸಿಕೊಂಡರೆ ಉತ್ತಮವಾದ ಫಲಿತಾಂಶ ಪಡೆಯಬಹುದು"

ಎಂದು. ಶ್ರೀಗಳವರು ಥಟ್ಟನೆ ಪ್ರಶ್ನೆ ಹಾಕಿದರು, "ಹಾಗಾದರೆ, ಕಡಿಮೆ ಅಂಕಗಳನ್ನು ಪಡೆದವರು, ಹಿಂದುಳಿದವರು ಎಲ್ಲಿಗೆ ಹೋಗಬೇಕು? ಅವರು ಬೇರೆ ಯಾರಿಗೂ ಬೇಡ, ನಮಗೂ ಬೇಡ. ಹಾಗಾದರೆ ಅವರಿಗೆ ಎಲ್ಲಿಯೂ ಸ್ಥಾನವೇ ಬೇಡವೆ?" ಹಾಗೆಯೇ ಮುಂದುವರೆದು ನಗುತ್ತಾ ಹೇಳಿದರು. "ನೋಡಿ, ಸೃಷ್ಟಿಕರ್ತನ ದೃಷ್ಟಿಯಲ್ಲಿ ಎಲ್ಲರೂ ಒಂದೇ. ನಾವು ಹಾಗೆ ಮೇಲು–ಕೀಳು, ಹಿಂದು–ಮುಂದು ಎಂದು ಪರಿಗಣಿಸ ಹೊರಟರೆ ಬಡವರ, ಕಡಿಮೆ ಬುದ್ಧಿಶಕ್ತಿಯುಳ್ಳವರ ಗತಿಯೇನು? ಉತ್ತಮ ಮಟ್ಟದಲ್ಲಿರುವವರು ಹೇಗೂ ಉತ್ತಮವಾಗಿರುತ್ತಾರೆ. ಅವರಿಗೆ ನಮ್ಮ ಪ್ರೋತ್ಸಾಹ ಅನಗತ್ಯ. ಅಂಥವರನ್ನೇ ಆರಿಸಿಕೊಂಡು ನೂರಕ್ಕೆ ನೂರರಷ್ಟು ಫಲಿತಾಂಶ ನೀಡಿ ನಮ್ಮ ಬೆನ್ನು ತಟ್ಟಿಸಿಕೊಂಡು ಹೆಮ್ಮೆಪಡುವ ಬದಲು ಬಹಳ ಕೆಳಮಟ್ಟದಲ್ಲಿರುವವರಿಗೂ ಪ್ರೋತ್ಸಾಹ ನೀಡಿ ಶೇಕಡ ಮೂವತ್ತೈದಕ್ಕೆ ಏರಿಸಿದರೆ ಅದೂ ಸೇವೆಯಲ್ಲವೆ? ಅವರ ಜೀವಮಾನ ಪರ್ಯಂತ ನೆನಪು ಮಾಡಿಕೊಂಡು ಜೀವನ ಸಾಗಿಸುತ್ತಾರೆ" ಎಂದರು. ಮತ್ತೆ ನಾನೆಂದೂ ಅಂತಹ ವಿಚಾರಗಳನ್ನು ಶ್ರೀಗಳವರಲ್ಲಿ ಪ್ರಸ್ತಾಪಿಸಲಿಲ್ಲ.

ಶ್ರೀ ಮಠದ ಆಶ್ರಯದಲ್ಲಿ 'ಶ್ರೀ ನಿರ್ವಾಣಸ್ವಾಮಿಕೃಪಾ ವಿದ್ಯಾಪೀಠ' ವೆಂಬ ಹೆಸರಿನಿಂದ ಸಂಸ್ಥೆಯೊಂದು ಸ್ಥಾಪಿತವಾಗಿ, ಅದರ ಆಶ್ರಯದಲ್ಲಿ ಕನಕಪುರದಲ್ಲಿ ಒಂದು ಪ್ರೌಢಶಾಲೆ ಮತ್ತು ಉನ್ನತ ಪ್ರಾಥಮಿಕ ಶಾಲೆಯೂ, ಒಂದು ಅನಾಥಾಲಯವೂ ಒಂದು ಸಂಸ್ಕೃತ ವೇದಪಾಠಶಾಲೆಯೂ ಮಾಗಡಿ ತಾಲ್ಲೂಕಿನ ವೀರೇಗೌಡನ ದೊಡ್ಡಿಯಲ್ಲಿ ಒಂದು ಪ್ರೌಢಶಾಲೆಯೂ ಮಳವಳ್ಳಿ ತಾಲ್ಲೂಕಿಗೆ ಸೇರಿದ ಹಲಸಹಳ್ಳಿಯಲ್ಲಿ ಒಂದು ಪ್ರೌಢಶಾಲೆಯೂ ನಡೆಯುತ್ತಿವೆ. ಅನಾಥಾಲಯದಲ್ಲಿ ಸಮಾಜದ ನಾನಾವರ್ಗಗಳ ಸುಮಾರು ಆರುನೂರು ಮಂದಿ ಮಕ್ಕಳಿಗೆ ಅಶನ, ವಸನ, ವಸತಿ ಸೌಲಭ್ಯಗಳನ್ನು ಉಚಿತವಾಗಿ ನೀಡುತ್ತಿದ್ದಾರೆ. ನಿತ್ಯ ನೂರಾರು ಮಂದಿಗೆ ದಾಸೋಹ ನಡೆಯುತ್ತಿದೆ. ಅಶಕ್ತರು, ನಷ್ಟಾರೋಗ್ಯ ಜೀವಿಗಳು ಅನೇಕರು ಪೋಷಿಸಲ್ಪಡುತ್ತಿದ್ದಾರೆ. ಕಾಲಕಾಲಕ್ಕೆ ವ್ಯವಸಾಯ ನಡೆಯುತ್ತಿದೆ. ಉತ್ತಮ ಅಧಿಕ ಇಳುವರಿಗಾಗಿ ಜಿಲ್ಲಾ ಹಾಗೂ ರಾಜ್ಯ ಮಟ್ಟದ ಬಹುಮಾನಗಳನ್ನು ಸರ್ಕಾರ ನೀಡಿರುತ್ತದೆ. ಧಾರ್ಮಿಕ ಸಮಾರಂಭ ಗಳು, ಶಿವಾನುಭವ ಗೋಷ್ಠಿಗಳು, ಶಿವಕಥಾ ಕಾಲಕ್ಷೇಪ, ಭಾಷಣ, ಉಪನ್ಯಾಸಗಳ ಮೂಲಕ ಧರ್ಮ ಪ್ರಚಾರ ಕಾರ್ಯವನ್ನು ಕೈಗೊಂಡಿದ್ದಾರೆ.

ಶ್ರೀ ಮಹಾಲಿಂಗಸ್ವಾಮಿಗಳವರು ಕೈಗೊಂಡು ನಡೆಸುತ್ತಿರುವ ಕಾರ್ಯಗಳನ್ನು ಬರುವ ಆದಾಯದ ಬೆಳಕಿನಲ್ಲಿ ಗಮನಿಸಿದರೆ, ನಿಜಕ್ಕೂ ಅದೊಂದು ಪವಾಡವೆನಿಸುತ್ತದೆ. ಇಷ್ಟು ಕಡಿಮೆ ಆದಾಯದಲ್ಲಿ ಈ ಬೃಹತ್ ಕಾರ್ಯಗಳನ್ನು ಹೇಗೆ ತೂಗಿಸುತ್ತೀರಿ ಎಂದು ಪ್ರಶ್ನಿಸಿದವರಿಗೆ ಶ್ರೀಗಳವರು ಬಹಳ ಸಾಮಾನ್ಯವಾಗಿ ಉತ್ತರ ಹೇಳುತ್ತಾರೆ. ನಮಗಿರುವ ಸ್ಥಿರ ಆಸ್ತಿಯೆಂದರೆ ಹದಿನೈದು ಎಕರೆಗದ್ದೆ. ಅದೂ ನದಿಯ



ಶ್ರೀ ನಿರ್ವಾಣಸ್ವಾಮಿ ವಸತಿ ಪ್ರೌಢಶಾಲೆ, ಶ್ರೀ ದೇಗುಲಮಠ



ಶ್ರೀ ಬಸವೇಶ್ವರ ಹಿರಿಯ ಪ್ರಾಥಮಿಕಶಾಲೆ, ಶ್ರೀ ದೇಗುಲಮಠ



ಶ್ರೀ ನಿ. ಪ. ಪ್ರೌಢಶಾಲೆಯ ವಿದ್ಯಾರ್ಥಿಗಳ
ಸಾಮೂಹಿಕ ಪ್ರಾರ್ಥನೆ. ಶ್ರೀ ದೇಗುಲಮಠ



ಶ್ರೀ ಬಸವೇಶ್ವರ ಹಿರಿಯ ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳ
ಪ್ರಾರ್ಥನೆ. ಶ್ರೀ ದೇಗುಲಮಠ

ಆಚೆ ಪಡದಲ್ಲಿ. ಹತ್ತು ಎಕರೆ ಹೊಲ. ಮಳೆ ಬಿದ್ದರೆ ಉಂಟು. ಇಲ್ಲವಾದರೆ ಇಲ್ಲ. ಸರ್ಕಾರ ನೀಡುವ ಧನಸಹಾಯ ಅಲ್ಪ. ಆದರೂ ನಾವು ಧೃತಿಗೆಡುವುದಿಲ್ಲ. ನಮಗೊಂದು ಗಟ್ಟಿಯಾದ ಆಸ್ತಿ. ಅಕ್ಷಯ ಪಾತ್ರೆ ಇದೆ. ಅದೇ ಜೋಳಿಗೆ. ಭಿಕ್ಷಾಪಾತ್ರೆ ತಿರಿವರಿಂ ಸಿರಿವಂತರಾರು, ? ಎಂದು ಸರ್ವಜ್ಞ ಮೂರ್ತಿಯೇ ಹೇಳಿಲ್ಲವೆ? ಎನ್ನುತ್ತಾರೆ. ಎಂತಹ ಕಷ್ಟ ಕಾಲದಲ್ಲಿಯೂ ಅವರ ಆತ್ಮ ವಿಶ್ವಾಸ, ಧೈರ್ಯ ಅಸಾಧಾರಣವಾದುದು. ಸರ್ಕಾರ ಮುಜರಾಯಿ ಜಮೀನುಗಳನ್ನೆಲ್ಲಾ ವಶಪಡಿಸಿಕೊಳ್ಳುತ್ತದೆ. ಎಂದಾಗ ಅವರೆಂದರು. "ಬಹಳ ಒಳ್ಳೆಯ ಕೆಲಸ ಮಾಡಿದರು. ನಮಗೆ ವ್ಯವಸಾಯ ಮಾಡಿಸುವ ಕಷ್ಟವನ್ನೇ ತಪ್ಪಿಸಿದರು. ನೆಮ್ಮದಿಯಾಗಿ ಪೂಜೆ ತಪಗಳನ್ನಾಚರಿಸಬಹುದು" ಎಂದು.

ಜನತೆಯ ನಿಕಟ ಸಂಪರ್ಕ ಶ್ರೀ ಮಹಾಲಿಂಗಸ್ವಾಮಿಗಳವರಿಗಿದೆ. ವರ್ಷದ ಅನೇಕ ದಿನಗಳು 'ಬಿನ್ನಹ'ಗಳಿಗಾಗಿ ಅನೇಕ ಊರುಗಳಿಗೆ ಪ್ರವಾಸ ಹೋಗುತ್ತಿರುತ್ತಾರೆ. ಜನತೆಯ ಬಗ್ಗೆ ಹೇಳುತ್ತಾ, "ನಮ್ಮ ಜನರು ಬಡವರಾದರೂ ಸಹ ಹೃದಯವಂತರು, ಉದಾರಿಗಳು. ಅವರಲ್ಲಿ ಆತ್ಮಶಕ್ತಿ ಇನ್ನೂ ಬೆಳವಣಿಗೆಯಾಗಬೇಕು. ಆಗ ನಮ್ಮ ಸಂಸ್ಕೃತಿಯೂ ಬೆಳೆದು ನಮಗೆ ಕೇಡೆಂಬುದೇ ಇಲ್ಲ" ಎನ್ನುತ್ತಾರೆ. ಶ್ರೀಗಳವರು "ಇವರಿಗೆ ನಾವೇನಾದರೂ ಅಲ್ಪ ಕಾಣಿಕೆ ಕೊಡಬೇಕು. ಕೊಟ್ಟದ್ದು ಸಾರ್ಥಕವಾಗುತ್ತದೆ. ನಾವೂ ಪುಣ್ಯಭಾಜನರಾಗುತ್ತೇವೆ" ಎಂದು ಭಾವಿಸುವಂತಹ ವ್ಯಕ್ತಿತ್ವವನ್ನು ನಿರಾಯಾಸವಾಗಿ, ಸಹಜವಾಗಿ ಬೆಳೆಸಿಕೊಂಡು ಬಂದಿರುತ್ತಾರೆ. "

ಶ್ರೀಗಳವರೊಮ್ಮೆ ಹೀಗೆ ಹೇಳಿದರು. "ಈ ಮಠಕ್ಕೆ ಆಶ್ರಮವಾಗಿ ಬಂದು ಮೂರು ದಶಕಗಳು ಪೂರ್ಣವಾಯಿತು. ಸರ್ಕಾರಿ ಉದ್ಯೋಗಿಗಳಾದರೆ ನಿಯಮದಂತೆ ರಿಟೈರ್ ಆಗಬೇಕು. ಆದರೆ ಸಮಾಜದ ಈ ವಿಪ್ಲವ, ಅಶಾಂತಿಗಳನ್ನು ಗಮನಿಸಿದರೆ ನಾವೇ ಏನು ಎಲ್ಲಾ ಮಠಾಧಿಪತಿಗಳ ಜವಾಬ್ದಾರಿ, ಹೊರೆಯೂ ಮತ್ತೂ ಹೆಚ್ಚುತ್ತಿದೆ. ಏನೋ ಎಲ್ಲವೂ ಶಿವನ ಲೀಲೆ." ಎಂದು ಹೇಳಿ ಮುಂದುವರಿದು "ಏನೂ ಕೆಲಸಗಳು ಬಾಕಿ ಉಳಿದಿಲ್ಲವೆನಿಸಿದರೂ ಸಹ ಮಠದ ಸುತ್ತಲೂ ಒಂದುಬಾರಿ ಸುತ್ತಿ ಬಂದರೇ ಮನಸ್ಸಿಗೆ ನೆಮ್ಮದಿ. ಇಲ್ಲವಾದರೆ ನಿದ್ರೆಯೇ ಬರುವಂತಿಲ್ಲ. ಏನೋ ಕಳೆದು ಹೋದಂತೆ ಭಾಸವಾಗುತ್ತದೆ" ಎಂದರು. ಶ್ರೀಗಳವರು ಶ್ರೀಮಠದ ಏಳಿಗೆ ತನ್ಮೂಲಕ ಸಮಾಜದ ಏಳಿಗೆಯಲ್ಲಿ ಹೊಂದಿರುವ ತೀವ್ರ ಕಳಕಳಿ ಯಾರಿಗಾದರೂ ಅರ್ಥವಾದೀತು. ಅವರ ಲೌಕಿಕ ಭೋಗವೆಂದರೆ ಎರಡು ಹೊತ್ತಿನ ಪ್ರಸಾದ. ಎರಡು ಕಾವಿಯ ತುಂಡು ಕಪ್ಪಡಗಳು. ಅವರಿಂದ ಸಮಾಜಕ್ಕೆ ದ್ವಿಮುಖ ಲಾಭ. ಗಳಿಸುವುದೂ ಸಮಾಜಕ್ಕೆ. ತ್ಯಜಿಸುವುದೂ ಸಮಾಜಕ್ಕೆ.

ಅನೇಕ ಸಂದರ್ಭಗಳಲ್ಲಿ ಶ್ರೀ ಶ್ರೀಗಳವರೊಡನೆ ನಡೆಸಿದ ಸಂದರ್ಶನ-ಸಂಭಾಷಣೆಗಳಲ್ಲಿ ನನಗೆ ನೆನಪಿದ್ದ ಕೆಲವು ಅಂಶಗಳನ್ನು ಮಾತ್ರ ಕೇವಲ ದಿಕ್‌ದರ್ಶಕ

ವಾಗಿ ಕೊಟ್ಟಿರುತ್ತೇನೆ. ಅವರ ಅಪಾರ ಅನುಭವ, ಅಸಾಧಾರಣ ಕಾರ್ಯಗಳು, ಆಧ್ಯಾತ್ಮಿಕ ಪ್ರಭೆಯನ್ನು ಶಬ್ದಗಳಲ್ಲಿ ಹಿಡಿದಿಡುವುದು ಅಷ್ಟು ಸುಲಭದ ಕಾರ್ಯವಲ್ಲ. ಮಾನವನ ಮೂಲಭೂತ ಅಗತ್ಯಗಳಾದ ಅನ್ನ, ಜ್ಞಾನ, ದೈವಗಳ ಸಾಕ್ಷಾತ್ಕಾರಕ್ಕಾಗಿ ಶ್ರೀ ಮಹಾಲಿಂಗಸ್ವಾಮಿಗಳವರು ಕಾಯಾ, ವಾಚಾ, ಮನಸಾ ದುಡಿಯುತ್ತಿದ್ದಾರೆ. ಅವರ ಕಾರ್ಯಕ್ಷೇತ್ರ ಸಮಾಜವೇ ಆದರೂ, ಕಾರ್ಯಗಳೆಲ್ಲಾ ಸಮಾಜದಿಂದ, ಸಮಾಜಕ್ಕಾಗಿಯೇ ಆದರೂ ಅವರ ಅಂತರಂಗ ಮಾತ್ರ **'ಅವನಲ್ಲಿ'** ಲೀನವಾಗಿದೆ.

ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಉಪಜೀವನಕ್ಕಾಗಿ ಕಾಯಕವೊಂದನ್ನು ಅವಲಂಬಿಸಬೇಕು. ಈ ಸಂಸ್ಥೆಯಲ್ಲಿ ದುಡಿಯುವ ನಾವು ಒಂದೇ ದುಡಿಮೆಗೆ ಎರಡು ರೀತಿಯಲ್ಲಿ ಪ್ರಯೋಜನ ಪಡೆಯುತ್ತಿದ್ದೇವೆ. ನಮ್ಮ ದುಡಿಮೆಗೆ ಎಲ್ಲೂ ಸಿಕ್ಕಬಹುದಾಗಿದ್ದ ಪ್ರತಿಫಲವೂ ಸಿಕ್ಕುತ್ತದೆ. ಆದರೆ, ಬೇರೆಲ್ಲಿಯೂ ಸಿಕ್ಕದ ಶರಣವರೇಣ್ಯರ ನಿತ್ಯದರ್ಶನ, ಸಾನ್ನಿಧ್ಯಲಾಭಗಳೂ ಅನಾಯಾಸವಾಗಿ ದೊರೆಯುತ್ತವೆ. ಲೌಕಿಕಾರ್ಥದಲ್ಲಿ ಹೇಳುವುದಾದರೆ ಒಂದು ಗುರಿಗೆ ಎರಡು ಸುಖಗಳು—ಇಹ ಮತ್ತು ಪರ. ನಾನೂ ನನ್ನ ದುಡಿಮೆಗಾರರ ಬಳಗವೂ ಈ ಸುಕೃತಕ್ಕಾಗಿ ಹೆಮ್ಮೆ ಪಡುತ್ತಿದ್ದೇವೆ.

ಶ್ರೀ ಮಹಾಲಿಂಗಸ್ವಾಮಿಗಳವರ ಆಶೀರ್ವಾದ, ಕೃಪಾಕಟಾಕ್ಷಗಳು ಸಮಾಜದ ಮೇಲೆ ನಿರಂತರವಾಗಿರಲೆಂದೂ. ಅವರ ಸಮಕ್ಷಮ ಅವರ ಶತಮಾನೋತ್ಸವವನ್ನು ಭಕ್ತಿ-ವೈಭವಗಳಿಂದ ನೆರವೇರಿಸುವ ಭಾಗ್ಯ ಈ ಸಮಾಜದ್ದಾಗಲೆಂದೂ ಆ ಸರ್ವಶಕ್ತನಲ್ಲಿ ಅನನ್ಯ ಭಕ್ತಿಯ ಪ್ರಾರ್ಥನೆ ಸಲ್ಲಿಸುತ್ತೇನೆ.

—o—o—

ಆವ ಪುಣ್ಯವೋ ಲಿಂಗಪೂಜಾವಿಧಿಯನು
ಭಾವವಹುದು ನರಜನ್ಮದೊಳು.
ಸಾವಿರ ಮುಖದೊಳರಸಿ ನೋಡಿ
ನಿಗಮಾಗಮಾವಳಿಗಾಣದ ಸಾಧ್ಯವಿದು.

**—ಶ್ರೀ ನಿಜಗುಣಶಿವಯೋಗಿ**

# ಶ್ರೀ ಮಹಾಲಿಂಗೇಶ್ವರ ವಚನಗಳು

● **ಎಸ್. ಮಹಾದೇವಪ್ಪ,** ಎಂ. ಎ., ಬಿ.ಎಡ್

ಕನಕಪುರದ ಶ್ರೀ ದೇಗುಲಮಠದ ಶ್ರೀ ನಿರಂಜನ ಪ್ರಣವ ಸ್ವರೂಪಿಗಳೂ ಪರಮಪೂಜ್ಯರೂ ಆದ ಶ್ರೀ ಶ್ರೀ ಮಹಾಲಿಂಗಸ್ವಾಮಿಗಳವರು ಶ್ರೀ ದೇಗುಲಮಠದ ಕೀರ್ತಿಯನ್ನು ತಮ್ಮ ಪವಾಡ ಸದೃಶ ಕಾರ್ಯಗಳಿಂದ, ಸಮಾಜಸೇವೆಯಿಂದ ಬಹು ಎತ್ತರಕ್ಕೆ ಏರಿಸಿದ್ದಾರೆ. ಅವರ ಸಾನ್ನಿಧ್ಯದಲ್ಲಿ ಸೇವೆ ಸಲ್ಲಿಸುತ್ತಾ ಅವರೊಡನೆ ನಡೆಸಿದ ಸಂಭಾಷಣೆಗಳು ಹಾಗೂ ವಿದ್ಯಾರ್ಥಿಗಳು, ಭಕ್ತಾದಿಗಳಿಗೆ ಅವರು ನೀಡುವ ಉಪದೇಶ ಭಾಷಣಗಳಲ್ಲಿ ನಾನು ಗಮನಿಸಿದ ಹಲವು ಪ್ರಧಾನ ಅಂಶಗಳನ್ನು ಈ ಕೆಳಗಿನಂತೆ ವಚನರೂಪದಲ್ಲಿ ವಾಚಕರಲ್ಲಿ ನಿವೇದಿಸಿಕೊಳ್ಳುತ್ತಿದ್ದೇನೆ. ಆದರೆ ಅವರ ಅನುಭವ ಪೂರ್ಣವೂ, ಆಳವೂ, ಬಂಧುರವೂ ಆದ ಭಾವನೆಗಳನ್ನು ನನ್ನ ದುರ್ಬಲ ಶಬ್ದಗಳು ಪೂರ್ಣವಾಗಿ ಪ್ರತಿಬಿಂಬಿಸಿವೆ ಎಂದು ಹೇಳುವಷ್ಟು ಎದೆಗಾರಿಕೆ ಮಾತ್ರ ನನಗಿಲ್ಲ.

ತನುವ ದಂಡಿಸಿ, ಮನವ ಬಳಸಿ, ಕಾಯಕವನೆಸಗಿ
ಗಳಿಸಿದುದ ಶಿವಾರ್ಪಿತವ ಮಾಡಿದೊಡೆ.
ಇಹದಲ್ಲಿ ಸುಖ–ಪರದಲ್ಲಿ ಜಾಗ-ಇದಮರೆಯದೆ ಬಾಳಿ
ಎಂದರೆಮ್ಮ ಶ್ರೀ ಗುರು ಮಹಾಲಿಂಗದೇವರೊಲಿದು ॥ ೧ ॥

ಶರಣರಾ ನುಡಿಗಳ ಮರೆತು ಮರಣದಾ ಬಾಧೆಗೊಳಗಾದರು
ಮೋಸಹೋದರು ಮಾಯೆಗೆ, ಮಾಸಿಹೋಯಿತು ಕೀರ್ತಿ,
ಲೇಸಬಯಸುವೊಡೆ ನೀ ದಾಸನಾಗು ದೇವನಡಿಗಳಲಿ
ಎಂದರೆಮ್ಮ ಶ್ರೀ ಗುರು ಮಹಾಲಿಂಗದೇವರೊಲಿದು. ॥ ೨ ॥

ನಯನದೊಳಗಣ ನೀರಕುಡಿದು ಬಾಳ್ವುದಿದು ಜಗತ್ತು
ಆದ್ಯರ ವಚನಾಮೃತವ ತಾನೀಂಟಲರಿಯದು ಯಾವತ್ತು,
ಹೋರಾಡಿ ಕಳೆದರೂ ಸಂಪತ್ತು ಬೇಡಿದವರಿಗೆ ನೀಡದೊಂದು ತುತ್ತು
ಮೃತ್ಯುವಿನಾಕುತ್ತು ನಿನ್ನ ಗೊತ್ತ ಬಿಡಿಸುವಂದು ನಿನ್ನ ಸಂಪತ್ತು ಕಾವುದೇ?
ಶಿವಮಂತ್ರ ಸಂಪತ್ತ ನೀನಾರ್ಜಿಸೆಂದರೆಮ್ಮ ಶ್ರೀ ಗುರು ಮಹಾಲಿಂಗ
ದೇವರೊಲಿದು. ॥ ೩ ॥

ಮಡದಿಯೆಂಬೆ ಮಕ್ಕಳೆಂಬೆ ಸಖನೆಂಬೆ ಸಂಗಾತಿಯೆಂಬೆ
ಬಂಧುವೆಂಬೆ ಬಾಂಧವನೆಂಬೆ ನನ್ನದೆಂಬೆ ತನ್ನದೆಂಬೆ ಧನವೆಂಬೆ ಕನಕವೆಂಬೆ,
ಕಾಲನಾಳುಗಳು ಬಂದು ನಿನ್ನೊಳಿಗವನು ಬಿಡಿಸುವಂದು ನೀನಾರಪ್ರಿಯತಮ
-ನೆಂದು ಹೇಳುವೆ?
ಮೃತ್ಯು ಮುಟ್ಟದ ಮಾರ್ಕಂಡೇಯನಾಗೆಂದರೆಮ್ಮ ಶ್ರೀ ಗುರು ಮಹಾಲಿಂಗ
-ದೇವರೊಲಿದು. ॥೪॥

ಉದರ ಪ್ರೇಮಿಗಳು ನಾವು, ಅದರ ರುಚಿಗರು ನಾವು
ಮಾತಿನೊಳು ಮಲ್ಲರು, ನೀತಿಯೊಳು ದುರ್ಬಲರು
ಸುಣ್ಣದುದಕವನು ಹಾಲೆಂದು ಉಣ್ಣುವರೆ?
ಎಂದರೆಮ್ಮ ಶ್ರೀ ಗುರು ಮಹಾಲಿಂಗದೇವರೊಲಿದು. ॥೫॥

ಎತ್ತಿಗೆ ಜ್ವರವಾಗೆ ಕೊಟ್ಟಿಗೆಗೆ ಬರೆಹಾಕುವರೆ?
ಭಕ್ತಿಶೂನ್ಯರಾಗಿ ಚಿತ್ತಚಂಚಲವಾಗಿ ಸತ್ಯವನರಿಯಲಾರದೆ
ಶಿವನೆಂತಿಹನು ಶಿವನೆತ್ತಲಿಹನು ಎನ್ನುವರೆ?
ಎಂದರೆಮ್ಮ ಶ್ರೀ ಗುರು ಮಹಾಲಿಂಗದೇವರೊಲಿದು. ॥೬॥

ಕಾಮನನು ಸುಟ್ಟವನು, ಅಜನ ಶಿರವನರಿದವನು
ಸೋಮನನು ಧರಿಸಿದವನು, ಗಂಗೆಯನು ಮುಡಿದವನು
ರಕ್ಕಸನ ಮೆಟ್ಟಿದವನು, ಬಾಣನ ಬಾಗಿಲ ಕಾಯ್ದವನು
'ಭಕ್ತಕಾಯ ಮಮಕಾಯ'ವೆಂದಾತ್ಮಲಿಂಗವನೇ ತೆತ ವನು
ಶಿವನಿಂತಹವನೆಂದರೆಮ್ಮ ಶ್ರೀ ಗುರು ಮಹಲಿಂಗದೇವರೊಲಿದು. ॥೭॥

ಗಂಗೆ-ಗೌರಿಯರ ಹೊತ್ತವನು, ತಾರೆಗಳ ಚೆಲ್ಲಿದವನು
ಚಂದಿರನ ಸೂಡಿದವನು, ತಂದೆತಾಯಿಯರ ಗುರುತರಿಯುವವನು
ಮಂದಿರವೇ ಇಲ್ಲದವನು, ಎಲ್ಲೆಲ್ಲೂ ಇರುವವನು, ಎಲ್ಲವನೂ ಬಲ್ಲವನು
ಹುಡುಕುವಂಜಿಯಾಳಿಗಿದು ಹಿರಿದೆ ಎಂದರೆಮ್ಮ ಶ್ರೀ ಗುರು ಮಹಾಲಿಂಗ
ದೇವರೊಲಿದು. ॥೮॥

ಕಾಮಿನಿಯ ಕಾಂತಿ ಸೌದಾಮಿನಿಯ ಭ್ರಾಂತಿ
ಅಕ್ಕರೆಯ ಜ್ಞಾತಿ ಅಂತ್ಯಕಾಲದೊಳಾಗುವನು ಅಜ್ಞಾತಿ
ಇಷ್ಟಲಿಂಗದೊಳು ರತಿ, ನಿತ್ಯನಿರ್ಮಲ ಸುಖಶಾಂತಿ
ಎಂದರೆಮ್ಮ ಶ್ರೀ ಗುರು ಮಹಾಲಿಂಗದೇವರೊಲಿದು ॥೯॥

ದೇವನೊಳಗಿದಾಳುಗಳು ನಾವು ನಮ್ಮ ಮನೆಯಂಗಣವ ತೊಡೆಯಲು
ತಳಂಗಳ ಬಯಸುವೆವು 'ಕಾಯಕವೇ ಕೈಲಾಸ'ವೆಂದಣ್ಣನಾ
ನುಡಿಗಳ ಮರೆತು;
ದುಡಿಮೆಯನಾ ಮರೆತು ದೇವನಡಿದಾವರೆಯ ತಾಕಲನರ್ಹರಾಗಿಹೆವು
ಎಂದರೆಮ್ಮ ಶ್ರೀ ಗುರು ಮಹಾಲಿಂಗದೇವರೊಲಿದು. ॥೧೦॥

ದುಡಿಯದೇ ಬಯಸುವನ ದುಡಿಯದೇ ತಿಂಬುವನ, ದುಡಿವರ ನೋಡಿ
ಕರುಬುವನ
ಲಂಚವನು ತಿನ್ನುವನ ವಂಚನೆಯ ಮಾಡುವನ ಸಂತಸದಿಬಾಳ್ವೆ
ನೆಂಬನ ಬಾಳು
ದುಡಿದು ಬಾಳ್ವನಿಗೆಂತು ಮಿಗಿಲು ಆ ಬಾಳು ದುಡಿದವಗಿಟ್ಟ ಕೂಳು
ಎಂದರೆಮ್ಮ ಶ್ರೀ ಗುರುಮಹಾಲಿಂಗ ದೇವರೊಲಿದು. ॥೧೧॥

ನೊಸಲಲ್ಲಿ ವಿಭೂತಿ ಕಿಸೆಯಲ್ಲಿ ಕತ್ತರಿ
ಬಾಯಲ್ಲಿ ಶಿವಮಂತ್ರ ಎದೆಯಲ್ಲಿ ಕುತಂತ್ರ
ನೆಂಟನಲಿ ಪ್ರೀತಿ, ಅಕ್ಕಿಯಲಿ ಆಸೆ
ಕಪ್ಪುಡದಲಿ ಸಂಕೇತ, ನಡತೆಯಲಿ ವಿಪರೀತ
ಡಾಂಭಿಕನಾಗಿರಲು ಬೇಡ ಎಂದರೆಮ್ಮ ಶ್ರೀ ಗುರು ಮಹಾಲಿಂಗ
ದೇವರೊಲಿದು ॥೧೨॥

ಅಂಗದಲಿ ಲಿಂಗವಿದ್ದೇನು ಭಾವದಲಿ ಭಂಗವಾಗಲು?
ಮಾತಿನಲಿ ಮಧುವಿದ್ದೇನು ಮನದಲಿ ಮಾಲಿನ್ಯವಿರಲು?
ಭಾಷೆ ಹಸನಾದರೇನು ಬದುಕು ಹಸನಿಲ್ಲದಿರಲು ?
ಒಂದಕ್ಕೊಂದೊಪ್ಪುವಂತಿರೆಂದರೆಮ್ಮ ಶ್ರೀ ಗುರು ಮಹಾಲಿಂಗ
ದೇವರೊಲಿದು. ॥೧೩॥

ಇಷ್ಟ ಕಾರ್ಯದೊಳಿರಲಿ ಶ್ರದ್ಧೆ, ಇಷ್ಟಕಾರ್ಯದೊಳಿರಲಿ ಭಕ್ತಿ
ಇಷ್ಟಕಾರ್ಯದೊಳಿರಲಿ ನಿಷ್ಠೆ, ಇಷ್ಟಕಾರ್ಯದೊಳಿರಲಿ ಪ್ರೀತಿ
ಶಿವನಿಷ್ಟವಾದೊಡೆ ನೀ ಮುಟ್ಟಿದುದು ತಾ ಹೊನ್ನಹುದು
ಎಂದರೆಮ್ಮ ಶ್ರೀ ಗುರು ಮಹಲಿಂಗ ದೇವರೊಲಿದು. ॥೧೪॥

ಧನವನಾರ್ಜಿಸುವೆ ಧರ್ಮವ ತೊರೆದು, ಧರ್ಮಕಾರ್ಯವ ಮಾಡಿ
ಧನ್ಯನಾಗುವೆಯೆಂಬೆ,
ಕೋಟಿಗಳಿಸಿದಾಪಾಪದ ಬಡ್ಡಿಯ ತಡೆಗೆಂದು ಸಹಸ್ರವ ಕಾಣಿಕೆಯನಿಕ್ಕಿದರೆ,

ದೇವನೇನು ಕುರುಡನೆ, ಪುಣ್ಯವದು ಅಂಗಡಿಯ ಸರಕೆ. ನೀಡುಡಿದಿಕ್ಕಿದನ್ನಕೆ
ದೇವನೊಲಿವನೆಂದರೆಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ॥ ೧೫ ॥

ಶಿವಾಲಯವ ಕಟ್ಟುವೆವೆಂಬಿರಿ. ಶಿವನನೆಲ್ಲಿಂದ ತರುವಿರಿ ?
ಅರೆಹೊಟ್ಟೆ ಅರೆಬಟ್ಟೆ ಜೀವಿಗಳನುಳಿದು ಶಿವನನುಪಚರಿಸುವಿರೆಲ್ಲಿ ?
ಅನ್ನ–ಬಟ್ಟೆಗಳಿಲ್ಲದೆ ನೊಂದು-ಬೆಂದು ಬಂದವರ ಲೆಕ್ಕವಿಡಲಲ್ಲವೇ
ಅವನು ಮಸಣವಾಸಿಯೆನಿಸಿದನು
ಮೊದಲನ್ನ ಬಟ್ಟೆಗಳನಿಟ್ಟು ಸಲಹೆಂದರೆಮ್ಮ ಶ್ರೀ ಗುರು ಮಹಾಲಿಂಗ
ದೇವರೊಲಿದು ॥ ೧೬ ॥

ಭಾಷಣಗಳ ಕೊಚ್ಚುವಿರಿ; ಶೋಷಣೆಯನೂ ಮಾಡಿ ಹೇಸಿಗಿಲ್ಲದೆ
ಕಾಸ ಕೂಡಿಸುವಿರಿ,
ನಿಮ್ಮ ಕಾಯಕಕೆಷ್ಟು ಕಾಸೆಂಬ ನಿಜಲೆಕ್ಕ ನಿಮ್ಮೊಳಗುಂಟೇ ?
ದಣಿಯ ಜೋಳದ
ಹಂಗು ಹಿಂಗಿಹುದೆ ? ನೀವು ಕೊಂಡ ಪ್ರತಿಜ್ಞೆಯದು ನೆರವೇರಿಹುದೆ ?
ಮುಚ್ಚುಮರೆಯಿಲ್ಲದೆ ಹೇಳಿರೆಂದರೆಮ್ಮ ಶ್ರೀ ಗುರು ಮಹಾಲಿಂಗ
ದೇವರೊಲಿದು. ॥ ೧೭ ॥

ಹಲವು ಜನ್ಮಗಳ ಪುಣ್ಯ ಸಂಚಯದಿಂ ಪಡೆವಿರಿ ಪದವಿಯನು,
ದುಡಿಮೆಯಲಿ ನಿಷ್ಠೆ–ನೇಮಗಳ ತೊರೆದು ಮತ್ತೇಕೆ ಹೊಂದುವಿರಿ
ದುರಿತವನು ?
ಜನಹಿತವ ಬಯಸಿ, ಶಿವನೊಲುಮೆ ಗಳಿಸಿ, ಜಸಪಡೆದು ಸುಖಿಗಳಾಗಿರಿ
ಎಂದರೆಮ್ಮ ಶ್ರೀ ಗುರು ಮಹಾಲಿಂಗದೇವರೊಲಿದು. ॥ ೧೮ ॥

ಪಂಚೇಂದ್ರಿಯಗಳ ಪಾತ್ರೆಯಲಿ ಪಂಚಮಹಾಪಾತಕ ರಸವ ಕುಡಿಯದಿರಿ.
ಹದ್ದಿನಲ್ಲಿಡಿ, ಅಂಕೆಯಲ್ಲಿಡಿ, ಸದ್ದು ಗದ್ದಲವಿಲ್ಲದಂತಿಡಿ, ನಿಮ್ಮಾತ್ಮ
ವಿನಾಶಕವು
ಪಂಚಸೋಪಾನಂಗಳವು, ಎಚ್ಚರಾ! ಪಂಚಾಕ್ಷರಿಯ ಪಾದಸೇವೆಗವು
ಮೀಸಲಿರಲಿ,
ಎಂದರೆಮ್ಮ ಶ್ರೀಗುರು ಮಹಾಲಿಂಗ ದೇವರೊಲಿದು. ॥ ೧೯ ॥

ರೋಗಿಯಂ ನಿರೋಗಿಯಿಂ ದೂರವಿಡುವನು ವೈದ್ಯ, ಸೋಂಕಾಗದಿರಲೆಂದು,
ನೀತಿ–ನಿಷ್ಠೆಗಳಿಲ್ಲದನ ಹೀನನೆಂದರಿಯುತ ದೂರವಿಡುವುದು ಮನುಜವರ್ಗ,
ಇದಕೇಕೆ ಜಾತಿಯ ಹಳಿದರೆಂದಾರ್ಭಟಿಸುವಿರಿ. ಹಾಕುವಿರಿ ಬೊಬ್ಬೆ?

ಮೊದಲವನ ಹಿಂಸೆಯ ಚಾಳಿಯ ಬಿಡಿಸಿ, ಧರ್ಮದೀಕ್ಷೆಯನು ತೊಡಿಸಿ,
'ನೀತಿವಿಡಿದಾತ ದೇವಕುಲಿ' ಎಂದರೆಮ್ಮ ಶ್ರೀ ಗುರು ಮಹಾಲಿಂಗ
ದೇವರೊಲಿದು. ॥ ೨೦ ॥

ಹಣವುಳ್ಳವರೆ,ದೇಗುಲವ ಕಟ್ಟುವಿರಾ? ಸರ್ವಭರಿತನಿಗೆ ನೆಲೆಯ ಕಲ್ಪಿಸುವಿರಾ?
ದೇವನೊಳ ಸೇರಿದರೆ ಗಾಳಿ ಬೆಳಕುಗಳೆಲ್ಲಿ ಬಹವು ? ನಿಮ್ಮಂತರಂಗದ ಗುಡಿಯ
ಗುಡಿಸಿ, ಮಡಿಯ ಮಾಡಿ, ನಿರ್ಮಲ ಜ್ಞಾನದ ಪ್ರಣತೆಯನು ಬೆಳಗಿ
ದೇವನಿಗಾಶ್ರಯವ ನೀಡಿರಿ.
ಜಗವೆಲ್ಲ ಸಿಗಿ ಸಿಗಿ ಬೆಳಗುವುದೆಂದರೆಮ್ಮ ಶ್ರೀ ಗುರು ಮಹಾಲಿಂಗ
ದೇವರೊಲಿದು. ॥ ೨೧ ॥

ಯಾತ್ರೆಯನು ಮಾಡದಿರು ಎಲ್ಲರೂ ನೋಡಲೆಂದು,
ಧರ್ಮವನು ಮಾಡದಿರು ಜನ ಮೆಚ್ಚಲೆಂದು,
ಕರ್ಮವನು ಮಾಡದಿರು ಕಾಳಸಂತೆಯ ರೂಪದಲಿ,
ಒಳಗಿದ್ದು ಲೆಕ್ಕವ ಕೂಡಿ, ಕಳೆದು, ಗುಣಿಸುತಿಹ ನಿನ್ನಾತ್ಮವೊಪ್ಪುವ ತೆರದಿ.
ವ್ಯವಹರಿಸೆಂದರೆಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ॥ ೨೨ ॥

ಅಡಗ ತಿನ್ನಲು ಬೇಕು, ಅಪಕೊಲ್ಲಲು ಬೇಕು, ಕುಡಿಯಲೂ
ಬೇಕು ಕಂಠಪೂರ್ಣ.
ಜೂಜವು ಬೇಕು, ವನಿತೆಯೂ ಬೇಕು. ದೀನ ರಕ್ತವನು ಹೀರಲೂ ಬೇಕು.
ಒಡನೊಡನೆಯೇ 'ದೀನದಯಾಳು, ಪತಿತೋದ್ಧಾರಕ, ಧರ್ಮರತ್ನಾಕರ'
ನೆಂಬ.
ಜಸವೂ ಬೇಕು. ಮೂರ್ಖರಿತ್ತ ಬಿರುದ ಮನ್ನಿಸಲು ಶಿವನೇನು
ಗಾಂಪನೆ ?
ಎಂದರೆಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ॥ ೨೩ ॥

ಒಳ್ಳೆ ನಾಗನಲ್ಲ, ಬೆಕ್ಕು ಹೆಬ್ಬುಲಿಯಲ್ಲ, ಜಳ್ಳು ಕಾಳದು ಬಿತ್ತನೆಯಲ್ಲ.
ಸಂಸ್ಕಾರವಿಲ್ಲದೆ ಸಮಯ ಸಾಧಿಸಿ. ಸ್ಥಾನವ ಪಡರಿದಡೇನು ?
ಗಂಗೆಯಲಿ ತೇಲಿದಾ ಸೋರೆಯದು ತಾ ಪುನೀತನಾದೆನೆಂದಂತೆ !
ಮೊದಲಾತ್ಮ ಸಂಸ್ಕಾರವನಿವಾರ್ಯವೆಂದರೆಮ್ಮ ಶ್ರೀ ಗುರು
ಮಹಾಲಿಂಗ ದೇವರೊಲಿದು.

ಮುಕ್ತಿಯನು ಬೇಕೆಂದು ತೆರತೆರನ ಯುಕ್ತಿಯ ಕೋರಿದರೆ
ಮನವಮುಟ್ಟದು ಮಹಾದೇವನ, ॥ ೨೪ ॥
ಕಾಮದ ಕಡೆದು, ಮನದ ಮಾಯೆಯನಗೆದು. ಧನದ ದಾಹವ ನೀಗಿ,

ಹಸಿಯಾಸೆಯು ಹುರಿದು,ಎಲೆಯು ಮರೆಯೋಳಿರ್ದು,
ಎಲ್ಲಪ್ರಾಣಿನಗರ್ಜಿತವೆಂದಾತಗೆ ಮಹಾ ದೇವನೊಲಿವನು,
ಎಂದರೆಮ್ಮ ಶ್ರೀ ಗುರುಮಹಾಲಿಂಗ ದೇವರೊಲಿದು. ||೨೫||

ಕರಣ ಶುದ್ಧಿಯಲಿ ನುಡಿವವಗೆ, ಧರ್ಮಮಾರ್ಗದಿ ನಡೆವವಗೆ
ನಿಷ್ಕಾಮ ಕರ್ಮಿಗೆ, ನಿರ್ಮಲ ನಿರಹಂಕಾರಿಗೆ, ನಿರ್ಮೋಹಿಗೆ
ಆವ ಬೇಡವೆಂದರೂ ನೀಡುವನು ಶಿವ ತಾನು,
ಎಂದರೆಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ||೨೬||

ಬಡವನನು ಬಡಿಯದಿರು, ಬಲ್ಲಿದನ ಗೆಲಹೋಗದಿರು
ಬಡವನ ಮಡದಿಯಾಭರಣ ಕಸಿದು ನಿನ್ನರಸಿಯ ಕೊರಳನಲಂಕರಿಸದಿರು,
ಬಡವನಾಕೂಗು ಮುಟ್ಟಿತು ಶಿವನ, ಜೋಕೆ!
ಎಂದರೆಮ್ಮ ಶ್ರೀ ಗುರು ಮಹಾಲಿಂಗದೇವರೊಲಿದು ||೨೭||

ಧನಬಲವುಂಟು ಜನಬಲವುಂಟೆಂದು ಅಕೃತ್ಯವ ಮಾಡದಿರು
ನೀನಾರ್ಜಿಸಿದ ಪೂರ್ವಜನ್ಮದ ಸುಕೃತವದು ಸವೆದಂದು
ಬುತ್ತಿ ತೀರಿದಾ ಪಯಣಿಗ ನೀನಾದೀಯೆ ಜೋಕೆ,
ಎಂದರೆಮ್ಮ ಶ್ರೀ ಗುರು ಮಹಾಲಿಂಗದೇವರೊಲಿದು. ||೨೮||

ಕೊಬ್ಬಿದಾ ಕುದುರೆಯದು ತಾಹಾರಿ ಕೋಡುಗಲ್ಲನೇರಿ ಇಳಿಯಲರಿಯದೆ ನಡುಗುವಂದದಿ,
ಗರ್ವದಿಂ ನೀನೇರಿ ಪಾಪತರುವ ಮರಳಲರಿಯದೆ ಜರಗಾಗಬೇಡ,
ಕುರುಡತಾಕೋಲ ಪಿಡಿದು ಬೆಂಬಳಿಯ ಬಪ್ಪಂತೆ
ಶರಣರ ವಚನಗಳನರಿತು ಕರ್ಮದ ಬೇರನರಿ,
ಎಂದರೆಮ್ಮ ಶ್ರೀಗುರು ಮಹಾಲಿಂಗದೇವರೊಲಿದು. ||೨೯||

ಜ್ಞಾನವೆಂಬ, ವಿಜ್ಞಾನವೆಂಬ ಸಮಸ್ತವನು ತಾನರಿವವೆಂಬ
ಎಲ್ಲವನು ಅರಿತವನು ನಿನ್ನ ಸೃಷ್ಟಿಸಿದಾತನನೇ ಮರೆತೆ ಏಕೆ?
ನೀ ಸರ್ವಶಕ್ತನಾದೊಡೆ ಪರಬ್ರಹ್ಮನಾ ಪರಿಯ ಹೇಳು
ಎಂದರೆಮ್ಮ ಶ್ರೀ ಗುರು ಮಹಾಲಿಂಗದೇವರೊಲಿದು. ||೩೦||

ಇಂಧನವ ಸುಟ್ಟು ಹಾರುವುದು ಅದ್ಭುತವೆಂಬ,
ಚಂದ್ರನ ನೋಡಿದುದು ತಾಮತ್ತದ್ಭುತವೆಂಬ,
ಮಂಗಳನೆಡೆಗೆ ಯಾನ ಸಾಹಸವೆಂಬೆ



ಶ್ರೀ ಸಿದ್ಧಗಂಗಾ ಕ್ಷೇತ್ರಾಧೀಶರಾದ
ಶ್ರೀ ಮ. ನಿ. ಪ್ರ. ಶ್ರೀ ಶಿವಕುಮಾರ
ಸ್ವಾಮಿಗಳವರು

ಶ್ರೀ ದೇಗುಲ ಮಠಾಧೀಶರಾದ
ಶ್ರೀ ಮ. ನಿ. ಪ್ರ. ಚರಮೂರ್ತಿ
ಶ್ರೀ ಮಹಾಲಿಂಗ ಸ್ವಾಮಿಗಳವರು

ಮರ್ಕಟವು ಮಂಡಲಾಧೀಶನಲ್ಲ,
ಕಕ್ಕೆಯದು ಸಂಪಿಗೆಯಲ್ಲ, ಅತ್ತಿ ಅಂಜೂರವಲ್ಲ.
ಜಾಲಿ ಶ್ರೀಗಂಧವಲ್ಲ, ಲಿಂಗಹೊತ್ತಮಾತ್ರದಿ ಭಕ್ತನಲ್ಲ,
ಎಂದರೆಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ॥ ೩೭ ॥

ಭಾವದಲಿ ಸಂನ್ಯಾಸಿಯಾಗದೆ, ಬಾಳಿನಲಿ ಸಂನ್ಯಾಸಿಯಾಗದೆ,
ಬರಿವೇಷದಲಿ ಸಂನ್ಯಾಸಿಯಾದವಗೆ,
ಮೊಸರಲ್ಲದೆ, ದುಗುಡವಲ್ಲದೆ, ಪೂಸಿದಾ ಭಸ್ಮದ ಕೇಡಲ್ಲದೆ,
ಭವಬಂಧನದ ಬೇರನರಿವರಿವು ಎಂತುಟಾಗುವುದು ?
ಎಂದರೆಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ॥ ೩೮ ॥

ಭಕ್ತನೇ ಎಂದೇಳಿಸಬೇಡ, ಮಾಹೇಶ್ವರನೇ ಎಂದಣಕಿಸಬೇಡ,
ಭಕ್ತರ ಭಕ್ತ ತಾನೆಂದು ಶಿವ ಕೈಂಕರ್ಯವ ಮಾಡುವಾತನ
ನೀನನವರತ ಶಿರದೊಳು ಹೊತ್ತು ಮೆರೆಯೋ,
ಎಂದರೆಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ॥ ೩೯ ॥

ದೃಷ್ಟಿಯುದ್ಧ ಮಲ್ಲಯುದ್ಧ ಬಲಯುದ್ಧ ಜಲಯುದ್ಧ
ಖಡ್ಗಯುದ್ಧ ಚತುರಂಗಯುದ್ಧಗಳೆಲ್ಲವೂ ಮುಗಿದು,
ಅಣುಯುದ್ಧ ಕ್ಷಿಪಣಿಯುದ್ಧಗಳಿಗಿಳಿದಿವೆ ದೇಶಗಳು.
ಎಲ್ಲ ಯುದ್ಧಗಳನು ಹೂಡಬಲ್ಲ ಈ ಮಹಾವೀರನಿಗೆ
ತನ್ನೊಡನೆ ತಾ ಹೋರಾಡುವ ಕಲೆ
ಸಿದ್ಧಿಸಲಿಲ್ಲವೆ? ಎಂದರೆಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ॥೪೦॥

ಕೆಟ್ಟನವನೆಂದರಿಯ ಬೇಡ, ಅಳಿದನವನೆಂದರಿಯ ಬೇಡ,
ಸುಸಂಸ್ಕಾರದ ಬಿತ್ತು ತಾಮೊಳೆತು ಶಿವದೃಷ್ಟಿಲಾಭಿ ಶಿವಕೃಪೆಯುದಕದಲಿ
ಹೆಮ್ಮರನಾಗಿ ತಾನಾಶ್ರಯವೀವುದು, ಸಂಸ್ಕಾರವನರಿವುದೆಂತೋ,
ಎಂದರೆಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ॥ ೪೧ ॥

ಗುರುವಿಗುದ್ಧಟನಾಗಿರಲು ಬೇಡ. ಗುರುತಾಮುನಿದೊಡದು ಶಾಪ,
ಒಲಿದೊಡೆ ವರ, ಪರಗುರು ಶ್ರೀ ಶಿವಯೋಗಿ ತಾನಾರೆಂದರಿತೆ ಮರುಳೆ,
ಗುರುವಿನಡಿಗೆರಗಿ ಭವಬಂಧನವ ನೀಗುವ ಪರಿಯ ನೀನರಿ
ಎಂದರೆಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ॥ ೪೨ ॥

ಗುರುವ ವಂಚಿಪನೆನಬೇಡ, ತರತರದ ಸಂಚನೀಹೂಡಬೇಡ,
ಮರುಜನ್ಮಕೆ ಸಂಚಕಾರವ ನೀ ಹಿಡಿಯ ಬೇಡ,

ಗುರುವೊಲಿದಿತ್ತುದಕ್ಷಯವೆಂದು ನೀ ಬಾಳು ಮರುಳೆ,
ಎಂದರೆಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ॥ ೪೩ ॥

ಶರಣನೆಂಬುದು ಬೆಂಕಿ, ಶರಣನೆಂಬುದು ಭವನಾಶಕೆ ಬೆಂಕಿ,
ಶರಣನೆಂಬುದು ಪಾಪಕರ್ಮಕೆ ಬೆಂಕಿ, ಶರಣನೆಂಬುದಾರಕೆ ಬೆಂಕಿ,
ಶರಣನೆಂಬುದೆಂಟಕೆ ಬೆಂಕಿ, ಶರಣನಡಿಗೆ ಶರಣೆಂದು ಬಾಳು,
ಎಂದರೆಮ್ಮ ಶ್ರೀ ಗುರು ಮಹಾಲಿಂಗದೇವರೊಲಿದು. ॥ ೪೪ ॥

ಕೊಂಡ ಅಶ್ವವನು ಕತ್ತೆಯೆಂದೇಳಿಸಿದರು.
ಅಶ್ವಶಾಸ್ತ್ರಪರಿಣತರೆಂದಣಕಿಸಿದರು,
ಮತ್ತವರೇ ಸುತ್ತಿಸುಳಿದು ನೋಡುವಂತಾಯಿತ್ತು,
ಶ್ರೀ ಗುರುವಿನೊಲುಮೆಯನದಾರು ಅರಿವರು ?
ಎಂದರೆಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ॥ ೪೫ ॥

ಹೊಲದಲ್ಲಿ ಚೆಲ್ಲಿದಾರೋಗಿ ಮರಳಲ್ಲಿ ಹೊಯ್ದು ಎಣ್ಣೆಯಾಯಿತೆಂದರು,
ಧಣಳು ನುಂಗಿರಬಹುದು, ಇರುವೆಗಳ ಕೇಳಿ ನೋಡಿ ಎಂದರು,
ಶೂಲಧರ ತಾನೊಲಿದು ಸಿಂದಾಗ ಮೂಲೆ ಮೂಲೆಯೂ ರಾಗಿ,
ಪರಕರುಣೆಯು ಬಿತ್ತು ಮೊಳೆವುದನು ತಾನೆಂತು ಬಲ್ಲ ಮಾನವನು,
ಎಂದರೆಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ॥ ೪೬ ॥

ಒರೆದು ನೋಡಿದರೆನ್ನಗುರು, ಕೊರೆದು ನೋಡಿದರೆನ್ನ ಗುರು,
ಜಡಿದು ನೋಡಿದರೆನ್ನಗುರು, ಝಂಕಿಸಿ ನೋಡಿದರೆನ್ನಗುರು,
ಅವರೆಂತೆಂತು ಪರಿಕಿಸಿದರಂತಂತೆ ಗೆಲಿದು ನಿಂದೆನು,
ನಾನಿತ್ತೆ ಬಕುತಿಯನು, ಅವರಿತ್ತರವರನೆ ನನಗೆ,
ಎಂದರೆಮ್ಮ ಶ್ರೀ ಗುರುಮಹಾಲಿಂಗದೇವರೊಲಿದು. ॥ ೪೭ ॥

ಬಲ್ಲಿದಗೆ ತನ್ನೊಡವೆಯನಿತ್ತು, ಕಣ್ಣೀರ ಕರೆವ ಬಡವನ
ಇದ್ದುದೆಲ್ಲವ ನೊತ್ತೆಯಿಟ್ಟು ತನ್ನ ಮುದ್ದುಮಗನಿಗೆ ವಿದ್ಯೆ ಕಲಿಸ ಬಂದಾ
ತಾಯಿ
ನೋಡಿ ನೋಡಿ ಸಿದ್ಧಬಿಟ್ಟತ್ತರು-ಶಿವನೆಚ್ಚರವಾಗಿಹನು
ಎಂದರೆಮ್ಮ ಶ್ರೀ ಗುರುಮಹಾಲಿಂಗದೇವರೊಲಿದು. ॥ ೪೮ ॥

ವಿದ್ಯೆಯನು ಬೇಡಿಬಂದವರು ನೀವು,
ಬುದ್ಧಿಯನು ಬೆಳೆಸಬಂದವರು ನೀವು,
ಶುದ್ಧ ನೀತಿ ನಿಯಮಗಳ ಕಲಿಯ ಬಂದವರು ನೀವು

ಸದ್ದು ಗದ್ದಲವ ಮಾಡುತ್ತ, ನಿಮ್ಮ ಸಿದ್ಧಿಯನೆ ಮರೆಯುವರೆ
ಎಂದರೆಮ್ಮ ಶ್ರೀ ಗುರುಮಹಾಲಿಂಗದೇವರೊಲಿದು. ॥ ೪೯ ॥

ಶ್ರಮಿಸಿ ಅರ್ಜಿಸಿರಿ ಜ್ಞಾನವನು, ತ್ಯಜಿಸಿ ದೂರವಿಡಿ ಹಮ್ಮು ಬಿಮ್ಮುಗಳ,
ಹಿರಿಯರಿಗೆ ಶಿರಬಾಗಿ, ಕಿರಿಯರಿಗೆ ಪ್ರಿಯರಾಗಿ, ಊರಿಗುಪಕಾರಿಯಾಗಿ,
ದೀನರಿಗೆ ದಾರಿದೀಪವಾಗಿ, ಹೆತ್ತವರ ಹೆಸರಾಗಿ,
ಎಂದುಪದೇಶಿಸಿದರೆಮ್ಮ ಶ್ರೀ ಗುರುಮಹಾಲಿಂಗದೇವರೊಲಿದು. ॥ ೫೦ ॥

ಕುಪಿತನಾಗಲು ಬೇಡ, ಶ್ವಪಚನಾಗಲು ಬೇಡ.
ಕರಣಗಳ ತೊರೆಯಂತೆ ಹರಿಯ ಬಿಡಬೇಡ,
ಎದೆಯೊಳಗೆ ಕ್ರೋಧಾಗ್ನಿಗೆಡೆ ಕೊಡಬೇಡ,
ಸದಾ ಶಿವಸ್ಮರಣೆಯ ಬಿಡಬೇಡ, ಎಂದರೆಮ್ಮ ಶ್ರೀ ಗುರುಮಹಾಲಿಂಗ
ದೇವರೊಲಿದು. ॥ ೫೧ ॥

ಜ್ಞಾನ ಜ್ಯೋತಿಯ ಬೆಳಗಿರೋ
ವಿಮಲಚಿಂತೆಯ ತೈಲವನೆರೆದು,
ಅಮಲ ಚರಿತೆಯ ಬತ್ತಿಯನೊಟ್ಟಿ,
ವಿನಯ ಶೀಲತೆಯ ಗಾಳಿಯನೆ ಊದಿ,
ಜ್ಞಾನ ಜ್ಯೋತಿಯ ಬೆಳಗಿರೆಂದರೆಮ್ಮ ಶ್ರೀ ಗುರುಮಹಾಲಿಂಗ
ದೇವರೊಲಿದು. ॥ ೫೨ ॥

ದೇಹದೇಗುಲವ ಶುಚಿಯಾಗಿಡಲು ಬೇಕು,
ಅಂಗದೊಳಗಣ ಲಿಂಗದಲಿ ಕರಣವ ನೆಡಲುಬೇಕು,
ಕರುವನೊಳಗಿರಿಸಿ ಅಗಳಿಯ ನಿಕ್ಕಲುಬೇಕು,
ಕರೆದಮೃತ್ಯವನುಂಡು ಸುಖಿಸಲುಬೇಕು,
ಎಂದರೆಮ್ಮ ಶ್ರೀ ಗುರುಮಹಾಲಿಂಗದೇವರೊಲಿದು. ॥ ೫೩ ॥

ಈಶಮಂತ್ರವನು ಜಪಿಸಲು ಬೇಕು,
ಆಶೆಪಾಶಗಳ ಅರಿಯಲು ಬೇಕು,
ಲೇಸಾದ ಕಾರ್ಯಗಳನೆಸಗಲು ಬೇಕು,
ಕಾಶಿ ಕೈಲಾಸಗಳ ಕಾಣಲು ಬೇಕು,
ಎಂದರೆಮ್ಮ ಶ್ರೀ ಗುರುಮಹಾಲಿಂಗದೇವರೊಲಿದು. ॥ ೫೪ ॥

[illegible]ವುದೂ ನಾಗರಿಕತೆ, ಭೋಗಪಡುವುದೂ ನಾಗರಿಕತೆ
[illegible]

ದುಷ್ಟ ಬಂಧುವನೊದರುವುದು-ಶಿಷ್ಟರನು ಪೋಷಿಸುವುದೂ ಆ ಜನ್ಮಸಿದ್ಧ
ಹಕ್ಕು
ಈ ಹಕ್ಕು ನಾಗರಿಕತೆಗಳ ನಂಬಿ ಎತ್ತನಡೆವುದು ಮಾನವಕುಲ.
ಎಂದರೆಮ್ಮ ಶ್ರೀ ಗುರುಮಹಾಲಿಂಗದೇವರೊಲಿದು ॥ ೫೫ ॥

ಕೀಳುಜಾತಿಯುವ ತಾನೆಂದು ಕೊರಗಬೇಡ,
ಮೇಲು ಜಾತಿಯವ ತಾನೆಂದು ಮೆರೆಯಬೇಡ,
ಜಾತಿಯನಾರೂ ಮಾರಿಲ್ಲ. ಆರೂ ಕೊಂಡಿಲ್ಲ. ಅದು ಆರ ಗಂಟೂ ಅಲ್ಲ.
ನೀತಿಸೂತ್ರದ ಬೆಳಕಿನಲಿ ನಿನ್ನ ಜಾತಿಯ ನೀ ನಿರ್ಧರಿಸಿಕೋ.
ಎಂದರೆಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ॥ ೫೬ ॥

ಅನ್ಯ ದೈವವನಳಿಯ ಬೇಡ, ಅನ್ಯ ಮಾರ್ಗವ ಧಿಕ್ಕರಿಸಬೇಡ,
ತನ್ನ ಮಾರ್ಗವ ಬಿಡಬೇಡ, 'ದೇವನೊಬ್ಬ ನಾಮಹಲ'ವೆಂಬ
ಮಾತ ಮರೆಯ ಬೇಡ, ಬೆಲ್ಲದಚ್ಚನೆಲ್ಲಿ ಕಚ್ಚಿದರೇನು?
ಎಂದರೆಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ॥ ೫೭ ॥

ಅತಿಯಾಗಿ ನಿದ್ರಿಸಬೇಡ, ಅತಿಯಾಗಿ ಉಣಬೇಡ,
ಕಾಳು ವ್ಯಸನದಿ ಕಾಲಕಳೆಯಬೇಡ,
ಕಳೆದ ಕಾಲವನು, ನುಡಿದ ನುಡಿಯನು ಮತ್ತೆ ಹಿಡಿದು ತರಲುಂಟೆ?
ಎಂದರೆಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ॥ ೫೮ ॥

ದೇಶಪ್ರೇಮವು ಮನೆಮಾಡಿರಲಿ ನಿಮ್ಮೊಳಗೆ,
ಈಶ ಭಕ್ತಿಯು ನೆಲೆಯಾಗಿರಲಿ ನಿಮ್ಮೊಳಗೆ,
ಕಾಸಿನಾಸೆಗೊಳಗಾಗಿ ಮೋಸ ಮಾಡದಿರಿ ಬಡವರಿಗೆ,
ಹೊರೆಯಾಗದಿರಿ ಹೆರವರಿಗೆ,
ಹಾಲುಂಡ ಕೂಸಿನುಸುರೇ ನಿಲುವಂದು ನಂಜುಂಡ ಕೂಸನೆಂತು ನಂಬುವಿರಿ?
ಎಂದುಪದೇಶಿಸಿದರೆಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ॥ ೫೯ ॥

ದೇಶ ದ್ರೋಹಿಗಳು ನೀವಾಗದಿರಿ, ಈಶ ನಿಂದಕರು ನೀವಾಗದಿರಿ,
ಕಾಡು ಹರಟೆಯಲಿ ಕಾಲಕಳೆವವರು, ಹೀನಗುಣವುಳ್ಳವರು ನೀವಾಗದಿರಿ.
ಹೆತ್ತ ತಾಯಿ, ಹೊತ್ತ ಭೂಮಿ, ಸುತ್ತಣ ನೆರೆಗೆ ಕಂಟಕರು ನೀವಾಗದಿರಿ
ಎಂದುಪದೇಶಿಸಿದರೆಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ॥೬೦॥

ಅನ್ನ ಹಾಕುವವರ ಮನೆಗೆ ಕನ್ನ ಹಾಕುವ ಕಳ್ಳನ ತೆರದಿ,
ಜನ್ಮ ನೀಡಿದ ಜನಕರಿಗೆ, ತಿಳಿವನೀಡಿದ ಗುರುಗಳಿಗೆ ತಿರುಗಿ
ನೀಡದಿರಿ ನೋವನು,

ತಾಯ್ತಂದೆಗಳ ಬುಟ್ಟಿಯೊಳು ಹೊತ್ತ ಶ್ರವಣನಂತೆ, ಗುರುವಿಗೆ
ಬೆರಳನರಿದಿತ್ತ ಏಕಲವ್ಯನಂತೆ,

ಆದರ್ಶವನಳವಡಿಸಿಕೊಳ್ಳಿರಿ ಬದುಕಿಗೆ,
ಎಂದುಪದೇಶಿಸಿದರೆಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ॥೬೧॥

ನಿಮ್ಮ ಮನ ಮಡಿಯಾಗಿರಲಿ, ನಿಮ್ಮ ನಡೆ ಶುಚಿಯಾಗಿರಲಿ.
ನಿಮ್ಮ ತನು ಚೊಕ್ಕವಾಗಿರಲಿ, ನಿಮ್ಮ ಕಾಯಕ ಶುದ್ಧವಾಗಿರಲಿ,
ನಿಮ್ಮ ಎಡೆ ಹಸನಾಗಿರಲಿ, ನೀವು ಮುಟ್ಟಿದುದು ಪರುಷವಾಗಲಿ,
ಎಂದು ಹರಸಿದರೆಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ॥ ೬೨ ॥

ನೀ ಹೊಗಳಿದರೆ ಹಿಗ್ಗರು, ನೀ ತೆಗಳಿದರೆ ಕುಗ್ಗರು,
ನೀ ಹಿಡಿದಡೆ ದಕ್ಕರು, ನೀ ಕೂಗಿದಡೆ ಸಿಕ್ಕರು,
ನೀ ಬಕುತಿಯಲಿ ದುಡಿದು ಬಾಗಿದೆಡೆ ಕರವಿಡಿದೆತ್ತಿಕೊಂಬರು
ಎಮ್ಮ ಶ್ರೀ ಗುರು ಮಹಾಲಿಂಗ ದೇವರೊಲಿದು. ॥ ೬೩ ॥

ಬಡವರಾ ಬಂಧು, ಭಕ್ತರಾ ಸಿಂಧು, ಪುಣ್ಯದಾಳಿನ ನೇಹಿಗ,
ಕಾಯಕದ ಸಾಕಾರಮೂರ್ತಿ, ಕನಿಕರದ ಜಂಗಮಮೂರ್ತಿ,
ತಮ್ಮ ಕಾಲ್ಬಿಡಿದವರ ತಾವ್ ಕೈವಿಡಿದು ನಡೆಸುವರು ದಾರಿ.
ಎಮ್ಮ ಕಾರಣಿಕ ಶ್ರೀ ಗುರು ಮಹಾಲಿಂಗ ದೇವರೊಲಿದು. ॥ ೬೪ ॥

ಶ್ರೀ ಸಿದ್ಧಗಂಗೆಯ ಸಿದ್ಧಪುರುಷ, ಶ್ರೀ ಉದ್ಧಾನ ಶಿವಯೋಗಿ ವರ್‍ಯರ
ನೆಚ್ಚಿನ ಶಿಷ್ಯ,
ಕೋಟಿಗೊಬ್ಬ ಶರಣರೆಂಬ ನಾಣ್ನುಡಿಯ ಪ್ರೋಲ್ವ ಶ್ರೀ ನಿರ್ವಾಣ
ಪ್ರಭುಗಳ
ಕರಕಮಲ ಸಂಜಾತ, ಶ್ರೀ ದೇಗುಲ ಮಠದ ಜಂಗಮ ಮೂರ್ತಿ,
ಕ್ರಿಯಾಶೀಲ ಚರಮೂರ್ತಿ ಶ್ರೀ ಗುರು ಮಹಾಲಿಂಗದೇವರೊಲಿದು
ಆಶೀರ್ವದಿಸಲೆಲ್ಲರನು. ॥ ೬೫ ॥

—೦—೦—

# ಮಹಾದೇವಿಯಕ್ಕ

● ಶ್ರೀ ಸಂ. ಶಿ. ಭೂಸನೂರಮಠ, ಎಂ. ಎ.
ಧಾರವಾಡ

'ಮೊರೆವ ನಾದವ ಕೇಳಿ ಉರಿವ ಜ್ಯೋತಿಯ ನೋಡಿ
ಸುರಿವ ಅಮೃತವನು ದಣಿಯುಂಡ ಕಾರಣದಿ
ತೊರೆದಿಹೆನು ಜನನ-ಮರಣಗಳ.'

'ಒಂಬತ್ತು ಚೌಕದಾ । ಉಂಬುಡುವ ಮನೆಯನ್ನು
ನಂಬದೆಯೆ ಕಡೆಗೆ ತೊಲಗಿಸುತ ಮುಂದಣಾ
ಸಂಭ್ರಮದ ಮನೆಗೆ ನಡೆದಿಹೆನು.'

'ಎನ್ನ ಕಾಯವೆ ಗುರುವು । ಎನ್ನ ಪ್ರಾಣವೇ ಲಿಂಗ
ಎನ್ನಂತರಾತ್ಮವೇ ಚರಲಿಂಗವಾಗಿರಲು
ಇನ್ನೆಂಟೆ ಎನಗೆ ತನು-ಮನವು.'

ಮಹಾದೇವಿಯಕ್ಕನ ಯೋಗಾಂಗ ತ್ರಿವಿಧಿಯಿಂದ ಈ ಪದ್ಯಗಳನ್ನು ತೆಗೆದು ಕೊಂಡಿದೆ. ಇಲ್ಲಿ ಕಠಿಣ ಶಬ್ದ ಇಲ್ಲ, ಅರ್ಥ-ಭಾವ ಸರಳ. ಇದನ್ನು ಓದಿದರೆ ಓದುಗನ ಭಾವ ಪಾವನವಾಗುತ್ತದೆ. ಹಾಡಿದರೆ ಪದ್ಯಗಳಲ್ಲಿ ಹರಿವ ನಿರ್ಮಲಾನಂದ ದಿಂದ ಹೃದಯ ಪರಿಶುದ್ಧವಾಗುತ್ತದೆ. ಪದ್ಯಗಳಲ್ಲಿ ಅಸ್ಪಷ್ಟವಾಗಿ, ಅವಿಜ್ಞಾತ ವಾಗಿ ಇರುವ ಮಾಧುರ್ಯ ಸೌಂದರ್ಯಗಳಲ್ಲಿ ಮಹಾದೇವಿಯಕ್ಕನ ಮನೋಜ್ಞ ಮೂರ್ತಿ ರೂಪುಗೊಂಡು ನಿಲ್ಲುತ್ತದೆ. ಅಕ್ಕನ ವ್ಯಕ್ತಿಯನ್ನು ಮುಕ್ಕಳಿಸು ತ್ತಿರುವ ಈ ತ್ರಿಪದಿಗಳನ್ನು ಮನವಾರೆ ಮೆಚ್ಚುತ್ತೇವೆ; ಅತ್ಯುತ್ತಮ ಭಾವಗೀತೆಗಳೆಂದು ಕರೆಯುತ್ತೇವೆ. ಮಹಾದೇವಿಯಕ್ಕನ ವಚನಗಳನ್ನು, ಆಕೆಯ ಯೋಗಾಂಗತ್ರಿವಿಧಿಯನ್ನು ಪೂರ್ಣ ಓದಿದರೆ ಅಕ್ಕನ ವ್ಯಕ್ತಿತ್ವದ ಕಲ್ಪನೆ ವಿಸ್ತಾರ ವಾಗುತ್ತ, ಉಜ್ವಲವಾಗುತ್ತ ನಡೆಯಬಹುದು. ಅಸಾಮಾನ್ಯವಾದ, ಅಪೂರ್ವ ವಾದ, ದಿವ್ಯ-ಭವ್ಯವಾದ ಇಂಥ ವ್ಯಕ್ತಿಯನ್ನು—ಕನ್ನಡ ನಾಡಿನಲ್ಲಿ ಹುಟ್ಟಿ, ಕನ್ನಡ ದಲ್ಲಿ ಹಾಡಿ ಮಾನವಕುಲದ ಮುಂದೆಗೆ ಹೂವನ್ನು ತಂದ ಮಹಾದೇವಿಯಕ್ಕನನ್ನು ಕೇವಲ ಕನ್ನಡ ನಾಡಷ್ಟೇ ತಮ್ಮವಳೆಂದು ದಕ್ಕಿಸಿಕೊಳ್ಳಲಾರದು. ನೆಲವನ್ನು, ಗಾಳಿಯನ್ನು, ಆಕಾಶ-ಪ್ರಕಾಶವನ್ನು ತನ್ನದೇ ಸೊತ್ತೆಂದು ಒಂದು ನಾಡು, ರಾಷ್ಟ್ರ,

ಭೂಖಂಡ ತನ್ನಲ್ಲಿ ಅಡಗಿಸಿ ಇಟ್ಟುಕೊಳ್ಳಬಲ್ಲುದೆ? ಬುದ್ಧನನ್ನು ಭರತಖಂಡ ಹಿಡಿಸಲಿಲ್ಲ. ಕ್ರಿಸ್ತನನ್ನು ಏಷಿಯಾ ಯುರೋಪ ಒಳಕೊಳ್ಳಲಿಲ್ಲ. ಕವಿ, ರಾಜಕಾರಣಿ, ವಿಜ್ಞಾನಿ, ತತ್ತ್ವಜ್ಞಾನಿ, ಭಕ್ತ, ಅನುಭಾವಿ ಇವರಲ್ಲಿ ಯಾರಿಗೇ ಆಗಲಿ 'ಮಹಾ' ಎಂಬ ವಿಶೇಷಣ ನಾವು ಹಚ್ಚುವುದಾದರೆ—ಅಂದರೆ ಮಹಾಕವಿ, ಮಹಾ ವಿಜ್ಞಾನಿ, ಮಹಾನುಭಾವಿ ಎಂದು ಕರೆದು. ಅವರನ್ನು ಒಂದು ನಾಡು–ಖಂಡಗಳಲ್ಲಿ, ಒಂದು ಕಾಲ–ಜನತೆಯ ಚೌಕಟ್ಟಿನಲ್ಲಿ ಇರಿಸುವುದು ಅಂಧತನದ ಅಜ್ಞಾನವೇ. ಎಲ್ಲಿಯೇ ಇರಲಿ, ಯಾವ ಕಾಲದಲ್ಲಿಯೇ ಇರಲಿ, ಯಾವ ಧರ್ಮ ಭಾಷೆ ಸಂಸ್ಕೃತಿ ಸಂಪ್ರದಾಯದಲ್ಲಿಯೆ ಹುಟ್ಟಲಿ–ಮಹತ್ತಿಗೆ 'ಮಾನ' (ಅಳತೆ) ಇಲ್ಲ; ಸೀಮೆ ಇಲ್ಲ. ಸಂಬಂಧ ಇಲ್ಲ. ಅವೆಲ್ಲ ಮಹತ್ತಿಗೆ ನಿಮಿತ್ತ ಮಾತ್ರ.

ಮಹಾದೇವಿಯಕ್ಕನ ವ್ಯಕ್ತಿತ್ವದ ಮೇಲೆ ಆವರಿಸಿರುವ ಕಾಲ ದೇಶ ಭಾಷೆ, ವಿಶಿಷ್ಟ ಸಂಸ್ಕೃತಿ ಸಂಪ್ರದಾಯಗಳನ್ನು ತೆಗೆದಿಟ್ಟು ಆಕೆಯ ವ್ಯಕ್ತಿತ್ವವನ್ನು ನೋಡಿದರೆ ಮಹಾದೇವಿಯಕ್ಕ—ಮಹಾ-ದೇವಿ ಮತ್ತು ಅಕ್ಕ. ಅಂತರಂಗದಲ್ಲಿ ಮಹಾಘನ ಪರಂಜ್ಯೋತಿಯಾಗಿ ಬೆಳಗಿ, ಬಹಿರಂಗದ ಲೋಕಕ್ಕೆಲ್ಲ ಅಕ್ಕನಾಗಿದ್ದ ಮಹಾದೇವಿಯಕ್ಕ-ಅದೊಂದು ದಿವ್ಯವ್ಯಕ್ತಿ, ದಿವ್ಯಶಕ್ತಿ; ಮಾನವ್ಯವೆಂಬ ಕತ್ತಲೆಯ ಹೆಗ್ಗಡಲನ್ನು ದಾಂಟಿದ ಬೆಳಗಿನ ಅಪಾರ ವಾರಾಶಿ; ಜನನ–ಮರಣಗಳನ್ನು ಮೀರಿ ನಿಂದ ನಿತ್ಯಸತ್ಯ: ಜೀವಸಂಸಾರದ ಸುಖ-ದುಃಖಗಳನ್ನು ಕಡೆನೋಕಿದ ಪರಿಪೂರ್ಣ ಆನಂದ.

'ತನುವಿದನಾಳಿದು ಇಂದ್ರಜಾಲವೊಂದುಂಟೆ?' ಎಂದು ಹೇಳುತ್ತಾರೆ ನಿಜಗುಣ ಶಿವಯೋಗಿಗಳು. ರಾಕೆಟ್, ಸ್ಪುಟ್ನಿಕ್, ರೇಡಿಯೊ, ಟೆಲಿವ್ಹಿಜನ್ ಮುಂತಾದ ವಿಜ್ಞಾನಿಯ ಇಂದ್ರಜಾಲವನ್ನು ನೋಡಿ ನಿಬ್ಬೆರಗಾಗುತ್ತೇವೆ ನಾವು. ಆದರೆ ಆ ಇಂದ್ರಜಾಲವನ್ನು ನಿರ್ಮಿಸುತ್ತಿರುವ ಮಾನವನ ತನು–ಮನ–ಬುದ್ಧಿ ಎಂಥ ಮಹೇಂದ್ರ ಜಾಲ! ಈ ಜಾಲವನ್ನು ಪ್ರತಿನಿತ್ಯ ನೋಡುತ್ತೇವೆ, ಅನುಭವಿಸುತ್ತೇವೆ. ಆದರೆ ಮಾನವನೆಂಬ ಮಹೇಂದ್ರ ಜಾಲದ ಮರೆಯಲ್ಲಿ

ನೆಲದ ಮರೆಯ ನಿಧಾನದಂತೆ,
ಫಲದ ಮರೆಯ ರುಚಿಯಂತೆ,
ಶಿಲೆಯ ಮರೆಯ ಹೇಮದಂತೆ,
ತಿಲದ ಮರದ ತೈಲದಂತೆ
ಭಾವದ ಮರೆಯ ಬ್ರಹ್ಮವಾಗಿ ಇಪ್ಪ
ಚೆನ್ನಮಲ್ಲಿಕಾರ್ಜುನನ ನಿಲವನಾರು ಅರಿಯಬಾರದು.

ದೇಹ ಪ್ರಾಣ ಕರಣೇಂದ್ರಿಯಗಳಲ್ಲಿ ಮುಳುಗಿ 'ಭಾವದ ಮರೆಯ ಬ್ರಹ್ಮ'ವನ್ನು

ತನ್ನ ನಿಜವಾದ ಸಚ್ಚಿದಾನಂದ ನಿತ್ಯ ಪರಿಪೂರ್ಣವನ್ನು, ತಾನು ತಾನಾದ ತನ್ನನ್ನು ಸಾಧಿಸುವುದು ಅಸಾಧ್ಯಸಾಧನ. ಕವಿ, ವಿಜ್ಞಾನಿ, ತತ್ತ್ವಜ್ಞಾನಿ, ರಾಜಕಾರಣಿ ಮುಂತಾದವರು ಏನನ್ನಾದರೂ ಸಾಧಿಸಬಹುದು. ಆದರೆ ತನ್ನ ನಿಜದಿರವಾದ 'ಮುಳ್ಳು ಗುತ್ತುವರೆತೆ ರಹಿಯಿಲ್ಲದ ಪರಿಪೂರ್ಣ ಮಹಾಘನ'ವನ್ನು ತನ್ನಲ್ಲಿ ಭೇದಿಸಿ ಸಾಧಿಸುವುದು ಅತಿ ಕಠಿಣ. ದೇಹದ ಅನಿತ್ಯ, ಸಂಸಾರದ ನಿಸ್ಸಾರ 'ಭಂಗವೇ ಬಿಸುರಾದ ವಿಷಯ ಸುಖಂಗಳಿಗೆ ಹೇಸಿ' ಅವನ್ನೆಲ್ಲ ಕಳೆದು, ತೆಗೆದೊಗೆದು ಅನಿತ್ಯದ ಗರ್ಭದಲ್ಲಿ ನಿತ್ಯವನ್ನು ಸಾಧಿಸಿ, ನಿಸ್ಸಾರದ ನಿಜದಿರವಾದ ಪರಮಾನಂದ ರಸವನ್ನು ಉಂಡು, ಬೆಳಗಿನಲ್ಲಿ ಬಾಳಿ ಬದುಕಿ ಮರ್ತ್ಯಕ್ಕೆ 'ಅಮರ್ತ್ಯ'ದ ಸಂದೇಶವನ್ನು ಎಂದೆಂದಿಗೂ ನೀಡುತ್ತಿರುವ ಮಹೋಜ್ಜ್ವಲ ವ್ಯಕ್ತಿ ಮಹಾದೇವಿ. ಇಂಥ ದೇವಿಯ ಶ್ರೀಪಾದಕ್ಕೆ ನಮೋ ನಮೋ ಎಂದರು ಚೆನ್ನಬಸವಣ್ಣನವರು :

ತನುವಿನೊಳಗೆ ಇದ್ದು ತನುವ ಗೆದ್ದಳು.
ಮನದೊಳಗೆ ಇದ್ದು ಮನವ ಗೆದ್ದಳು.
ವಿಷಯದೊಳಗೆ ಇದ್ದು ವಿಷಯಂಗಳ ಗೆದ್ದಳು.
ಅಂಗ ಸಂಗವ ತೊರೆದು ಭವವ ಗೆದ್ದಳು.
ಕೂಡಲ ಚೆನ್ನಸಂಗಯ್ಯನ ಹೃದಯ ಕಮಲವ
ಬಗಿದು ಹೊಕ್ಕು, ನಿಜಪದವನೆಯ್ದಿದ
ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು !

ಮಹಾದೇವಿಯಕ್ಕ ಹುಟ್ಟಿದುದು ಹಳೆಯ ಮೈಸೂರು ಪ್ರಾಂತದಲ್ಲಿದ್ದ ಉಡುತಡಿ ಎಂಬ ಗ್ರಾಮದಲ್ಲಿ ; ನಿರ್ಮಳ ಸುಮತಿಯೆಂಬ ಶಿವಭಕ್ತ ದಂಪತಿಗಳ ಗರ್ಭದಲ್ಲಿ. ಶುಕ್ತಿಕೆಯಲ್ಲಿ ಮುತ್ತು ಹುಟ್ಟುವಂತೆ ಹುಟ್ಟಿದ ಮಗುವಿಗೆ ಮಹಾದೇವಿ ಎಂದು ತಂದೆತಾಯಿಗಳು ಹೆಸರಿಡಲು ಕಾರಣ—ಮಗುವಿನ ಸರ್ವಾಂಗದಲ್ಲಿ ತುಂಬಿ ತುಳುಕುತ್ತಿದ್ದ ದಿವ್ಯಕಳೆ.

ಶಿವ ತನುವಿನಲತಿ ಮುದದ್ವಾರ
ದೇವತಾ ಕಳೆಯಿರಲು ಬಗೆ ಮುದ
ದೇವಿಯೆಂದೇ ಹೆಸರನಿಟ್ಟರು ನಿಜ ಕುಮಾರಿತಿಗೆ !

ಭಕ್ತಿಯ ಬಳ್ಳಿಯಂತೆ ಬೆಳೆದಳು ಮಹಾದೇವಿ. ಶುಕ್ಲಪಕ್ಷದ ಶಶಿಯಂತೆ ಕಾಯ ಕಾಂತಿಯೇರುತ್ತ ಜವ್ವನವನಪ್ಪಿದಳು. ಆಕೆಯ ಸೌಂದರ್ಯ ದಿವ್ಯತೇಜವನ್ನು ಮಳೆಗರೆಯಿತು. ಉಡುತಡಿಯ ನಾಡಿನ ದೊರೆ ಕೌಶಿಕ ಮೃಗಯಾಕೇಳಿಯಿಂದ ಅರಮನೆಗೆ ತಿರುಗಿ ಬರುವಾಗ ಮಹಾದೇವಿಯನ್ನು ಕಂಡು 'ಕಾಮಾತುರತೆ ಮಿಗೆ, ಕಂಗೆಟ್ಟು

ಕಳವಳಿಸಿದ !' ಕೌಶಿಕ ದೊರೆ ಶಿವಭಕ್ತನಲ್ಲ, ಮಹಾದೇವಿಯಕ್ಕ ಶಿವಭಕ್ತೆ. ಸಂಬಂಧ ಅಳವಡುವುದೆಂತು ? ಶಿವದೀಕ್ಷೆಯನೊಲ್ಲದ ದೊರೆಯನ್ನು ನಿರಾಕರಿಸಿ, ದಿಗಂಬರವೆ ದಿವ್ಯಾಂಬರವಾಗಿ, ತಂದೆ-ತಾಯಿ, ಬಂಧು-ಬಳಗವನ್ನೆಲ್ಲ ಅತಿಗಳೆದು ನಿರ್ಭಯದಿಂದ ಕಲ್ಯಾಣಕ್ಕೆ ನಡೆದು ಬಂದಳು. ಮಹಾದೇವಿಯಕ್ಕನ ಹೃದಯದ ಹಸಿವು ಚೆನ್ನ ಮಲ್ಲಿಕಾರ್ಜುನನಲ್ಲದೆ ಹಿಂಗದು. ಸಾವಿಲ್ಲದ, ಕೇಡಿಲ್ಲದ, ರೂಪಿಲ್ಲದ ಚೆಲುವಂಗೆ—ಚೆಲುವ ಮಲ್ಲಿಕಾರ್ಜುನನಿಗೆ ಒಲಿದ ಮನ, ಸಾವ ಕೆಡುವ ಗಂಡರಿಗೆ ಒಲಿವುದೆಂತು ?

ಗಿರಿಯಲ್ಲದೆ ಹುಲ್ಲು ಮೊರಡಿಯಲ್ಲಾಡುವುದೇ ನವಿಲು ?
ಕೊಳನಲ್ಲದೆ ಕಿರುವಳ್ಳಕ್ಕೆಳಸುವುದೇ ಹಂಸೆ ?
ಪರಿಮಳವಿಲ್ಲದ ಪುಷ್ಪಕ್ಕೆಳಸುವುದೇ ಭ್ರಮರ ?
ಎನ್ನ ದೇವ ಚೆನ್ನಮಲ್ಲಿಕಾರ್ಜುನನಲ್ಲದೆ,
ಅನ್ಯಕ್ಕೆಳಸುವುದೇ ಎನ್ನ ಮನ ? ಕೇಳಿರೆ ಕೆಳದಿಯರಿರಾ.

ಚೆನ್ನಮಲ್ಲಿಕಾರ್ಜುನನ ವಿಕಳಾವಸ್ಥೆಯಲ್ಲಿ, ೧೨ ನೆಯ ಶತಮಾನದ ಶರಣರಿಂದ ಅಭಿನವ ಕೈಲಾಸವೆನಿಸಿದ ಕಲ್ಯಾಣಕ್ಕೆ ಮಹಾದೇವಿಯಕ್ಕ ಹೃದಯದ ಹಂಬಲವನ್ನು ಹಾಡುತ್ತ ಬಂದಳು. ಶರಣರ ಮಹಾನುಭಾವಗೋಷ್ಠಿ ನಡೆವ ಅನುಭಾವ ಮಂಟಪ ದಲ್ಲಿ ಅಕ್ಕನಿಗೆ ಪ್ರವೇಶ ದೊರೆತುದು ಆಕೆಯ ಅನುಭವ ಬಲದಿಂದ. ಶೂನ್ಯ ಸಿಂಹಾಸನದಲ್ಲಿ ಮಂಡಿಸಿದ 'ಮಾಯಾ ಕೋಳಾಹಳ' ಅಲ್ಲಮ ಪ್ರಭು ದೇವರೊಡನೆ ನಡೆದ ಅಕ್ಕನ ಅನುಭಾವಪ್ರಸಂಗವನ್ನು ಕೇಳಿ :

ಪ್ರಭು : ಉದಮದದ ಯೌವನವನೊಳಕೊಂಡು ಸತಿ, ನೀನು ಇತ್ತಲೇಕೆ ಬಂದೆಯವ್ವಾ ? ಸತಿಯೆಂದರೆ ಮುನಿವರು ನಮ್ಮ ಶರಣರು. ನಿನ್ನ ಪತಿಯ ಕುರುಹ ಹೇಳಿದರೆ ಬಂದು ಕುಳ್ಳಿರು. ಅಲ್ಲದಿರೆ ತೊಲಗು ತಾಯೆ.

ಮಹಾ : ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗೆ....
ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವಂಗೆ
ನಾನೊಲಿದೆನಯ್ಯಾ. ಚೆನ್ನಮಲ್ಲಿಕಾರ್ಜುನ ಗಂಡನೆನಗೆ.
ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯಾ.

ಪ್ರಭು : ರೂಪಿಂಗೆ ಕೇಡುಂಟು. ನಿರೂಪಿಂಗೆ ಕೇಡಿಲ್ಲ.
ರೂಪು ನಿರೂಪನೊಡಗೂಡುವ ಪರಿ ಎಂತು ಹೇಳಾ ?...
ದೇಹ ಇಂದ್ರಿಯವೆಂಬ ಜಾತಿಸೂತಕವಿರಲು,
ಗೊಹೇಶ್ವರ ಲಿಂಗವ ಮುಟ್ಟಬಾರದು ಕೇಳವ್ವಾ.

ಮಹಾ : ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲರೆ
ಹಾವಿನ ಸಂಗವೆ ಲೇಸು ಕಂಡಯ್ಯಾ, ಕಾಯದ ಸಂಗವ ವಿವರಿಸಬಲ್ಲರೆ.
ಕಾಯದ ಸಂಗವೆ ಲೇಸು ಕಂಡಯ್ಯಾ.
ಚೆನ್ನಮಲ್ಲಿಕಾರ್ಜುನಯ್ಯಾ, ನೀನೊಲಿದವರ ಕಾಯಗೊಂಡಿದ್ದರೆನಬೇಡ.

ಕಾಯವಿದ್ದು ಕಾಯಗುಣನಷ್ಟವಾದ, ಪ್ರಾಣವಿದ್ದು ಪ್ರಾಣಧರ್ಮ ನಾಸ್ತಿಯಾದ, ಮನವಿದ್ದು ಮನವಳಿದ, ಭಾವವಿದ್ದು ನಿರ್ಭಾವವಾದ ಅಂದರೆ ಇದ್ದು ಇಲ್ಲದ ಮಹಾದೇವಿಯಕ್ಕನ ಅನುಭಾವ ಶರಣರೊಡನೆ ನಡೆದ ಸಂವಾದದಲ್ಲಿ ಹಂತ ಹಂತವಾಗಿ ಹೊರಹೊಮ್ಮಿ ಲಿಂಗಾಂಗ ಸಾಮರಸ್ಯದ ಪರಮ ವೈಭವವನ್ನು ಪ್ರಜ್ವಲಿಸಿ ತೋರಿತು. ಅಂಗ-ಮನ-ಭಾವ-ಜ್ಞಾನ-ಕ್ರಿಯೆಯೆಲ್ಲ ಲಿಂಗೈಕ್ಯವಾಗಿ ನಿಂದ ನಿಲುವನ್ನು ಶರಣರಿದಿರು ಲೆಕ್ಕ ಒಪ್ಪಿಸಿದಂತೆ ಒಪ್ಪಿಸಿ, " ನಾನೆಂಬುದ ನಿಲಿಸಿ, ನೀನೆಂಬುದ ಕೆಡಿಸಿ, ಉಭಯ ಲಿಂಗೈಕ್ಯವ ಮಾಡಿದೆ. ಚೆನ್ನಮಲ್ಲಿಕಾರ್ಜುನನೊಳಗೆ ನಾನಳಿದೆನಾಗಿ, ಲಿಂಗವೆಂಬ ಘನವು ಎನ್ನಲ್ಲಿ ಅಳಿಯಿತ್ತು ಕಾಣಾ ಸಂಗನ ಬಸವಣ್ಣಾ "— ಎಂದು ತನ್ನ ನಿಜಾನುಭಾವದ ನಿಲುವನ್ನು ನಿರಹಂಭಾವದಿಂದ ಬಿನ್ನವಿಸಿದಳು.

ಅಕ್ಕನ ವ್ಯಕ್ತಿತ್ವವನ್ನು, ಆಕೆಯ ' ಚೆನ್ನಮಲ್ಲಿಕಾರ್ಜುನತನ 'ದ ನಿಲುವನ್ನು ಕಂಡು ಬಸವಣ್ಣ, ಚೆನ್ನಬಸವಣ್ಣ, ಮಡಿವಾಳಯ್ಯ, ಸಿದ್ಧರಾಮಯ್ಯ, ಅನುಭವ ಮಂಟಪದ ಅಸಂಖ್ಯಾತರೆಲ್ಲ ಮೆಚ್ಚಿ 'ಅಹುದು' ಎಂದರು. ಚೆನ್ನಬಸವಣ್ಣ ಉಕ್ಕಿದ.

ಅಜಕಲ್ಪಕೋಟಿ ವರುಷದವರೆಲ್ಲ ಹಿರಿಯರೆ?
ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೆ
ಕೂಡಲ ಚೆನ್ನಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ
ಹಿರಿಯತನ ನಮ್ಮ ಮಹಾದೇವಿಯಕ್ಕಂಗಾಯಿತ್ತು

ಮಹಾದೇವಿಯಕ್ಕ ಶರಣರನ್ನು ಬೀಳ್ಕೊಂಡು ಶ್ರೀಶೈಲಕ್ಕೆ ಬಂದು ಕದಳಿಯ ಬಾಗಿಲಲ್ಲಿ ನಿಂದು

'ಕದಳಿಯೆಂಬುದು ತನು, ಕದಳಿಯೆಂಬುದು ಮನ,
ಕದಳಿಯೆಂಬುದು ವಿಷಯಂಗಳು, ಕದಳಿಯೆಂಬುದು ಭವ ಘೋರಾರಣ್ಯ,
ಕದಳಿಯೆಂಬುದ ಗೆದ್ದು ತವೆ ಬದುಕಿ ಬಂದು,
ಕದಳಿಯ ಬನದಲ್ಲಿ ಭವಹರನ ಕಂಡೆನು.
ಭವಗೆಟ್ಟು ಬಂದ ಮಗಳೆಂದು ಕರುಣದಿಂ ತೆಗೆದು ಬಿಗಿಯಪ್ಪಿದರೆ.
ಚೆನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದೆನು

ಎಂದು ನಿಜೈಕ್ಯವನೆಯ್ದಿ ಶಬ್ದಮುಗ್ಧವಾಗಿ ನಿಂದಳು ಮಹಾದೇವಿ. ಜ್ಯೋತಿ ಜೊತೆನಾಡಿ, ಒಡಗೂಡಿ ಕರ್ಪೂರ ಜ್ಯೋತಿಯಾದಂತೆ ಮಹಾದೇವಿಯಕ್ಕ ದಿವ್ಯ ಜ್ಯೋತಿಯುಂಡ ದಿವ್ಯಜ್ಯೋತಿಯು. 

# ಕನ್ನಡ ಶಿವಶರಣೆಯರು

● ಪಂಡಿತ ಶ್ರೀ ಮ. ಮಲ್ಲಪ್ಪನವರು
ಜ್ಞಾನಮಂದಿರ, ಹಲಗೂರು

ವಿಶ್ವದ ಮಹಿಳಾ ಜಗತ್ತಿಗೆ ಕರ್ನಾಟಕವು ಕೊಟ್ಟ ಕೊಡುಗೆಯು ಕನ್ನಡ ಶಿವ ಶರಣೆಯರು. ಮಹಿಳೆಯರ ಜಾಗೃತಿ, ಚಿಂತನ, ಅಧ್ಯಯನ, ಸಮತಾವಾದ, ಆಧ್ಯಾತ್ಮಿಕವಾದ, ಸ್ವಾತಂತ್ರ್ಯ ಗಮನ, ಸಂಸಾರ ನಿರ್ವಹಣ, ಕಾಯಕಶುದ್ಧಿ, ವ್ಯವಹಾರ ಚಾತುರ್ಯ, ಸ್ವಭಾಷಾ ಪ್ರೀತಿ ಮೊದಲಾದ ಸದ್ಗುಣಗಳು ಶಿವಶರಣೆಯರಲ್ಲಿ ಒಡಮೂಡಿ ವಿಶ್ವಮಹಿಳೆಯರಿಗೆ ಮಾರ್ಗದರ್ಶಕವಾಗಿ ಜೀವನವನ್ನು ಸಾಗಿಸಿರುವ ಶಿವಶರಣೆಯರು ಸರ್ವರ ಸ್ಮೃತಿಪಥದಲ್ಲಿ ನಿಲ್ಲುವಂತಾಗಿದ್ದಾರೆ. ಕನ್ನಡದಲ್ಲಿ ವಚನಗಳನ್ನು ರಚಿಸಿ ವಚನಕಾರ್ತಿಯರಾಗಿ ಈ ಶಿವಶರಣೆಯರು ಕನ್ನಡ ಸಾರಸ್ವತ ಜಗತ್ತಿಗೆ ಸೇವೆ ಸಲ್ಲಿಸಿದ್ದಾರೆ. ಉಪನಿಷತ್ತಿನ ಗಾರ್ಗಿ, ಮೈತ್ರೇಯಿಯರನ್ನು ಹನ್ನೆರಡನೆಯ ಶತಮಾನದಲ್ಲಿ, ಕಾಣುವಂತಾಗಲು ಶಿವಶರಣೆಯರ ಜೀವನ ಜ್ಯೋತಿ ದರ್ಶನ ಪ್ರಾಪ್ತಿಯೇ ಆಗಿದೆ. ಈ ಕನ್ನಡದ ಶಿವಶರಣೆಯರೇ ವಚನ ಕಾರ್ತಿಯರು. * "ವಚನಕಾರ್ತಿಯರು ಅತ್ಯಂತ ಹೆಚ್ಚು ಸಂಖ್ಯೆಯಲ್ಲಿ ಇಲ್ಲದಿದ್ದರೂ ಕನ್ನಡ ಸಾಹಿತ್ಯಕ್ಕೆ ಅತ್ಯುತ್ತಮವಾದ ಕಾಣಿಕೆಯನ್ನು ಇತ್ತಿದ್ದಾರೆ. ಭಾರತೀಯ ಸಾಹಿತ್ಯದಲ್ಲಿ ವಚನ ಸಾಹಿತ್ಯ ತನ್ನದೇ ಆದ ವೈಶಿಷ್ಟ್ಯದಿಂದ ಕಂಗೊಳಿಸಲು ಅನುವಾಗಿದ್ದಾರೆ, ಕನ್ನಡಿಗರಿಗೆ ಹೆಮ್ಮೆ ಎನಿಸಿದ್ದಾರೆ ಅ ಕ್ಕ ಮ ಹಾ ದೇ ವಿ, ಮುಕ್ತಾಯಕ್ಕ, ನೀಲಾಂಬಿಕೆ, ನಾಗಲಾಂಬಿಕೆ, ಮಹದೇವಿಯಮ್ಮ ಮಸಣಮ್ಮ ಲಕ್ಷ್ಮಮ್ಮ, ತಿಮ್ಮವ್ವ, ಲಿಂಗಮ್ಮ, ಗುಡ್ಡವ್ವ, ರೇಕಮ್ಮ, ವೀರಮ್ಮ, ಕಾಳವ್ವ, ಕಾಲುಕಣ್ಣಿಯ ಕಾಯಮ್ಮ ಮೊದಲಾದವರು. ಹನ್ನೆರಡನೆಯ ಶತಮಾನದ ಹಿಂದಿನ ಹೆಣ್ಣಿಗಿದ್ದ ಬಂಧನ, ಅಧೀನತೆ, ಧಾರ್ಮಿಕ ಕ್ಷೇತ್ರದಲ್ಲಿ ಪ್ರವೇಶ, ನಿಷೇಧ, ಸಾಹಿತ್ಯ, ಸೃಷ್ಟಿಗೆ ಅವಕಾಶವಿಲ್ಲದಿರುವುದು ಮೊದಲಾದವೆಲ್ಲವೂ ಮಂಗರ ಮಾಯವಾಗಿ, ತೊಟ್ಟಿಲು ತೂಗುವ ಕೈ ಸೌಟು ಹಿಡಿಯುವ ಕೈ ಪ್ರಗತಿಪರ ಕಾರ್ಯಗಳನ್ನು ಕೈಗೊಳ್ಳಬಲ್ಲದು ಎಂಬ ಅಂಶವನ್ನು ಕಾರ್ಯರೂಪದಲ್ಲಿ ಸಾಧಿಸಿದ ಸುಶೀಲೆಯರು ಶಿವಶರಣೆಯರು. ಇವರ ಜೀವನದ ಮೌಲ್ಯಂಕ್ತೆಯು ಇಂದು ಅವಶ್ಯಕವೇ। ಇಂದಿನ ಸಮಾಜದ ಪಾರ್ಶ್ವವಾಯುವಿಗೆ. ಇಂದಿನ ಗೊಂದಲ ಜೀವನಕ್ಕೆ ಅಂದೇ ಅಂಜನ

* ಅ. ಭಾ. ವಿ. ಮ. ಸ. ಸ್ವಾಗತ ಭಾಷಣ—ಸೌ. ಶಾಂತಾದೇವಿ ಮಾಳವಾಡ

ಭಕ್ತ ವ್ರತಹೀನನೆಂದರಿದು ನೆರೆಯುತಯ್ಯಾ,
ನೆರೆದರೆ ನರಕ ಗುರುಶಾಂತೇಶ್ವರಾ.

ಮೊದಮೊದಲು ವ್ರತಭ್ರಷ್ಟರಾಗಿ ಅನಂತರ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಿದ್ದ ವಿಧಾನ ವ್ಯಕ್ತಿಗಳನ್ನು ಖಂಡತುಂಡವಾಗಿ ಖಂಡಿಸುವ ಕಡಿನುಡಿಗಳಿವು.. ವ್ರತದ ಮಹತಿಯನ್ನು ಮನಂಬುಗುವಂತೆ ಇಲ್ಲಿ ವಿವರಣೆಯಿದೆ. ವ್ರತಪಾಲನೆಯೇ ಧರ್ಮ ಪರಿಪಾಲನೆಯ ಉಜ್ವಲತೆ. ಧರ್ಮ ರಕ್ಷಣೆಯಲ್ಲಿ ಮಹಿಳೆಯರ ಪಾತ್ರವು ಎಂತು ಇತ್ತು ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ.

ಕ್ರಿ.ಶ. ೧೦೦೮–೧೦೬೨ರ ಕಾಲದ ಶಿವಶರಣೆಯು ಸುಗ್ಗಲಾದೇವಿ. ಜಯಸಿಂಹ ರಾಜನ ಪತ್ನಿ. ದೇವರ ದಾಸಿಮಯ್ಯನ ಶಿಷ್ಯೆಯು, ಈಕೆ * ತನ್ನ ವೀರಶ್ರೀಯನ್ನು ವೀರಭಕ್ತಿಯಲ್ಲಿ ತೋರಿಹೋದಳು.

ಸುಗ್ಗಳಾಂಬೆ! ತನಗಿರುವ ಪಾತ್ರಬಲವನ್ನು ಸತ್ಪಾತ್ರಬಲವನ್ನಾಗಿ ಮಾರ್ಪಡಿಸಿ ಮಾರ್ಪೊಳಿಸಿ ತೋರಿ ಸಾರಿದಳು. ಸುಗ್ಗಲಾಂಬೆ ! ತನ್ನ ರಾಣಿತನವನ್ನು ಶರಣ ತನಕ್ಕೆ ಮೊಸಲಾಗಿ ಬಳಸಿಕೊಂಡು ಮಹಾಶರಣೆಯಾಗಿ ಮಾನನೀಯಳಾದವಳು ಸುಗ್ಗಳೆ!"

ಕುಲಕ್ಕೆ ಹೊರತಾದ ಸತ್ಕಾರ್ಯವನ್ನು ಮಾಡಿ ಸಾಧಿಸಿದ ಸಾಧ್ವಿಯು,

ಸುಗ್ಗಳೆ ತನ್ನ ಗುರುಭಕ್ತಿ ಪ್ರದರ್ಶಿಸುವ ಸಮಯದಲ್ಲಿ ನುಡಿದಿರುವ ಒಂದೆರಡು ವಚನಗಳೇ ಈಕೆಯ ಹಿರಿಮೆಯನ್ನು ಎತ್ತಿ ಸಾರುತ್ತಿವೆ. ಎನ್ನಪ್ರಿಯ ಜಯರಾಮನಾಥ ಎಂಬುದೇ ಈಕೆಯ ವಚನ ಮುದ್ರಿಕೆ.

ಮಣ್ಣಿಲ್ಲದ ನೆಲದಲ್ಲಿ
ಜಡವಿಲ್ಲದ ಜಲವನೆರೆದು
ಮಸಕದ ಮುಸುಕಿಲ್ಲದ ಮುಗಿಲ ಬಳಸಿ
ಬೀಜವಿಲ್ಲದ ಅಂಕುರವನಾಟಿ,
ಸಾಟಿಯಿಲ್ಲದ ಸೊಗವಣ್ಣವಿತ್ತಾತ

ಎನ್ನಪ್ರಿಯ ಜಯರಾಮನಾಥನಲ್ಲದೆ ಮತ್ತಾರು ಹೇಳಾ! ಅಕ್ಕಮಹಾದೇವಿ, ಮಹಾದೇವಿಯಮ್ಮ ಮೊದಲಾದ ಶರಣೆಯರು ಈಕೆಯ ಜೀವನದಿಂದ ಸ್ಫೂರ್ತಿ ಪಡೆದಿದ್ದಾರೆ.

ಈ ಶಿವಶರಣೆಯರ ತುತ್ತತುದಿಯ ಕೀರ್ತಿಸ್ತಂಭದಲ್ಲಿ ರಾರಾಜಿಸುವ ರಮಣೀಯ ರಸಜೀವಿ ರಮಣಿ ಅಕ್ಕಮಹಾದೇವಿಯು. ಹನ್ನೆರಡನೆ ಶತಮಾನದ ಕ್ರಾಂತಿಕಾರ ಕಲ್ಯಾಣ ಮಹಿಳೆಯು ಈಕೆ. ಉಡುತಡಿಯ ಸುಮತಿ, ನಿರ್ಮಲಶೆಟ್ಟಿ ದಂಪತಿಗಳ ಏಕೈಕ ಪುತ್ರಿಯು ಈಕೆ, ಅತಿ ಜಾಣೆ, ಸುರಸುಂದರಿ, ಪರಮಶಿವಭಕ್ತೆ ಆಗಿ

---

* ಆದರ್ಶ ಶರಣ ಸುಗ್ಗಳೆ, ಪುಟ ೧. ಶ್ರೀ ಜ. ಚ. ನಿ.

ಬೆಳೆದಳು ಬಾಲ್ಯದಲ್ಲಿಯೇ ವೈರಾಗ್ಯ ಅಂಕುರಿಸಿತ್ತು. ರೂಪಿನಲ್ಲಿ ಹೆಣ್ಣಾದರೂ ಕಾರ್ಯದಲ್ಲಿ ಈಕೆಯು ಗಂಡು. ಹದಿನಾರು ವರ್ಷದ ತುಂಬು ಜವ್ವನದಲ್ಲಿ ಈಕೆಯನ್ನು ಕಂಡು ಮೋಹಿಸಿದ ಕೌಶಿಕ ದೊರೆಯು ಮದುವೆಯಾಗಲು ನಿರ್ಧರಿಸುತ್ತಾನೆ. ಮೊದಮೊದಲು ಒಪ್ಪದ ಈಕೆಯು ಕೊನೆಗೆ ತಂದೆ ತಾಯಿಗಳ ಪ್ರೀತ್ಯರ್ಥವಾಗಿ ಮೂರು ಷರತ್ತುಗಳನ್ನು ಹಾಕಿ ಮದುವೆಯಾಗುತ್ತಾಳೆ.* ಮದುವೆಯಾದರೂ ರಾಜನ ಅಂಗಸ್ಪರ್ಶವಿಲ್ಲ. ರಾಜಕಾರ್ಯ, ಜಂಗಮ ಸೇವೆ, ಲಿಂಗಪೂಜೆಯಲ್ಲಿ ಕಾಲ ಕಳೆಯ ತೊಡಗುತ್ತಾಳೆ. ರಾಜನು ಕಾಲಕಳೆದಂತೆಲ್ಲಾ ಕಾಮದ ಕಾವಿನಿಂದ ಕರಗಿ ಈಕೆಯ ಶರೀರ ಸುಖಕ್ಕೆ ಹಾತೊರೆಯುತ್ತಿರುತ್ತಾನೆ. ಒಂದು ದಿವಸ ಈತನು ಈಕೆಯ ಸಂಗಡ ದುಡುಕಿ ಮಾತನಾಡುತ್ತಾನೆ. ಅಲ್ಲಿಗೆ ಮೂರು ಷರತ್ತುಗಳು ಮುಗಿಯುತ್ತವೆ. ಕೂಡಲೆ ಅರಮನೆಯನ್ನು ಬಿಟ್ಟು ನಗರವನ್ನು ತೊರೆದು ತೆರಳುತ್ತಾಳೆ. ಬಟ್ಟೆಬರೆಯನ್ನು ಒಡವೆಗಳನ್ನು ಬಿಸುಟು ಶರೀರವನ್ನು ಕೂದಲಿನಿಂದ ಮುಚ್ಚಿಕೊಂಡು ಮುಂದೆ ಸಾಗುತ್ತಾಳೆ. ತಾನು ಮಾಯೆಯ ಬಲೆಯಲ್ಲಿ ಸಿಲುಕುತ್ತಿರುವೆನೆಂಬ ತೀವ್ರ ವೇದನೆಯು ತೋರಲು ಚೆನ್ನಮಲ್ಲಿಕಾರ್ಜುನನಲ್ಲಿ ಮೊರೆಯಿಡುತ್ತಾಳೆ. ತನ್ನ ಇಷ್ಟ ದೈವವಾದ ಚೆನ್ನಮಲ್ಲಿಕಾರ್ಜುನನೇ ತನ್ನ ಪತಿಯೆಂದು ಮುಂದೆ ಸಾಗುತ್ತಾಳೆ. ಆತನಿಗಾಗಿ ಕರಗುತ್ತ ಕಲ್ಯಾಣ ಸೇರಿ ಅನುಭವ ಮಂಟಪದಲ್ಲಿ ಬಸವಣ್ಣ, ಪ್ರಭುದೇವ, ಕಿನ್ನರಯ್ಯ ಮೊದಲಾದ ಶಿವಶರಣರನ್ನು ಕಂಡು, ಅವರಿಂದ ತನ್ನ ಅರಿವನ್ನು ಹೆಚ್ಚಿಸಿಕೊಂಡು ಅವರ ಸಂಗಡ ಅಧ್ಯಾತ್ಮವಾದ ಮಾಡಿ ಎಲ್ಲ ಶರಣರ ಮೆಚ್ಚುಗೆಗೂ ಪಾತ್ರಳಾಗುತ್ತಾಳೆ!

"ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ. ನಮ್ಮ ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತುವಚನ. ನಮ್ಮ ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ. ಅಜಗಣ್ಣನ ಐದು ವಚನಕ್ಕೆ ಕೂಡಲ ಚೆನ್ನ ಸಂಗಯ್ಯನಲ್ಲಿ ಮಹಾದೇವಿ ಅಕ್ಕನ ಒಂದು ವಚನ ನಿರ್ವಚನ ಕಾಣಾ."

ಚೆನ್ನಬಸವಣ್ಣನವರ ಈ ಒಂದು ವಚನವೇ ಅಕ್ಕನ ಸಾಹಿತ್ಯ ಸೀಮಂತತೆಯನ್ನು ಸೂಚಿಸುತ್ತದೆ. ಯೋಗಾಂಗತ್ರಿವಿಧಿ ಮೊದಲಾದ ಕೃತಿರಚನೆ ಸಾಗಿ ಅಕ್ಕನ ಸಾಹಿತ್ಯ ವಿಪುಲವಾಗಿಬೆಳೆದಿದೆ. ಅಲ್ಲಿಂದ ಮುಂದೆ ಅಲ್ಲಿಯ ಪ್ರಭುದೇವರ ಅಪ್ಪಣೆಯಿಂದ ಶ್ರೀಶೈಲದತ್ತ ಕದಳಿಯ ಬನಕ್ಕೆ ಹೋಗಿ ಅಲ್ಲಿ ಚೆನ್ನಮಲ್ಲಿಕಾರ್ಜುನನ ದಿವ್ಯದರ್ಶನವನ್ನು ಪಡೆದು ಆತನಲ್ಲಿಯೇ ಐಕ್ಯವಾಗುತ್ತಾಳೆ. ಅಕ್ಕನ ದೇಹವು ಕೇವಲ ಮಾಂಸ ಮುದ್ದೆಗಳ ಮಂದಿರ ಮಾತ್ರವಲ್ಲ. "ಆ ದೇಹ ಕೇವಲ ದೇಹವಲ್ಲ, ಹಣತೆ ಎನ್ನಬೇಕು. ದೇಹದ

* ಅನೇಕ ವೀರಶೈವ ಕವಿಗಳು ಮಹಾದೇವಿ ಕೌಶಿಕನನ್ನು ಮದುವೆಯಾಗಲಿಲ್ಲ ಎಂಬುದನ್ನೇ ತಮ್ಮ ಕಾವ್ಯಗಳಲ್ಲಿ ತಿಳಿಸಿದಾರೆ — ಸಂ.

ಪಣತೆಯಲ್ಲಿ ಜೀವನದ ಜ್ಯೋತಿ ಉರಿದು ಅಧ್ಯಾತ್ಮದ ಬೆಳಕಿನಿಂದ ತಾನೂ ಬೆಳಗಿ ಇತರರಿಗೂ ಬೆಳಕಾಗಿ ಕೊನೆಗೆ ಜಗಜ್ಯೋತಿಯಲ್ಲಿ ಐಕ್ಯವಾದ ಜೀವಪ್ರಭೆ ಅಕ್ಕನದು. ಅದುಸ್ವಯಂಪ್ರಭೆ.*

ಪ್ರತಿಯೊಬ್ಬರ ಜೀವನವೂ ಅವರವರ ಬರಹದಿಂದ ಪರಿಸ್ಫುಟವಾಗುವುದು ಸಾಹಿತ್ಯೇತಿಹಾಸದಿಂದ ಗೊತ್ತಾಗುತ್ತದೆ. ಈಕೆಯ ಬರಹದಲ್ಲಿನ ವಚನಗಳು ಪ್ರಖ್ಯಾತವಾಗಿವೆ. ಈ ವಚನಗಳು ಕನ್ನಡ ಸಾಹಿತ್ಯದಲ್ಲಿಯೇ ಉತ್ಕೃಷ್ಟವಾಗಿವೆ. ಉದಾಹರಣೆಗಳ ಮೂಲಕ ಬೋಧಿಸುವ ತತ್ವವು ಮಾರ್ಮಿಕ ಸ್ಫೂರ್ತಿಯಾಗಿದೆ; ಉಪಮಾನಗಳು ಹೃದಯಂಗಮವಾಗಿವೆ. ಉಪಮಾನಗಳ ಜಾಲದಿಂದ ಪುಟ್ಟದೊಂದು ನೀತಿಯನ್ನು ಬೋಧಿಸುವ ಬಗೆಯು ಬಹಳ ಸೊಗಸಾಗಿದೆ. ಇಂದಿನದಕ್ಕೆ ಹೋಲುವ ಜೀವನ ವೃತ್ತಿಯು ಹಿಂದಿನ ಕನ್ನಡ ಸಾಹಿತ್ಯದಲ್ಲಿ ಈಕೆಯದಷ್ಟು ಮತ್ತೆ ಬೇರೆಯವರದಿಲ್ಲವೆಂಬುದು ಸುಸ್ಪಷ್ಟ. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಬಗ್ಗೆ ಬಂದ ಸ್ತುತಿನಿಂದೆಗಳತ್ತ ಕಿವಿಗೊಡದೆ, ಅವುಗಳಿಂದ ಉದ್ರೇಕ ಉಲ್ಲಾಸಗೊಳ್ಳದೆ, ಸಮಾಧಾನಿಯಾಗಿ ಸಾಗಿದರೆ ಮಾತ್ರ ಆತನ ಜೀವನವು ಜೇಂಗೊಡವಾಗುತ್ತದೆ. ಈ ಬಗ್ಗೆ ಈಕೆಯ ದಿವ್ಯ ಶಾಂತಿಯ ಸಂದೇಶವು ಮತ್ತೆ ಮತ್ತೆ ಮೆಲಕು ಹಾಕುವಂತಿದೆ :

"ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದಡೆಂತಯ್ಯ,
ಸಮುದ್ರದತಡಿಯಲ್ಲಿ ಮನೆಯ ಮಾಡಿ ನೊರೆತೆರೆಗಳಿಗಂಜಿದಡೆಂತಯ್ಯ ?
ಸಂತೆಯೊಳಗೊಂದು ಮನೆಯಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ ?
ಲೋಕದೊಳಗೆ ಹುಟ್ಟಿರ್ದ ಬಳಿಕ ಸ್ತುತಿನಿಂದೆಗಳು ಬಂದಡೆ
ಮನದಲ್ಲಿ ಕೋಪಪತಾಳದೆ ಸಮಾಧಾನಿಯಾಗಿರಬೇಕು."

ಜೀವನದ ವೇದಾಂತವನ್ನು ಮನಗಂಡ ಮಹಿಳೆಯ ಬಾಳಬೆಳಕು ಈಕೆಯ ಜೀವನದಲ್ಲಿ ಬೆಳಗಿದೆ. ಜೀವನ ತತ್ವವನ್ನು ಅರಿದು ಅದಕ್ಕನುಸಾರವಾಗಿ ಹೊಂದಿಕೊಂಡು ನಾಗಿದರೆ ಮಾತ್ರ ಬಾಳ ಬಂಡಿಯು ಸುಗಮವಾಗಿ ಸಾಗುತ್ತದೆ.

ಹಾವಿನ ಹಲ್ಲು ಕಳೆದು ಹಾವನಾಡಿಸಬಲ್ಲರೆ
ಹಾವಿನ ಸಂಗವೇಲೇಸುಕಂಡಯ್ಯ.
ಕಾಯದ ಸಂಗವೇ ಲೇಸು ಕಂಡಯ್ಯ.
ತಾಯಿ ರಕ್ಕಸಿಯಾದಂತೆ ಕಾಮವಿಕಾರ.
ಚೆನ್ನಮಲ್ಲಿಕಾರ್ಜುನ, ನೀನೊಲಿದವರು,
ಕಾಯಗೊಂಡದ್ದರೆನಬೇಡ.

* ಅಕ್ಕಮಹಾದೇವಿ. ಪುಟ ೭೦. S.V. ಪರಮೇಶ್ವರಭಟ್ಟ, M.A.

ನಾವಿನ್ನ ಹಣ್ಣನು ಕಳೆದು ಅದನ್ನು ನಮ್ಮದನ್ನಾಗಿ ಮಾಡಿಕೊಂಡು ಅದರ ಸವಿಯುತ್ತೇವೆ. ಅದರಂತೆಯೇ ಜೀವನವನ್ನು ನಮ್ಮದನ್ನಾಗಿ ಮಾಡಿಕೊಳ್ಳಬೇಕಾದರೆ ಅದರಲ್ಲಿನ ದುಃಖ ಸಂಕಟ ಮನೋವೃತ್ತಿಯನ್ನು ತೊಡೆದು ಹಾಕಿ ಸಾಗಬೇಕು. ವಿಷಯ ಭೋಗವು ಅನಿತ್ಯವೆಂದು ತಿಳಿದು, ಅದನ್ನು ಸಮೂಲವಾಗಿ ತ್ಯಾಗಮಾಡಿ ಭೋಗ ರಾಜ್ಯದಲ್ಲಿಯೂ ತ್ಯಾಗಯೋಗಿಯಾಗಿ ಬಾಳಿ ಅಕ್ಕಮಹಾದೇವಿಯು ಜೀವನ ಸಿದ್ಧಿಯನ್ನು ಪಡೆದಿದ್ದಾಳೆ. ಅದು ಸಾಧ್ಯವಿಲ್ಲದೆ ನಾವಿಂದು ಭೋಗದಲ್ಲಿಯೂ ತ್ಯಾಗವನ್ನು ಕಂಡು ಅದನ್ನು ಉನ್ನತಗೊಳಿಸುವುದಕ್ಕಾಗಿ ಅಕ್ಕನ ವಚನಗಳ ಅಧ್ಯಯನ ಆಚರಣೆಯು ಅವಶ್ಯಕವಾಗಿದೆ. ಸಂಸಾರದ ದಂದುಗದ ದಳ್ಳುರಿಯಲ್ಲಿ ಸಿಲುಕಿ ಸೊರಗಿ ಹೋಗುತ್ತಿದ್ದ ಅಕ್ಕನ ವೇದನೆ ಅನುಭವ ವೇದ್ಯವಾಗಿದೆ.

ಸಂಸಾರ ಬೆಂಬಿಡದೆ ಕಾಡುತ್ತಿದೆಯಯ್ಯಾ ಏವೇನೇವೆನಯ್ಯಾ.
ಅಂದಂದಿನ ದಂದುಗಕ್ಕೆ ಏವೇನೇವೆನಯ್ಯ,
ಬೆಂದ ಒಡಲ ಹೊರೆವುದಕ್ಕೆ ನಾನಾರೆ
ಚೆನ್ನಮಲ್ಲಿಕಾರ್ಜುನ ಕೊಲ್ಲು, ಕಾಯಿ, ನಿಮ್ಮ ಧರ್ಮ.

ಸಂಸಾರದ ಬೇಗೆಗೆ ಸಿಕ್ಕ ತನ್ನ ಮುಂದಿನ ಹೊನ್ನು ಹೆಣ್ಣು ಮಣ್ಣುಗಳ ತನ್ನದೆಂದು ಭ್ರಮಿಸುವುದು ಇಂದಿನ ರೂಢಿ ಸಾಮಾನ್ಯವಾಗಿದೆ. ಇದನ್ನು ಇಲ್ಲಿ ಕಾಣುತ್ತೇವೆ. ಏನೂ ಮಾಡಲು ತೋಚದಂತಾಗಿ ದಿಕ್ಕುತಪ್ಪಿದ ಹಸುಳೆಯಂತೆ. ನಿಷ್ಟ ಮನಸ್ಸಿನಿಂದ ಅವನೊಬ್ಬನನ್ನೇ ಕುರಿತು ಹಂಬಲಿಸಿ ಹಾಯ್ದಿರುವ ಸಾಧ್ವಿಯನ್ನು ಇಲ್ಲಿ ಕಾಣುತ್ತೇವೆ. ಗಳಿಗೆ ಗಳಿಗೆಗೂ ಗಾಢಗೊಳ್ಳುತ್ತಿರುವ ಸಂಸಾರ ಪೀಡೆಯ ಸಂಕಟವು ಇಲ್ಲಿ ಮೂರ್ತಗೊಂಡಿದೆ.

ತೆರಣಿಯ ಹುಳು ತನ್ನ ಸ್ನೇಹದಲ್ಲಿ ಮನೆಯ ಮಾಡಿ,
ತನ್ನನೂಲು ತನ್ನಸುತ್ತಿ ಸಾವತೆರನಂತೆ,
ಮನಬಂದುದ ಬಯಸಿ ಬೇವುತ್ತಿದ್ದೇನೆ. ಅಯ್ಯ
ಎನ್ನ ಮನದ ನಿರಾಶೆಯ ನಿವಾರಿಸಿ ನಿಮ್ಮತ್ತ ತೋರಾ
ಚೆನ್ನಮಲ್ಲಿಕಾರ್ಜುನಾ.

ಆತ್ಮಶುದ್ಧಿಯ ಮಹತಿಯನ್ನು ಮೆರೆಯಿಸಿದ ಮಹಾಮಾನಿನಿಯು ಅಕ್ಕಮಹಾದೇವಿ. ಚಿತ್ತಶುದ್ಧಿಗೆ ನಮ್ಮ ನಮ್ಮ ಬಾಹ್ಯದ ಸದಾಚಾರ ಸತ್ಕರ್ಮಗಳೇ ಸಹಕಾರಿ. ಹಾಗೆ ಎಂಬುದೇ ಹೊರತೆ.

ಹುಸಿಯನಾಡಿ ಲಿಂಗವ ಪೂಜಿಸಿದರೆ
ಜೊಳ್ಳು ಬಿತ್ತಿ ಫಲವನರಸುವಂತೆ ಚೆನ್ನಮಲ್ಲಿಕಾರ್ಜುನಾ.

ತನುಕರಗದವರಲ್ಲಿ ಮಜ್ಜನವ ನೊಲ್ಲೆಯಯ್ಯ ನೀನು,
ಮನಕರಗದವರಲ್ಲಿ ಪುಷ್ಪವನೊಲ್ಲೆಯಯ್ಯ ನೀನು,
ಹದುಳಿಗರಲ್ಲದವರಲ್ಲಿ ಗಂಧಾಕ್ಷತೆಯ ನೊಲ್ಲೆಯಯ್ಯ ನೀನು.
ಅರಿವು ಕಣ್ಣುತೆರೆಯದವರಲ್ಲಿ ಆರತಿಯನೊಲ್ಲೆಯಯ್ಯ ನೀನು,
ಎನ್ನಲ್ಲಿ ಏನಿದೆಯೆಂದು ಇಂಬುಗೊಟ್ಟೆಯಯ್ಯ ಚೆನ್ನಮಲ್ಲಿಕಾರ್ಜುನಾ

ಮತಧರ್ಮದ ಸೀಮೆಯಲ್ಲಿ ಜಗವು ವಾಕ್ಯವಾದ ಸ್ವಸಾಕ್ಷಾತ್ಕಾರತೆಯನ್ನು ಎತ್ತಿ ಹಿಡಿದಿದ್ದಾಳೆ. ತನ್ನ ಅನುಭವಕ್ಕೆ ಬಂದುದನ್ನೇ ತನ್ನ ಹೃದಯದಲ್ಲಿ ತಾನು ಸಾಕ್ಷಾತ್ಕರಿಸಿಕೊಂಡ ಸತ್ಯವನ್ನೇ ಸಾರಿದ ಸತಿಶಿರೋಮಣಿಯು ಅಕ್ಕಮಹಾದೇವಿ. ಯಾವುದು ಹೃದಯ ಗೋಚರವೋ ಅದೇ ಸತ್ಯ; ಉಳಿದುದವೆಲ್ಲ ಬಣಗು.

ವೇದಶಾಸ್ತ್ರ ಪುರಾಣಾಗಮಂಗಳೆಲ್ಲ (ಕೊಟ್ಟಣವ ಕುಟ್ಟುತ್ತ)
ನುಚ್ಚು ತೌಡು ಕಾಣಿಭೋ! ಇವ ಕುಟ್ಟಲೇಕೋ!
ಅತ್ತಲಿತ್ತ ಹರಿವ ಮನದ ಶಿರವನರಿವಡೆ
ಬಚ್ಚಬರಿಯ ಬಯಲು ಚೆನ್ನಮಲ್ಲಿಕಾರ್ಜುನ.

ವೇದಶಾಸ್ತ್ರ ಪುರಾಣ ಆಗಮಾದಿಗಳಲ್ಲಿ ಬಂದ ಮಾತು ತನ್ನ ಜೀವನದಲ್ಲಿ ಅನುಭವಕ್ಕೆ ಬಂದಾಗ ಮಾತ್ರ ಸತ್ಯ. ಅನುಭವಕ್ಕೆ ಬಾರದ ಬರಿಯ ಪುಸ್ತಕದ ಮಾತಾದರೆ ಅದು ಕೊಟ್ಟಣ ಕುಟ್ಟಿದ ನುಚ್ಚು ತೌಡು. ಹೃದಯದಲ್ಲಿ ಆತ್ಮ ಸಾಕ್ಷಾತ್ಕಾರವನ್ನು ಪಡೆದು ಲಿಂಗಾಂಗ ಸಾಮರಸ್ಯ ಸುಖವನ್ನು ಅನುಭವಿಸಲು ಮನಸ್ಸನ್ನು ಏಕಾಗ್ರದಲ್ಲಿ ನಿಲ್ಲಿಸಿದರೆ ಸಾಕು. ಅಂತಹ ನಿಶ್ಚಲ ಸುಸ್ಥಿತಿ ಅಗತ್ಯ. ಈ ಧೀರ ಸಂಯಮ ಸಂದೇಶವನ್ನು ಸಾರಿ ಅಕ್ಕಮಹಾದೇವಿಯು ಚಿರಜೀವಿಯಾಗಿದ್ದಾಳೆ. "ಅಕ್ಕನ ವಚನಗಳಲ್ಲಿ ಹೊಸ ಶೈಲಿ; ಭಾವದಲ್ಲಿ ಸೊಬಗು; ಭಾಷೆಯಲ್ಲಿ ಬೆಡಗು; ನುಡಿಯಲ್ಲಿ ನಿರ್ದಾಕ್ಷಿಣ್ಯತ ಅಂತರಂಗದಲ್ಲಿ ನಿರ್ಮಲತೆಯು ಎದ್ದು ಕಾಣುತ್ತದೆ........ಅವಳ ಆಧ್ಯಾತ್ಮಿಕ ಬಾಳುವೆಯಲ್ಲಿ ದೈವನಿಷ್ಠೆಯ ಅಂತಃಶಕ್ತಿಯೂ, ವಿಶ್ವಾಸಾಕಾರದ ತೇಜಶಕ್ತಿಯೂ ತುಂಬಿದೆ." * ಸಮಾಜವನ್ನು ಎದುರಿಸಿದ ಧೋರಣೆಯೂ, ಚೆನ್ನಮಲ್ಲಿಕಾರ್ಜುನನಲ್ಲಿರುವ ಅತುಲ ವಿಶ್ವಾಸವೂ, ತನ್ನನ್ನು

* ಕಲ್ಪಲತೆ ಪುಟ ೪೨–೪೩. ಸುಂದರೇಶನ್.

ಹಿಂಬಾಳಿಸುವವರನ್ನು ಮೂದಲಿಸುವ ದೋಷವೂ ಈಕೆಯಲ್ಲಿ ಇದ್ದು ಬಾಳನ್ನು ಬದುಕನ್ನು ಬಂಗಾರವನ್ನಾಗಿ ಮಾಡಲು ಹೋರಾಡಿದ ಧೀರ ಇತಿಹಾಸವು ಅಕ್ಕ ಮಹಾದೇವಿಯದು. ಅಕ್ಕಮಹಾದೇವಿಯಂತೆ ಮತ್ತೊಬ್ಬ ಶಿವಶರಣೆಯು ಮುಕ್ತಾಯಕ್ಕ. ಇಬ್ಬರೂ ಕಷ್ಟ ದುಃಖ ಸಂಕಟ ನೋವಿಗೆ ಈಡಾದವರು. ವಿರಸ ಸಂಸಾರದ ದುಃಖವು ಒಬ್ಬಳದಾದರೆ, ಸೋದರ ವಿಯೋಗದ ದುಃಖವು ಮತ್ತೊಬ್ಬಳದು, ಇಬ್ಬರೂ ಅಲ್ಲಮ ಪ್ರಭುವಿನ ಅಕ್ಕರೆಗೆ ಪಾತ್ರರಾದವರು. ಮುಕ್ತಾಯಕ್ಕನ ವಿಚಾರವು ಬುದ್ಧ ಕಿಸಾಗೌತಮಿಯ ಪ್ರಸಂಗವನ್ನು ನೆನಪಿಗೆ ತರುತ್ತದೆ. ಈಕೆಯನ್ನು ಕುರಿತು ಶೂನ್ಯಸಂಪಾದನೆಯಲ್ಲಿ "ಮುಕ್ತಾಯಕ್ಕಗಳ ಸಂಪಾದನೆ" ಎಂಬ ಪ್ರಕರಣವಿದೆ. ಇದರಲ್ಲಿನ ಅಲ್ಲಮಪ್ರಭು ಮುಕ್ತಾಯಕ್ಕ ಇವರ ಸಂಭಾಷಣೆಯು ಸುಂದರೋಪಮವಾಗಿದೆ. ಅಣ್ಣ ಅಜಗಣ್ಣನ ವಿಯೋಗಕ್ಕಾಗಿ ತಂಗಿ ಮುಕ್ತಾಯಕ್ಕ ಪ್ರಲಾಪಿಸುತ್ತ, ಕಂಬನಿಯನ್ನು ಹರಿಸುತ್ತ ಮರಣದ ತೊಡಕನ್ನು ಬಿಡಿಸಲಾರದೆ ಲೌಕಿಕದ ಸತ್ಯವನ್ನು ಪರಮಾರ್ಥದ ಅಸತ್ಯವನ್ನು ಕಂಡುಕೊಂಡ ಹಾಗೆ ದುಃಖಿಸುತ್ತಿರುತ್ತಾಳೆ. ಆ ಸಮಯಕ್ಕೆ ಸರಿಯಾಗಿ ಕರುಣಾಜೀವಿಯಾದ ಅಲ್ಲಮ ಪ್ರಭುವು ಆಗಮಿಸುತ್ತಾನೆ. ಆಕೆಯನ್ನು ಪ್ರಶ್ನಿಸುತ್ತಾನೆ.

ಅಂಗೈಯೊಳಗೊಂದಂ ಅರಳ್ದ ತಲೆಯ ಒಡಿಮುಕೊಂಡು ಕಂಗಳಮುತ್ತು
ಪವಣಿಸುವಾಕೆ ನೀನಾರು ?

ಆಗ ಆಕೆಯು ಎದ್ದು ಆತನಿಗೆ ನಮಸ್ಕರಿಸುತ್ತಾಳೆ: ತನ್ನ ಸಂಕಟವನ್ನು ತೋಡಿಕೊಳ್ಳುತ್ತಾಳೆ:

ತಲೆಯುಳಿದು ತಲೆಗೆಟ್ಟು ಬೆಳಗುವ ಜ್ಯೋತಿ ಎನ್ನ ಅಜಗಣ್ಣ ತಂದೆಯ
ಬೆನ್ನುಬಳಿಯುವಳು

ಆ ದುಃಖವು ಮುಂದೆ ಮುಂದೆ ಹರಿಯುತ್ತದೆ: ಅಗಲಿದ ಅಣ್ಣ ಅಜಗಣ್ಣನ ವಿಯೋಗವನ್ನು ಆಕೆಯು ವಿವರಿಸುವಂತಾಗುತ್ತದೆ.

ನೀರಬೊಂಬೆಗೆ ನಿರಾಳದ ಗೆಜ್ಜೆಯಕಟ್ಟಿ,
ಬಯಲು ಬೊಂಬೆಯ ಕೈಯಲ್ಲಿ ಕೊಟ್ಟು ಮುದ್ದಾಡುತಿರ್ದನಯ್ಯಾ.
ಕರ್ಪೂರದ ಪುತ್ಥಳಿಗೆ ಅಗ್ನಿಯ ಸಿಂಹಾಸನವನಿಕ್ಕಿ,
ಅಗ್ನಿಕರಗಿ ಕರ್ಪೂರ ಉಳಿದುದಕ್ಕೆ ಬೆರಗಾದೆನಯ್ಯಾ,
ಎನ್ನ ಅಜಗಣ್ಣನ ಯೋಗಕ್ಕೆ.

ಮುಂದೆ ಸಾಗಿದ ಸಂವಾದವು ಹೆದ್ದೊರೆಯಾಗುತ್ತದೆ. ಶಿಷ್ಯೆಯಾದ ಮುಕ್ತಾಯಕ್ಕ ಗುರುಅಲ್ಲಮ ಪ್ರಭುವಿನಿಂದ ನಿಜದ ನೆಲೆಯನ್ನು ಅರಿವನ್ನು ಅರಿಯುತ್ತಾಳೆ. ಮುಕ್ತಾಯಕ್ಕನಲ್ಲಿದ್ದ ಜ್ಞಾನ ರತ್ನವು ಸೋದರ ಪ್ರೇಮದಿಂದ ಮುಚ್ಚಿ ಹೋಗಿರುತ್ತದೆ. ವೈರಾಗ್ಯನಿಧಿ ಅಲ್ಲಮಪ್ರಭುದೇವರಿಂದ ಆ ಮುಸುಕು ತೆಗೆಯಲ್ಪಟ್ಟು ಆಕೆಗೆ ನಿಜದ ತಿಳಿವನ್ನೂ ಜೀವನ ರಹಸ್ಯವನ್ನೂ ತೋರಿಸಿಕೊಡುತ್ತದೆ. ಲೋಕ ರೂಢಿಯನ್ನು ಮೀರಿದ ಹೆಚ್ಚಳವನ್ನು ಇಲ್ಲಿ ಕಾಣುತ್ತೇವೆ. ಗುರುವಿನ ಪರೀಕ್ಷೆಯು ಶಿಷ್ಯೆಯಿಂದ ಜರುಗುವುದೇ ಇಲ್ಲಿನ ಆ ವಿಶೇಷವು. "ಅಲ್ಲಮಪ್ರಭು ತನ್ನ ಜೀವಮಾನದಲ್ಲಿ ಬಸವಣ್ಣಾದಿ ಹಲವು ಸಾಧಕರನ್ನು ಸಂಧಿಸಿ ಅವರ ಲೋಪದೋಷವನ್ನು ತೋರಿಸಿ ಮಾರ್ಗದರ್ಶನವನ್ನು ಉಪದೇಶಿಸಿದರಷ್ಟೆ. ಆ ಸಂದರ್ಭಗಳಲ್ಲೆಲ್ಲಾ ಗುರುವಿನಿಂದ ಶಿಷ್ಯಪರೀಕ್ಷೆಯಾಯಿತು. ಮುಕ್ತಾಯಕ್ಕನನ್ನು ಸಂಧಿಸಿದಾಗ ಶಿಷ್ಯೆಯಿಂದ ಗುರುವಿನ ಪರೀಕ್ಷೆಯಾಯಿತು. ಗುರು ಆ ಪರೀಕ್ಷೆಯಲ್ಲಿ ತೇರ್ಗಡೆಯಾದುದರಿಂದ ಮುಕ್ತಾಯಿ ಉಪದೇಶ ಕೈಗೊಂಡಳು.* ಮುಕ್ತಾಯಕ್ಕ ಶರಣೆಯಾಗಿ ರಚಿಸಿದ ವಚನಗಳು ಅರಿಯದವರಿಗೆ ಅಂಜನವಾಗಿವೆ. ಈಕೆಯ ವಚನಗಳು ನಾಲ್ಕೇ ನಾಲ್ಕು. ಈಕೆಯ ವಚನ ಮುದ್ರಿಕೆಯು 'ಎನ್ನ ಅಜಗಣ್ಣತಂದೆ, ಗುರುವಿನ 'ಹಿರಿಮೆ'ಯನ್ನು ಇಂತು ವಿವರಿಸುತ್ತಾಳೆ:

ಗುರುವಾಕ್ಯದಿಂದಲ್ಲದೆ ಗುರುವನರಿಯಬಾರದು,
ಗುರುವಾಕ್ಯದಿಂದಲ್ಲದೆ ಲಿಂಗವನರಿಯಬಾರದು,
ಗುರುವಾಕ್ಯದಿಂದಲ್ಲದೆ ಜಂಗಮವನರಿಯಬಾರದು,
ಗುರುವಾಕ್ಯದಿಂದಲ್ಲದೆ ತನ್ನನರಿಯಬಾರದು.

ಹಿಂದಣ ಜನ್ಮದಲ್ಲಿ ಗುರುವಾಕ್ಯವಿಡಿದು ಗುರುವ ಪೂಜಿಸಿ,
ಇಂದು ಜ್ಞಾನೋದಯವಾದರೆ ಜ್ಞಾನವಾಯಿತೆಂದು
ಗುರುವಾಕ್ಯವ ಮೀರಿ ಆಯಿತೆನ್ನಬಹುದೆ ?
ತನ್ನಲ್ಲಿ ತಾನು ಸನ್ನಿಹಿತವಾದನೆಂದಡೆ
ಗುರುವಿಲ್ಲದೆ ಆಗದು ಕೇಳಾ, ಎನ್ನ ಅಜಗಣ್ಣ
ಗುರುವಿಂದಲ್ಲದೆ ಆರೂಢದ ಕೂಟವು ಸ್ವಯವಾಗದು ಕೇಳಾ

ಬಸವಣ್ಣನ ಪರಮ ಭಕ್ತನೂ, ಅತಿ ನಿಕಟವರ್ತಿಯೂ ಆದ ಹಡಪದ ಅಪ್ಪಣ್ಣನು ತನ್ನನ್ನು ಸಂಪೂರ್ಣವಾಗಿ ಬಸವಣ್ಣನಿಗೆ ಸಮರ್ಪಿಸಿದ್ದನು. ಈತನ ಗುರಿ ಸಾಧನೆಗಾಗಿ ಗಂಡನೊಡನೆ ಕೂಡಿ ಬಾಳಿದವಳು ಲಿಂಗಮ್ಮ. ಬಸವಣ್ಣನವರ

* ವಚನ ಧರ್ಮಸಾರ. ಪುಟ ೧೪೧. ಎಂ. ಆರ್. ಶ್ರೀನಿವಾಸ ಮೂರ್ತಿ.

ಉದ್ದೇಶವಾಗಿಯುಳ್ಳ ಅನುಭಾವಿಯಾದ ಮಹಾಮಹಿಳೆ ಲಿಂಗಮ್ಮ. ಪತಿಸೇವೆ, ಗುರುಸೇವೆ ಜಂಗಮ ದಾಸೋಹವೇ ಈಕೆಯ ನಿತ್ಯದ ಕೆಲಸವು. ಶಿವಾನುಭವ ಮಂಟಪದ ಆಧ್ಯಾತ್ಮಿಕ ಗೋಷ್ಠಿಯಲ್ಲಿ ಭಾಗಿಯಾಗಿ ಲಿಂಗಾನಂದ ತನ್ಮಯಳಾಗಿರುತ್ತಿದ್ದಳು. ಈಕೆಯ ವಚನಗಳು ಮುಕ್ತಿಯ ಸ್ವರೂಪವನ್ನೂ, ನಿರವಯವದ ನಿಲುವನ್ನೂ ಮಾರ್ಮಿಕವಾಗಿ ಚಿತ್ರಿಸುತ್ತವೆ. "ಆಧ್ಯಾತ್ಮ ಜೀವನದಲ್ಲಿ ಮುಂದುವರಿಯಬೇಕೆಂಬ ಅಪೇಕ್ಷೆಯುಳ್ಳವರಿಗೆ ಲಿಂಗಮ್ಮನ ಅನುಭಾವದ ವಚನಗಳು ದಾರಿದೀಪವಾಗಿವೆ."* ಈಕೆಯ ವಚನ ಮುದ್ರಿಕೆಯು 'ಅಪ್ಪಣ ಪ್ರಿಯ ಚೆನ್ನಬಸವಣ್ಣ'

ಮದಮತ್ಸರ ಬಿಡದು ! ಮನದ ಕನಲು ನಿಲ್ಲದು,
ಒಡಲಗುಣ ಹಿಂಗದು । ಇವಬಿಡನ್ನಕ್ಕ ಘನವ
ಕಾಣಬಾರದೆಂದಾತ....ಅಪ್ಪಣ್ಣ ಪ್ರಿಯ ಚೆನ್ನಬಸವಣ್ಣ.

ಸ್ತ್ರೀಯರ ಅಸಮಾನತೆಯು ಅಳಿದು ಹೋದದ್ದು ಕಾಯಕದ ಅವಲಂಬನದಿಂದಾಗಿದೆ ಎಂಬ ಅಂಶವು ಶಿವಶರಣೆಯರ ಇತಿಹಾಸದಿಂದ ತಿಳಿದು ಬರುತ್ತದೆ. ಗಂಡಸರು ಎಂತು ಕಾಯಕವನ್ನು ಕೈಗೊಂಡು ಕೈವಲ್ಯವನ್ನು ಪಡೆದರೋ ಹೆಂಗಸರೂ ಅಂತೆಯೇ ಕಾಯಕ ನಿರತರಾಗಿ ಜೀವನವನ್ನು ಪುಟಗೊಳಿಸಿಕೊಂಡು ಇಲ್ಲಿಯೂ ಅಲ್ಲಿಯೂ ಸಂದಿದ್ದಾರೆ. ಇಡೀ ಜಗತ್ತಿನಲ್ಲಿಯೇ ತಾಂಡವವಾಡುತ್ತಿದ್ದ ಸಾಮಾಜಿಕ ವಿಷಮತೆಯನ್ನು ಕಾಯಕವು ಕಿತ್ತುಹಾಕಿರುವುದೇ ಅದರ ಶ್ರೇಷ್ಠತೆಯಾಗಿದೆ. ಉದರನಿಮಿತ್ತಕ್ಕಾಗಿ ಕೈಗೊಳ್ಳುವ ಕೆಲಸವು ಉದ್ಯೋಗ. ತನ್ನ ಕಾಲಮೇಲೆ ತಾನು ನಿಂತು, ಮೇಲು ಕೀಳುಗಳಿಲ್ಲದೆ ಕೆಲಸವನ್ನು ಕೈಗೊಂಡು ಕುಹಕ ಕಳಂಕವಿಲ್ಲದೆ ಸತ್ಯವ್ರತ ನಿಯಮಗಳನ್ನರಿತುಕೊಂಡು ಕರ್ಮಕುಸುಮಗಳಿಂದ ಭಗವದಾರಾಧನೆ ಮಾಡುತ್ತಾ, ದಾಸೋಹ ಸಾಗಿಸುತ್ತಾ, ಜ್ಞಾನಪೂರ್ಣವೂ ಭಕ್ತಿಪೂರ್ಣವೂ ಆದ ಕರ್ಮವನ್ನು ಕುದುರಿಸುತ್ತಾ ವೃತ್ತಿಯನ್ನವಲಂಬಿಸಿರುವುದು ಕಾಯಕನಿರತತೆ. ಕರ್ತವ್ಯ ಪರಿಪೂರ್ಣತೆಯಲ್ಲಿಯೇ ಪರಮಾನಂದವಡಗಿದೆ. ಅದೇ ಸಚ್ಚಿದಾನಂದ, ಬ್ರಹ್ಮಾನಂದ. ಪಾಶ್ಚಿಮಾತ್ಯರ ಶ್ರಮ ಗೌರವವು ಕಾಯಕದಲ್ಲಿ ಕರಗೊಂಡಿದೆ. "ಕಾಯಕಕ್ಕೈವಲ್ಯ ಹೊಟ್ಟೆ ಪಾಡಿಗಾಗಿ ಎಂಬ ಭಾವನೆಯನ್ನು ತೊಡೆದು ಹಾಕಿ, ವ್ಯಕ್ತಿ ಕಾಯಾ ವಾಚಾ ಮನಸಾ ತನ್ನ ಬಾಹ್ಯ ಕ್ರಿಯೆಗಳನ್ನು ಅನುಸರಿಸಿದ್ದಾದರೆ ಅವನ ಮಾನಸಿಕ ಪ್ರವೃತ್ತಿಗಳು ಪರಿಪಕ್ವತೆಯನ್ನೈದುವವು. ಮಾನಸಿಕವೃತ್ತಿ ಪರಿಪಕ್ವ ಹೊಂದಿದಾಗ ಕಾಯಕದಲ್ಲಿಯೇ 'ಶಿವಮಾನಸ ಪೂಜೆ' ಸಾಧ್ಯವಾಗುತ್ತದೆ."*೧ "ಕಾಯಕದಿಂದ ಭಾವ ಬಲಿದು ವಿಶಾಲಗೊಳ್ಳುತ್ತದೆ.

* ವಿಭೂತಿ, ಪುಟ ೩೩೧.
*೧ ತರಳ ಬಾಳು ರಜತೋತ್ಸವ ಸಂಚಿಕೆ, ಪುಟ ೧೨೫.

ಕಾಯಕನಿರತತೆಯಿಂದ ಮನಸ್ಸಿನಲ್ಲಿ ಏಕಾಗ್ರತೆ ಮೂಡಿ ನಿಲ್ಲುತ್ತದೆ. ಏಕಾಗ್ರತೆಯಿಂದ ಚಿತ್ತಶುದ್ಧಿಯಾಗುತ್ತದೆ. ತನ್ಮೂಲಕ ಭಾವಶುದ್ಧಿಯಾಗುತ್ತದೆ."* ಈ ರೀತಿಯಲ್ಲಿ ಕಾಯಕದಿಂದ ಅಂತರಂಗ ಬಹಿರಂಗ ಶುದ್ಧಿಯಾಗಲು ಅವಕಾಶವಿರುತ್ತದೆ. ಕಾಯಕನಿಷ್ಠೆಯರಾಗಿ ಭಗವತ್ಸಾಕ್ಷಾತ್ಕಾರವನ್ನು ಪಡೆದ ಶಿವಶರಣೆಯರು ಹತ್ತಾರು ಮಂದಿ. ಅನಾಥಳೂ, ವಿಧವೆಯೂ ಆದ ಅಮ್ಮವ್ವೆ ರಾಟೆಯ ಕಾಯಕ, ಪಿಟ್ಟವ್ವೆ ದೋಸೆಯ ಕಾಯಕ, ತಿಮ್ಮವ್ವೆ ನೂಲುವ ಕಾಯಕ, ಪದ್ಮವ್ವೆ ಕೃಷಿಕಾಯಕ, ಸತ್ಯಕ್ಕ ಧರ್ಮಬೋಧೆ, ಗೌರವ್ವೆ ಅತಿಥಿಗಳ ಸ್ವಾಗತ, ಭಕ್ತರ ಮನೆಯಲ್ಲಿ ಎಲ್ಲರನ್ನೂ ಎಬ್ಬಿಸಿ ಅವರನ್ನು ದಿನಚರಿಯಲ್ಲಿ ತೊಡಗುವಂತೆ ತೊಡಗಿಸ ಮಹಾದೇವಿಯು ಮಾಡುವುದು—ಈ ರೀತಿಯಾಗಿ ಹತ್ತಾರು ಕಾಯಕಗಳನ್ನು ಕೈಗೊಂಡಿದ್ದಾರೆ.

ಹಿರೇ ಜಂಬೂರಿನ ಜನ್ಮವಾಸಿಯು ಸತ್ಯಕ್ಕ. ಶಿವಭಕ್ತರ ಮನೆಯ ಅಂಗಣದ ಕಸವನ್ನು ಗುಡಿಸುವುದೇ ಈಕೆಯ ಕಾಯಕ. ಶಿವನಲ್ಲದೆ ಮತ್ತೆ ಬೇರೆ ದೈವದ ಹೆಸರನ್ನು ಕೇಳದಂತಹ ಕಠಿಣ ವ್ರತವು ಈಕೆಯದು. ಭಿಕ್ಷುಕನ ವೇಷದಲ್ಲಿ ಪರಮೇಶ್ವರನು ಈಕೆಯಲ್ಲಿಗೆ ಬಂದು ಈ ಕಠೋರ ನಿಯಮವನ್ನು ಪರೀಕ್ಷಿಸುತ್ತಾನೆ. ಇದರಲ್ಲಿ ವಿಜಯವನ್ನು ಗಳಿಸಿದ ಈಕೆಯನ್ನು ಪರಮೇಶ್ವರನು ಸಂತೋಷಗೊಂಡು ಹರಸಿ ಮುಕ್ತಿಯನ್ನು ಕರುಣಿಸುತ್ತಾನೆ. ಈಕೆಯ ವಚನಗಳು ಇಪ್ಪತ್ತು. ಈಕೆಯ ವಚನ ಮುದ್ರಿಕೆಯು ಶಂಭುಜಕ್ಕೇಶ್ವರಾ.

ದೇವನೊಳ್ಳಿದನೆಂದು ಮುಯ್ಯಾನಲು ಬೇಡ,
ಕರಕಟ ಕಾಡುವನೊಳ್ಳಿದನೇ ? ಅಳಿಸುವ ನಗಿಸುವ
ನೊಳ್ಳಿದನೇ? ಬೆದರದೆ ಬೆಚ್ಚದೆ ತೊತ್ತುತನವ
ಮಾಡಲು ತನ್ನನೀವ ಶಂಭುಜಕ್ಕೇಶ್ವರಾ.

ದಾಸೋಹದ ಕಾಯಕವನ್ನು ಕೈಗೊಂಡಿದ್ದವಳು ಮಹಾದೇವಿಯಮ್ಮ. ಕಾಶ್ಮೀರ ದೇಶದ ಮಾಂಡವ್ಯಪುರದ ಅರಸು ಮೋಳಿಗೆ ಮಾರಯ್ಯನ ಹೆಂಡತಿಯು ಈಕೆ. ಕಲ್ಯಾಣದ ಕೀರ್ತಿಯನ್ನು ಕೇಳಿ ರಾಜವೈಭವವನ್ನು ಕಾಲಲ್ಲಿ ತುಳಿದು, ಕಾಶ್ಮೀರದಿಂದ ಕಾಲ್ತೆಗೆದು ಕಲ್ಯಾಣಕ್ಕೆ ಬಂದ ಗಂಡನ ಸಂಗಡ ಈಕೆಯು ಕಲ್ಯಾಣದಲ್ಲಿ ಕಟ್ಟಿಗೆಯ ಕಾಯಕವನ್ನು ಕೈಗೊಂಡಳು. ಕಾಯಕದಲ್ಲಿ ಕೈವಲ್ಯವನ್ನು ಕಂಡಳು. ಅನುಭವ ಮಂಟಪದಲ್ಲಿ ಭಾಗವಹಿಸಿ ಕಾರ್ಯನಿರತಳಾದಳು. ಈಕೆಯ ವಚನಗಳು ೭೩. ಈಕೆಯ ವಚನ ಮುದ್ರಿಕೆಯು 'ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ.' ಷಟ್ಸ್ಥಲಗಳ ಸ್ವರೂಪ, ಕ್ರಿಯೆ, ಜ್ಞಾನಗಳ ಸಂಬಂಧ

* ಬಸವಣ್ಣನವರ ವೀರಶೈವ ಸಮಾಜ, —ಪಂಡಿತ ನಾಗೇಶ ಶಾಸ್ತ್ರಿ.

ವನ್ನು ಇವುಗಳಲ್ಲಿ ಮಾರ್ಮಿಕವಾಗಿ ವಿವರಿಸಿದ್ದಾಳೆ.

ಅಕ್ಕಿಯನ್ನು ಆಯ್ದು ತರುವ ಕಾಯಕಶೀಲೆಯು ಲಕ್ಕಮ್ಮ. ಆಯ್ದಕ್ಕಿ ಮಾರಯ್ಯನ ಹೆಂಡತಿಯು ಈಕೆ. ಈ ಕಾಯಕದಲ್ಲಿ ಗಂಡನಿಗೆ ಈಕೆಯು ನೆರವಾಗುತ್ತಿದ್ದಳು. ಗೃಹಿಣಿಯು ಸತ್ಯನಿಷ್ಠಳಾದರೆ ನಿಯಮತಪ್ಪಿದ ಗಂಡನನ್ನು ದಾರಿಗೆ ತರಬಹುದು ಎನಲು ನಿದರ್ಶನವು ಈಕೆ. ಒಂದು ದಿನ ಮಾರಯ್ಯನು ನಿಯಮ ಮೀರಿದ ಹೆಚ್ಚಿನ ಪ್ರಮಾಣದ ಅಕ್ಕಿಯನ್ನು ಆರಿಸಿ ಮನೆಗೆ ತಂದನು. ಹೆಚ್ಚಿಗೆ ದೊರಕಿತು ಎಂದು ಹೆಂಡತಿಯು ಹಿರಿಹಿಗ್ಗಲಿಲ್ಲ. ಛೀಮಾರಿ ಹಾಕಿದಳು:

ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ?
ರೋಷವೆಂಬುದು ಯಮದೂತರಿಗಲ್ಲದೆ ಅಜಾತರಿಗುಂಟೆ?
ಈಸಕ್ಕಿಯ ಆಸೆ ನಿಮಗೇಕೆ? ಈಶ್ವರನೊಪ್ಪ – ಎಂದಳು.

ತಂದಿದ್ದ ಹೆಚ್ಚಿನ ಅಕ್ಕಿಯನ್ನು ತೆಪ್ಪಗಾದ ಗಂಡನು ಹಿಂದಿರುಗಿಸಿದನು. ಇದೇ ಆದರ್ಶವನ್ನು ಅನುಸರಿಸಿದ ಗೃಹಿಣಿಯರು ಇಂದು ಪ್ರತಿ ಮನೆ ಮನೆಯಲ್ಲಿಯೂ ರಾರಾಜಿಸುವಂತಾದರೆ ರಾಜ್ಯದಲ್ಲಿನ ಭ್ರಷ್ಟಾಚಾರವು ಮಣ್ಣುಗೂಡುತ್ತದೆ. ಸದಾಚಾರದ ಕಾಯಕದಿಂದಲೇ ಪರಮಾತ್ಮನ ಪ್ರಸಾದಪ್ರಾಪ್ತಿ ಎಂದು ಅರಿತ ಅರುಹಾತೆಯರಲ್ಲಿ ಒಬ್ಬಳು ಕದಿರೆ ರೆಮ್ಮವ್ವೆ. ಹೊರಗಿನ ರಾಟೆಯನಷ್ಟೇ ಅಲ್ಲದೆ ಅಂತರಂಗದ ಅಧ್ಯಾತ್ಮರಾಟೆಯನ್ನು ತಿರುವುದನ್ನು ಕಲಿಸಿದ ಕಟ್ಟಾಣಿಯು ಈಕೆ.

ನಾ ತಿರುಹುವ ರಾಟೆಯ ಕುಲಜಾತಿಯ ಕೇಳಿರಣ್ಣಾ.
ಅರಿವೆಂಬ ಕದಿರು, ಭಕ್ತಿಯೆಂಬ ಕೈಯಲ್ಲಿ
ತಿರುಪಲಾಗಿ ಸುತ್ತಿತ್ತು ನೂಲು, ಕದಿರು ತುಂಬಿತು.

ಈಕೆಯ ವಚನ ಮುದ್ರಿಕೆಯು 'ಕದಿರೆ ರೆಮ್ಮವ್ವೆಯೊಡೆಯ ಗುಮ್ಮೇಶ್ವರಾ'. ಕಲ್ಯಾಣದಲ್ಲಿ ಕೊಟ್ಟಣದ ಕಾಯಕದಿಂದ ಜೀವಿಸುತ್ತಿದ್ದ ಶರಣೆ ಕೊಟ್ಟಣದ ಸೋಮವ್ವೆ. ಈಕೆಯ ವಚನ ಮುದ್ರಿಕೆಯು 'ನಿರ್ಲಜ್ಜೇಶ್ವರ' ಈ ಕಾಯಕದಲ್ಲಿ ಈಕೆಯು ಕೈವಲ್ಯವನ್ನು ಕಂಡಳು. ಹಿರೇರಿ ಎಂಬ ಗ್ರಾಮದಲ್ಲಿ ಒಕ್ಕಲು ಕಾಯಕದಿಂದ ಜೀವಿಸುತ್ತಿದ್ದ ಶರಣೆ ಒಕ್ಕಲು ತಿಮ್ಮವ್ವೆ. ಈಕೆಯ ವಚನಗಳು ೨೩. ಈಕೆಯ ವಚನ ಮುದ್ರಿಕೆಯು 'ಹಿರೇಶ್ವರಲಿಂಗ' ಸದಾಚಾರ ಬೋಧೆಯನ್ನು ಈ ವಚನಗಳು ನೀಡುತ್ತವೆ.

ತಾನೇ ಮರ ಮಾಡಿಕೊಂಡು ಕೃಷಿ ವ್ಯವಸಾಯವಿಲ್ಲದೆ
ಒಡೆಯರು ಕಟ್ಟಪ್ಪಣೆ ಮಾಡುವರೆಂತು?
ಹೀಗಲ್ಲದೆ ಎನ್ನ ಒಡಲ ಪೊರೆದಿಹೆನೆಂದು

ಶೀಲವಂತರ ಮಂಗನ ಭೇದವ ಏನ
ಬಲ್ಲಿರಿ ಏಲೇಶ್ವರ ಲಿಂಗಯ್ಯಾ.

ಇಂದಿನ ಶೋಷಣೆಯ ಜೀವನಕ್ಕೆ ಈ ಕಾಯಕ ತತ್ತ್ವವು ಪರಮ ಮದ್ದು ಎಂಬ ಅಂಶವನ್ನು ಎಲ್ಲ ವಿಚಾರವಾದಿಗಳು ಒಪ್ಪಿದ್ದಾರೆ. "ಎಲ್ಲ ಸಂಪತ್ತು ದುಡಿಮೆಯ ಫಲ"* ಈ ವಿಚಾರ ಕ್ರಾಂತಿಯಿಂದ ರಷ್ಯದಲ್ಲಿ ಸಮತಾವಾದ ಸ್ಥಾಪನೆಯಾಗಿದೆ. ಶೋಷಣೆ ನಿಂತ ಪರಿಣಾಮವಾಗಿ ಸಮಾಜ ವ್ಯವಸ್ಥೆಯು ಸರಿಬಂದಿದೆ. ರಾಜಕೀಯ ಸ್ವಾತಂತ್ರ್ಯದ ಜೊತೆಗೆ ಆರ್ಥಿಕ ಸ್ವಾತಂತ್ರ್ಯವು ಅಗತ್ಯ ಎಂದು ಗಾಂಧೀಜಿಯು ಸಾರಿದುದು ಈ ತತ್ತ್ವದ ಚಿಂತನ ಮಂಥನದಿಂದಲೇ. ತಮ್ಮದೇ ಆದ ಹೊಸ ಹಾದಿಯಲ್ಲಿ ಹಾಯ್ದು ಉದ್ಯೋಗದ ಪವಿತ್ರತೆಯನ್ನು ಎತ್ತಿ ಸಾರಿದರು. ಈ ಕಾಯಕದ ಕೊಂಡಿಯು ಕಳಚಿ ಹೋಗದಂತೆ ವಿನೋಬಾಭಾವೆಯವರು 'ಸರ್ವೋದಯ' ತತ್ತ್ವವನ್ನು ಕಾರ್ಯಗತಮಾಡತೊಡಗಿದರು. ಇದರಿಂದ ಜೀವನದ ಮೌಲ್ಯವನ್ನು ಇವರು ಸ್ಥಿರೀಕರಿಸಿದರು. ಕಾಯಕದ ಶಿವಶರಣೆಯರು ಆ ಕಾಯಕವನ್ನು ಆ ಕಾಲದ ಮೌಲ್ಯವನ್ನಾಗಿ ಮಾಡಲು ಯತ್ನಿಸಿದರು. ಇದರಿಂದ ಆ ಕಾಲದ ಪರಮ ಮೌಲ್ಯವೇ ಕಾಯಕ ಎಂಬುದು ಸ್ಪಷ್ಟವಾಯಿತು. ನಾವು ಯಾವುದೇ ಕೆಲಸವನ್ನು ಮಾಡುತ್ತಿರಲಿ ಅದನ್ನು ಪ್ರಾಮಾಣಿಕವಾಗಿ ಯಾವ ರೀತಿಯ ಗೊಣಗಾಟವೂ ಇಲ್ಲದೆ, ಇದು ಭಗವಂತನು ನನಗೆ ಮಾಡಲು ನೇಮಿಸಿರುವ ಕೆಲಸ ಎಂದು ಮಾಡಿದರೆ ಅದೇ ಸಾಧನೆಯಾಗುತ್ತದೆ. ಆ ಕೆಲಸದಿಂದ ತನಗೆ ಬರುವ ಪ್ರತಿಫಲದಲ್ಲಿ ಎಲ್ಲವನ್ನೂ ತನಗೇ ಉಪಯೋಗಿಸಿಕೊಳ್ಳದೇ ಅದರಲ್ಲಿ ಸ್ವಲ್ಪ ಭಾಗವನ್ನು ತನ್ನಷ್ಟು ಅದೃಷ್ಟಶಾಲಿಗಳಲ್ಲದ ಇತರರಿಗಾಗಿಯೇ ವ್ಯಯಿಸಬೇಕು"*೧ ಈ ತತ್ತ್ವವನ್ನು ಮನಗಂಡು ಕಾರ್ಯಗತ ಮಾಡಿದರೆ ರಾಷ್ಟ್ರದ ಸಕಲರೂ ಸೌಖ್ಯದಿಂದಿರಲು ಅವಕಾಶವಾಗುವುದರಲ್ಲಿ ಯಾವ ಸಂಶಯವೂ ಇಲ್ಲ. ಈ ದಿಶೆಯಲ್ಲಿ ಇಂದು ಶಿವಶರಣೆಯರ ತತ್ತ್ವವು ನಮ್ಮ ಜೀವನ ವ್ಯವಹಾರಕ್ಕೆ ನೆರವಾಗುವಂತೆ ಮಾಡಿಕೊಂಡರೆ ನಿಜವಾಗಿಯೂ ನಾವು ರಾಮರಾಜ್ಯದ ಪ್ರಜೆಗಳಾಗುತ್ತೇವೆ.

———

* ಕಾರ್ಲ್ ಮಾರ್ಕ್ಸ್

*೧ ಬಸವಣ್ಣನವರ ಒಂದು ಜೀವನ ಚರಿತ್ರೆ. ಪುಟ ೧೯೯–೨೦೬,
ಡಾ॥ ಚಿದಾನಂದ ಮೂರ್ತಿ,

## ೨೦ ನೆಯ ಶತಮಾನದ ಮಹಾದಾರ್ಶನಿಕರೂ, ಮಹಾಕವಿಗಳೂ ಆದ ಶ್ರೀ ಶ್ರೀ ಗೌರೀಶಂಕರ ಮಹಾಸ್ವಾಮಿಗಳು

● **ಪಂಡಿತ ಚನ್ನಪ್ಪ ಎರೇಸೀಮೆ**
ಬೆಂಗಳೂರು

ವಿದ್ವಾಂಸರೂ, ಮಹಾಜ್ಞಾನಿಗಳೂ. ಕವೀಶ್ವರರೂ, ಶಿವಯೋಗೀಶ್ವರರೂ ದೇಶಕ್ಕೆ ಭೂಷಣರು. ಸತ್ಪುತ್ರನ ಜನನ ತಂದೆಗೆ ಭೂಷಣವಾದಂತೆ, ಬಹುದಿನಗಳ ಪುಣ್ಯಫಲವನ್ನೆಲ್ಲ ಒಟ್ಟುಗೂಡಿಸಿ ಒಮ್ಮೆ ರಾಷ್ಟ್ರ ಅಂಥ ಪುತ್ರರಿಗೆ ಜನನವೀಯುತ್ತದೆ. ಕರ್ನಾಟಕದಲ್ಲಿ ಮಹಾ ಮಹಾ ವಿಭೂತಿಗಳು ಕಾಲ ಕಾಲಕ್ಕೆ ಜನ್ಮವೆತ್ತಿ ತಮ್ಮ ಪ್ರಾತಿಭ ಚಕ್ಷುರುನ್ಮೀಲನದಿಂದ ಜನಜನಗಳ ಹೃದಯವನ್ನು ಬೆಳಗುವ ದಿವ್ಯ ಸಂದೇಶಗಳನ್ನು ಬೀರಿ ಕೀರ್ತಿಶೇಷರಾಗಿದ್ದಾರೆ. ಇಂತಹವರಲ್ಲಿ ಅರಮನೆ ಪಂಚಗವಿ ಮಠಾಧ್ಯಕ್ಷರಾಗಿದ್ದ ಶ್ರೀ ಮನ್ನಿರಂಜನ ಪ್ರಣವ ಸ್ವರೂಪಿಗಳಾದ ಶ್ರೀ ಗೌರೀಶಂಕರ ಮಹಾಸ್ವಾಮಿಗಳೂ ಒಬ್ಬರು.

### ಜನನ–ಬಾಲ್ಯ–ವಿದ್ಯಾಭ್ಯಾಸ

ತಿರುಮಕೂಡಲು ನರಸೀಪುರ ತಾಲ್ಲೂಕಿನಲ್ಲಿ 'ಉಕ್ಕಲಗೆರೆ'ಯೊಂದು ಕಿರುಹಳ್ಳಿ. ಸುತ್ತುವರಿದು ಚಿತ್ರರಂಬಡೆದ ಹೊಲಗದ್ದೆಗಳ ಪೈರುಪಚ್ಚೆಯಿಂದ, ರಾರಾಜಿಸುವ ಪ್ರಕೃತಿ ಸೊಬಗಿನ ಸೋನೆಯಿಂದ ಅಟ್ಟಹಾಸಂಬಡೆದು ನಲಿವ ನಂದನವಾಗಿದ್ದ ಕಿರಿ ಗ್ರಾಮವದು. ಊರು ಕಿರಿದಾದರೂ ಹಿರಿಮೆ ಕಿರಿದಲ್ಲ. ಅಲ್ಲಿ 'ಬೆಟ್ಟದ ಮಠ' ವೆಂಬ ಮಠವೊಂದು ಗುರುಲಿಂಗ ಜಂಗಮ ಸೇವಾಧುರೀಣತೆಗೆ ಹೆಸರ್ವಡೆದು ಮೆರೆಯುತ್ತಿತ್ತು. ಲಿಂಗಪ್ಪ, ಲಿಂಗಮ್ಮ ಎಂಬ ದಂಪತಿಗಳ ಭಕ್ತಿ ಜ್ಞಾನ ವೈರಾಗ್ಯ ಸಂಪನ್ನತೆ ಕಾಯಕ ನಿಷ್ಠೆಗಳು ಮಠದ ಕೀರ್ತಿಗೆ ಕಲಶ. ಆ ದಂಪತಿಗಳ ಕಾಯಕನಿಷ್ಠೆ ಆ ಪ್ರಾಂತದಲ್ಲಿ ಮನೆಮಾತು. ಇಂಥವರು ಬಹುದಿನದ ಭಕ್ತಿಜ್ಞಾನವೈರಾಗ್ಯದ ಬಯಕೆಯೇ ಮೂಡಿಬಂದಂತೆ, ದಾಸೋಹಂಭಾವವೇ ಲಿಂಗಗೊಂಡೈತಂದಂತೆ, ಲಿಂಗ ನಿಷ್ಠೆಯೇ ಜನ್ಮತಾಳಿದಂತೆ, ಸತ್ಕ್ರಿಯಾಚಾರವೇ ದೇಹವಿಡಿದೈತಂದಂತೆ ಪುತ್ರರತ್ನ ವೊಂದನು ಪಡೆದರು. ಕೂಸಿನ ಹೆಸರು 'ಶಂಕರ'.

ಸುಂದರವಾದ ತುಂಬುದೇಹ: ಶರತ್ಕಾಲದ ಚಂದ್ರನಿಭ ಮುಖಮಂಡಲ: ತೇಜೋಮಯ ನೇತ್ರದ್ವಯ: ನೋಡಿದವರ ದೃಷ್ಟಿಯನ್ನು ಸೆರೆಗೆಯ್ವ ಅಂಗಾಂಗ

ಗಳು; ಹಡೆದವರೊಡಲು ತೃಪ್ತ್ಯಬ್ಧಿಯ ಆಳದಲ್ಲಿ ಮುಳುಗಿತು. ಪುಣ್ಯದಂಪತಿಗಳ ಭಕ್ತಿ ಜೀವನದ ತೋಳ್ತೆಕ್ಕೆಯಲ್ಲಿ ಶಂಕರ ತೊಳತೊಳಗಿ ನಳನಳಿಸಿ ಕಳೆಯೇರಿ ಕುಡಿವರಿದು ಬೆಳೆದನು. ಮುಗಿಲ ಮರೆಯಲ್ಲಿ ಹೊಳೆಹೊಳೆದು ತೊಳೆದು ಬೆಳಗುವ ತುಂಬಿ ಬಂದ ತುಹಿನಕರನಂತೆ. ಶಂಕರನು, ಸುಬ್ಬಣ್ಣ, ಶಿವಪ್ಪ ಎಂಬೀರ್ವ ಸಹೋದರರನ್ನೂ, ಲಿಂಗಮ್ಮ ಎಂಬ ಸಹೋದರಿಯನ್ನೂ ಪಡೆದಿದ್ದ.

ಶಿವಪ್ರಸಾದದಿಂದಲ್ಲದೆ ಪ್ರತಿಭೆ ಲಭ್ಯವಾಗದು. ಎಂಟುವರ್ಷ ತುಂಬುವುದರೊಳಗಾಗಿ ಶಂಕರನಲ್ಲಿ ಅಂಕುರಪ್ರಾಯವಾಗಿದ್ದ ಶಿವಪ್ರಸಾದಜನ್ಯಪ್ರತಿಭೆ ವಿವಿಧ ಕವಲೊಡೆದು ಆ ಪ್ರಾಂತದ ಭೂಗರ್ಭದಿಂದುದಿಸಿ ಬಂದ ಮಹಾ ವಿಟಪಿಯಂತೆ ವಿರಾಜಿಸುತ್ತಿತ್ತು. ಮಾತಾಪಿತೃಗಳ ಅಳ್ತನಕ್ಕೂ ಅರಿಯದಾಗಿತ್ತು ಆತನ ಅಲೌಕಿಕ ನಡೆನುಡಿ, ವ್ಯಕ್ತಿತ್ವದ ಹಿರಿಮೆ. ಅಲ್ಲದೆ ದೇಹಕ್ಕೆ ಅಮಿತ ಲಕ್ಷಣ ಪ್ರಪೂರ್ಣ ಕಾಂತಿ ಬಂದಿತ್ತು. ಸದಾ ಮೌನಭಾವ, ಯಾವ ಆಟವಾಡುತ್ತಿದ್ದರೂ ಎಲ್ಲೋ ದೃಷ್ಟಿ. ಬಾಲ್ಯದ ಎಂಟೊಂಬತ್ತು ವರ್ಷಗಳು ಉಕ್ಕಲಗೆರೆಯ ಬೆಟ್ಟದಮಠದ ನೈಸರ್ಗಿಕ ಸೌಂದರ್ಯ ಸನ್ನಿವೇಶದ ಮಡಿಲಲ್ಲಿ ಮಾತಾಪಿತೃ ಸಹೋದರ ಸಹೋದರಿಯರ, ನೆರೆಹೊರೆಯ ಜನರ ಕಣ್ಮಣಿಯಾಗಿ ಬೆಳಗುತ್ತಾ ಬೆಳೆದ. ಲೌಕಿಕ ಪಾರಮಾರ್ಥಿಕ ವಿದ್ಯಾಪ್ರಪಂಚದಲ್ಲಿ ಪ್ರವೇಶಿಸುವ ಮನದ ಬಯಕೆ ಬಲಗೊಂಡಿತು. ಆ ತವಕ ಮಾತಾಪಿತೃಗಳ ವಾತ್ಸಲ್ಯ ಬಂಧನದ ಕಟ್ಟನ್ನೂ ಸಡಿಲಗೊಳಿಸಿ ನುಸುಳಲು ತವಕಪಡುತ್ತಿತ್ತು. ಬಾಲ್ಯದಲ್ಲಾಗುವ ಅನಂತ ಲೌಕಿಕ ಅಲೌಕಿಕಾನುಭವಗಳ ಮೂಲಕ್ಕೆ ಮನಸ್ಸು ಹರಿದೋಡುತ್ತಿತ್ತು. ಪ್ರಜ್ಞೆ ಬಲವಾಗುತ್ತ ಬಂತು. ಲೋಕದ ಮಕ್ಕಳ ಸಹಜ ಸ್ಥಿತಿಗತಿಗಳತ್ತ ಮನಸ್ಸು ನಿರಾಸಕ್ತಿಯನ್ನು ವ್ಯಕ್ತಪಡಿಸುತ್ತಿತ್ತು. ಶಿವಸಂಕಲ್ಪ ಶಂಕರನನ್ನು ಮೈಸೂರಿಗೆ ವಿದ್ಯಾಭ್ಯಾಸಕ್ಕೆಂದೆಳತಂದು ನಾಲ್ಕು ವರ್ಷಗಳು ಪ್ರಾಥಮಿಕ ವಿದ್ಯಾಭ್ಯಾಸ ಮೂಡಿಸಿತು. ಉಕ್ಕಲಗೆರೆಯ ಬೆಟ್ಟದ ಮಠದಲ್ಲಿ ಜನ್ಮವೆತ್ತಿದ ಶಿವಲಿಂಗದ ಈ ಕಾರುಣ್ಯ ಶಿಶು, ಚಾಮುಂಡಿಬೆಟ್ಟದ ತಪ್ಪಲಿನಲ್ಲಿ ರಾರಾಜಿಸುವ ಅರಮನೆ ಪಂಚಗವಿ ಮಠದ ವಿರಕ್ತಾಶ್ರಮ ಸ್ವೀಕಾರವನ್ನು ಹನ್ನೆರಡನೆಯ ವಯಸ್ಸಿನಲ್ಲಿಯೇ ಹೊತ್ತುನಿಂತಿತು. ಗೌರೀಶಂಕರದಂತೆ ಬೆಳೆಯಲೆಂಬ ಹಿರಿಯರ ಹೆಬ್ಬಯಕೆಯಿಂದ ಗೌರೀಶಂಕರ ಸ್ವಾಮಿಗಳೆಂಬ ನಾಮಕರಣವನ್ನು ಪೂರ್ವಾಶ್ರಮದ ಶಂಕರರು ತಳೆದು ಅರಮನೆಯ ಪಂಚಗವಿ ಮಠಾಧ್ಯಕ್ಷರಾದರು.

## ಮೈಸೂರಿನಿಂದ ಕಾಶಿಗೆ

೧೮ ನೆಯ ವಯಸ್ಸಿನವರೆಗೆ ಶ್ರೀಗಳವರ ವಿದ್ಯಾಭ್ಯಾಸ ಮೈಸೂರಿನಲ್ಲಿರುವ ಪಾಠಶಾಲೆಗಳಲ್ಲೇ ಮುಂದುವರೆಯಿತು. ಜ್ಞಾನ ವಿಜ್ಞಾನಿಗಳ ಭಂಡಾಗಾರದಂತಿರುವ ಸಂಸ್ಕೃತ ಭಾಷಾಭ್ಯಾಸ ಮಾಡುತ್ತಾ ಶ್ರೀಗಳವರ ಚಿತ್ತ ಅದರ ಸಮಗ್ರ

ಸೌಂದರ್ಯದಲ್ಲಿ ನಿಮಗ್ನಗೊಂಡುಹೋಯಿತು. ಜೊತೆಗೆ ಕನ್ನಡದ ದಿವ್ಯಶಸ್ತ್ರಗಳಾದ ವಚನಗಳು ಮೈಗೂಡಿಕೊಂಡವು. ಪುರಾಣಾದಿ ಮಹಾಕಾವ್ಯಗಳು ಕರತಲಾಮಲಕಗೊಂಡವು. ಸಮಸ್ತ ಶಾಸ್ತ್ರಗಳ ಮೂಲವನ್ನು ಮೈಗೂಡಿಸಿ ಗೌರೀಶಂಕರ ಮಂತೆ ಉನ್ನತಗೊಳ್ಳಬೇಕೆಂಬ ತೀವ್ರತರಾಭಿಲಾಷೆಯು ವಿವಿಧ ವಿಧಿ ವಿಜ್ಞಾನಮಂಟಪದ ಪಿಪಾಸುಗಳನ್ನೆಳಸಿ ಮೈಸೂರಿನ ವಾತಾವರಣವನ್ನೂ, ವಿದ್ಯಾಸಂಸ್ಥೆಗಳನ್ನೂ ಕಿರಿದುಗೊಳಿಸಿತು. ಕಾಶೀಕ್ಷೇತ್ರವೇ ಅವರ ಕಣ್ಮನಗಳನ್ನು ತುಂಬಿ ತುಳುಕಿಸಿತು. ಆದರೇನು? ಕಾಶೀಕ್ಷೇತ್ರಕ್ಕೆ ಹೋಗಿ ವಿದ್ಯಾಭ್ಯಾಸ ಮಾಡುವುದು ಆ ಕಾಲದಲ್ಲಿ ದುರ್ಗಮ, ದುಸ್ತರ. ಆದರೂ ಪ್ರಯತ್ನ ಬಲಗೊಂಡಿತು. ಶ್ರೀಮಠದ ಭಕ್ತಾದಿಗಳೆಲ್ಲರು ಹಲವಾರು ಸಲ ಮನದ ಬಯಕೆಯನ್ನು ತಿಳಿಸಿದರೂ ನಿಷ್ಫಲವಾಯಿತು. ವಿವಿಧ ವಿದ್ಯಾವ್ಯಾಸಂಗ ಚರಿತ ಚಿತ್ರ ಬಿತ್ತರಗೊಂಡು ನಿರ್ಮಲ ಚಿತ್ತದಲ್ಲಿ ಬೆಳೆಯುತ್ತ ಬಂದು. ಪ್ರಸಾದ ಸ್ವೀಕಾರವೂ ಬೇಡವಾಗಿ ಕಾಲಕಳೆಯ ಹತ್ತಿದರು. ಶ್ರೀಗಳವರ ಈ ಪ್ರಬಲವಾದ ಹಂಬಲ ಹಲವಾರು ಜನಗಳ ಮನವನ್ನು ತಲ್ಲಣಗೊಳಿಸಿತು. ಆಗ ಮೈಸೂರಿನ ವೀರಶೈವ ತರುಣ ಮುಖಂಡರಾದ ಶ್ರೀಮಾನ್ ಪಂಚಾಕ್ಷರಯ್ಯನವರು, ಶಾಂತವೀರಪ್ಪನವರು ಮೊದಲಾದವರು ಪ್ರೋತ್ಸಾಹವಿತ್ತು ಶ್ರೀಗಳವರು ಕಾಶಿಗೆ ಹೋಗಲು ತಕ್ಕ ಏರ್ಪಾಟುಗಳನ್ನು ಮಾಡಿದರು. 'ಶ್ರೀ ಸುತ್ತೂರು ಶಿವಾರಾಧ್ಯಮಠ'ದ ಶ್ರೀಗಳು ತಾತ್ಕಾಲೋಚಿತ ಧನಸಹಾಯ ಮಾಡಿದರು. ಅಲ್ಲದೆ ಮೈಸೂರು ಶ್ರೀ ಮನ್ಮಹಾರಾಜರವರೂ ಕೂಡ ಮಾಸಿಕ ವಿದ್ಯಾರ್ಥಿ ವೇತನಕೊಡಲೊಪ್ಪಿ ಕಾಶಿಗೆ ಕಳಿಸಿಕೊಟ್ಟರು. ಆಗ ಶ್ರೀಗಳವರಿಗೆ ಹದಿನೆಂಟು ವರ್ಷ ವಯಸ್ಸು.

## ಕಾಶಿಯಲ್ಲಿ ಗೌರೀಶಂಕರ ಶ್ರೀಗಳು

ಶ್ರೀ ಗೌರೀಶಂಕರ ಸ್ವಾಮಿಗಳು ಕಾಶಿಗೆ ಹೋದ ಕೆಲವೇ ದಿನಗಳಲ್ಲಿ ಮೈಸೂರು ರಾಜಕುಟುಂಬಕ್ಕೆ ಸಂಬಂಧಿಸಿದ ತಾಯಿಯೊಬ್ಬರು ತಮ್ಮ ಜೀವಿತವನ್ನು ಕಾಶಿಯಲ್ಲೇ ಕಳೆದು ಮುಗಿಸುವ ಸತ್ಸಂಕಲ್ಪವನ್ನು ಕೈಗೊಂಡರು. ಅವರ ಆಶ್ರಯವು ಸಿಕ್ಕಿದುದರ ಫಲವಾಗಿ ಶ್ರೀಗಳ ವಿದ್ಯಾಭ್ಯಾಸದ ತಪಸ್ಸು ವರ್ಧಿತವಾಯಿತು. ವೀತರಾಗರೂ, ವೀರಶೈವ ಧರ್ಮದೀಕ್ಷಾ ಬದ್ಧರೂ, ಗುರುಲಿಂಗ ಜಂಗಮ ನಿಷ್ಠಾ ಪರಿಪೂರ್ಣರೂ ಆದ ಆ ತಾಯಿಯವರು ಶ್ರೀಗಳವರನ್ನು ಗುರುವಾಗಿ ಸ್ವೀಕರಿಸಿದರು.

ಶ್ರೀಗಳವರಿಗೆ ಎಷ್ಟು ಶಾಸ್ತ್ರಗಳು, ದರ್ಶನಗಳು, ಭಾಷೆಗಳು. ಮೈಗೂಡಿದವು? ಈ ಪ್ರಶ್ನೆಗೆ ಉತ್ತರ ಹೇಳುವುದೇ ಸುಲಭವಲ್ಲದಷ್ಟು ವಿದ್ಯಾಶ್ರೀ ಅವರನ್ನು ಆಶ್ರಯಿಸಿತು. ತರ್ಕವ್ಯಾಕರಣಾದಿ ಆರು ಆಚಾರ್ಯ ಪರೀಕ್ಷೆಗಳಲ್ಲಿ ಉತ್ತಮ ದರ್ಜೆಯಲ್ಲಿ ತೇರ್ಗಡೆಹೊಂದಿ ಅನೇಕ ಸುವರ್ಣಪದಕಗಳನ್ನು ಪಡೆದರು. ಆಂಗ್ಲಭಾಷೆಯಲ್ಲಿ

ಎಂ. ಎ. ಪದವೀಧರರಾದರು. ಹಿಂದಿಯ ಉನ್ನತ ಮಟ್ಟದ ಪರೀಕ್ಷೆಯಲ್ಲಿ ಉತ್ತಮ ದರ್ಜೆಯಲ್ಲಿ ತೇರ್ಗಡೆ ಹೊಂದಿದರು. ತೆಲುಗು, ಉರ್ದು, ಪಾರಸಿ, ಬಂಗಾಳಿ, ಗುಜರಾತಿ, ಪಾಳಿ, ಪ್ರಾಕೃತ, ಫ್ರೆಂಚ್ ಮೊದಲಾದ ದೇಶವಿದೇಶಗಳ ಭಾಷೆಯ ಮೇಲೂ ಪ್ರಭುತ್ವ ಸಂಪಾದಿಸಿದರು. ತಾಯ್ನಾಡ ಭಾಷೆಯಾದ ಕನ್ನಡವಂತೂ ಹರಿಹರ ಷಡಕ್ಷರಿ ಕವಿಗಳ ಮಟ್ಟದಲ್ಲಿ ಶ್ರೀಗಳವರಲ್ಲಿ ಅಳವಟ್ಟಿತ್ತೆಂದು ನನ್ನ ಭಾವನೆ. ಅದರ ಪರಿಚಯವನ್ನು ಮುಂದೆ ಶಕ್ತ್ಯಾನುಸಾರ ಮಾಡುವೆನು. ಇಷ್ಟೆಲ್ಲ ಭಾಷೆಗಳ ಮೇಲೆ ಪ್ರಭುತ್ವ ಪಡೆಯುವುದಕ್ಕೆ ಅನೇಕ ಜನ್ಮಗಳ ಸಂಸ್ಕಾರವೂ, ಶಿವಕಾರುಣ್ಯವೂ ಕಾರಣಗಳಲ್ಲದೆ ಮಾನವ ಸಹಜ ಸಾಮಾನ್ಯ ಪ್ರತಿಭೆ ಸಾಲದು. ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ (ವೀರಶೈವ)ದರ್ಶನಗಳಲ್ಲೂ ಪಾಶುಪಾತ, ಲಾಕುಳ ಕಾಳಾಮುಖ ಮೊದಲಾದ ಶೈವ ಸಿದ್ಧಾಂತಗಳಲ್ಲೂ, ಬೌದ್ಧ, ಜೈನ, ಇಸ್ಲಾಂ, ಕ್ರಿಶ್ಚಿಯನ್ ದರ್ಶನಗಳಲ್ಲೂ ಶ್ರೀಗಳವರಿಗೆ ಅಪಾರ ಪಾಂಡಿತ್ಯವಿತ್ತು. ಇಷ್ಟೆಲ್ಲಾ ಸಂಪತ್ತನ್ನು ಮೈಗೂಡಿಸಿಕೊಳ್ಳಲು ಒಂದು ಜೀವಿತ ಕಾಲವು ಎಳ್ಳಷ್ಟೂ ಸಾಲದು.

ಇನಿತೊಂದು ಬಹುಮುಖ ವಿದ್ವತ್ತನ್ನು ಸಂಪಾದಿಸಿದ ಶ್ರೀಗಳವರನ್ನು ಕಾಶಿಯ ವಿದ್ವತ್ಪ್ರಪಂಚ ಅನೇಕ ಸಂಘ ಸಂಸ್ಥೆಗಳಿಗೆ ಬರಮಾಡಿಕೊಂಡು ಹಿಂದಿ, ಸಂಸ್ಕೃತ, ಆಂಗ್ಲ, ಬಂಗಾಳಿ ಭಾಷೆಗಳಲ್ಲಿ ದರ್ಶನ, ಕಲೆ, ಸಾಹಿತ್ಯ, ರಾಜಕೀಯ ಮೊದಲಾದ ವಿಷಯಗಳನ್ನು ಕುರಿತು ಉಪನ್ಯಾಸ ಮಾಡಿಸಿ ಸಂತೋಷಪಟ್ಟು ಬೆರಗಾಗಿ ಹೋಗಿದ್ದಾರೆ. ಯಾವ ಉಪನ್ಯಾಸವೇ ಆಗಲಿ ಪೂರ್ವಸಿದ್ಧತೆ ಮಾಡಿಕೊಳ್ಳುವ ಅವಶ್ಯಕತೆ ಶ್ರೀಗಳವರಿಗೆ ಇರಲಿಲ್ಲ. ಸಮಂಜಸವೂ, ಅನವದ್ಯವೂ, ಸರ್ವತೋಮುಖವೂ ಆಗುವಂತೆ ಉಪನ್ಯಾಸ ಮಾಡಬೇಕಾದ ವಿಷಯದಲ್ಲಿ ಶಾಸ್ತ್ರಸಮ್ಮತ ವಿಷಯಗಳ ಸುರಿಮಳೆಯನ್ನು ಅನೇಕ ಚಿಕ್ಕ ಚಿಕ್ಕ ದೃಷ್ಟಾಂತಗಳ ಮೂಲಕ ಸುಂದರವಾಗಿ ನಿರೂಪಣೆ ಮಾಡುವ ಮಹಾಶಕ್ತಿ ಶ್ರೀಗಳವರಿಗಳವಟ್ಟಿತ್ತು. ಮಹಾಮಹಾ ವಿದ್ವಾಂಸರ ತಲೆಗೆ ಭಾರವಾಗಬಲ್ಲ ವಿಷಯಗಳನ್ನೂ ಕೂಡ ಸಾಮಾನ್ಯ ಗ್ರಾಹ್ಯಗಳಾಗುವಂತೆ ತಿಳಿದು ಹೇಳಬಲ್ಲ ಜಾಣ್ಮೆ ಅಪರಮ. ಹಲವಾರು ದರ್ಶನಗಳ, ಶಾಸ್ತ್ರಗಳ, ಭಾಷೆಗಳ, ಸಾಹಿತ್ಯಗಳ ಪೂರ್ಣ ಪರಿಚಯವಿದ್ದ ಶ್ರೀಗಳವರ ಸಮನ್ವಯ ದೃಷ್ಟಿಯಂತೂ ಶ್ಲಾಘನೀಯವಾದುದಾಗಿತ್ತು. ರಾಜಕೀಯ ಮೂಲ ಸಿದ್ಧಾಂತಗಳನ್ನು ಚೆನ್ನಾಗಿ ಅರಿತಿದ್ದ ಶ್ರೀಗಳವರು ಭರತವರ್ಷದ ಸ್ವಾತಂತ್ರ್ಯ ಸಂಗ್ರಾಮದಲ್ಲೂ ಧುಮುಕಿ ಉತ್ತರ ಹಿಂದೂಸ್ಥಾನದ ಬಹುಭಾಗದಲ್ಲಿ ಜನತೆಯನ್ನು ಎಚ್ಚರಿಸಿದ್ದರು. ಆಗಿನ ಮುಖಂಡರುಗಳಾಗಿದ್ದ ಶ್ರೀ ಪ್ರಕಾಶ್, ರಾಜಾಜಿ, ರಾಜೇಂದ್ರಪ್ರಸಾದ್, ಆಚಾರ್ಯ ಕೃಪಲಾನಿಯವರು ಶ್ರೀಗಳವರ ನೆರವನ್ನು ಬಹುಮಟ್ಟಿಗೆ ಪಡೆದು ಸ್ನೇಹ ಸಂಪಾದಿಸಿದ್ದರು. ಮಹಾತ್ಮ ಗಾಂಧಿಯವರಂತೂ ಶ್ರೀಗಳವರ ಅಪಾರ ವಿದ್ವತ್ಪೂರ್ಣ ಅಭಿಪ್ರಾಯಗಳಿಗೆ ಮಾರುಹೋಗಿ ಆತ್ಮೀಯತೆ ಬೆಳೆಸಿಕೊಂಡಿದ್ದರು.

ಕೀರ್ತಿಯುತರೂ, ವಿದ್ವಾಂಸರೂ, ನಿಯಮನಿಷ್ಠರೂ, ಶರಣತತ್ತ್ವಾರಾಧಕರೂ, ಬಹುಭಾಷಾಪಾರಂಗರೂ ಆದ ಶ್ರೀಗಳವರನ್ನು ಬನಾರಸ್ ವಿಶ್ವವಿದ್ಯಾಲಯವು ಪ್ರೊಫೆಸರ್ ಆಗಿ ಕೆಲಸ ಮಾಡಬೇಕೆಂದು ಪ್ರಾರ್ಥಿಸಿಕೊಂಡಿತು. ಪ್ರೊಫೆಸರ್ ಹುದ್ದೆಯು ಇವರ ವಿದ್ವತ್ತಿಗೆ ತೀರಾ ಚಿಕ್ಕದಾದರೂ ಶ್ರೀಗಳವರು ವಿಶ್ವವಿದ್ಯಾಲಯದವರ ಪ್ರಾರ್ಥನೆಗೆ ಬೆಲೆ ಕೊಟ್ಟಿದ್ದಲ್ಲದೆ, ವಿದ್ಯಾರ್ಥಿಗಳ ಹಿತಚಿಂತನಾದೃಷ್ಟಿಯನ್ನು ನೆನೆದು ಯಾವ ವೇತನವನ್ನೂ ಪಡೆಯದೆ ಕ್ಲುಪ್ತಕಾಲದಲ್ಲಿ ವಿಶ್ವವಿದ್ಯಾಲಯದಲ್ಲಿ ಉಪನ್ಯಾಸ ಮಾಡಿ ಸಹಸ್ರಾರು ವಿದ್ಯಾರ್ಥಿಗಳ ಮನೋವೇದಿಕೆಯ ಮೇಲೆ ಜ್ಞಾನದ ರನ್ನದೆಳಗನ್ನು ಹಚ್ಚಿಟ್ಟರೆಂದರೆ ತಪ್ಪಲ್ಲ.

## ಕಾಶಿಯಲ್ಲಿ ಶ್ರೀಗಳವರ ದಿನಚರಿ

ಅನುಕೂಲ್ಯಗಳೆಲ್ಲ ಕೈಸಾರಿದಾಗ ಆಲಸ್ಯದ ಸುಳಿಯುವಿಕೆಗೆ ಅವಕಾಶವಿರುವುದು ಲೋಕಸಾಮಾನ್ಯ. ಇದಕ್ಕೆ ಅಪವಾದವಾಗಿತ್ತು ಶ್ರೀಗಳವರ ಚರ್ಯೆ. ತಮ್ಮ ಕರ್ತವ್ಯಗಳನ್ನು ತಾವೇ ಮಾಡಿಮುಗಿಸುವಲ್ಲಿನ ತೃಪ್ತಿ ಆಳುಗಳಿಂದ ಮಾಡಿಸುವಲ್ಲಿ ಅವರಿಗಿರಲಿಲ್ಲ. 'ವಿರಾಮ' ಶಬ್ದಕ್ಕೆ, ಒಂದು ಕಾರ್ಯ ಮುಗಿಸಿ ಇನ್ನೊಂದು ಕಾರ್ಯ ಮಾಡುವುದೊಂದೇ ಅವರ ಭಾಷ್ಯ. ಮನೆಯ ಎಷ್ಟೋ ಕೆಲಸಗಳನ್ನು ಸ್ವತಃ ಕೈಮುಟ್ಟಿ ಮಾಡುತ್ತಿದ್ದರು. ಲಿಂಗಪೂಜಾ ನಿಷ್ಠೆ, ಆಚಾರ ಪರಿಪಾಲನೆಗೆ ಎಂದೂ ಭಂಗವನ್ನು ತಂದುಕೊಂಡವರಲ್ಲ. ಪ್ರತಿದಿನವೂ ಬೆಳಗಿನ ನಾಲ್ಕು ಘಂಟೆಗೆ ತಪ್ಪದೆ ಏಳುವುದು, ಅರ್ಧ ಘಂಟೆ ಗುರುಲಿಂಗಜಂಗಮಪ್ರಾರ್ಥನಾಪಠಣ. ಅನಂತರ ಶರಣವಚನ ಸಮಾಲೋಚನೆ, ಮುಖ್ಯವಾಗಿ ಪ್ರಭುದೇವರ ವಚನ ತತ್ತ್ವಾಲೋಕ ಮತ್ತು ಚಿಂತನ. ತದನಂತರದಲ್ಲಿ ಗಂಗಾನದಿಗೆ ಹೋಗಿ ಮನದಣೀ ಈಸಿ ಬೆಳಕು ಹರಿಯುವದರೊಳಗಾಗಿ ಮನೆಗೆ ಬಂದು ಲಿಂಗಪೂಜೆಯಲ್ಲಿ ಮಗ್ನರಾಗುವುದು. ಶ್ರೀಗಳವರ ಲಿಂಗಪೂಜೆ ಮುಗಿಯುವುದರೊಳಗಾಗಿ ತಾಯಿಯವರ ಸ್ನಾನ ಪೂಜಾದಿಗಳು ಮುಗಿಯುತ್ತಿದ್ದವು. ತೀರ್ಥ ಪ್ರಸಾದಗಳನ್ನು ತಾಯಿಯವರಿಗಿತ್ತು ತಾವೂ ಮುಗಿಸಿ ಜಂಗಮವಾಡಿಮಠದಲ್ಲಿ ಸಂಸ್ಕೃತ ಪ್ರೌಢಗ್ರಂಥಗಳ ಪಾಠಪ್ರವಚನ ಮಾಡುತ್ತಿದ್ದರು. ಇದಾದ ಮೇಲೆ ವಿಶ್ವವಿದ್ಯಾಲಯದಲ್ಲಿ ಉಪನ್ಯಾಸವಿದ್ದರೆ ಅಲ್ಲಿಗೆ ಹೋಗುವುದು, ಇಲ್ಲವಾದರೆ ಮನೆಯಲ್ಲಿ ಹಲವಾರು ದರ್ಶನಗಳ ಮೂಲತತ್ತ್ವಗಳ ವಿಚಾರವಾಗಿ ಸಂಶೋಧನೆಯಲ್ಲಿ ತೊಡಗುವುದು, ಅದೂ ಸಾಕಾದಾಗ ವಚನ ಶಾಸ್ತ್ರಗಳ ಅನುಭವಗಳನ್ನೂ, ಘನತೆಗೌರವಗಳನ್ನೂ ಅವು ಮೂಡಿಬಂದ ಬಗೆಯಲ್ಲಿ ಕಂಡುಬರುವ ಸಮನ್ವಯ ದೃಷ್ಟಿಯನ್ನೂ ಕಂಡುಕೊಳ್ಳುವುದು. ಕನ್ನಡ ಭಾಷೆಯನ್ನಾಶ್ರಯಿಸಿ ದರ್ಶನಗಳು ಹುಟ್ಟಿರುವುದು ವಚನಗಳ ರೂಪದಲ್ಲಿ. ವೀರಶೈವದ ದರ್ಶನಗ್ರಂಥಗಳಾದ ವಚನಶಾಸ್ತ್ರಗಳಿಗೆ ವಚನಕಾರರ ಅಭಿಪ್ರಾಯಕ್ಕನುಗುಣವಾಗಿ ಅರ್ಥಮಾಡುವುದೇನು ಸುಲಭವಲ್ಲ. ಅವು ಆಳವಾದ ಅರ್ಥಪುಷ್ಟಿಯಿಂದ ಕೂಡಿವೆ. ಪ್ರಭುದೇವರ

ವಚನಗಳಷ್ಟು ಗಾಢವೂ ಗೂಢವೂ ಆದ ಅರ್ಥಬಾಹುಳ್ಯ ಬಹುಶಃ ಇನ್ನಾವ ವಚನಗಳಿಗೂ ಇರುವುದಿಲ್ಲ. ಇವುಗಳ ಅರ್ಥದಲ್ಲಿ ಹಲವಾರು ಧರ್ಮಗಳ ತಳಹದಿಯಿದೆ. ಆ ವಚನಗಳಿಗೆಲ್ಲಾ ಅರ್ಥವನ್ನು ಹಲವಾರು ದರ್ಶನಗಳ ಆಧಾರವಿತ್ತು ವಿವರಿಸುತ್ತಿದ್ದರು. ಸಭೆ ಮಂತ್ರಮುಗ್ಧವಾಗುವಷ್ಟು ವಿವರಣೆಯಿರುತ್ತಿತ್ತು. ಪ್ರಭುದೇವರ ವಚನಗಳಿಗೆ ಇಷ್ಟೊಂದು ಅರ್ಥ ವ್ಯಾಪ್ತಿಯಿದೆಯೆ ? ವಚನ ಶಾಸ್ತ್ರ ಇಷ್ಟೊಂದು ಸತ್ತ್ವಪೂರ್ಣ ಫಲವೇ ? ಎನ್ನಿಸುತ್ತಿತ್ತು ಶ್ರೋತೃಗಳಿಗೆ.

## ಕಾಶಿಯಿಂದ ಮೈಸೂರಿಗೈತಂದ ಗೌರೀಶಂಕರಗಿರಿ

ಅವ್ಯಾಹತವಾಗಿ ಕಾಶಿಯಲ್ಲಿ ಮೂವತ್ತಮೂರು ವರ್ಷಗಳು ವಿದ್ಯಾಸಾಧನೆ ಮಾಡಿ, ಹಲವಾರು ಉತ್ತುಂಗ ಶೃಂಗಗಳಿಂದ ಬೆಳೆದುನಿಂತ ಗೌರೀಶಂಕರಶಿಖರದಂತೆ ಬೆಳೆದ ಗೌರೀಶಂಕರ ಸ್ವಾಮಿಗಳವರು ತಾಯ್ನಾಡಿಗೆ ಹಿಂತಿರುಗುವ ಅಭಿಪ್ರಾಯವನ್ನು ತಾಯಿಯವರಲ್ಲಿ ವ್ಯಕ್ತಪಡಿಸಿದರು. ಯಾರು ತಾಯಿಯಂತೆ ಮೂವತ್ತು ವರ್ಷಗಳು ಸಮಸ್ತ ಸೌಲಭ್ಯ ಸನ್ನಿವೇಶಗಳನ್ನೊದಗಿಸಿ ಅದ್ವಿತೀಯ ಪಾಂಡಿತ್ಯ ಪ್ರಕಾಂಡರನ್ನಾಗಿ ಮಾಡಲು ಕಾರಣೀಭೂತರಾಗಿದ್ದರೊ, ಆ ತಾಯಿಯವರು ಶ್ರೀಗಳವರಿಗೆ "ಮಹಾಗುರುವೇ, ನಿಮ್ಮನ್ನು ಗುರುವಾಗಿ ಮತ್ತು ಮಗುವಾಗಿ ಸ್ವೀಕರಿಸಿ ಭಯ ಭಕ್ತಿಯಿಂದಲೂ ವಾತ್ಸಲ್ಯ ಹೃದಯದಿಂದಲೂ ಇದುವರೆಗೆ ನೋಡಿದ್ದೇನೆ. ನನಗೂ ಪೂರ್ಣ ವಯಸ್ಸಾಗುತ್ತ ಬಂದಿದೆ. ನನ್ನ ಲಿಂಗೈಕ್ಯಾನಂತರ ಸಮಾಧಿಕ್ರಿಯೆಗಳನ್ನೆಲ್ಲ ಪೂರ್ಣಗೊಳಿಸಿ ನನಗೆ ಸದ್ಗತಿಯಾಗುವಂತೆ ಹರಸಿ, ಮೈಸೂರು ಅರಮನೆ ಪಂಚಗವಿ ಮಠಕ್ಕೆ ತೆರಳಬೇಕೆಂದು ಬೇಡುತ್ತೇನೆ" ಎಂದು ಕೇಳಿಕೊಂಡರು. ಈ ಮಾತು ಶ್ರೀಗಳವರನ್ನು ತಾಯ್ನಾಡಿಗೆ ಬರುವಂತೆ ಬಿಡಲಿಲ್ಲ. ಮತ್ತೆ ಕೆಲವು ದಿನಗಳು ಕಾಶಿಯಲ್ಲೇ ಇರಬೇಕಾಯಿತು. ಕೆಲವಾರು ದಿನಗಳ ನಂತರ ತಾಯಿಯವರು ಲಿಂಗೈಕ್ಯರಾಗಲು ಅವರ ಔರ್ಧ್ವದೈಹಿಕ ಕ್ರಿಯೆಗಳನ್ನೆಲ್ಲಾ ಮುಗಿಸಿದರು. ಇನ್ನು ಶ್ರೀಗಳವರ ಆಶೆ [illegible] "ತಾಯ್ನಾಡಿಗೆ ಮರಳಬೇಕು; ಅರಮನೆ ಪಂಚಗವಿ ಮಠವನ್ನು ಮಹಾಮನೆ ಮಾಡಬೇಕು. ಕಲ್ಯಾಣದ ಶರಣರ ತತ್ತ್ವಪ್ರಸಾರ ಕೇಂದ್ರವಾಗಿರಬೇಕು ಆ ಮಠ" ಎಂಬುದು. ಕಾಶಿಯಲ್ಲಿ ಶ್ರೀಗಳವರು ತಮ್ಮದೇ ಆದ ಹಲವಾರು ಭಾಷೆಯ ಮಹತ್ವಪೂರ್ಣ ಗ್ರಂಥಗಳನ್ನುಳ್ಳ ದೊಡ್ಡ ಲೈಬ್ರರಿ (ವಾ ಚ ನಾ ಲ ಯ) ಮಾಡಿಟ್ಟುಕೊಂಡಿದ್ದರು. ಬರುವಾಗ ಅವುಗಳಲ್ಲಿ ಸಾವಿರಾರು ಗ್ರಂಥಗಳನ್ನೂ ಕೆಲವು ಬೀರುಗಳನ್ನೂ ಅಲ್ಲಿನ ವಿದ್ಯಾರ್ಥಿಗಳಿಗೆಲ್ಲಾ ದಾನಮಾಡಿಬಿಟ್ಟರು. ಸಹಜ ವೈರಾಗ್ಯಶಾಲಿಗಳಿಗೆ ಆಶೆಯೆಂಬುದುಂಟೆ ? ಅವನ್ನೆಲ್ಲಾ ಮೈಸೂರಿಗೆ ಸಾಗಿಸುವುದೇನೂ ಕಷ್ಟವಾಗುತ್ತಿರಲಿಲ್ಲ.

[illegible] ನೆಯ ಇಸವಿ ಏಪ್ರಿಲ್ ತಿಂಗಳಿನಲ್ಲಿ ಕಾಶಿಯ ಸರ್ವವಿದ್ಯಾಸಂಪತ್ತು ಪಿರೀಭವಿಸಿ ಮೈವೆತ್ತು ಬಂದಂತೆ ಉತ್ತರದ ಉನ್ನತ ಗೌರೀಶಂಕರಗಿರಿಯೇ ನಡೆದು

ಕರ್ನಾಟಕದಲ್ಲಿ ನೆಲೆಸಲು ಬಂದಂತೆ ಭಾರತದ ಪ್ರಸಿದ್ಧ ನಗರವಾದ ಬೆಂಗಳೂರಿಗೆ ಗೌರೀಶಂಕರ ಸ್ವಾಮಿಗಳವರು ಐವತ್ತೊಂದರ ವಯಸ್ಸಾಗಿದ್ದರೂ, ನೂತನ ತಾರುಣ್ಯ ಇಪ್ಪತ್ತೈದರ ಹರೆಯದ ಪರಿಪುಷ್ಟವಾದ ದೇಹಧರಿಸಿ, ಬಂದಿಳಿದರು. ಬೆಂಗಳೂರಿನ ಸಮಸ್ತ ಭಕ್ತ ಮಂಡಳಿಯವರು ಅಭೂತ ಪೂರ್ವ ಸ್ವಾಗತ ಬಯಸಿದರು. ಜಗದ್ಗುರು ಸುತ್ತೂರು ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರು ಶ್ರೀಗಳವರ ದರ್ಶನಾಶೀರ್ವಾದ ಪಡೆದು, ಅವರ ವೈರಾಗ್ಯ ಜೀವನಕ್ಕೂ ಲಿಂಗನಿಷ್ಠಾಗರಿಷ್ಠತೆಗೂ ತಕ್ಕ ಹಾಗೆ ನಿವಾಸಾದಿಗಳ ಏರ್ಪಾಡುಗೊಳಿಸಿ ಸದಾ ಅವರ ಬಳಿಯಲ್ಲೇ ಇದ್ದರು. ಶ್ರೀ ಮನ್ನಿರಂಜನಪ್ರ॥ ಸ್ವಾ॥ ಶ್ರೀ ಸಿದ್ಧಗಂಗಾ ಶಿವಯೋಗೀಶ್ವರರೂ, ಬೆಂಗಳೂರಿಗೆ ಬಂದು ಶ್ರೀಗಳವರ ದರ್ಶನಾಶೀರ್ವಾದಲಾಭ ಪಡೆದರು. ಹಲವಾರು ದಿನಗಳು ಬೆಂಗಳೂರಿನ ಸಂಘಸಂಸ್ಥೆಗಳಲ್ಲಿ ಅಭೂತಪೂರ್ವ ಉಪನ್ಯಾಸಗಳನ್ನು ಸಂಸ್ಕೃತ, ಆಂಗ್ಲ ಕರ್ನಾಟಕ ಭಾಷೆಗಳಲ್ಲಿತ್ತು ಶ್ರೋತೃಗಳ ಹೃದಯದಲ್ಲಿ ಮಂಗಲವಾದ ಬೆಳಕನ್ನು ಉಂಟುಮಾಡಿದರು. ಶಾಂತ ಗಂಭೀರವೂ, ಪವಿತ್ರವೂ, ಶುದ್ಧವೂ ಆದ ಅವರ ಭಾಷಣದ ವಿಚಾರಧಾರೆಯಿಂದ ಎಷ್ಟೋ ಹೃದಯಗಳು ಪವಿತ್ರವಾದವು. ಶ್ರೀಗಳವರ ಉಪನ್ಯಾಸದಲ್ಲಿ ದಿನ ದಿನವೂ ಹೊಸ ವಿಷಯ, ಹೊಸ ಹೊಸ ವಿಚಾರಧಾರೆ. ಅಕ್ಕನ ಬಳಗ, ಸಂಸ್ಕೃತ ಮಹಾ ಪಾಠಶಾಲೆ, ಸಾಹಿತ್ಯ ಪರಿಷತ್ತು . . ಒಂದಲ್ಲ ಎರಡಲ್ಲ ಹಲವಾರು ಕಡೆಗಳಲ್ಲಿ ಶ್ರೀಗಳವರ ಉಪನ್ಯಾಸ ಕಾರ್ಯಕ್ರಮ ಲಕ್ಷಾಂತರ ಹೃದಯಗಳನ್ನು ಸೂರೆಗೊಳಿಸಿತು. ಹೀಗೆ ಉಪನ್ಯಾಸೇನ, ದರ್ಶನಾಶೀರ್ವಾದಗಳಿಂದ ಬೆಂಗಳೂರಿನ ಜನಮನವನ್ನು ತಣಿಸಿ ಶ್ರೀಗಳವರು ಮೈಸೂರಿನ ಭಕ್ತವೃಂದದ ಕಾತರಪೂರ್ಣದೃಷ್ಟಿಯತ್ತ ಕೃಪೆದೆರೆದು ದಯಮಾಡಿಸಿದರು.

ಕಾಶಿಗೆ ಶ್ರೀಗಳವರು ವಿದ್ಯಾಭ್ಯಾಸಕ್ಕೆ ದಯಮಾಡಿಸಿದ ಮೇಲೆ ಅರಮನೆ ಪಂಚಗವೀ ಮಠವು ಶಿಥಿಲಗೊಂಡಿತ್ತು. ಶ್ರೀಗಳು ಕಾಶಿಯಿಂದ ಮಠಕ್ಕೆ ದಯಮಾಡಿಸುವರೆಂಬ ವರ್ತಮಾನ ತಿಳಿದ ಕೂಡಲೇ ಪುಣ್ಯಶ್ಲೋಕರೂ, ಅಳಿದ ಮಹಾಸ್ವಾಮಿಯವರೂ ಆದ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್‌ರವರ ಧರ್ಮಪತ್ನಿಯವರೂ, ಗುರುಲಿಂಗ ಜಂಗಮ ಸೇವಾಧುರೀಣರೂ ಆಗಿದ್ದ ಮಹಾರಾಣಿ ಮಾತೃಶ್ರೀ ಪ್ರತಾಪ ಕುಮಾರಿದೇವಿಯವರು ಸಾವಿರಾರು ರೂಪಾಯಿಗಳ ಮೊತ್ತದಲ್ಲಿ ಮಠದ ಪುನರುತ್ಥಾನಗೊಳಿಸಿದ್ದರು. ಶ್ರೀಗಳವರ ಬರುವಿಕೆಯನ್ನೇ ತಾಯಿಯವರು ಎದುರು ನೋಡುತ್ತಿದ್ದರು. ಮೈಸೂರಿಗೆ ಶ್ರೀಗಳು ೧೯೪೭ನೆಯ ಚೈತ್ರ ಬಹುಳದಲ್ಲಿ ಆಗಮಿಸಿದರು. ಸಕಲವೈಭವದಿಂದ ಮೈಸೂರು ಭಕ್ತವೃಂದ ಶ್ರೀಗಳವರನ್ನೆದುರುಗೊಂಡಿತು. ಮೈಸೂರಿನಲ್ಲೂ ಎಂದಿನಂತೆ ಉಪನ್ಯಾಸಗಳ ಸುರಿಮಳೆ.

ಶ್ರೀಗಳವರ ಉಪನ್ಯಾಸ ವೈಶಿಷ್ಟ್ಯವೆಂದರೆ ಎಲ್ಲರಿಗೂ ಅರ್ಥವಾಗುವ ಸುಲಭವೂ ಸರಳವೂ ಆದ ಭಾಷೆ ನೂರಾರು ಸುಂದರವಾದ ಲೌಕಿಕೋಪಮಾನಗಳು,

ರಾಮಕೃಷ್ಣ ಪರಮಹಂಸ, ವಿವೇಕಾನಂದರಂತೆ ಸಣ್ಣ ಸಣ್ಣ ಕಥೆಗಳ ದೃಷ್ಟಾಂತಗಳಿಂದ ಬೇಗಿ ಬಳುಕುವ ಪೂರ್ಣ ಶೈಲಿ. ಕಿರಿದರೊಳು ಪಿರಿದುಮರ್ಥವ ತೋರಿಪ ವಾಕ್ಸಾಮರ್ಥ್ಯ, ಸಾಸಿವೆಯಲ್ಲಿ ಸಾಗರವನ್ನೇ ತುಂಬಿದಂತೆ. ನಕ್ಕುನಗಿಸುವ ನುಡಿಯು ಜೆಡಗಿನ ಮಧ್ಯೆ ನೇರವಾಗಿ ಹೃದಯಕ್ಕಿಳಿಯುವ ಭಾವಪೂರ್ಣ ವಚನ ರಚನೆ, ಸಭೆಯಲ್ಲಿ ಕುಳಿತವನು ವಿದ್ವಾಂಸನಾಗಿರಲಿ, ಏನನ್ನೂ ಓದದವನಾಗಿರಲಿ, ಎಲ್ಲರ ಮನಸ್ಸಿನ ಮೇಲೂ ಒಂದಿಲ್ಲೊಂದು ಸತ್ಪರಿಣಾಮವನ್ನುಂಟುಮಾಡುತ್ತಿತ್ತು. ಬೇಕೆಂದು ಸ್ವಾಮಿಗಳವರು ಯಾರಿಗೂ ಅರ್ಥವಾಗದ ತಾರ್ಕಿಕ ಶೈಲಿಯ ಪ್ರಬುದ್ಧ ಭಾಷೆಯಿಂದಲೂ ಉಪನ್ಯಾಸ ಮಾಡಿ ನಕ್ಕುಬಿಡುತ್ತಿದ್ದರು. ಒಮ್ಮೆ ವಾಣೀವಿಲಾಸ ರಸ್ತೆಯಲ್ಲಿರುವ ಕ್ಯಾತನಹಳ್ಳಿ ಸಾಹುಕಾರ ಸಿದ್ಧಲಿಂಗಪ್ಪನವರ ಸಂಸ್ಕೃತ ಪಾಠಶಾಲೆಯ ವಾರ್ಷಿಕ ಸಮಾರಂಭೋತ್ಸವವೊಂದರಲ್ಲಿ ಶ್ರೀಗಳವರು ಸಂಸ್ಕೃತದಲ್ಲೇ ಮಾತನಾಡಬೇಕೆಂದು ನಿರ್ಧಾರವಾಯಿತು. ಶ್ರೀಗಳವರು ಬೇಡವೆಂದಪ್ಪಣೆ ಮಾಡಿದರೂ ಜನ ಕೇಳಲಿಲ್ಲ. ಉಪನ್ಯಾಸ ಪ್ರಾರಂಭವಾಯಿತು. ಬೇಕೆಂತಲೇ ಸ್ವಾಮಿಗಳವರು ನಗುತ್ತ ದಾರ್ಶನಿಕ ಶೈಲಿಯ ಕಠಿಣ ಕಠಿಣತರ ಶಬ್ದ ಪ್ರಯೋಗ ಜಾಲದ ಸುರಿಮಳೆಯನ್ನು ಧಾರಾಕಾರವಾಗಿ ಸುರಿಸತೊಡಗಿದರು. ಸಂಸ್ಕೃತ ಭಾಷೆಯ ಮೇಲೆ ತಾರ್ಕಿಕ ಶೈಲಿಯಲ್ಲಿ ಶ್ರೀಗಳವರ ಅಧಿಕಾರ ಮುದ್ರಾಪ್ರಭಾವ ಎದ್ದು ಕಾಣುತ್ತಿತ್ತಲ್ಲದೆ ಶ್ರೋತೃವೃಂದ ಕಣ್‌ಕಣ್ ಬಿಡುವಂತಾಗಿತ್ತು. ಮೈಸೂರಿನ ಮಹಾ ಮಹಾ ವಿದ್ವಾಂಸರೆಲ್ಲ ಅಂದಿನ ಸಭೆಗೆ ಆಗಮಿಸಿ ಮಂತ್ರಮುಗ್ಧರಾದರು. ಉಪನ್ಯಾಸ ಮುಗಿದ ಮೇಲೆ ಶ್ರೀಗಳವರು ಗಟ್ಟಿಯಾಗಿ ನಕ್ಕು "ಯಾರಿಗೆ ಏನೇನು ಅರ್ಥವಾಯಿತು ಹೇಳಿ?" ಎಂದರು. ಎಲ್ಲರೂ ಸುಮ್ಮನಾದರು. ಹಲಕೆಲವು ವಿದ್ವಾಂಸರು ಮಾತ್ರ ಏನನ್ನೂ ಹೇಳಲರಿಯದೆ "ಬಹಳ ಚೆನ್ನಾಗಿತ್ತು" ಎನ್ನುವುದರಲ್ಲೇ ತೃಪ್ತರಾಗಬೇಕಾಯಿತು. ಶ್ರೀಗಳವರಲ್ಲಿ ಹುದುಗಿದ್ದ ಶಾಸ್ತ್ರ ಸಂಪತ್ತಿನ ಕಾವ್ಯಕಲಾಪರಿಣತಮತಿಯು, ಲಿಂಗತಪಸ್ಸಿನ ಪ್ರಭಾವವು, ವೈರಾಗ್ಯದ ಪರಾಕಾಷ್ಠ ಭಾವದ ನದಿಗೆ ಮಾರುಹೋದ ಕರ್ನಾಟಕ ಜನತೆ ತಮ್ಮ ಊರಿಗೆ ದಯಮಾಡಿಸಬೇಕು, ತಮ್ಮ ಊರಿಗೆ ದಯಮಾಡಿಸಬೇಕೆಂದು ಒತ್ತಾಯ ಮಾಡಹತ್ತಿದರು. ಶ್ರೀ ಸಿದ್ಧಗಂಗಾ ಮಹಾಕ್ಷೇತ್ರಕ್ಕೆ ಶ್ರೀಗಳು ೧೯೫೧ ನೆಯ ಇಸ್ವಿಯ ಶ್ರಾವಣ ಮಾಸದ ಪುರಾಣ ಪರಿಸಮಾಪ್ತಿ ಸಮಾರಂಭ ಕಾಲದಲ್ಲಿ ಕೊನೆಯ ನಾಲ್ಕೈದು ದಿನ ಆಗಮಿಸಿ "ಅಣ್ಣಾ ನಿನ್ನನ್ನು ಕಂಡೆ", "ಗುರುಲಿಂಗ ಜಂಗಮ", "ಅರವತ್ತು ಮೂವರು ಪುರಾತನರೂ, ವೀರಶೈವವೂ", "ಸಿದ್ಧರಾಮನ ಲಿಂಗ ತಪಸ್ಸು", "ಬಸವಣ್ಣನವರ ವೈರಾಗ್ಯ ಸಂಪತ್ತು", ಈ ವಿಷಯಗಳ ಮೇಲೆ ಮಾಡಿದ ಉಪನ್ಯಾಸಗಳು ವರ್ಣನಾತೀತಗಳಾಗಿದ್ದುವು. ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರೂ, ತ್ರಿವಿಧ ದಾಸೋಹಿಗಳೂ ಆದ ಶ್ರೀ ಮ|| ನಿ|| ಪ್ರ|| ಸ್ವಾ|| ಶಿವಕುಮಾರ ಮಹಾಸ್ವಾಮಿಗಳವರು "ಶ್ರೀಗಳವರ

ಉಪದೇಶಾಮೃತ ಪಾನಮಾಡಿದ ಮೇಲೆ ಯಾರೂ ನಿರಾಶಾವಾದಿಗಳಾಗಬೇಕಾಗಿಲ್ಲ ನಿರಾಶಾವಾದದ ಕತ್ತಲೆಯಲ್ಲಿ ತೊಳಲುವ ತರುಣ ತರುಣಿಯರಿಗೆ ಶ್ರೀಗಳವರ ಉಪದೇಶ, ಆಶಾವಾದದ, ಹೊಂಬೆಳಕಿನ ಹೊಳೆಯನ್ನು ಹರಿಯಿಸುವುದರಲ್ಲಿ ಲವಮಾತ್ರವೂ ಸಂಶಯವಿಲ್ಲ" ಎಂದು ಹೃದಯ ತುಂಬಿ ಅಪ್ಪಣೆ ಕೊಡಿಸಿದರು. ಅಭಿನಂದನೆಗಳನ್ನು ಸಲ್ಲಿಸುತ್ತ.

ಧಾರವಾಡದಲ್ಲಿ ಶ್ರೀ ಸಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳವರ ಮಠದಲ್ಲಿ ಶಿವಾನುಭವ ಸಮ್ಮೇಳನವನ್ನು ಜಗದ್ಗುರು ಮುರುಘರಾಜೇಂದ್ರ ಮಹಾಸ್ವಾಮಿಗಳವರ ನೇತೃತ್ವದಲ್ಲಿ ಪ್ರತಿವರ್ಷವೂ ನೆರವೇರಿಸುತ್ತಿರುವುದು ಸರ್ವವಿದಿತ ವಿಷಯ. ೧೯೫೧ ನೆಯ ಇಸವಿಯಲ್ಲಿ ಶ್ರೀಗಳವರನ್ನು ಅಲ್ಲಿಗೆ ಬರಮಾಡಿಕೊಂಡರು. ಗಣ್ಯವಿದ್ವಾಂಸರಿಂದಲೂ, ಶ್ರೋತೃವೃಂದ ಸಹಸ್ರದಿಂದಲೂ ಕಿಕ್ಕಿರಿದು ಹೋಗಿದ್ದ ಆ ಸಭೆಯಲ್ಲಿ ಶ್ರೀಗಳವರು ಸಿದ್ಧರಾಮಸಂಪಾದನೆಯನ್ನು ಕುರಿತುನಾಲ್ಕೂವರೆ ಘಂಟೆಗಳ ಕಾಲ ಅವಿಚ್ಛಿನ್ನವಾಗಿ ಮಾತನಾಡಿದ ವಿಷಯ ಅಭೂತಪೂರ್ವವಾಗಿತ್ತಲ್ಲದೆ ಶಬ್ದಾದಿ ವರ್ಣನೆಗಳಿಂದ ಅದರ ಪರಿಚಯ ಅಸಾಧ್ಯ. ಜಗದ್ಗುರು ಜಯದೇವ ಮುರುಘ ರಾಜೇಂದ್ರ ಮಹಾಸ್ವಾಮಿಗಳವರ ಕಣ್ಣಿಂದ ಶ್ರೋತೃವೃಂದವೆಲ್ಲ ನೋಡುವಂತೆ ಧಾರಾಕಾರವಾಗಿ ಆನಂದ ಬಾಷ್ಪಗಳ ಸುರಿಮಳೆಯಿಟ್ಟಿತು. ಭಾಷಣ ಮುಗಿದ ಮೇಲೆ ಇಳಿದುಬಂದು ಅಪ್ಪಿಕೊಂಡು "ಇಷ್ಟೊಂದು ಅದ್ಭುತ ಪಾಂಡಿತ್ಯ ಸಂಪಾದನೆ ಹೇಗೆ ಮಾಡಿದೆಯಪ್ಪಾ?" ಎಂಬ ಉದ್ಗಾರ ತೆಗೆದ ಸನ್ನಿವೇಶ ನಿಜಕ್ಕೂ ಸ್ವರ್ಗೀಯ ಸೌಂದರ್ಯಗೊಂಡಿತ್ತು. ಈ ಉಪನ್ಯಾಸಕ್ಕೆ ಶ್ರೀಗಳವರು ಉಪಯೋಗಿಸಿದ ಎಷ್ಟೋ ವಚನಗಳು ಇದುವರೆಗೂ ಪ್ರಕಟವಾಗಿದ್ದಿಲ್ಲ. ಶ್ರೀಗಳವರೊಡನೆ ಈ ವಿಷಯ ಕುರಿತು ವಿಚಾರವಿನಿಮಯ ವಿದ್ವಾಂಸರಿಂದ ಪ್ರಾರಂಭವಾಯಿತು. ಶ್ರೀಗಳವರು "ಈ ವಚನಗಳು ೧೨ನೆಯ ಶತಮಾನದಲ್ಲಿಯೇ ರಚಿತವಾದ ಶರಣರ ಶೂನ್ಯಸಂಪಾದನೆಯೊಳಗಿನವೆಂದೂ, ಈಗಿರುವ ಗೂಳೂರು ಸಿದ್ಧವೀರಣ್ಣೊಡೆಯರ ಶೂನ್ಯಸಂಪಾದನೆಯಲ್ಲಿ ಎಷ್ಟೋ ಮೂಲ ವಚನಾಭಾವ ಮತ್ತು ಸ್ವಕಪೋಲಕಲ್ಪಿತ ವಚನ ರಚನೆಯಿದೆ"ಎಂದೂ ಅಪ್ಪಣೆ ಕೊಡಿಸಿದರು. ಅಲ್ಲದೆ ಈ ವಿಷಯವನ್ನು ಆಗಾಗ ಹೇಳುತ್ತಲೇ ಇದ್ದರು: "ಮೂಲ ಶೂನ್ಯಸಂಪಾದನಾಗ್ರಂಥದ ಓಲೆಯ ಪ್ರತಿ ತಮ್ಮಿಂದ ಸಂಗ್ರಹಿಸಲ್ಪಟ್ಟಿದೆ ಅದರ ಪ್ರಕಟಣೆ ಅವಶ್ಯಕವಾಗಿದೆ" ಎಂದು. ಆದರೆ ಅದು ಬೆಳಕಿಗೆ ಬರುವ ಮುನ್ನ ಶ್ರೀಗಳವರೇ ಬೆಳಕಿಗೆ ಹೋದುದು ಕನ್ನಡ ಸಾರಸ್ವತ ಪ್ರಪಂಚಕ್ಕೆ ದೊಡ್ಡ ವಿಪತ್ತು. ಧಾರವಾಡದ ಉಪನ್ಯಾಸ ಮುಗಿಸಿ ಜನಜಂಗುಳಿಯ ಅನಂತ ಪ್ರಾರ್ಥನಾಪರಂಪರೆಗಳನ್ನು ಮನ್ನಿಸಿ ಗದಗ, ಬೈಲಹೊಂಗಲ, ದಾವಣಗೆರೆ ಮೊದಲಾದ ನಗರಗಳಿಗೆ ಹೋಗಿ ಶರಣತತ್ತ್ವಗಳ ಅದ್ಭುತ ಸುರಿಮಳೆ ಸುರಿಸಿ ಅಗಣ್ಯ ಕೀರ್ತಿಭಾಜನರಾಗಿ ಹಿಂತಿರುಗಿದರು.

## ಭಾಷ್ಯಕಾರರಾಗಿ, ಮಹಾಕವಿಗಳಾಗಿ, ಗೌರೀಶಂಕರ ಶ್ರೀಗಳು

ವೀರಶೈವ ಅಥವಾ ಲಿಂಗಾಯಿತ ಅಥವಾ ಶಕ್ತಿವಿಶಿಷ್ಟಾದ್ವೈತಪರವಾಗಿ ಪ್ರಸ್ಥಾನತ್ರಯ ಭಾಷ್ಯಗಳು ಇದ್ದುವೆಂದೂ, ಗೀತಾಭಾಷ್ಯ ಲುಪ್ತವಾಗಿ ಹೋಗಿದೆಯೆಂದೂ ಶ್ರೀಗಳವರ ಅಭಿಪ್ರಾಯವಾಗಿದ್ದಿತು. "ಕೆಲವು ಜನ ವೀರಶೈವಾಚಾರ್ಯರು ಉಪನಿಷತ್ತುಗಳಿಗೆ ಶಕ್ತಿವಿಶಿಷ್ಟಾದ್ವೈತಪರವಾದ ಭಾಷ್ಯ ಬರೆದಿದ್ದಾರೆ, ಬ್ರಹ್ಮಸೂತ್ರಕ್ಕೆ ಶ್ರೀಪತಿ ಪಂಡಿತರು ಭಾಷ್ಯ ಬರೆದಿದ್ದಾರೆ. ಈ ಶತಮಾನದಲ್ಲಿ ಶಕ್ತಿವಿಶಿಷ್ಟಾದ್ವೈತಕ್ಕೆ ಪ್ರಸ್ಥಾನತ್ರಯ ಭಾಷ್ಯವಿದೆ ಎಂಬ ಮಾತನ್ನು ಸಾಧಿಸಬೇಕು, ಅರೆಕೊರೆಯಾಗಿರುವ ಗೀತಾಭಾಷ್ಯರಚನೆ ನನ್ನ ಪಾಲಿನ ಕೆಲಸ" ಎಂದು ಅನೇಕಸಲ ಅಪ್ಪಣೆ ಕೊಡಿಸಿ, ಆ ಕಾರ್ಯಮಾಡಲು ಪ್ರವೃತ್ತರಾಗಿದ್ದರು. ಷಟ್‌ಸ್ಥಲತತ್ತ್ವದರ್ಶನವನ್ನು ಗೀತೆಯ ೭೦೦ ಶ್ಲೋಕಗಳಿಗೆ ಸಮನ್ವಯಗೊಳಿಸಿ ವಿಶಿಷ್ಟವೀರಶೈವ ಸಿದ್ಧಾಂತದ ವೃತ್ತರೇಖೆಯನ್ನು ಎಳೆಯುವುದು ಅಪಕ್ವ ಪಾಂಡಿತ್ಯಕ್ಕೆ ಅಸಾಧ್ಯ. ಭಾರತ ಭಾರತೇತರ ದರ್ಶನಗಳ ಆಳನೀಳಗಳನ್ನಳೆದು, ಸಂಸ್ಕೃತಭಾಷಾಪ್ರಭುತ್ವ ಸಂಪಾದಿಸಿದ ಶ್ರೀಗಳವರ ಅಖಂಡ ದೃಷ್ಟಿ, ಪರಿಪಕ್ವ ಪಾಂಡಿತ್ಯ ಪ್ರಭೆಯ ಫಲವಾಗಿ ಹಲವಾರು ದಿನಗಳ ಸತತ ಪರಿಶ್ರಮದ ರೂಪವಾಗಿ ಆ ಗ್ರಂಥ ಪೂರ್ಣಗೊಂಡಿತು. ಈ ಕಾರ್ಯ ಯಶಸ್ವಿಗೊಳ್ಳಲು ಶ್ರೀಮನ್ಮಹಾರಾಣಿಯವರು ಶ್ರೀಗಳವರಿಗೆ ಬೇಕಾಗುವ ಸಕಲ ಸೌಲಭ್ಯಗಳನ್ನೂ ಒದಗಿಸಿದರು. ಶ್ರೀ ಜಗದ್ಗುರು ಸುತ್ತೂರು ಶಿವರಾತ್ರಿ ರಾಜೇಂದ್ರ ಶ್ರೀಗಳವರಂತೂ ಸತತವೂ ಶ್ರೀಗಳವರ ಯೋಗಕ್ಷೇಮ ನಿರತರಾಗಿ ಛಾಯೆಯಂತೆ ವರ್ತಿಸಿ ಸೌಲಭ್ಯ ಕಲ್ಪಿಸಿದರು; ಸನ್ನಿವೇಶವೊದಗಿಸಿದರು. ಅಚ್ಚು ಹಾಕಿಸುವ ಸಿದ್ಧತೆಗಳೂ ನಡೆದುವು. ಅಷ್ಟರಲ್ಲಿ ಭೌತಲಿಂಗದೇಹದೊಡನೆ ಮೃತ್ಯುವಿನ ಕ್ರೂರಕಾಳಗವಾಗಿ ಮೃತ್ಯುಗೆದ್ದಿತು. ಗೀತಾಭಾಷ್ಯವೂ ಎತ್ತಲೋ ಎದ್ದಿತು. ಕಾಲದ ಕರಾಳ ಕತ್ತಲಲ್ಲಿ ಕಣ್ಣಿಗೆ ಕಾಣದಂತಾಯಿತು. ವೀರಶೈವ ಜಗತ್ತಿಗೆ ಇಂತಹ ನಷ್ಟ ಇನ್ನೊಂದುಂಟೆ? ಈ ಕಾರ್ಯ ಎಲ್ಲರಿಂದ ಸಾಧ್ಯವೇ? ಎಷ್ಟೋ ಶತಮಾನಗಳಿಗೊಮ್ಮೆ ನಾಡು ಜಗತ್ತಿಗೀಯಬಲ್ಲ ದಿವ್ಯಜ್ಞಾನಿ ಪುತ್ರನಿಂದ ಈ ಕಾರ್ಯ ಸಾಧ್ಯವಲ್ಲವೆ? ಅನೇಕ ವಿದ್ವಾಂಸರುಗಳು ಆ ಭಾಷ್ಯವನ್ನು ಬರೆಯುತ್ತಿದ್ದಾಗಲೇ ಓದುತ್ತಿದ್ದುದಕ್ಕೆ ಇಂದು ಕೇಳಿದ ಕಿವಿಗಳು, ನೋಡಿದ ಕಣ್ಣುಗಳು ಸಾಕ್ಷಿಯಾಗಿ ಉಳಿದುವಲ್ಲದೆ ಗ್ರಂಥಸಾಕ್ಷ್ಯ ಮಾತ್ರವಿಲ್ಲ. ನಾನು ಶ್ರೀಗಳವರ ದರ್ಶನಾಶೀರ್ವಾದಾಕಾಂಕ್ಷಿಯಾಗಿ ಹೋದಾಗ ಶ್ರೀಗಳವರು ಭಾಷ್ಯರಚನಾಕಾರ್ಯದಲ್ಲೇ ತೊಡಗಿದ್ದರು. ನಮಸ್ಕರಿಸಿದಂತೆ "ಬಾರಣ್ಣ ಕುಳಿತುಕೋ" ಎಂದರು. ಬಹುದಿನಗಳ ನಂತರ ಮಾತ್ರವನ್ನು ಕಂಡ ಮಗನನ್ನು ತಾಯಿ ತುಂಬು ಹೃದಯದ ಪ್ರೀತಿಯಿಂದ ಬೋಳೈಸಿ ಕರೆಯುವ ಮಂಜುಳ ಧ್ವನಿಯನ್ನು ಮೊಳಗಿಸಿ ಕುಳಿತುಕೊಂಡ. "ನನಗೂ ಬಹು ಬೇಸರವಾಗಿತ್ತು. ಒಳ್ಳೆ ಹೊತ್ತಿಗೆ ಬಂದೆ, ಏನು ಸುದ್ದಿ?. ಹೇಗೆ ಓದುತ್ತಿದ್ದೀಯಣ್ಣಾ?"

ಎಂದರು. ನಾನು ಯಥೋಚಿತ ಬಿನ್ನವಿಸಿಕೊಂಡೆ. ಪ್ರಾಸ್ತಾವಿಕ ಮುಗಿದ ಮೇಲೆ ಶ್ರೀಗಳು ಪ್ರಾರಂಭಿಸಿದರು ವೀರಶೈವ ಪ್ರಸಾದತತ್ತ್ವವಿವರಣೆಯ ಗೀತಾಭಾಷ್ಯ ಸುಧಾಗಂಗಾಜಲ ಪ್ರವಾಹವನ್ನು. ಹತ್ತುನಿಮಿಷಗಳವರೆಗೆ ಶ್ರೀಗಳವರು ಓದಿದರು. ನಾನು ತಲೆಹಾಕುತ್ತಿದ್ದೆ. ಹತ್ತುನಿಮಿಷಗಳ ಮೇಲೆ ದೃಷ್ಟಿ ನನ್ನತ್ತ ಬಂತು. ನನ್ನತ್ತದೃಷ್ಟಿ ಯಾವಾಗ ಬಂದೀತೋ ಎಂದು ಕಾಯುತ್ತಿದ್ದ ನಾನು ಕೂಡ ಒಮ್ಮೆ "ಬುದ್ಧಿ, ನಮಗೆ ಈ ಭಾಷೆ, ಈ ಕಾರ್ತೀಕ ಶೈಲಿ ಏನು ಗೊತ್ತಾಗುತ್ತದೆಂದು ಅಪ್ಪಣೆ ಕೊಡಿಸುತ್ತೀರಿ" ಎಂದೆ. ಶ್ರೀಗಳವರೂ ನಕ್ಕರು. ನಕ್ಕು "ಏನು? ತಿಳಿಯುವುದಿಲ್ಲವೆ?" "ಇಲ್ಲಬುದ್ಧಿ" ಎಂದೆ"ತಿಳಿಯದಿದ್ದರೂ ಚಿಂತೆಯಿಲ್ಲ ನಾನುಓದುತ್ತಿರುವುದು ನಿನಗೆ ತಿಳಿಯಲಿ ಎಂದೂ ಅಲ್ಲ" ಎಂದು. ನಾನು "ತಿಳಿಯುವುದಿಲ್ಲವೆಂದು ಗೊತ್ತಾದರೂ ಪುನಃ ಶ್ರೀಗಳವರು ಓದುವ ಕಾರಣ ಅರ್ಥವಾಗಲಿಲ್ಲ" ಎಂದೆ. ಆಗ ಶ್ರೀಗಳು ಹೀಗೆ ಹೇಳಿದರು: "ಅಣ್ಣಾ, ನೋಡು, ಏನನ್ನೇ ಬರೆಯಲಿ, ಬರೆದುದನ್ನು ನಾಲ್ಕಾರು ಸಲ ಪುನಃ ಪುನಃ ಓದಬೇಕು. ಬರೆಯುವಾಗ ಮಾಡಿದ ದೋಷಗಳು ಓದುವಾಗ ಗೊತ್ತಾಗುತ್ತವೆ. ಮೂರು ನಾಲ್ಕು ತಿಂಗಳು ಬಿಟ್ಟು ಪುನಃ ಅದನ್ನು ತಾನೇ ಓದಬೇಕು. ಆಗ ಇನ್ನೂ ಕೆಲವು ತಪ್ಪು ಸಿಗುತ್ತವೆ. ಹೀಗೆ ಹಲವಾರು ಸಲ ತನ್ನ ಬರವಣಿಗೆಯನ್ನು ನಾಲ್ಕೈದು ಸಂದರ್ಭಗಳಲ್ಲಿ ಓದಿ ತಾನೇ ತಿದ್ದಿ ದೋಷರಹಿತಗೊಳಿಸಿ ಅನಂತರ ಅದನ್ನು ಪ್ರಕಟಿಸುವ, ಬಿಡುವ ಯೋಚನೆ ಮಾಡಬೇಕು. ಇಂದು ಬರೆದುದನ್ನು ಇಂದೇ ಪ್ರಕಟಿಸುವುದೂ ಮೂರ್ಖತನ. ಬರೆವದ್ದು ಶಾಶ್ವತವಾಗಿರಬೇಕೆಂಬ ದೂರದರ್ಶಿಯು ಯಾವಾಗಲೂ ಎಚ್ಚರದಿಂದ, ಇಂದು ಬರೆದುದನ್ನು ಎಷ್ಟೋಕಾಲ ಹತ್ತಿರವೇ ಇಟ್ಟುಕೊಂಡು ಎಷ್ಟೋಸಾರಿ ಓದಿ ತಿದ್ದಿ ನಿರ್ದುಷ್ಟಗೊಳಿಸುವನು. ಆ ದೂರದೃಷ್ಟಿಯಿಲ್ಲದವನು ಆಗಲೇ ಪ್ರಕಟಿಸಿ ಮರುದಿನವೇ ಪಶ್ಚಾತ್ತಾಪಗೊಳಿಸುವನು. ನಾನೀಗ ಓದುತ್ತಿರುವುದು ಆ ದೃಷ್ಟಿಯಿಂದ. ಒಬ್ಬನೇ ಓದುವಾಗಲೂ ಸಂದುಗೊಂದಿಯ ದೋಷಉಳಿವುದೂ ಉಂಟು. ತಲೆಹಾಕುವ ಮನುಷ್ಯನೊಬ್ಬ ಎದುರಿಗಿದ್ದಾನೆಂಬುದು ಮನಸ್ಸಿನಲ್ಲಿದ್ದಾಗ ಬಹುಶಃ ಒಮ್ಮೊಮ್ಮೆ ಅಕಸ್ಮಾತ್ ಆದ ದೋಷಗಳು ಗೋಚರಿಸುತ್ತವೆ." ಹೀಗೆ ಅಪ್ಪಣೆ ಕೊಡಿಸಿದ್ದು ಇನ್ನೂ ಕಿವಿಯಲ್ಲಿ ಮೊಳಗುತ್ತಿದೆ. ಏನಾದರೇನಂತೆ ಭಾಷ್ಯಮಾತ್ರ ಇಂದಿಲ್ಲ. ಅದ್ಯಾಕ್ಕೂ ಪುನಃ ಈಗಲಾದರೂ ಪ್ರಕಟವಾಗುವುದಾದರೆ ಶಕ್ತಿ ವಿಶಿಷ್ಟಾದ್ವೈತಕ್ಕೊಂದು ದೊಡ್ಡ ಆಸ್ತಿಯಾದೀತು.

ನಾಟಕ ರಚನಾ ಸಾಮರ್ಥ್ಯದಲ್ಲಿ ಶ್ರೀಗಳವರು ಅದ್ಭುತವಾದ ಸಿದ್ಧಹಸ್ತರು. ವಿನೋದ ರತ್ನಾಕರ ಶ್ರೀಮಾನ್ ಗುಬ್ಬಿ ವೀರಣ್ಣನವರಿಗೆ "ಬಸವೇಶ್ವರ" ಮತ್ತು "ಅಕ್ಕಮಹಾದೇವಿ" ಈ ಎರಡು ಕಥೆಗಳನ್ನು ಚಲನಚಿತ್ರ ಪ್ರಪಂಚಕ್ಕೆ ತರಬೇಕೆಂಬಾಸೆ ಹಿಡಿದಾಗಿತ್ತು. ಶ್ರೀಗಳವರಲ್ಲಿ ಬಂದು 'ಅಕ್ಕಮಹಾದೇವಿ' ಯ ಕಥಾಭಾಗ ಬರೆದು

ಕೊಡಬೇಕೆಂದು ಕೇಳಿಕೊಂಡಿದ್ದರು. ಶ್ರೀಗಳವರು "ಆಗಲಿ. ಬರೆದುಕೊಡೋಣ, ಆದರೆ ನಾನು ಹೇಳಿದಂತೆ ಕೇಳಬೇಕು" ಎಂದರು. ವೀರಣ್ಣನವರು ಒಪ್ಪಿದರು. ಶ್ರೀಗಳವರು ೨೧ ದೃಶ್ಯಗಳ ಕೆಲವು ಭಾಗ ನಾಟಕವನ್ನು ಬರೆದು ವೀರಣ್ಣನವರನ್ನೂ ಕರೆಯಿಸಿ ಅವರಿಗೆ ರಂಗಸಜ್ಜಿಕೆಯ ಕ್ರಮವನ್ನೂ ವಿನಿಯೋಗಿಸಬೇಕಾದ ಹಣದ ಮೊತ್ತವನ್ನೂ, ಸಂಗ್ರಹಿಸಬೇಕಾದ ಕಲಾವಿದರನ್ನೂ ವಿವರಿಸಿದೊಡನೆ ಅದು ಅಸಾಧ್ಯವಾಗಿ ಕಂಡುಬಂದು ಕೈಬಿಡಬೇಕಾಗಿ ಬಂತು. ಶ್ರೀಗಳವರ ಈ ಇಪ್ಪತ್ತೊಂದು ದೃಶ್ಯಗಳ ಅಕ್ಕಮಹಾದೇವಿಯ ನಾಟಕ ಭಾಗವೂ ಈಗ ಇದ್ದಂತೆ ತೋರುವುದಿಲ್ಲ.

ಶ್ರೀಗಳವರ ವಿದ್ವತ್ತಿನ ದಿಗ್ದರ್ಶನಗೊಳಿಸಬಲ್ಲ ಇನ್ನೊಂದು ಬರವಣಿಗೆಯೆಂದರೆ "ಅಕ್ಕಮಹಾದೇವಿ" ಎಂಬ ಹಳಗನ್ನಡದ ಚಂಪೂಕಾವ್ಯ. ಈ ಗ್ರಂಥದ ದಿಙ್ಮಾತ್ರ ಪ್ರದರ್ಶನವನ್ನೂ ವಾಚಕ ವೃಂದಕ್ಕೆ ಶಕ್ತ್ಯಾನುಸಾರ ಮಾಡಿ ಪ್ರಕೃತ ಲೇಖನ ಮುಗಿಸುತ್ತೇನೆ.

## 'ಅಕ್ಕಮಹಾದೇವಿ' ಚಂಪೂ ಚರಿತ

ಇಲ್ಲಿ ಶ್ರೀಗಳು ತೋರಿಸಿರುವ ಅದ್ಭುತ ಶಬ್ದ ಸಂಪತ್ತು ಕಾವ್ಯಕಲಾ ಪರಿಣತಿಗಳು ಆಶ್ಚರ್ಯಕರವಾದವು. ಆದರೆ ಗ್ರಂಥ ಪೂರ್ಣವಾಗಿಲ್ಲ. ಜನನ ಮೊದಲ್ಗೊಂಡು ಮಹಾದೇವಿಯಕ್ಕ ಕಲ್ಯಾಣಕ್ಕೆ ತೆರಳಿ ಅಲ್ಲಿ ಕಿನ್ನರಿಯ ಬೊಮ್ಮಯ್ಯನೊಡನೆ ಸಂಭಾಷಿಸುತ್ತಿರುವಲ್ಲಿಗೇ, ಕಲ್ಯಾಣವನ್ನು ಹೊಕ್ಕರೂ ಕಲ್ಯಾಣಕಲ್ಪತರುವನ್ನು ಕಾಣದ ಮುನ್ನ, ಹಠಾತ್ತಾಗಿ ನಿಂತಿದೆ.

ಈ ಪುರಾಣ ಆಕಾರದಲ್ಲಿ ಚಿಕ್ಕದಾದರೂ ಕಲಾಪರಿಣತಿಯಲ್ಲಿ ಉತ್ತುಂಗ ಶೃಂಗವನ್ನೇರಿ ನಿಂತಿದೆ. ಇದರಲ್ಲಿ ವಚನಕಾರರ ದರ್ಶನಸಂಪತ್ತು ಹರಿಹರನ ಭಕ್ತಿಯ ಆವೇಶ, ಷಡಕ್ಷರಿಯ ಶಬ್ದಸಂಪತ್ತು ಮತ್ತು ನಿಸರ್ಗದ ವರ್ಣನೆ ರಾಘವಾಂಕನ ಕಥೆಯ ಓಟ, ಸಂಸ್ಕೃತ ಮಹಾಕವಿ ಬಾಣನ ಹೃದ್ಯವಾದ ಗದ್ಯ ಪಡಿಯಚ್ಚುಗಳು ಅವತರಿಸಿ ಬಂದು ಸಂಗಮಗೊಂಡು ಒಂದೇ ಮೈಯಾಂತು ನಿಂತಿವೆ. ಮಹಾದೇವಿಯಕ್ಕನ ಸಮಸ್ತ ವಚನಗಳ ಪರಿಚಯವಿರಲಿಲ್ಲ. ಕರ್ಣಾಕರ್ಣಿಕೆಯಾಗಿ ಆ ಮಹಾಮಹಿಮಳ ಚರಿತ್ರೆ ನಿರೂಪಿತವಾದ್ದೆಂದು ಕೆಲವಿಮರ್ಶಕರ ಮತ. ಆದರೆ ಅಲ್ಲಿಯ ಮಹಾದೇವಿ ಶೈವ ವೀರಶೈವಗಳೆರಡು ಧರ್ಮಗಳನ್ನೂ ಪ್ರತಿನಿಧಿಸುವಂತಿದೆ. ಹರಿಹರನ ಅನಂತರದಲ್ಲಿ ಚಾಮರಸಾದಿಗಳು ಅವಳ ಚರಿತ್ರೆಯನ್ನು ಬರೆದಿರುವಲ್ಲಿಯೂ ಮಹಾದೇವಿಯಕ್ಕನ ಸುಸ್ಪಷ್ಟ ಚಿತ್ರವಿಲ್ಲವೆಂದೇ ಹೇಳಬೇಕು. ಏಕೆಂದರೆ ಮಹಾದೇವಿಯಕ್ಕನ ಚರಿತ್ರೆಯು ಅವಳು ಸ್ವತಃ ಹೇಳಿದ ವಚನಗಳಲ್ಲಿ ಅರ್ಧಮುಕ್ಕಾಲು ಭಾಗ ಇದೆ. ಅವಳ ಎಲ್ಲ ವಚನಗಳ ಸಂಪೂರ್ಣ ಸಮಾಲೋಚನ ಮಾಡಿ ಚರಿತ್ರೆ

ಮಾನ್ನು ನಿರೂಪಿಸ ಹೊರಟವರೆಂದರೆ ೨೦ನೆಯ ಶತಮಾನದ ಗೌರೀಶಂಕರಸ್ವಾಮಿಗಳವರೇ ಎಂದರೆ ತಪ್ಪಲ್ಲ. ಪುರಾಣ ಧರ್ಮವನ್ನು ಮುಂದಿಟ್ಟುಕೊಂಡು ವಚನಗಳ ಆಧಾರದ ಮೇಲೆ ಆ ಕಥೆ ಅವರು ಬರೆದಿರುವ "ಅಕ್ಕಮಹಾದೇವಿ" ಪುರಾಣದಲ್ಲಿ ನಿರೂಪಿತವಾಗಿದೆ. ಅದೂ ಅರ್ಧಭಾಗ ಮಾತ್ರ. ಅಲ್ಲಿ ಕಂಡುಬರುವ ಕೆಲವು ವಿಷಯಗಳನ್ನೆತ್ತಿ ಶ್ರೀಗಳವರ ಕಲಾಪರಿಣತಿಯ ಪರಿಚಯ ಮಾಡುತ್ತೇನೆ.

ಒಂದು ದಿನ ಕೌಶಿಕ ಮಹಾರಾಜನು ಬಸದಿಯಿಂದ ಬೀಳ್ಕೊಂಡು ರಾಜವೀಧಿಯಲ್ಲಿ ಬರುತ್ತಿರುವ ಸಮಯ. ಅದನ್ನು ನೋಡಲು ಮಹಾದೇವಿಯು ಸಖಿಯರು "ಕರಮಂ ಪಿಡಿದು ಸಡಗರದಿಂದೆಳೆವುದುಂ ಸಖೀಜನ ಸ್ನೇಹ ಪರವಶತೆಯಿಂದುಂ, ಕೈಶೋರ ದಶಾ ಸಹಜ ಕುತೂಹಲಬಲ ವಿವಶತೆಯಿಂದುಂ, ಮಣಕ್ಕನೆಳ್ದವರೊಡನೆ ಸೌಧಸೋಪಾನ ಪರಂಪರೆಯಿಂ, ಪ್ರಾಸಾದದ ಮಕರಿಕಾಂಗಣಮಂಪೊಕ್ಕು ನಿಂದಿರ್ದನಂ" ಉತ್ಸವವು ಬರುತ್ತಲಿತ್ತು. ಗಂಗೆಯೆಂಬ ಸಖಿ ಅಕ್ಕನ "ಬಳಿಯೋಳ್ ನಿಂದು ವಿಸಮಯಂದೋರುತ್ತಾ ದೇವಿಗೆ ಕೌಶಿಕಮಹಾರಾಜ ವೈಭವೋತ್ಸವಮಂ ತೋರುತ್ತಿತೆಂದಳ್."

"ಪೊಂದಿರೆ ನೀಲ್ದ ಗಂಟೆಗಳ ಟಿಂಟಿಣಿತಂಗಳೆ ತಾಳದೋಜೆಯಂ।
ಬಂದು ಮದಾಳಿಯಿಂ ಮೊರೆವ ಮಲ್ಲಳಿವಿಂಡಿನಮಂಜಗಾನದಾ।
ನಂದದ ಪೆರ್ಮೆಯೊಳ್ ಪ್ರಕೃತಿಯಿಂದಮೆ ಮಂದತೆ ಮುನ್ನಮಿರ್ದೊಡಂ
ಮಂದತರತ್ವದಿಂ ಮಲೆವುದೀ ಮದವಾರಣಮಕ್ಕಪಕ್ಕದೊಳ್''॥

ಹೀಗೆ ಮಲೆವ ಮದವಾರಣದ ರೀತಿಯನ್ನು ಪೇಳಿ ''ಅಕ್ಕ, ಅಶೇಷಾವಯವ ದುರ್ಘಗಂಳನೀ ಕರಭಂಗಳನವಲೋಕಿಪ್ಪುದೌ. ಅಪ್ಪೊ! ಈ ಮುಸುಡಿಂಗೆ ಕಡವರದ ಮೊಗವಡಮೋ! ಈ ನೀಳ್ದೊಂಕೆಗೆ ಕಿಣ್ಕಿಣಿಪ ಕನಕಕಿಂಕಿಣಿಗಳೇನೊಪ್ಪುಗಮೋ! ಆಹಾ! ಚೆಲ್ವಾಯ್ತು, ಈ ಚರಣಂಗಳ್ಗೆ ಗಳಗಳಿಪೀ ಕಿರುಗೆಜ್ಜೆಗಳೋಳಿ! ಪೋಕೆ, ಪಾಶ್; ಇತ್ತೆಣ್ಗೆ ಕಣ್ಣಿಡೌ ಕೆಳದಿ" ಹೀಗೆ ಆತನ ಗಜಬಲದ ಅಲಂಕಾರ ವರ್ಣನೆ ಮಾಡುತ್ತ ಕುದುರೆಗಳ ವರ್ಣನೆಯನ್ನೂ ಸಕಲ ವೈಭವೋಪೇತ ಚತುರಂಗ ಬಲದ ಸೊಗಸಿನ ನೋಟವನ್ನೂ ಸಖಿಯು ವರ್ಣಿಸುತ್ತಿರುವಾಗ ಭದ್ರಗಜಾಸೀನನಾದ ಕೌಶಿಕನ ದೃಷ್ಟಿ ಉಪ್ಪರಿಗೆಯ ಮೇಲೆ ನಿಂತಿರುವ ಮಹಾದೇವಿಯಕ್ಕನತ್ತ ಹರಿಯುತ್ತದೆ.

"ಸಮನಿಸೆ ಕಂಪಮಂಗಂದೊಳುದಂದೆಸೆ ಮೆಯ್ಮುವಿರುಣ್ಮೆ ನೀಳ್ದಸುಯಲ್।
ಜಿಮಿರಿಮೊಗಂ, ಸಮುಚ್ಚಳಿಸೆ ರಾಗದಲಂಪು ಕಪೋಲಯುಗ್ಮದೊಳ್।
ಕುಮಾರರಸಿಂ ಮನಂ ಜೆರಗುವಟ್ಟಿರೆ ನಟ್ಟಿತು ಕೌಶಿಕಾವನೀ।
ರಮಣನ ದಿಟ್ಟಿ ಕಟ್ಟಿದಿರೊಳಾಲಲಿತಾಂಗಿಯ ವಕ್ತ್ರಪದ್ಮದೊಳ್॥''

ಫಳ್ಳನೆ ಸೆಳೆಮಿಂಚು ಸೆಳೆದು ಮರೆಗೊಂಡಂತೆ ಮಹಾದೇವಿಯಕ್ಕ ಮರೆಯಾದಳು. "ಧರೆಯುಂಗೆ ಕಣ್ಗೊಳ್ಪಮರ್ಬುಪರ್ಬಿತು" ಇನ್ನೊಮ್ಮೆ ನೋಡಬೇಕೆಂದು ನೃಪತಿಯು ಜಗೆ ಬಗೆಗೊಂಡರೂ ಅಕ್ಕನಿರಲಿಲ್ಲ. ಕರುಮಾಡಿನತ್ತಣಿಂದ ಇಳಿದು ಮಾಯವಾಗಿಬಿಟ್ಟಳು.

ಆ ಜಗದೇಕ ಸುಂದರಿಯ ರೂಪಸುಧಾರ್ಣವದ ಒಂದೇ ಒಂದು ಊರ್ಮಿಯಲ್ಲಿಯೇ ಮಹಾರಾಜನ ಮಾನಸವು ಜಡಭಾವವನ್ನಾಂತು ಮಗುಳಿ ಏಳದ ಮಾಳ್ಕೆಯಿಂದ ವಿಮೋಹ ಮಹಾಬ್ಧಿಯಲ್ಲಿ ಮುಳುಗಿ ಹೋಯಿತು. ಇನ್ನೇನು ಪ್ರಾರಂಭವಾಯಿತು ಮಹಾರಾಜನ ಮನ್ಮಥ ವಿಕಾರ ಮಹಾಜ್ವರ ಮೂರ್ಛೆ. ಪಡೆಯಲನಂತ ಪ್ರಯತ್ನ ಮಾಡಿದನು. ಅರಮನೆಗೆ ಬರಮಾಡಿಕೊಂಡನು. ಹಲವಾರು ಪ್ರಯತ್ನಗಳ ಪರಂಪರೆಯಿಂದ ಮಹಾದೇವಿಯಕ್ಕನು ತನ್ನರಮನೆಗೆ ಕಾಲಿಟ್ಟುದಾಯಿತು. ಇನ್ನವಳ ಮನವೊಲಿಸುವ ಕಾರ್ಯ ನಡೆಯಬೇಕು. ಈ ಸಂದರ್ಭದಲ್ಲಿ ಶ್ರೀಗಳವರು ಹೋಗಿರುವ ಮಾರ್ಗ ಹರಿಹರಾದಿಗಳಿಗಿಂತ ಕಲಾತ್ಮಕವಾಗಿದೆ. ಮಹಾದೇವಿಯಕ್ಕನ ಪೂರ್ಣ ವೈರಾಗ್ಯಕ್ಕೂ, ಅವಳ ಶರಣ ಮಾರ್ಗಕ್ಕೂ ಯಾವ ಊಣೆಯನೂ ಉಂಟಾಗಿಲ್ಲ.ಅವಳ ಪೂರ್ಣ ಹೃದಯವನ್ನು ವಚನಗಳ ಪೂರ್ಣರಸವನ್ನು ಹಿಂಡಿ ಕಾವ್ಯಕಲಾ ಪರಿಣತಿ ತೋರಿಸಿದ್ದಾರೆ. ದೀರ್ಘ ಲೇಖನ ಭಯದಿಂದ ಕಾವ್ಯ ಪರಿಚಯವನ್ನು ಮಾತ್ರ ಮಾಡುತ್ತೇನೆಂದು ಹೇಳಿದ್ದೇನೆ. ಆದ್ದರಿಂದ ಸಮಾಲೋಚನೆಗೆ ತೊಡಗೆನು. ಹರಿಹರ ಮಹಾಕವಿಯು ಮಹಾದೇವಿಯಕ್ಕನನ್ನು ನೋಡಿದ ದೃಷ್ಟಿಗಿಂತ ಶ್ರೀಗಳವರ ದೃಷ್ಟಿ ಸುಸಂಸ್ಕೃತವೂ ಪ್ರೌಢವೂ ವೀರಶೈವ ತತ್ತ್ವಬದ್ಧವೂ ಆಗಿದೆಯೆಂದು ಹೇಳಬಹುದು. ಅಕ್ಕಮಹಾದೇವಿಯ ಪೂಜಾವೈಭವವನ್ನು ಶ್ರೀಗಳವರ ಮಾತುಗಳಲ್ಲೇ ಕೇಳಿ:

" ಅಂತು ಕಂತುಹರಾರ್ಚನ ಕುತೂಹಲಿತೆಯಾ ಲಲಿತೆ
ಪರಿಸರದ ಪಿಂಜರಿವರಿಯಾಣಂಗಳೊಳ್ ಸಂಗಳಿಸಿದ
ಪೊಸವೂಗಳ ಪರಿಮಳಂಗಳ ಪೆಂಪಂ, ಘನಸಾರ ಕಾಶ್ಮೀರಜಕುಸುಮ
ಸಾರಂಗಳಿಂ, ಪುಗಮುಗಿಪ ಮಲಯಜಗಂಧಂಗಳಸೊಂಪಂ, ದಶಾಂಗ
ಧೂಪಂಗಳಕಂಪಂ, ನಿಜನಿಶ್ವಾಸಾಮೋದಲಂಪಿಂ ನೂರ್ಮಡಿಸುತೆ.
ಸಲ್ಲಲಿತ ಸಹಕಾರಪಲ್ಲವ ಸಂಪುಲ್ಲ ಕಲ್ಹಾರ ಕುಸುಮಮಾಲಂಕೃತೋದಗ್ರ
ದ್ವಾರಮನಾ ಪೂಜಾಗಾರಮನ್ನಾನಂದದಿಂ ಪೊಕ್ಕು, ಪಕ್ಕದೊಳ್
ಪಾದುಕೆಗಳಂಬಿಟ್ಟು,
ಕಟ್ಟಿದಿರ ಭಿತ್ತಿಭಾಗಂಗಳೊಳ್ ತನ್ನಂಗದಿಂ ಚೆಂಬೊನ್ನಪುತ್ತಳಿಗಳಚೆಲ್ವಂ
ಬಿತ್ತರಿಸುತ್ತೆ, ಪ್ರಸೂನಾಸ್ತೀರ್ಣ ಮನಭ್ಯರ್ಣಸ್ವರ್ಣ ಪೀಠದೂರ್ಧ್ವಾಸನಮ

ನಲಂಕರಿಸಿ, ಪೂಜಾ ಪೂರ್ವಾಂಗಕೃತ್ಯಮತ್ಯಾದರದಿಂ ಬಳೆಯಿಸಿ, ಮನ
ದೆನ್ನನ ಚೆನ್ನಮಲ್ಲಿಕಾರ್ಜುನನ ನೇಹಂ ಮೇರೆಯುಂದಿದಾರೆ, ತತ್ತರಿಪ ತನುಲತೆ
ಯೊಳ್, ಬೆಮರೂರೆ, ಕಪೋಲಮೂಲಂಗಳೊಳ್ ಪುಲಕಮುಕುಲಂಗಳ್
ಪೊರೆಯೇರೆ
ಸಮಾರಬ್ಧ ಬಾಷ್ಪವೃಷ್ಟಿಗಳಿಂ ದೃಷ್ಟಿಗಳಿಂ ನಿಜೇಷ್ಟಲಿಂಗದೇವನಂ
ನೋಡಿ ನೋಡಿ
ಪರಮಪ್ರೇಮ ಪಾರಾವಾರದೊಳೋಲಾಡಿ, ತನ್ನಂಗದ ಕನಕ
ಕರಂಡಕದ ಸಜ್ಜೆಯಿಂ ನಿಜಕರ ಕಮಲಕ್ಕೆ ಬಿಜಯಂಗೈಸುತ್ತ ಮಧುರ-
ಸ್ವರಮಿಂತು ಪಾಡಿದಳ್ "

ಇಲ್ಲಿ ಮುಂದೆ ಪಾಡುವುದು ಕೇವಲ ಅಕ್ಕನ ವಚನಗಳನ್ನೇ ಛಂದೋಬದ್ಧ ಸುಂದರವೃತ್ತಗಳನ್ನು ಮಾಡಿ. " ಸಜ್ಜೆಯಿಸುಪ್ಪವಡಿಸಿ...." ಎಂಬ ಅವಳ ವಚನವನ್ನು ಹೀಗೆ ಹೇಳಿದ್ದಾರೆ :

" ಸಜ್ಜೆಯಿನೊಯ್ಯನುಪ್ಪವಡಿಸಿಪ್ರಭು, ನೀನೊಸೆದೆನ್ನಹಸ್ತದೊಳ್ !
ಪಜ್ಜಳಿಸುತ್ತತೋರೆ, ತನುವುಂ ಮನಮುಂ ಕಳೆಯೇರೆ ನಿನ್ನೊಳೀ- ।
ಬಜ್ಜರಿಸಿರ್ಪ ಮಾಳ್ಕೆಯೊಳಮರ್ದಿರೆ ದೃಷ್ಟಿಸುಬಾಷ್ಪ ಸಂಭೃತಂ ।
ಸಜ್ಜನಭಕ್ತಿಯಿಂ ನೆರೆವೆನೊತ್ತರಿಸೀ ಕೃಪೆಯಿಂ ಮದೀಶ್ವರಾ "॥

ಎಂಬ ಉತ್ಪಲಮಾಲಾವೃತ್ತದಿಂದ ಹಾಡಿದ್ದಾರೆ. " ಅಯ್ಯಾ, ಪಾತಾಳ ವಿತ್ತಿತ್ತ, ಶ್ರೀಪಾದವತ್ತತ್ತ; ಅಯ್ಯಾ, ಬ್ರಹ್ಮಾಂಡವಿತ್ತಿತ್ತ, ಮಣಿಮುಕುಟವತ್ತತ್ತ; ಅಯ್ಯಾ, ದಶದಿಕ್ಕುಗಳಿತ್ತಿತ್ತ, ದಶಭುಜಂಗಳತ್ತತ್ತ ; ಚೆನ್ನಮಲ್ಲಿಕಾರ್ಜುನಯ್ಯ ನೀವೆನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯ " ಎಂಬ ಈ ವಚನವನ್ನು—

" ಎನ್ನೊಡೆಯ, ಪೇಳಲೇಂ ಪಾತಾಳಮಿತ್ತಿತ್ತ ।
ನಿಮ್ಮ ಪಾವನ ಪಾದ ಪದ್ಮಂಗಳತ್ತತ್ತ ॥
ಸದಯ ! ಸಾರಸಭವಾಂಡದ ಸೀಮೆಯಿತ್ತಿತ್ತ ।
ಮದನ ಮರ್ದನ, ನಿನ್ನ ಮಣಿಮುಕುಟವತ್ತತ್ತ ॥
ದಿವಿಜಕುಲದೀಶಾನ, ದಶದಿಸೆಗಳಿತ್ತಿತ್ತ ।
ಭುವನ ನಾಯಕ ನಿನ್ನ ಭುಜದಶಕಮತ್ತತ್ತ ॥
ನಿನ್ನಿಚ್ಛೆಯಿಂ ಚೆನ್ನಮಲ್ಲಿಕಾರ್ಜುನ ಬಂದು ।
ಸನ್ನಿದಂ ನೀನೆಗಡ ! ಮಚ್ಚುಲಕದೊಳಗಿಂದು ॥

ಎಂಬ ಸುಂದರ ಲಲಿತರಗಳೆಯಲ್ಲಿ ಮನೋಹರವಾಗಿ ಹಾಡಿದ್ದಾರೆ, " ಅಯ್ಯಾ, ದೂರದಲ್ಲಿರ್ದಿಹೆಯೆಂದು ಬಾಯಾರಿ ಬಳಲುತ್ತಿರ್ದೆನಯ್ಯ ; ಅಯ್ಯಾ, ಸಾರಿಬಂದು

ನೀನೆನ್ನ ಕರಸ್ಥಲದಲ್ಲಿ ಮೂರ್ತಿಗೊಂಡೊಡೆ ಇನ್ನಾರತಿಯೆಲ್ಲ ನಿನ್ನಲ್ಲಿ ಲಿಂಗಯ್ಯ : ಆಲಿನಿನ್ನಲ್ಲಿ ನಟ್ಟವು ನೋಡಾ ! ಚೆನ್ನಮಲ್ಲಿಕಾರ್ಜುನಯ್ಯ, ನಿನ್ನನೆನ್ನ ಕರಸ್ಥಳದಲ್ಲಿ ನೋಡಿ ಕಂಗಳೇ ಪ್ರಾಣವಾಗಿರ್ದೆನಯ್ಯ "ಈ ವಚನವನ್ನು

" ಎನಗತಿದೂರಗಂ ದಯಿತ, ನೀನೆನುತ್ತೆ ದೆಬಳಲ್ದೆ ನಿಂದನೀಂ ।
ಸನಿಯಕೆ ಸಾರ್ದು ಮೆಯ್ವಿಡಿದು ಮತ್ಕರದಲ್ಲಿರೆ ಚೆನ್ನಮಲ್ಲಿಕಾ-
ರ್ಜುನ ಮನದೊಳ್ ನಿಮಿರ್ದುರತಿ, ನಟ್ಟಿರೆನೇಹದಿನಾಲಿನಿನ್ನೊಳೊ- ।
ಯ್ಯನೆ ನಿಜದೃಷ್ಟಿಯೇ ಪರಣವಾಯ್ತೆನೆ ನಿನ್ನನೆ ನೋಡಿದಪ್ಪೆನಾಂ " ॥

ಪೂಜಾಸಂದರ್ಭದಲ್ಲಿ ಈ ವಚನಗಳ ಆಯ್ಕೆಯ ಸಾಮಂಜಸ್ಯವನ್ನು ಎಷ್ಟು ಹೊಗಳಿದರೂ ತೀರದು. ಹೀಗೆ ಅಕ್ಕಗಳ ವಚನರಚನೆಯು ಸಮಗ್ರಸೌಂದರ್ಯ ರಸ ಕಾವ್ಯದುದ್ದಕ್ಕೂ ಸುರ ಗಂಗೆಯಂತೆ ಹರಿದಿದೆ. ಹೀಗೆ ಪ್ರಾರ್ಥನೆ ಮುಗಿದ ಮೇಲೆ ಹೃದ್ಯ ಗದ್ಯ

" ಎಂದು ಭಕ್ತಿರಸಂ ಭಾವಮಂ ತೀವಿ ತೆರೆವಡೆದುಚ್ಚಳಿಸಿ ಬಳಬಳನೆ
ಭಾಷ್ಪರೂಪದಿಂ ಕಪೋಲಪಾಲಿಗಳಿಂದಿಳಿಯೆ, ಬೆಳಗಿನ ಸುಳಿಪಿಂ
ಕಾಯಕರಣಂಗಳೊಳ್ ಕಳವಳದ ತಮಮೊಚ್ಚತಮಳಿಯೆ. ನೇಹದ
ನೇವರಿಯೊಳ್
ದೇಶ-ಸನ್ನಿವೇಶ-ಸಮಯ-ಮಾನಸಂಧಾನ ಭೇದ ಬಂಧನಂ ಕಳೆಯೆ
ಮನದನ್ನನ
ಚೆನ್ನಮಲ್ಲಿಕಾರ್ಜುನನ ಪರಿಚರ್ಯೆಯೊಳ್ ಪರಮ ರತಿಪಾಟವಂ
ಪಳಪಳದೊಳುಂ
ಬಳೆಯೆ ಶುದ್ಧೋದಕಾಮೃತ ಫಲಗಂಧರಸ ಪಂಚಕ ಪ್ರಪಂಚದಿಂ
ವಿಶುದ್ಧ ಪ್ರೇಮ-
ಸಮಾಸಂಗ ಶಮದಮ ಸಮತೆಗಳ ಸಂಚದಿಂ ಮಜ್ಜನಂ ಬಾಗಿಸಿ,
ಶ್ರೀ ವಿಭೂತಿಯಿಂ
ತಪಸ್ಸಂಪ್ರಪ್ಟಕರಣಗುಣ ಪ್ರಕಾಶಮಯ ವಿಭೂತಿಯಿಂ, ರುದ್ರಾಕ್ಷಿಮಣಿ
ಮಂಡಲದಿಂ
ಪರಮಶಿವಶಕ್ತಿಸಂಪುಟ ಸಮುಸ್ಮಿಷಿತ ಮಂತ್ರಮಾತೃಕಾ ಮಂಡಲದಿಂ ಲುಲಿತ-
ಕರ್ಪೂರ ಪರಿಮಲ ಮಿಲಿತಮಲಯಜ ಗಂಧದಿಂ ಸುಹಿತ ಸತ್ವಾವೋದಮಯ
ಭಾವಾನುಬಂಧದಿಂ ಶಾಲಿಶಿಲ ಗೋಧೂಮಾದಿ ಧವಲಾಕ್ಷತನಿಕರದಿಂ ನಿಯ
ಮನಿಷ್ಠಾದಿ ಶುಭಶೀಲ ಪ್ರಕರದಿಂ. ಸುಂದರಾಭಿನವ ಸುರಭಿಪ್ರಸೂನಂಗಳಿಂ
ವಿರುದ್ಧ ವಿಶ್ರಂಭ ವಿವೇಕ ವೈರಾಗ್ಯದಿಂ ಸುಗುಣಸಂತಾನಂಗಳಿಂ,
ದಶಾಂಗಧೂಪಧೂಮ ಸಂಭಾರದಿಂ ಸತ್ಯ ಶಿವಂ ಸುಂದರಂ

ತತ್ತ್ವಾನುಸಂಧಾನ ವಾಸನಾಪ್ರಸಾರದಿಂ,
ಕಳಿಕಾದೀಪ ಕರ್ಪೂರ ನೀರಾಜನ ವಿಧಾನದಿಂ ಪರಮಶಿವ
ಸಾಮರಸ್ಯ ಬೋಧಾವಧಾನದಿಂ, ನಿಜಪ್ರಾಣೇಶ್ವರನಂ ಪೊರಗೊಳಗೆ
ಪೂಜಿಸುತ್ತೆ ನಡೆನೋಡಿ ನಲಿನಲಿದಾಡಿ ಬಗೆಯು ನೀಡಾಡಿ ಪರಮಪ್ರೇಮ
ರಸರಾಶಿಯೊಳೋಲಾಡಿ ಗಾಡಿಯಿಂದಿಂತುಪಾಡಿದಳ್.''

ಮುಂದೆ ಸುಂದರವಾದ ಎಂಟು ವಚನಗಳನ್ನಾರಿಸಿಕೊಂಡು ವೃತ್ತ ಕಂದಗಳಲ್ಲಿ ಹಾಡಿ ಮಹಾದೇವಿಯಕ್ಕನನ್ನು ಪರಮಶಿವ ಪ್ರೇಮಪರವಶತೆಯಿಂದ ಹಾಡಿ, ಹಾಡಿಸಿ, ಪ್ರದಕ್ಷಿಣೆ ಪ್ರಣಾಮ ಪರಂಪರೆಗಳನ್ನು ನೀಡಿಸಿ, ನಿಡುಗಣ್ಗಳ ಕಡೆಗಳಿಂದ ಗಳಗಳನೆ ಕಣ್ಣೀರ್ಗರೆಸಿ, ಪರಮ ಸಮ್ರಾಜ್ಯ ಸುಖಾನುಭೂತಿವೈಭವ ಮಹಾರ್ಣವದಲ್ಲಿ ಮುಳುಗಿಸಿ ವೈಮನಸ್ಯಗಳನ್ನು ಮರೆಯಿಸುವಂತೆ ವರ್ಣಿಸಿರುವ ಆರು ಪುಟಗಳಷ್ಟು ಪೂಜಾವೈಭವದ, ಹೇಳತೀರದ, ಕೇಳಿಬೇಸರವಾಗದ, ವರ್ಣನೆಯು ಔಚಿತ್ಯ ಅತ್ಯದ್ಭುತ ಶೈಲಿಯಲ್ಲಿ ರಾರಾಜಿಸುತ್ತದೆ. ಇಲ್ಲಿನ ವರ್ಣನೆ ಶ್ರೀಗಳವರ ಲಿಂಗಲೀಲಾ ವಿನೋದ ಚಿತ್ರದ ಪಡಿಯಚ್ಚೇ ಆಗಿದೆ. ಶಿವಶರಣರ ಶರಣೆಯರ ಚರಿತ್ರೆಯನ್ನು ಅವರ ವಚನಗಳ ತಳಹದಿಯ ಮೇಲೆಯೇ ಕಟ್ಟಿರುವ ಕವಿಗಳು ತೀರಾ ವಿರಳ. ಇದ್ದರೂ ಸಮಗ್ರ ವಚನ ರಚನೆಯನ್ನು ಬಳಸಿಕೊಂಡಿಲ್ಲವೆಂದು ಹೇಳಬೇಕು. ವಚನಗಳ ಸಮಗ್ರ ಸಿರಿ ಸಂಪತ್ತನ್ನು ಕಾವ್ಯದೃಷ್ಟಿಯಿಂದ ನೋಡಿ ಹೇಳಿರುವವರು ಶ್ರೀಗಳವರೊಬ್ಬರೇ ಎಂದು ಹೇಳಿದರೆ ತಪ್ಪಾಗದು.

ಹಾಗೆಯೇ, ಕೌಶಿಕನ ಅರಮನೆಯಿಂದ ಅಕ್ಕಹೊರಡುವ ಪ್ರಸಂಗ ಮತ್ತು ನಿಸರ್ಗದ ಚೆಲುವಿನಲ್ಲಿ ಚೆನ್ನಮಲ್ಲಿಕಾರ್ಜುನನನ್ನು ಹುಡುಕಿದ ಪ್ರಸಂಗ ಬಹಳ ಚೆನ್ನಾಗಿದೆ. ಹೀಗೆ ಗಿರಿಗಹ್ವರ ತಿರುಗುತ್ತ ಹಲವು ಇರುಳು ಪಗಲ್‌ಗಳೆದು ಬರುತ್ತಿರುವಾಗ ದೂರದಲ್ಲಿ ಕಲ್ಯಾಣ ಕಾಣುತ್ತದೆ ದೂರದಿಂದಲೇ ಕೈಮುಗಿಯುತ್ತಾಳೆ. ಆ ಕಲ್ಯಾಣಪುರದ ಪರಿಸರಕ್ಕೆ ಬಂದಾಗ ಬೆಳಗಿನ ಸಮಯವಾಗಿತ್ತು.

''ಶಿವಶರಣರ ನಿರಂತರ ಪರಸ್ಮರಣ ವಿಮಲದಿಂ ಹೃದಯತಲದಿಂದುಣ್ಮಿ
ಪರಮೇಶ್ವರಾಪದಾನ–
ಗಾನರಸಮಾತ್ರಲೋಲದಿಂ ಕಂಠನಾಲದಿಂಪೊಣ್ಮಿ ಪ್ರಭಾತವಾತಾವರ್ತಂಗ
ಳೊಳ್ ತರಂಗಂಬಡೆ
ದು ದಿಕ್ಕೆಸೆಯೊಳ್ ಪಸರಿಸಿರ್ದ ಕವಲಿತ ಸಕಲಕಲಿದೋಷಂಗಳನಾ, ಮಹಾ
ದೇವನಾಮಘೋ
ಷಂಗಳಂ ಮಹಾದೇವಿ ಮನಮಣಿಯುರಂ ತಣಿವನ್ನಂ ಶ್ರವಣಪುಟಂಗಳಿಂ
ದೀಂಟುತ್ತೆ–

ಬಸವಣ್ಣನ ಕಲ್ಯಾಣಮುಂ ಕಲ್ಯಾಣದ ಬಸವಣ್ಣನನ್ನಿನ್ನೇಂ ಸಾರ್ದೆಂ ಸಾರ್ದೆ
ನೆಂದಾನಂದ ಪರವಶತೆಯಿಂ ನಲಿನಲಿದಾಡಿ ಚರಮಾಚಲ ಶಿಖರಾವತರಣ–
ಪ್ರವಣನಂ ನಿಶಾರಮಣನಂ ನೋಡಿ ಪುರಪರಿಸರೋಪವನದೊಳೊಂದು ಸರೋವರ
ದೊಳ್ ಮಿಂದು, ಸಮುಪಾಂತಮಾ ಊರ ಮಹೀರುಹಮೂಲದೊಳ್ ಶಾದ್ವಲಮಂ
ಭೂತಲಮಂ ತನುಲತೆಯಿಂದಲಂಕರಿಸಿ ಭಸ್ಮಜ್ಯೋತಿಯೊಳವಗಾಹನಂಗೈದು
ಪಾಣಿಪಯೋಜವಿಷ್ಟರದೊಳಿಷ್ಟಲಿಂಗಮಂ ಯಜಿಸಿ ಪಾಡುತ್ತೆ, ಭಾವದೊಳ್ ಭಜಿಸಿ–
ಕೂಡುತ್ತೆ ಮೈಮರೆದಿರ್ದು, ಪೊರ್ದುಗೆಯ ಪಾದಪಂಗಳೊಳ್, ನಳಿನಳಿಪ ತಳಿರ್ಗಳ
ತೊಂಗಲ್ಗಳಿಂ ಮೊಗಂಗಳಿಂ ಮೂಡಣ್ಗೆ ನೀಡಿ ನಲಿನಲಿವ ಕುಲಾಯಂ ನಿಲಯಂಗಳ
ಚಿಲಿಮಿಲಿಯುಲಿಗಳಿಂದೆಚ್ಚೆತ್ತು ಮೆಲ್ಲನಲ್ಲಿಂದೇಳ್ದು ಲಾವಣ್ಯದೊಡಲಂ ಪಿಡಿದ
ಮೃಡಭಕ್ತಿಯೇ ತಾನೆಂಬಿನಂ ಮುಂತಣ್ಗೆ ಅಡಿಗೊಂಡಾಗಳ್...."

ಸೂರ್ಯೋದಯವಾಯಿತು. ಎತ್ತೆತ್ತಲೂ ಪ್ರಭಾತಸಂಧ್ಯಾರುಣಕಾಂತಿ ಪಸರಿಸಿತು. ಕಲ್ಯಾಣ ನಗರದ ಸೌಧಾಗ್ರಗಳು—

ವಾಸವದಿಗ್ವಧೂಮುಖದ ವಿದ್ರುಮರಾಗದ ಶೋಭೆಯಿಂ ಸಮು–।
ಲ್ಲಾಸಿಸಿ, ಮೂಡಣಂಬರದೊಳಂಬುದಖಂಡಮನರ್ಣವನಿಂ ಸಮು–।
ದ್ಭಾಸಿಸಿ ಶೋಣರತ್ನಮಕುಟಾಕೃತಿಯಿಂ ಪುರಸೌಧಶೃಂಗದೊಳ್ ।
ನೇಸರ ಪೊಂಗದಿರ್‌ಗಡಣಮೇಂ ಗರಿದೋರಿತೊ ದೇವಿಯುಗ್ರದೊಳ್ ।

ಅಕ್ಕನ ಮುಖದಲ್ಲಿ ಈಗ ನಗೆ ಚಿಮ್ಮಿತು. ನಸುನಗುತ್ತಾ ಹೇಳುತ್ತಾಳೆ:

ಇದು ಕೈಲಾಸಂ ಪೊರಗೊಳ।
ಗಿದು ಕಲ್ಯಾಣಂ ಸಮಂತು ತಿಳಿದಪರಿವನಾರ್।
ಹೃದಯೇಶ್ವರ ನಿನ್ನವರಿ।
ಲ್ಲಿದೊ ಸುಳಿದಪರಾಹ ಕಾಣ್ಬೆನಣ್ಣನನಿನ್ನೇಂ॥

ಎಂಬ ಉತ್ಸಾಹ ಅಕ್ಕಮಹಾದೇವಿಯಲ್ಲಿ ತುಂಬಿ ತುಳುಕಿ ಅನೇಕ ವಚನಗಳಿಂದ ಶರಣರ ಕಲ್ಯಾಣ ಗುಣವನ್ನೂ ಬಸವನ ಕಲ್ಯಾಣದ ಮಹಿಮಾತಿರೇಕವನ್ನೂ ಹೊಗಳುತ್ತಾಳೆ. ಅಕ್ಕನೇನೋ ಅಣ್ಣನನ್ನು ಕಂಡಳು. ಆದರೆ "ಗೌರೀಶಂಕರ ವಿರಚಿತ

ದೊಳ್ ಅಕ್ಕಮಹಾದೇವಿಯೆಂಬ ಚಂಪೂಚರಿತದೊಳ್" ಅಣ್ಣನನ್ನು ಅಕ್ಕ ಕಾಣುವ ಭಾಗ್ಯವಿಲ್ಲ. ಓದುವ ಭಾಗ್ಯ ಕನ್ನಡಿಗರಿಗೂ ಇಲ್ಲ. ಅಕ್ಕ ಕಲ್ಯಾಣಕ್ಕೆ ಬಂದು ಕಿನ್ನರಿಯ ಬೊಮ್ಮಣ್ಣಾದಿಗಳೊಡನೆ ಸಂಭಾಷಿಸುತ್ತಿರುವಲ್ಲಿಗೆ ಕಾವ್ಯ ಹಠಾತ್ತಾಗಿ ಕೊನೆಗೊಂಡಿದೆ. ಕಾಲಗೆ ಗುಣಮಣಮಿಲ್ಲಂ ಗಡಾ" ಎಂಬ ಉದ್ಗಾರವನ್ನು ನಾವೂ ತೆಗೆದು ಸುಮ್ಮನಾಗಬೇಕಾಗುತ್ತದೆ.

## ಶ್ರೀಗಳವರ ಕೊನೆಯ ದಿನಗಳು

ಕನ್ನಡ ನಾಡಿನ ಸಾರಸ್ವತ ಪ್ರಪಂಚದಲ್ಲಿ ಹುಲುಸಾಗಿ ಬೆಳೆದ ಬೆಳೆ, ಬಿರುಗಾಳಿ ಯೊಂದಕ್ಕೆ ಸಿಕ್ಕಿ ಫಲಬಾರದ ಮುನ್ನವೇ ನೆಲಕ್ಕೊರಗಿತು. ಎಣ್ಣೆಯಿತ್ತು, ಬತ್ತಿ ಯಿತ್ತು, ಪಣತಿಯಿತ್ತು, ಸುತ್ತಲ ತಮವ್ವೋಡಿಸುವ ಜ್ಯೋತಿ, ಪಣತಿ, ಎಣ್ಣೆ, ಬತ್ತಿ ಗಳ ಸಂಯೋಗದಿಂದ ಪ್ರಕಾಶಮಾನವಾಗಿ ಉರಿಯುತ್ತಿತ್ತು, ಆದರೆ ಕ್ರೂರಕಾಲನ ಮಹಾಘಾತದಿಂದ ಪಣತಿಯೊಡೆಯಿತು. ಎಣ್ಣೆ ಚೆಲ್ಲಿತು, ಬತ್ತಿ ಮಣ್ಣುಪಾಲಾಯಿತು. ಜ್ಯೋತಿ ಜ್ಯೋತಿಯಲ್ಲಿ ಸೇರುವೆಗೊಂಡಂತಾಯಿತು ಗೌರೀಶಂಕರ ಮಹಾಸ್ವಾಮಿ ಗಳವರ ಲಿಂಗೈಕ್ಯ ನಿರ್ಭರ ಸ್ಥಿತಿ, ಭೌತ ಪ್ರಪಂಚಕ್ಕೆ. "ಜಾತಸ್ಯ ಮರಣಂ ಧ್ರುವಂ" ಎಂಬುದಾಗಿ ಕೂಡಲ ಸಂಗಮದೇವ ಬರೆದ "ಬರಹವ ತಪ್ಪಿಸುವೊಡೆ ಹರಿ ಬ್ರಹ್ಮಾದಿಗಳವಲ್ಲ" ಎಂಬ ಬಸವಣ್ಣನವರ ಅಭಿಪ್ರಾಯಾನುಸಾರ ಗೌರೀಶಂಕರ ಶ್ರೀಗಳವರ ಅವತಾರಕಾರ್ಯ ಇಷ್ಟೇ ಆಗಿತ್ತೆಂದು ತೋರುತ್ತದೆ. ಆದರೆ ಭೌತ ಪ್ರಪಂಚ, ಈಡೇರದ ಆಶೋತ್ತರಗಳಿಗಾಗಿ ಮರುಗಿ ಕಣ್ಣೀರ್ಗರೆಯ ಬೇಕಾಗುತ್ತದೆ.

ಮೊದಲು ಹೊಟ್ಟೆನೋವು ಕಾಣಿಸಿಕೊಂಡಿತು. ಆ ಹೊಟ್ಟೆನೋವನ್ನು ಶ್ರೀಗಳವರು ತಾಳಿಕೊಂಡರು. ಹೀಗಾಗುತ್ತಿದೆಯೆಂದು ಯಾರಿಗೂ ಹೇಳಲಿಲ್ಲ. ಒಳಗೊಳಗೇ ಅನುಭವಿಸುತ್ತಿದ್ದರು. ಮುಖವು ಸದಾ ನಗುತ್ತಲೇ ಇತ್ತು. ದೇಹ ದಿನದಿನಕ್ಕೆ ಕೃಶವಾಗುತ್ತ ಬಂತು. ಒಳಗೊಳಗೇ ಸುಡುತ್ತಿರುವ ಮಹಾ ವಿಟಪಿಯ ರೆಂಬೆಕೊಂಬೆಗಳು ಬಾಡುವಂತೆ, ಮೂರು ನಾಲ್ಕು ತಿಂಗಳು ಯಾರಿಗೂ ಹೇಳದ್ದ ರಿಂದ ಒಳಗೊಳಗೇ ಆ ರೋಗ ಬೆಳೆಯಿತು. ದೇಹಾನಿತ್ಯತೆಯ ಸಮಗ್ರ ಸ್ಥಿತಿಯನ್ನು ಅರಿತ ವೈರಾಗ್ಯನಿಧಿಗೆ ಈ ವ್ಯಾಧಿ ಮನಃಕ್ಲೇಶಗೊಳಿಸಲಿಲ್ಲ. 'ದೇಹ ಬಂದಿತ್ತು ಹೋಗುತ್ತದೆ' ಎಂಬ ಮೂಲ ಮಂತ್ರದಲ್ಲಿಯೇ ಇತ್ತು ಅವಿಕಾರ ಮನಸ್ಸು. ಸಮಾಜ ಮರುಗಿತು. ಯಾರು ಮರುಗಿದರೇನು? ಶ್ರೀಗಳವರ ವ್ಯಾಧಿ ಗುಣವಾಗುವ ಸ್ಥಿತಿ ಯಲ್ಲಿರಲಿಲ್ಲ. ತತ್‌ಕ್ಷಣವೇ ಜಗತ್ಪ್ರಸಿದ್ಧ ವೆಲ್ಲೂರು ಚಿಕಿತ್ಸಾಲಯಕ್ಕೆ ಮಹಾರಾಣಿ ಯವರೂ, ಸುತ್ತೂರು ಶ್ರೀಗಳವರೂ ಪ್ರಯತ್ನಿಸಿ ಶ್ರೀಗಳವರನೊಯ್ದರು. ಫಲ ವಾಗಲಿಲ್ಲ. ಕಾಳ್ಗಿಚ್ಚಿನಂತೆ ಹಬ್ಬಿದ ಈ ಸುದ್ದಿಯನ್ನು ಕೇಳಿ ಜನ ನಾಡ ಮೂಲೆ ಮೂಲೆಗಳಿಂದ ವೆಲ್ಲೂರಿಗೆ ಧಾವಿಸಿತು. ಸಿದ್ಧಗಂಗಾ ಶಿವಯೋಗೀಶ್ವರರೂ ಧೀರ

ಪ್ರಕೃತಿಯು ವೈರಾಗ್ಯ ಸಂಪದ್ಭರಿತರಾದರೂ ಏತತ್ಪ್ರಸಂಗದಲ್ಲಿ ತೀರಾ ಧೈರ್ಯಗುಂದಿ ಧಾವಿಸಿದರು. ಪರಿಸ್ಥಿತಿ ಕೈಮೀರಿ ಹೋಗಿದೆಯೆಂದು ಅಲ್ಲಿನ ವೈದ್ಯರು ಹೇಳಿದಾಗ ಘಳಘಳನೆ ಕಣ್ಣೀರ್ಗರೆದರು.

ಅತ್ಯಂತ ಉಲ್ಬಣಾವಸ್ಥೆಯ ವ್ಯಾಧಿಬಾಧೆಯಲ್ಲೂ ಶ್ರೀಗಳವರು ಒಂದು ಸಲವೂ ನರಳುವ ಅಥವಾ ಸಂಕಟಪಡುವ ಪ್ರಸಂಗವನ್ನೇ ಯಾರಿಗೂ ತೋರಿಸಲಿಲ್ಲ. ಮನಃ ಪ್ರಸನ್ನತೆಯ ಹಾಸ್ಯದಂತಿತ್ತು ಮುಖಭಂಗಿ. ಈ ಸಂದರ್ಭದಲ್ಲಿ ನಡೆದ ಒಂದು ಪ್ರಸಂಗವನ್ನು ಹೇಳದಿದ್ದರೆ ಲೋಪವಾದೀತು. ಸಿದ್ಧಗಂಗಾಸ್ವಾಮಿಗಳು ಅಲ್ಲಿಗೆ ದಯಮಾಡಿಸಿದಾಗ ಗೌರೀಶಂಕರ ಶ್ರೀಗಳು ತತ್ಕ್ಷಣವೇ ಒಳ್ಳೊಳ್ಳೆ ಭಕ್ಷ್ಯ ಭೋಜ್ಯ ಪ್ರಸಾದ ಪರಿಕರಗಳನ್ನು ಸಿದ್ಧಗೊಳಿಸಲಾಜ್ಞೆಮಾಡಿ ಬಿಟ್ಟಿದ್ದರು. ಕೆಲವೇ ಘಂಟೆಗಳಲ್ಲಿ ಹೋಳಿಗೆ ಪ್ರಸಾದ ಸಿದ್ಧವಾಗಿಯೂ ಬಿಟ್ಟಿತು. ಶ್ರೀ ಸಿದ್ಧಗಂಗಾ ಶ್ರೀಗಳವರು ಗೌರೀಶಂಕರ ಶ್ರೀಗಳವರ ಹತ್ತಿರವೇ ಇದ್ದರು. ಸಮಾಜದ ಆಧಾರ ಸ್ತಂಭವೊಂದು ಕಳಚಿ ಬೀಳುವುದಲ್ಲಾ ಎಂದು ಸಂಕಟಪಡುವ ಅವರ ಮನಸ್ಸನ್ನು ಗೌರೀಶಂಕರ ಶ್ರೀಗಳೂ ಅರಿತರು. ''ಸ್ವಾಮಿ ನೀವು ಜಂಗಮ ಪುಂಗವರು, ಮಹಾ ದಾಸೋಹಿಗಳು, ಬೃಹತ್ಸಂಸಾರಿಗಳು. ಇಂದು ಇಲ್ಲಿಗೆ ಬಂದುಬಿಟ್ಟಿದ್ದೀರಿ. ನಿಶ್ಚಿಂತೆ ಯಿಂದ ಆನಂದವಾಗಿ ಪ್ರಸಾದ ಸ್ವೀಕರಿಸಿ ನನಗೂ ಸ್ವಲ್ಪ ಪ್ರಸಾದ ಕೊಡಿ. ಎಲ್ಲವೂ ಸಿದ್ಧವಾಗಿದೆ. ಸ್ನಾನ ಮುಗಿಸಿ. ಪೂಜಾಗಾರ ಪ್ರವೇಶಿಸಿರಿ" ಎನ್ನಲು "ಬುದ್ಧೀ, ನನಗೆ ಪ್ರಸಾದವೇ ಇಂದು ಸೇರುವುದಿಲ್ಲ'' ಎಂದರಂತೆ ಗದ್ಗದಿತ ಕಂಠರಾಗಿ. ಆಗ ಗೌರೀ ಶಂಕರ ಶ್ರೀಗಳು ''ನನ್ನ ಭಕ್ತಿಯನ್ನು ಸ್ವೀಕರಿಸಿ ನನ್ನ ಮನಸ್ಸಂತೋಷಗೊಳಿಸ ಬೇಕೆಂಬ ಇಚ್ಛೆಯಿದ್ದರೆ ತೃಪ್ತಿಯಾಗಿ ಪೂಜೆಮಾಡಿಪ್ರಸಾದ ಪರಿಣಾಮಗೊಳ್ಳಬೇಕು. ನನ್ನ ಮನಸ್ಸಿಗೆ ಸಂಕಟವನ್ನುಂಟು ಮಾಡಬೇಕೆಂಬ ಇಚ್ಛೆಯಿದ್ದರೆ ಹಾಗೇ ಇರಬೇಕು" ಎಂದರಂತೆ. ಇದೆಂಥ ಕಟ್ಟಾಜ್ಞೆ! ಸಿದ್ಧಗಂಗಾ ಶ್ರೀಗಳವರೊಡನೆ ಸುತ್ತೂರು ಶ್ರೀಗಳವರೂ ಪೂಜಾದಿ ಕಾರ್ಯಗಳನ್ನು ಮುಗಿಸಿದರು. ಇವರಿಬ್ಬರೂ ಪ್ರಸಾದ ಸ್ವೀಕಾರ ಮಾಡಿದರೆಂಬ ಸುದ್ದಿ ಶ್ರೀಗಳವರಿಗೆ ತಿಳಿದ ಕೂಡಲೇ ಹೃದಯಾಂತರಾಳ ದಿಂದ ಹೊರಬಂದ ಸಂತೋಷ ಮುಖದಲ್ಲಿ ತೃಪ್ತಿಯ ಕಿರುನಗೆಯನ್ನು ತಂದಿತು. ಎರಡು ಮೂರು ದಿನಗಳು ಸಿದ್ಧಗಂಗಾಶ್ರೀಗಳು ಅಲ್ಲೇ ಉಳಿದರು. ಆಗ''ಸ್ವಾಮಿ, ತಾವಿನ್ನು ಮಠಕ್ಕೆ ದಯಮಾಡಿಸಿ. ಇಲ್ಲಿಯ ಚಿಂತೆಯನ್ನು ಬಿಡಿ. ಧೈರ್ಯವಾಗಿರಿ, ಎಲ್ಲವನ್ನೂ ಅರಿತ ನಿಮಗೆ ಹೇಳಬೇಕಾದುದಿಲ್ಲ. ಮಠದ ಕಾರ್ಯಗಳು ಅನಂತ. ಅದೊಂದು ದೊಡ್ಡ ಸಂಸಾರ ನಿಮ್ಮದು. ಅದು ಸುಸೂತ್ರವಾಗಲಿ'' ಎಂದಪ್ಪಣೆ ಮಾಡಿ ಕಳಿಸಿಕೊಟ್ಟರಂತೆ.

ಇಂಥ ಪುಣ್ಯಮಯ ಮಂಗಳಾಂಗ, ವೇಲೂರು ಆಸ್ಪತ್ರೆಯಲ್ಲಿ ಕೊನೆಗೊಂಡು ೧೨-೮-೫೨ನೆಯ ದಿನಾಂಕ ಅವತಾರ ಪರಿ ಸಮಾಪ್ತಿಗೊಳಿಸಿತು. ೧೩-೮-೫೨ ನೆಯ

ವಿನ ವಿಧ್ಯುಕ್ತವಾಗಿ ಅರಮನೆ ಪಂಚಗವಿಮಠದ ಆವರಣದಲ್ಲಿ ಗದ್ದುಗೆಗೊಳಿಸಲಾಯಿತು, ಲಿಂಗದೇಹವನ್ನು ತಂದು.

ಹೀಗೆ ಚಿಕ್ಕಲಗೆರೆಯ ಬೆಟ್ಟದಮಠದ ಮಲ್ಲಿಗೆ ಮೊಗ್ಗು ನಾಡ ಮೂಲೆ ಮೂಲೆಗೆ ತನ್ನ ಕಂಪನ್ನು ಬೀರಿ ಮೈಸೂರು ಬೆಟ್ಟದ ಮಠದ ಮಹಾ ನಿರಾಭಾರಿ ಜಂಗಮಪದ ಪಟ್ಟಗೊಳಿಸಿ ಈಶ್ವರನಡಿ ಸೇರಿತು.

## ಗುರುಲಿಂಗ ಜಂಗಮ ಸೇವಾಧುರೀಣತೆ

ಶ್ರೀ ಗೌರೀಶಂಕರ ಸ್ವಾಮಿಗಳು ಕೇವಲ ಶುಷ್ಕಪಂಡಿತರಲ್ಲ. ಅವರದು ಅನ್ಯಾದೃಶ ಗುರುಲಿಂಗ ಜಂಗಮ ಭಕ್ತಿ; ಆದರೆ ಆ ಭಕ್ತಿ ಕುರುಡು ಭಕ್ತಿಯೂ ಅಲ್ಲ; ಅರಿತು ಅರ್ಚಿಸುವ ಜಾಗೃತಭಕ್ತಿ. ಕ್ರಿಯೆಯಿಲ್ಲದ ಜ್ಞಾನ ಪ್ರಯೋಜನವಿಲ್ಲದ್ದೆಂದು ಅವರು ತಮ್ಮ ಅನೇಕ ಪ್ರವಚನಗಳಲ್ಲಿ ಒತ್ತಿ ಹೇಳುತ್ತಿದ್ದರು. ಚೈತನ್ಯಪೂರ್ಣವಾದ ಸತ್ಕ್ರಿಯಾಶಕ್ತಿ ಸುಜ್ಞಾನಕ್ಕೀಡದಿದ್ದರೆ ಅದೊಂದು ಮೇಲುಪಟ್ಟದ ಅಜ್ಞಾನವೆಂದೇ ಶ್ರೀಗಳು ಅನೇಕ ದೃಷ್ಟಾಂತಪೂರ್ವಕ ವಿವರಿಸುತ್ತಿದ್ದರು. ಅಂತೆಯೇ ಸುಜ್ಞಾನಮೂರ್ತಿಗಳಾದ ಜಂಗಮಮೂರ್ತಿಯಲ್ಲಿ ಸೇವಾಕೈಂಕರ್ಯವೆಸಗಿ ಲಿಂಗಸುಖದಲ್ಲಿ ಅವಿರಳಾನಂದಗೊಂಡು ಓಲಾಡುತ್ತಿದ್ದರು. ಅರಮನೆ ಪಂಚಗವಿಮಠಕ್ಕೆ ಜಂಗಮಮೂರ್ತಿಗಳನ್ನು ಬರಮಾಡಿಕೊಂಡು ಅವರ ಪಾದಪೂಜೆಯನ್ನು ಸ್ವತಃ ತಾವೇ ಆಚರಿಸಿ ತೀರ್ಥಪ್ರಸಾದ ಸ್ವೀಕಾರಮಾಡಿ, ಪುನೀತರಾದ ಹಾಗೆ ಭಾವಿಸಿ, ಉದ್ಘಾಟಿಸಿಕೊಳ್ಳುತ್ತಿದ್ದರು. ಅವರದು ಅದ್ಭುತಶಕ್ತಿ; ಸ್ವತಃ ತಮ್ಮಲ್ಲಿ ಜಂಗಮತ್ವ ವಳವಟ್ಟು. ಪ್ರಸಾದತತ್ತ್ವದಲ್ಲಿ ಬಹಳ ಎತ್ತರ ಮಟ್ಟದಲ್ಲಿ ಅವರ ಚರ್ಯೆ ಸಾಗುತ್ತಿತ್ತು. ಇಂದು ಅವರ ಜೀವನದ ಘಟನೆಯನ್ನಿಲ್ಲಿ ವಿವರಿಸುವುದು ಅವಶ್ಯಕವೆನಿಸೀತು:

ಶ್ರೀಗಳವರು ಕಾಶಿಯಲ್ಲಿದ್ದಾಗ ಮೈಸೂರಿನ ಅರಸುಮಂಶಕ್ಕೆ ಸೇರಿದ ವೀರಶೈವ ನಿಷ್ಠಾಗರಿಷ್ಠೆಯರಾದ ವೃದ್ಧಮಾತೆಯೋರ್ವರ ಆಶ್ರಯದಲ್ಲಿ ನಿರಾತಂಕವಾಗಿ ಅಖಂಡ ೩೫ ವರ್ಷ ವಿದ್ಯಾಭ್ಯಾಸ ಮಾಡಿದುದು ಸರ್ವವಿಧಿತ. ಮಾತೆಯವರದು ಶ್ರೀಗಳವರ ವಿಷಯದಲ್ಲಿ ತಾಯಿಯ ವಾತ್ಸಲ್ಯ ಮತ್ತು ಮಮತೆ; ಪರಮ ಗುರುವಿನಲ್ಲಿರುವ ಭಯಭಕ್ತಿಭಾವ; ಮತ್ತೊಂದೆಡೆ ಸಂರಕ್ಷಕನಲ್ಲಿರುವ ಅನನ್ಯಶರಣ್ಯಬುದ್ಧಿ. ಈ ಮುಷ್ಟ್ಯರಿಗಳ ಭಾವಸಂಗಮದ ಬಂಧನದಲ್ಲಿ ಆ ಮಾತೆಯವರು ಶ್ರೀ ಶ್ರೀಗಳವರನ್ನು ಬಂಧಿಸಿದ್ದರು. ಶ್ರೀಗಳವರ ವಿವಿಧವಿದ್ಯಾವೈದುಷ್ಯ ಜೀವನ, ಶಿವಲಿಂಗ ನಿಷ್ಠಾಗರಿಷ್ಠ ಜೀವನ ಈ ರೀತಿಯ ಪರಿಸರದಲ್ಲಿ ಅವಿಚ್ಛಿನ್ನವಾಗಿ ಸಾಗಿತ್ತು. ಒಮ್ಮೆ ಯುಗಾದಿಯೋ ಹಬ್ಬದ ಸಡಗರ ಮನೆಯಲ್ಲಿ; ಮಾತೆಯವರು ಆ

ದಿನ ಅದೇನು ಭಾವಿಸಿದರೋ ಈ ದಿನ ಗುರುವಿಗೆ ಚೆನ್ನಾಗಿ ಪ್ರಸಾದ ನೀಡಿ ಉಣ್ಣಿಸಬೇಕು, ಅವರ ತೃಪ್ತಿಯಂತೆ ತಾನು ತೃಪ್ತಿ ಪಡೆಯಬೇಕೆಂಬ ಭಾವ ಮಾತೆಯಲ್ಲಿ ಮುಮುಕರಿಸಿದೆ. ಹಲವಾರು ಬಗೆಯ ಭಕ್ಷ್ಯಗಳನ್ನು ಮಾಡಿಸಿದರು. ಅವರ ಆ ಮನೆಯಲ್ಲಿದ್ದವರು ಆಳು ಸಮೇತ ೫-೬ ಜನಗಳು. ಒಟ್ಟು ಎಳೆಂಟು ಜನಗಳಿಗೆ ಸಾಕಾಗುವಷ್ಟೆಂದು ಭಾವಿಸಿ ಪ್ರಸಾದ ಪರಿಕರಗಳೆಲ್ಲ ಸಿದ್ಧವಾದುವು. ಆ ದಿನ ಗೌರೀಶಂಕರ ಸ್ವಾಮಿಗಳವರಿಗೆ ಅದೇಕೋ ಹಸಿವೆಯೂ ಹೆಚ್ಚಾಯಿತಂತೆ. ಶ್ರೀಗಳವರ ಸ್ನಾನ ಪೂಜೆ ತೀರ್ಥಪ್ರಸಾದ ಪ್ರದಾನಾದಿ ಕಾರ್ಯಗಳೆಲ್ಲ ಮುಗಿದ ಮೇಲೆ ಶ್ರೀಗಳವರು ಎಡೆಬಟ್ಟಲನ್ನು ತೊಡೆಯಮೇಲಿಟ್ಟುಕೊಂಡರು. ಆ ದಿನ ಶ್ರೀಮಾತೆಯವರೇ ಸಾಕ್ಷಾತ್ ಪ್ರಸಾದವನ್ನು ಎಡೆಮಾಡಲುಜ್ಜುಗಿಸಿದರು. ಶ್ರೀಗಳವರ ಲಿಂಗಭೋಗೋಪಭೋಗ ಭಾವನಾವಿಶಿಷ್ಟ ಪ್ರಸಾದ ಸ್ವೀಕಾರ ಕ್ರಿಯೆ ಪ್ರಾರಂಭವಾಯಿತು. ಮಾತೆಯವರು "ಇನ್ನಷ್ಟು ಸ್ವೀಕಾರಮಾಡಿ; ಇನ್ನಷ್ಟು ಸ್ವೀಕಾರಮಾಡಿ" ಒತ್ತಾಯಕ್ಕೆ ಮೊದಲಾಯಿತು. ಶ್ರೀಗಳವರು ಮಾತೆಯವರ ಮುಖವನ್ನೊಮ್ಮೆ ನೋಡಿದರು, ಅವರ ನೋಟ ಅವರ ಮನಸ್ಸಿನ ಯಾವ ವಿಚಾರವನ್ನೂ ವ್ಯಕ್ತಪಡಿಸದ ಸಹಜ ಭಾವಭರಿತವಾದುದು. ಮಾತೆಯವರ ಮುಖದಲ್ಲಿ ಹೆಚ್ಚಾಗಿ ನೀಡಬೇಕು; ಹೆಚ್ಚಾಗಿ ಪ್ರಸಾದ ಸ್ವೀಕರಿಸುವುದನ್ನು ನೋಡಿ ತಣಿಯಬೇಕು; ಜಂಗಮ ತೃಪ್ತಿಯಲ್ಲಿ ತಾನು ಓಲಾಡಬೇಕೆಂಬ ಅಹಂಭಾವ ಹೆಡೆಯೆತ್ತಿ ನಿಂತಿರುವುದು. ಶ್ರೀಗಳವರ ಭಾವಕ್ಕೆ ಹೊಳೆಯಿತು. ಸ್ವಾಮಿಗಳು ಬೇಕೆನ್ನಲಿಲ್ಲ ಬೇಡವೆನ್ನಲಿಲ್ಲ ಒಮ್ಮೆ ಕಿರುನಗೆನಕ್ಕು ಸುಮ್ಮನೆ ಕುಳಿತು ಬಿಟ್ಟರು. ಸರಿ, ಮಾತೆಯವರು ಪ್ರಸಾದ ತಂದು ಬಡಿಸತೊಡಗಿದರು. ಗೌರೀಶಂಕರರು ಸ್ವೀಕರಿಸತೊಡಗಿದರು. ಅದೊಂದು ಅದ್ಭುತ ಘಟನೆ. ಎಳೆಂಟು ಜನಕ್ಕೆಂದು ಮಾಡಿದ ಪ್ರಸಾದವೆಲ್ಲ ಬರಿದಾಯಿತು. ಶ್ರೀಗಳವರು ಊಟ ಮಾಡುತ್ತಲೇ ಇದ್ದರು. ಆಗ ಮಾತೆಯವರಿಗೆ ಅರಿವಾಯಿತು: ನಾನಿಂದು ತಪ್ಪುಮಾಡಿದೆ. ಪ್ರಭುದೇವರ ಪ್ರಸಾದ ಸ್ವೀಕಾರದ ಪ್ರಸಂಗವನ್ನರಿತೂ ಅರಿತೂ ಇಂದು ಹೀಗೆ ಶ್ರೀಗಳವರ ವಿಷಯದಲ್ಲಿ ಅಹಂಕಾರಗೊಂಡು ಅವರನ್ನು ಪ್ರಸಾದ ನೀಡಿ ತೃಪ್ತಿಪಡಿಸುತ್ತೇನೆಂಬ ವೃಥಾ ಸಾಹಸಕ್ಕೆ ಅಜ್ಞಾನದಿಂದ ತೊಡಗಿದೆನೆಂದುಕೊಂಡರು. ನಾನು ಏನೋ ಎಂದು ಭಾವಿಸಿದುದು ತಪ್ಪಾಯಿತೆಂದು ಯೋಚಿಸಿ, ಬಸವಣ್ಣ ತನ್ನ ಶುದ್ಧಾಂತಃಕರಣವಿಶಿಷ್ಟ ಲಿಂಗತನುವನ್ನು ಪ್ರಭುದೇವರ ಮುಂದೆ ಈಡಾಡಿದಂತೆ ಈಡಾಡಿ—"ಇನ್ನೆಂದೂ ಇಂಥ ತಪ್ಪು ಮಾಡುವುದಿಲ್ಲ ಕ್ಷಮಿಸಬೇಕು' ಎಂದು ಬೇಡಿಕೊಂಡರಂತೆ. ಆಗ ಶ್ರೀಗಳವರು ಏನೂ ಮಾತನಾಡಲಿಲ್ಲವಂತೆ. ಮಾಡಿದೆ, ನೀಡಿದೆ ಎನ್ನುವ ಭಾವ ತಪ್ಪು. ಪ್ರಸಾದ ತತ್ತ್ವ ಸಹಜಾಚರಣೆಯ ಭಾವದಿಂದ ಕೂಡಿರಬೇಕು. ಮಾಡುವಾತ ನಾನಲ್ಲ. ನೀಡುವಾತ ನಾನಲ್ಲ. ಎಂದಾಗಲೇ ಆ ತತ್ತ್ವದಲ್ಲಿ ಪರಿಪೂರ್ಣತೆ ಸಾಧ್ಯವಾದೀತು.

ಅದು ನಿರ್ಮಲಾಂತಃಕರಣದಿಂದ ಹೊರ ಹೊಮ್ಮುವ ಭಾವವಾಗಿರಬೇಕು. ಇಷ್ಟೊಂದು ಎತ್ತರ ಮಟ್ಟದಲ್ಲಿತ್ತು ಅವರ ಪ್ರಸಾದ ತತ್ತ್ವ.

ಪ್ರಸಾದದ ಘನವನರಿದೆನೆಂಬುದು ಕುಚಿತ್ತವಲ್ಲದೆ, ಸುಚಿತ್ತವಲ್ಲ. ಅದು ಮೇಲ್ಮಟ್ಟದ ಹಂತದಲ್ಲಿ ಅದ್ಭುತ ಶಕ್ತಿ ಪ್ರದರ್ಶನ ಮಾಡುತ್ತದೆ. ಆದರೆ ಆ ತತ್ತ್ವದ ವ್ಯಾಪ್ತಿಗೆ ಅಳವಟ್ಟವರಲ್ಲಿ ಮಾತ್ರ ಆ ಕ್ರಿಯೆ ನಡೆದೀತು, ಸರ್ವತ್ರಸಾಧ್ಯವಲ್ಲ; ಸಾಧುವೂ ಅಲ್ಲ. ಪರೀಕ್ಷೆಗಾಗಿ ಓದಿ ಅದರಲ್ಲಿ ತೇರ್ಗಡೆಯಾಗಲು ಬಯಸಿ ಬಂದವರಿಗೆ ಪರೀಕ್ಷೆಯಲ್ಲದೆ, ಬೀದಿಯವರಿಗೆಲ್ಲ ಅಲ್ಲ. ಜಂಗಮ ಪ್ರಸಾದ ಘನವಸ್ತು. ಪ್ರಸಾದ ತತ್ತ್ವವೆಂದರೆ ಕೇವಲ ಪ್ರಸಾದವನ್ನು ಲಿಂಗಭೋಗೋಪಭೋಗಿಸುವುದಷ್ಟೇ ಅಲ್ಲ; ಪ್ರಸನ್ನ ಪರಿಣಾಮ. ಅದು ತನುಮನ ಭಾವದ ಪ್ರಸನ್ನತೆಯಲ್ಲಿಯೂ ವ್ಯಕ್ತವಾಗುವುದು. ಹೊಟ್ಟೆಯಿಂದ ಅದರ ಘನತೆಯಲ್ಲ; ತೃಪ್ತಿಯಿಂದ. ಅಭಿನ್ನವಾದ ಜ್ಞಾನವಳವಟ್ಟಾಗ ಆ ಅಭಿನ್ನವಾದ ಜ್ಞಾನನಿರ್ಧಾರವಾದಾಗಲೇ ಸರ್ವಾಪೇಕ್ಷೆಗಳು ಅಡಗುತ್ತವಲ್ಲವೇ ನೀಡುವವನ ಬುದ್ಧಿ ಮುಮುಕರಿಸಿದಾಗ ಉಂಡುದವನ ಭಾವವೂ ಪಲ್ಲವಿಸಿ ಆಗವನು ಲಿಂಗತನುವಿಡಿದವನಾಗಿ ಅಂಗವಿರಹಿತನೆನಿಸುತ್ತಾನೆ. ಆಗ ನಮ್ಮ ಪಾತ್ರೆಗಳಲ್ಲಿನ ಪ್ರಸಾದವೆತ್ತಲೋ ಪಟಾಕಾಶದತ್ತ ಸೇರಿಬಿಡುವುದು. ಸ್ವರೂಪ ಪ್ರಸಾದವು ನಿರೂಪ ಪ್ರಸಾದವಾಗಿ ಹರಹರಗೊಂಡುಬಿಡುವುದು, ಪ್ರಭುದೇವರ ಹಸಿವಿನ ರಹಸ್ಯವನ್ನಿಲ್ಲಿ ನೆನೆಯಬಹುದು.

ಇಂಥ ಮಹಾ ಪ್ರಸಾದ ತತ್ತ್ವಾರಾಧಕರಾದ ಗೌರೀಶಂಕರ ಸ್ವಾಮಿಗಳವರು ತಮ್ಮ ಜೀವಿತದಲ್ಲಿ ಅತ್ಯಂತ ಭಕ್ತಿ ಭಾವದಿಂದ ಪೂಜಿಸುತ್ತಿದ್ದ ಎರಡು ಪೂಜ್ಯ ವ್ಯಕ್ತಿಗಳೆಂದರೆ: ಒಂದು ಕನಕಪುರದ ದೇಗುಲ ಮಠದ ಶ್ರೀ ಶ್ರೀ ನಿರ್ವಾಣ ಸ್ವಾಮಿಗಳು ಇನ್ನೊಂದು ಶ್ರೀ ಸಿದ್ಧಗಂಗಾ ಕ್ಷೇತ್ರಾಧಿಪತಿ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು. ದೇಗುಲ ಮಠದ ಶ್ರೀಗಳವರನ್ನು ದರ್ಶನ ಮಾಡಿದಾಗಲೆಲ್ಲ ಗೌರೀಶಂಕರ ಸ್ವಾಮಿಗಳವರು ಕಾಣಲಾರದ ಘನವ ಕಂಡೆನೆಂದು ಭಾವಿಸುತ್ತಿದ್ದರು. ಜ್ಯೋತಿಯನ್ನು ಮುಟ್ಟಿದ ಬತ್ತಿಯೆಲ್ಲಾ ಜ್ಯೋತಿಯಾಗುವುದಿಲ್ಲವೆ? ಆ ಮಹಾಜ್ಯೋತಿ ಮುಟ್ಟಿ ತಾನು ಜ್ಯೋತಿಯಾಗಬೇಕೆಂಬ ಭಾವದಿಂದ ನಿರ್ವಾಣ ಸ್ವಾಮಿಗಳ ದರ್ಶನವನ್ನು ಆಗಾಗ ಮಾಡುತ್ತಲೇ ಇದ್ದರು. ನಿರ್ವಾಣ ಸ್ವಾಮಿಗಳವರ ಬಗೆಗೆ ಅವರ ಭಕ್ತಿಯು ಅಂಕುರವಾದುದು ಅವರು ೧೯೪೭ ರಲ್ಲಿ ಮೈಸೂರಿಗೆ ಬಂದಾಗ ಅಲ್ಲ. ಅವರು ಕಾಶಿಯಲ್ಲಿ ವಿದ್ಯಾಭ್ಯಾಸ ಮಾಡುವ ಕಾಲದಲ್ಲಿಯೇ ಎಂದರೆ ಐವತ್ತು ವರ್ಷಗಳ ಹಿಂದೆ. ಒಮ್ಮೆ ನಿರ್ವಾಣ ಸ್ವಾಮಿಗಳವರು ಕಾಶಿಗೆ ದಯಮಾಡಿಸಿದ್ದಾಗ ಅವರಲ್ಲಡಗಿದ ಅದ್ಭುತ ವಿರಕ್ತಿ ಭಾವವನ್ನು ಗುರುತಿಸಿ ಗೌರೀಶಂಕರರು ಬಾಗಿದ್ದರು. ತಮ್ಮ ದಿವ್ಯ ದರ್ಶನಕ್ಕೆ ಸ್ಫೂರ್ತಿಯನ್ನು ಅಂದೇ ಪಡೆದರು. 'ನಾನು ಸಾಧಿಸಬೇಕಾದ ಸಾಧನೆಯ ಸ್ವರೂಪ ನಿದರ್ಶನವಿದು ಕಣ್ಣೆದುರಿನಲ್ಲೇ ಇದೆ' ಎಂದು ಕೊಂಡಿದ್ದರು. ಈ ಮಹಾ

ದರ್ಶ ಸಾಧನೆಗೆ ಶಿವಯೋಗಿಯ ಕಾರುಣ್ಯ ನನ್ನನ್ನು ಅನೇಕ ಸಲ ಕೈಹಿಡಿದು ನಡೆಸಿದೆ ಎಂದು ಹೇಳುತ್ತಿದ್ದರು. ಪೂಜ್ಯ ನಿರ್ವಾಣ ಸ್ವಾಮಿಗಳವರ ಘನವ್ಯಕ್ತಿತ್ವದ ಅಯಸ್ಕಾಂತ ಗೌರೀಶಂಕರರೆಂಬ ಲೋಹವನ್ನು ಆಕರ್ಷಿಸಿತು. ಅಂತಃಕರಣದ ಅವಿರಳ ಶಿವಯೋಗ ಶಕ್ತಿಯನ್ನು ಹಿಂಡಿ ಕುಡಿಸಿತ್ತು. ಅಂದಿನಿಂದ ಕೂರ್ಮ ಕಿಶೋರ ನ್ಯಾಯ ಈ ಎರಡು ಪೂಜ್ಯ ವಸ್ತುಗಳಲ್ಲಿ ಅಳವಟ್ಟಿತೆಂದು ಹೇಳಿದರೆ ತಪ್ಪಲ್ಲ. ಮುಟ್ಟಲಿಲ್ಲದ ಹಸ್ತ ಮಸ್ತಕ ಸಂಯೋಗ, ಹೂಸಲಿಲ್ಲದ ವಿಭೂತಿಪಟ್ಟ ಹೇಳಲಿಲ್ಲದ ಕರ್ಣಮಂತ್ರ ಅವರಿಗೆ ನಿರ್ವಾಣ ಸ್ವಾಮಿಗಳಿವರಿಂದ ಅಳವಟ್ಟಿತ್ತೆಂದು ಹೇಳಿದರೆ ತಪ್ಪಲ್ಲ. ಈ ವಿಷಯವನ್ನು ನಾವು ನಿರ್ವಾಣ ಸ್ವಾಮಿಗಳವರ ವಿಷಯದಲ್ಲಿ ಗೌರೀ ಶಂಕರ ಸ್ವಾಮಿಗಳವರು ಇಟ್ಟಿದ್ದ ಭಕ್ತಿ ಭಾವದಿಂದ ಊಹಿಸಬಹುದಾಗಿದೆ. ಅವರನ್ನು ಕಂಡರೆ ಸಾಕ್ಷಾತ್ ಲಿಂಗಪೂಜಾಫಲವನ್ನೇ ಪಡೆದಂತಾಗುತ್ತಿತ್ತೆಂದು ಎಷ್ಟೋ ಸಲ ಗೌರೀಶಂಕರ ಸ್ವಾಮಿಗಳವರು ಹೇಳಿಕೊಂಡಿದ್ದಾರೆ. ನಿರ್ವಾಣ ಸ್ವಾಮಿಗಳು ಪ್ರಭುದೇವರ ಅಂಶವೆಂದು ಎಷ್ಟೋ ಸಲ ಬಹಿರಂಗ ಪಡಿಸಿದ್ದಾರೆ. ಶಿವಯೋಗವೆಂದರೇನೆಂದು ಯಾರಾದರೂ ಕೇಳಿದರೆ, ಕನಕಪುರದ ದೇಗುಲ ಮಠದ ನಿರ್ವಾಣ ಸ್ವಾಮಿಗಳವರನ್ನು ನೋಡಿರೆಂದು ಹೇಳುತ್ತಿದ್ದುದುಂಟು. ನಿರ್ವಾಣ ಸ್ವಾಮಿಗಳವರ ಇನ್ನೊಂದು ಹೆಸರೆಂದರೆ ಶಿವಯೋಗ. "ತಮ್ಮ ಪಾದಸ್ಪರ್ಶದಿಂದ ನನ್ನ ಧನ್ಯತೆ ಎಂದು ಎಷ್ಟೋ ಸಲ ಅಪ್ಪಣೆ ಕೊಡಿಸಿದ್ದುಂಟು. ಆದುದರಿಂದ ಎಷ್ಟೋ ಸಲ ಶ್ರೀ ನಿರ್ವಾಣ ಶ್ರೀಗಳವರನ್ನು ಮೈಸೂರಿನ ಅರಮನೆ ಪಂಚಗವಿಮಠಕ್ಕೆ ಬರಮಾಡಿಕೊಂಡು ತೀರ್ಥಪ್ರಸಾದ ಸ್ವೀಕಾರ ಮಾಡಿ ಕೃತಾರ್ಥರಾದ ಹಾಗೆ ಭಾವಿಸುತ್ತಿದ್ದರು. ಅಯಸ್ಕಾಂತದ ಆಕರ್ಷಣೆಗೊಳಗಾದ ಲೋಹದಂತೆ ಇದ್ದಕ್ಕಿದ್ದ ಹಾಗೆ ದೇಗುಲ ಮಠಕ್ಕೆ ದಯಮಾಡಿಸಿ ಶ್ರೀಗಳವರ ದರ್ಶನಾಶೀರ್ವಾದ ಪಡೆಯುತ್ತಿದ್ದರು. ಹೀಗಿತ್ತು ಗೌರೀಶಂಕರ ಸ್ವಾಮಿಗಳವರ ಚರ್ಯೆ. ಶ್ರೀ ಸಿದ್ಧಗಂಗಾ ಶ್ರೀ ಗಳವರ ವಿಷಯದಲ್ಲೂ ಇದೇ ಮಟ್ಟದ ಭಕ್ತಿಭಾವವು ಗೌರೀಶಂಕರ ಸ್ವಾಮಿಗಳವರಲ್ಲಿ ತುಂಬಿತ್ತು. ಅವರನ್ನು "ನೀವು ಸಾಕ್ಷಾತ್ ಬಸವೇಶ್ವರರು. ನಿಮ್ಮದು ದೊಡ್ಡ ಸಂಸಾರ" ಎಂದು ಹೃದಯಾರ ಹೊಗಳಿ ಮೈಮರೆಯುತ್ತಿದ್ದರು. ಗವಿಮಠಕ್ಕೆ ಶ್ರೀ ಶಿವಕುಮಾರ ಸ್ವಾಮಿಗಳವರನ್ನು ಬರಮಾಡಿಕೊಂಡು ಪಾದೋದಕ ಪ್ರಸಾದ ಪ್ರಸನ್ನ ಪರಿಣಾಮಿಗಳಾಗುತ್ತಿದ್ದರು. ಒಂದು ಸಲ ಶ್ರೀಗಳವರನ್ನು ಬರಮಾಡಿಕೊಂಡು ೧೫ ತೊಲ ಬಂಗಾರದಲ್ಲಿ ಕರಂಡಕ (ಕರಡಿಗೆ) ವನ್ನು ಮಾಡಿಸಿ ಕೊರಳಲ್ಲಿ ತಾವೇ ಹಾಕಿ ಜಂಗಮ ಪಾದಕ್ಕೆ ಧನವನ್ನು ಅರ್ಪಿಸಬೇಕೆಂಬ ಅಭಿಲಾಷೆಯನ್ನು ವ್ಯಕ್ತಗೊಳಿಸಿ ತೋರಿಸಿದರು. ಹೀಗೆ ಗುರುಲಿಂಗಜಂಗಮ ಸೇವಾ ಕೈಂಕರ್ಯದಲ್ಲಿ ಗೌರೀಶಂಕರ ಸ್ವಾಮಿಗಳವರದು ಅಸೀಮ ಶ್ರದ್ಧಾಭಕ್ತಿ ವಿಶ್ವಾಸ ಪೂರ್ಣ ನಡೆವಳಿಕೆಯಾಗಿತ್ತು.

---

ಅಗಣ್ಯ ಪುಣ್ಯ ಪುರುಷ

# ಉದ್ದಾನ ಶಿವಯೋಗೀಶ್ವರ

ಚನ್ನಪ್ಪ ಎರೇಸೀಮೆ
ಬೆಂಗಳೂರು

ಶ್ರೀ ಸಿದ್ಧಗಂಗಾ ಕ್ಷೇತ್ರದ ಲೋಕೋತ್ತರವಾದ ಕೀರ್ತಿಕಲ್ಪವೃಕ್ಷಕ್ಕೆ ಬೀಜಾರೋಪಣೆ ಮಾಡಿ, ತೆರೆಯ ಮರೆಯಲ್ಲಿ ನಿಂತು ತಮ್ಮ ಶಿವಯೋಗ ಸಂಜನಿತ ಕಾರುಣ್ಯ ಸುಧಾಧಾರೆಯನ್ನು ಎರೆಯುತ್ತಿರುವ ಮಹಾಶಕ್ತಿಯೇ ಪಂಚಪರುಷ ಶಕ್ತಿಯಿಂದ ಕೂಡಿದ್ದ ಉದ್ದಾನ ಶಿವಯೋಗಿಗಳು. ಇಂದು ಈ ಕ್ಷೇತ್ರವು ಭಾರತದ ಶೈಕ್ಷಣಿಕ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಪ್ರಮುಖ ಕ್ಷೇತ್ರಗಳಲ್ಲಿ ಒಂದೆನಿಸಿ ಭಾರತದ ವಿಚಾರವಾದಿಗಳ ಗಮನ ಸೆಳೆದಿದೆ. ತನ್ನ ಬಹುಮುಖವಾದ ರಚನಾತ್ಮಕ ಕಾರ್ಯ ಮಾಧ್ಯಮದಿಂದ ನವಭಾರತ ನಿರ್ಮಾಣ ಕಾರ್ಯದಲ್ಲಿ ಗಣನೀಯ ಪ್ರಮಾಣದಲ್ಲಿ ಯಶಸ್ಸನ್ನು ಸಂಪಾದಿಸಿದೆ. ಶುದ್ಧಿ ಮತ್ತು ಸಿದ್ಧಿ, ಶುಚಿ ಮತ್ತು ರುಚಿ–ಇವು ಈ ಕ್ಷೇತ್ರದ ಪ್ರಮುಖ ವೈಶಿಷ್ಟ್ಯಗಳು. ವೀರಸಂನ್ಯಾಸಿಗಳ ಆತ್ಮಶ್ರೀ ಬಹುಸತ್ವದಿಂದ ಕೂಡಿರುವುದೆಂಬುದಕ್ಕೆ, ಅದು ಕ್ರಿಯಾಮುಖವಾಗಿ ಹೊರಹೊಮ್ಮಿದಾಗ ಅಘಟಿತ ಘಟನೆಯೆನಿಸುತ್ತದೆಂಬುದಕ್ಕೆ ಈ ಕ್ಷೇತ್ರವೊಂದು ಜ್ವಲಂತ ನಿದರ್ಶನ.

ಇಂಥ ಪುಣ್ಯಕ್ಷೇತ್ರದಲ್ಲಿ ಆಗಿಹೋದ ಕ್ಷೇತ್ರಾಧಿಪತಿಗಳೆಲ್ಲ ಅಘಟಿತ ಘಟನಾ ಸಮರ್ಥರೇ! ಕ್ರಿ.ಶ. ಸುಮಾರು ೧೩೦೦ ರಿಂದ ಹರದನಹಳ್ಳಿ ಗೋಸಲ ಸಿದ್ಧೇಶ್ವರರು ಮೊದಲ್ಗೊಂಡು ಅವರ ಶಿಷ್ಯಪರಂಪರೆಯ ಶಂಕರಸ್ವಾಮಿಗಳು, ಗುಬ್ಬಿಯ ಚೆನ್ನಬಸವೇಶ್ವರರು, ತೋಂಟದ ಸಿದ್ಧಲಿಂಗ ಶಿವಯೋಗಿಗಳೇ ಮೊದಲಾದ ವೀರಶೈವೇತಿಹಾಸ ಮಹಾಪುರುಷರ ಆಡುಂಬೊಲವಾದ ಈ ಕ್ಷೇತ್ರದಲ್ಲಿ ೨೦ ನೆಯ ಶತಮಾನದಲ್ಲಿ ಆಗಿಹೋದ ಮಹಾ ಶಿವಯೋಗೀಶ್ವರರೇ ಉದ್ದಾನ ಶಿವಯೋಗಿಗಳು. ಆ ಅಗಣ್ಯ ಪುಣ್ಯ ಪುರುಷರ ಬಗೆಗೆ ಸ್ಥೂಲವಾದ ಪರಿಚಯಾತ್ಮಕ ವಿವರಣೆಯೇ ಈ ಲೇಖನದ ಪ್ರಧಾನೋದ್ದೇಶ.

## ಲಕ್ಕೂರಿನ ರುದ್ರಪ್ಪ

'ಲಕ್ಕೂರು' ಎಂಬುದೊಂದು ಕಿರುಹಳ್ಳಿ; ನೆಲಮಂಗಲ ತಾಲ್ಲೂಕಿನಲ್ಲಿ ದಾಬಸಪೇಟೆಯ ಸಮೀಪದಲ್ಲಿದೆ. ಶಿವಗಂಗೆ, ಸಿದ್ಧಗಂಗೆ, ನಿಜಗಲ್ಲು, ದೇವರ ಹೊಸಹಳ್ಳಿ ಬೆಟ್ಟದ ಗುಡ್ಡಗಳ ಮಧ್ಯದ ಸುಂದರ ಸನ್ನಿವೇಶದ್ದು. ಹತ್ತೊಂಬತ್ತನೆಯ

ಶತಮಾನದ ಉತ್ತರಾರ್ಧದಲ್ಲಿ ಆ ಹಳ್ಳಿಯ ಗುರುಲಿಂಗಜಂಗಮ ಸೇವಾಧುರೀಣರೂ, ಕೃಷಿ ಪಶುಪಾಲನೋದ್ಯೋಗ ಶೀಲರೂ ಆದ ದಂಪತಿಗಳ ಗರ್ಭದಲ್ಲಿ ಕಾರಣಿಕ ಶಿಶುವೊಂದು ಮೂಡಿಬಂತು. ಶಿಶುವಿಗೆ ತುಮಕೂರ ಸಮೀಪದಲ್ಲಿ ದೇವರ ಹೊಸಹಳ್ಳಿಯಲ್ಲಿ ನೆಲಸಿರುವ ವೀರಭದ್ರನ ನಾಮಕರಣವನ್ನೇ ಮಾಡಿದರು. 'ರುದ್ರಪ್ಪ' ಎಂದು. ಆ ಪುಣ್ಯ ದಂಪತಿಗಳ ಕಾಯಕ ನಿಷ್ಠೆಯೇ, ಸತ್ಕ್ರಿಯಾಚಾರವೇ ಮೈವೆತ್ತು ಬಂದಂತಿದ್ದ ರುದ್ರಪ್ಪ. ರುದ್ರಪ್ಪ ಸ್ವಲ್ಪ ದೊಡ್ಡವನಾದ ಮೇಲೆ ಅಯ್ಯಗಳ ಶಾಲೆಗೆ ಕಳಿಸಿದರಾದರೂ ರುದ್ರಪ್ಪ ಹೆಚ್ಚಾಗಿ ಓದಲಿಲ್ಲ. ತಕ್ಕ ಮಟ್ಟಿನ ಅಕ್ಷರಜ್ಞಾನ ಪಡೆದನಷ್ಟೆ. ಲೋಕೋತ್ತರ ತೇಜೋವಿಶೇಷರಾದವರ ಬಾಲ್ಯ ಜೀವನದ ಘಟನೆಗಳೂ ಆ ಲೋಕ ಸಾಮಾನ್ಯವಾದವುಗಳೇ ಆಗಿರುತ್ತವೆ. ಅವರು ಯಾವವೃತ್ತಿ (ಕಾರ್ಯ) ಯನ್ನೇ ಮಾಡಲಿ ಆ ಕಾರ್ಯದ ಮೇಲಿಂದ ಅವರ ಘನತೆಯನ್ನಳೆಯಲಾಗುವುದಿಲ್ಲ. ಕಾಯಕದ ಮೇಲೆ ಅವರೊತ್ತಿದ ಹೃದಯ ಮುದ್ರೆಯೇ ಗಣನೀಯವಾದುದು. ರುದ್ರಪ್ಪ ತಮ್ಮ ತಂದೆ ತಾಯಿಗಳ ವೃತ್ತಿಯಾದ ಕೃಷಿ ಪಶುಪಾಲನಾದಿ ಕಾರ್ಯದಲ್ಲಿ ನೈಪುಣ್ಯ ಪಡೆದ. ಬರುಬರುತ್ತ ಅತ್ಯಂತ ಭಾವನಾಜೀವಿಯಾಗಿ, ಅರಣ್ಯ ಮಧ್ಯದ ಬಯಲಿನಲ್ಲಿ ಬಯಲಿನ ಧ್ಯಾನ ಸಾಯುದಲ್ಲಿಯೇ ಮಗ್ನನಾಗತೊಡಗಿದನು. ಅವನ ನಡೆನುಡಿಗಳು ಲೋಕಕ್ಕೆ ವಿಚಿತ್ರವಾಗತೊಡಗಿದವು. "ಲೋಕಕ್ಕೆ ತಾಂ ಮರುಳ್ ತನಗೆ ಲೋಕ ಮರುಳ್" ಎನ್ನುವಂತಾಯಿತು. ಸ್ವತಃ ತಂದೆ ತಾಯಿಗಳೇ ಮಗನ ಯೋಗ್ಯತೆಯನ್ನರಿಯದೆ ಹೋದರು.

ರುದ್ರಪ್ಪನ ಮಾತಿನಲ್ಲಿ ದಧೀಚಿಯ ಬೆನ್ನುಮೂಳೆಯಿಂದ ಮಾಡಿದ ಆಯುಧಗಳ ಮೊನಚಿತ್ತು. ಹೊಳೆಯುವ ನೇತ್ರದ್ವಯಗಳು ದೃಢ ನಿರ್ಧಾರದ ಮುಂದಾಲೋಚನೆಯ ಕಾರ್ಯಗೌರವದ್ಯೋತಕಗಳಾಗಿದ್ದವು. ಆಜಾನುಬಾಹುವಾಗಿ, ಪರಿಪುಷ್ಟದೇಹಿಯಾಗಿ ಪ್ರಯಾಸಾಧ್ಯವಾದ ಕಾರ್ಯಗೌರವಗಳನ್ನು ಸಹಜವಾದ ಪವಿತ್ರ ರೀತಿಯಾಗಿ ನಡೆದ ರುದ್ರಪ್ಪನ ಆಚಾರ ನಡೆನುಡಿಗಳು, ಆ ಊರಿನ ಜನತೆಯ ಮೇಲೆ ಅಗಾಧ ಪರಿಣಾಮವನ್ನುಂಟುಮಾಡಿ ಭಯ ಭಕ್ತಿಯನ್ನುಂಟು ಮಾಡ ತೊಡಗಿದವು.

ಮುಂದೆ ಇವನು ಮಹಾವ್ಯಕ್ತಿಯಾಗುತ್ತಾನೆಂದು ಊರಜನಗಳು ಭವಿಷ್ಯ ನುಡಿದುದೂ ಉಂಟು.

ರುದ್ರಪ್ಪ ಮನೆಯಲ್ಲಿ ಹೆಚ್ಚು ಕಾಲಕಳೆದವನೇ ಅಲ್ಲ. ಕೃಷಿ ಕಾಯಕ ಪಶುಪಾಲನಾದಿ ಕಾರ್ಯಮಗ್ನನಾಗಿ ಹೊರಗಿರುವುದೇ ಹೆಚ್ಚು. ಹೊರಗಿದ್ದಾಗಲೆಲ್ಲ ತುಮಕೂರ ಸಮೀಪದಲ್ಲಿರುವ ಚಿಕ್ಕ ಪಾಳೇಪಟ್ಟಿನ ಹಳೆಯ ದುರ್ಗವಾದ ನಿಜಗಲ್ಲು

ಆ ವೇಳೆಗೆ ಮಠದ ದಾಸೋಹ ಸಲಕರಣೆಗಳೆಲ್ಲ ಅಸ್ತವ್ಯಸ್ತವಾಗಿ, ಮುಂದಿನ ಕಾರ್ಯ ವ್ಯವಸ್ಥೆ ಕಠಿಣವೆನಿಸಿತ್ತು. ಹಲವಾರು ಸಮಸ್ಯೆಗಳು ಎದುರಾದವು. ಶ್ರೀಗಳು ಆಲೋಚನಾಪರರಾದರು. ಧೈರ್ಯಗೆಡದೆ ಎಲ್ಲವೂ ಶಿವನೊಡ್ಡಿದ ಪರೀಕ್ಷೆ ಎಂದು ಭಾವಿಸಿದರು.

## ಗುರುಕೃಪೆ

ಒಮ್ಮೆ ಶ್ರೀ ಉದ್ಧಾನ ಶಿವಯೋಗಿಗಳು ಶಿವಯೋಗ ನಿದ್ರಾಮುದ್ರೆಯಲ್ಲಿರುವಾಗ ಶ್ರೀ ಅಡವಿ ಸ್ವಾಮಿಗಳು ಸ್ವಪ್ನದಲ್ಲಿ ಗೋಚರಿಸಿ "ನೀನು ಸಣ್ಣ ಗದ್ದುಗೆಯ ಕಟ್ಟಡವನ್ನು ಕಟ್ಟಿಸು ನಿಶ್ಚಿಂತೆಯಿಂದಿರು" ಎಂದು ಹೇಳಿ ಅದೃಶ್ಯರಾದರಂತೆ. ಸ್ವಲ್ಪ ಹೊತ್ತಿನ ಮೇಲೆ ಮತ್ತೆ ದರ್ಶನ ಕೊಟ್ಟು "ಹಣಕ್ಕಾಗಿ ನೀನು ಚಿಂತಿಸಬೇಡ. ಸಿದ್ಧಲಿಂಗೇಶ್ವರನು ಒದಗಿಸುತ್ತಾನೆ ಕಾರ್ಯ ಪ್ರಾರಂಭಿಸು" ಎಂದು ಅಪ್ಪಣೆ ಮಾಡಿದರಂತೆ. ಶ್ರೀಗಳ ಚಿಂತೆ ಮಾಯವಾಯಿತು. ಧೈರ್ಯ ಕುಡಿಯಿಟ್ಟಿತು.

ಮಾರನೆ ಬೆಳಿಗ್ಗೆ, ಮುಂಜಾವದಲ್ಲೆದ್ದರು ಶ್ರೀಗಳು. ಗುರುಧ್ಯಾನ ನಿರತರಾಗಿ ತಮ್ಮ ಪ್ರಾತರಾಹ್ನಿಕಗಳನ್ನು ಮುಗಿಸಿ, ಗುರುವಿನಾಣತಿಯಂತೆ, ಗದ್ದುಗೆ ಕಟ್ಟಡಕ್ಕೆ ತಳಪಾಯಿ ಹಾಕಲು ತಾವೇ ಗುದ್ದಲಿ ಹಿಡಿದು ಗುರ್ತಿಸಿದರು. ಅಷ್ಟರಲ್ಲಿ ಒಬ್ಬ ರೆಡ್ಡಿ ಭಕ್ತನು ಬಂದು "ಬುದ್ಧೀ. ಶ್ರೀಗಳ ಆಶೀರ್ವಾದದಂತೆ ನನಗೊಂದು ಗಂಡುಮಗುವಾಗಿದೆ. ಹರಕೆಯಂತೆ. ಪಾದಕಾಣಿಕೆ ತಂದಿದ್ದೇನೆ ಒಪ್ಪಿಸಿಕೊಳ್ಳಬೇಕು." ಎಂದು ಹೇಳಿ ಸಾಷ್ಟಾಂಗ ಪ್ರಣಾಮದೊಂದಿಗೆ ಹಣದ ಗಂಟನ್ನು ಶ್ರೀಗಳ ಪಾದದಲ್ಲಿಟ್ಟನು ಅದರಲ್ಲಿ ೨೦೦ ರೂಪಾಯಿಗಳಿದ್ದವು. "ಇಂದು ಪ್ರಾರಂಭವಾಯಿತು. ನೋಡಿದೋ ಅಪ್ಪಾ, ಅಡವೀ ಸ್ವಾಮಿಗಳ ಕೃಪೆ" ಎಂದು ಸಂತೋಷದಿಂದ ಹೇಳಿದರು. ತಮ್ಮ ಆಪ್ತ ಶಿಷ್ಯ ಕಾಳಪ್ಪ (ಈಗಿನ ಚರಮೂರ್ತಿ ಶ್ರೀ ಮಹಾಲಿಂಗಸ್ವಾಮಿಗಳು.)ನವರಿಗೆ ಅಂದಿನ ಕನಸು ವಿಷಯವನ್ನು ಅತ್ಯುತ್ಸಾಹದಿಂದ ಹೇಳಿದುದಷ್ಟೇ ಅಲ್ಲ ಶ್ರೀಗಳು. ಶ್ರೀಮಠದ ಮುಂದಿನ ಎಲ್ಲಾ ಕಾರ್ಯಗಳಿಗೂ ಅವರಿಗೆ ಭುಜ ತಟ್ಟಿದಂತಾಯಿತು. ಶ್ರೀಗುರು ಕೃಪೆ ಗುರುಗಳ ಗದ್ದುಗೆ ಕಟ್ಟಡವೂ ಪೂರ್ಣವಾಯಿತು. ದಾಸೋಹಕ್ಕೆ ಬೇಕಾದ ಸಕಲ ಸಲಕರಣೆಗಳೂ ಕೂಡಿ ಬಂದವು. ನೂತನ ಕಟ್ಟಡಗಳೂ ಒಂದೊಂದಾಗಿ ನಿರ್ಮಿತವಾದವು.

## ದಾಸೋಹ ತಪೋಧನ

ಉದ್ಧಾನ ಶಿವಯೋಗಿಗಳು ಲೌಕಿಕ ದೃಷ್ಟಿಯಲ್ಲಿ ವಿದ್ಯಾವಂತರಲ್ಲ. ಅಷ್ಟಿಷ್ಟು ಓದು ಬರಹ ಬರುತ್ತಿತ್ತಲ್ಲದೆ ಕುರಿತೋದಿದ ಪಂಡಿತ ವಿದ್ವಾಂಸರಲ್ಲ. ಆದರೆ ಅವರ ವಿದ್ಯಾನೈಪುಣ್ಯದ ಸಂಪದ್ಭರಿತ ವ್ಯಕ್ತಿತ್ವದ ಅರಿವು ಕೆಲವರಿಗೆ ಮಾತ್ರ ಗೊತ್ತಿತ್ತು.

ಹಿಡಿದ್ ಎನ್ನುವಂತಿಲ್ಲ. ಕೋರ್ಟು ಕಛೇರಿಗಳಲ್ಲಿ ತೀರ್ಮಾನಗೊಳ್ಳದ ಎಷ್ಟೋ ವ್ಯಾಜ್ಯಗಳು ತೀರ್ಮಾನಗೊಳ್ಳುತ್ತಿದ್ದ ಕಾರಣ ಶ್ರೀ ಕ್ಷೇತ್ರವೊಂದು ದೊಡ್ಡ ನ್ಯಾಯಾಸ್ಥಾನವೇ ಆಗಿತ್ತು. ಆ ಸಂಪ್ರದಾಯ ಈಗಲೂ ನಡೆದು ಬರುತ್ತಿದೆ.

ಶ್ರೀಗಳವರು ಎರಡೂ ಪಕ್ಷದವರನ್ನು ನಿರ್ದಿಷ್ಟ ಪಡಿಸಿದ ಅವಧಿಗೆ ಮಠಕ್ಕೆ ಬರಮಾಡಿಕೊಂಡು ವಾದ ವಿವಾದಗಳನ್ನು ಗ್ರಹಿಸಿ ತೀರ್ಪುಕೊಟ್ಟರಾಯಿತು, ಅದೇ ಕಡೆ. ಆ ಮೇಲೆ ಎರಡೂ ಪಕ್ಷದವರು ಮಠದಲ್ಲಿ ಸ್ನಾನ ಪೂಜಾದಿಗಳನ್ನುಮಾಡಿ ಪ್ರಸಾದ ಸ್ವೀಕರಿಸಿ ಎಂದಿನಂತೆ ಅನ್ಯೋನ್ಯವಾಗಿ ನಡೆದುಕೊಳ್ಳಬೇಕು. ಹೊರಡುವಾಗ ಇಬ್ಬರೂ ಶ್ರೀಗಳವರಿಗೆ ನಮಸ್ಕಾರ ಹಾಕಿ, ಎಂದಿನಂತೆ ಅನ್ಯೋನ್ಯವಾಗಿ ನಡೆದುಕೊಳ್ಳುತ್ತೇವೆಂದು ಹೇಳಿ ಹೋಗಬೇಕು. ಇಂಥ ವ್ಯವಸ್ಥೆಯಿಂದ ಸಾಮಾಜಿಕ ನೆಮ್ಮದಿ ಕುದುರುವುದೆಂದು ಹೇಳಬೇಕಾದುದೇ ಇಲ್ಲ.

ನ್ಯಾಯ ತೀರ್ಮಾನ ಕೇವಲ ವೀರಶೈವ ಜನಾಂಗದಷ್ಟೇ ಅಲ್ಲ. ಶಿವಯೋಗಿಗಳು ಆ ಭಾವನೆಯನ್ನಿಟ್ಟುಕೊಂಡವರೂ ಅಲ್ಲ. ಎಲ್ಲ ಕೋಮಿನವರೂ ಉದ್ದಾನ ಶಿವಯೋಗಿಗಳಲ್ಲಿ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ಮಹಮದೀಯರೂ ಮೊದಲ್ಗೊಂಡು. ಆಚಾರದಲ್ಲಿ, ಉಪಚಾರದಲ್ಲಿ, ಮಠದ ಸೇವೆಯಲ್ಲಿ, ಮಠಕ್ಕೆ ದಾನ ಮಾಡುವುದರಲ್ಲಿ ವ್ಯಾಜ್ಯ ಬಗೆಹರಿಸಿಕೊಳ್ಳುವುದರಲ್ಲಿ, ಓದುವಲ್ಲಿ, ಬರೆಯುವಲ್ಲಿ— ಎಲ್ಲದರಲ್ಲೂ ಶ್ರೀಮಠ ಸಮಸ್ತ ಕೋಮಿನವರಲ್ಲೂ ತಮ್ಮ ಮನೆಯೆಂಬ ಭಾವದ್ದು.

ಅವರ ಲೋಕೋಪಕಾರಕ ನಡೆನುಡಿಗಳು ಅನ್ಯಾದೃಶವಾದವು. ೧೯೧೭ನೆಯ ಇಸ್ವಿಯಲ್ಲಿಯೇ ಉದ್ದಾನ ಶಿವಯೋಗಿಗಳು ಸಾರ್ವಜನಿಕ ಉಚಿತ ಪ್ರಸಾದ ವಸತಿಯ ವಿದ್ಯಾರ್ಥಿ ನಿಲಯ ತೆರೆದರು. ಆ ಕಾಲದಲ್ಲಿ ಸರಕಾರವೇ ಸಾರ್ವಜನಿಕ ವಿದ್ಯಾರ್ಥಿ ನಿಲಯಗಳನ್ನು ತೆರೆಯಲಿಕ್ಕೆ ಹೆದರಿ, ಕೋಮುವಾರು ವಿದ್ಯಾರ್ಥಿ ನಿಲಯಗಳನ್ನು ತೆರೆಯುತ್ತಿತ್ತು. ಸಂಸ್ಕೃತವೆಂಬುದೊಂದು ಭಾಷೆ; ಅದನ್ನು ಎಲ್ಲ ಕೋಮಿನವರೂ ಓದಬಹುದೆಂಬ ಸತ್ಸಂಪ್ರದಾಯವನ್ನು ಹಾಕಿಕೊಟ್ಟವರೂ ಪ್ರಾಯಶಃ ಉದ್ದಾನ ಶಿವಯೋಗಿಗಳೇ. ಒಟ್ಟಿನಲ್ಲಿ ಉದ್ದಾನ ಶಿವಯೋಗಿಗಳು ಸಿದ್ಧಗಂಗೆಯ ಶ್ರೀ ಸಿದ್ಧಲಿಂಗೇಶ್ವರನ ತಪೋಭೂಮಿಯಲ್ಲಿ, ಅವಿಮುಕ್ತ ಕ್ಷೇತ್ರದಲ್ಲಿ ಬೆಳೆದುನಿಂತ ದೊಡ್ಡ ಸುರತರು. ಆ ತರುವಿನ ನೀಳವಾದ ಶಾಖೋಪಶಾಖೆಗಳು ಆ ಭಾಗದ ಊರೂರು ಮನೆಮನೆಗಳವರೆಗೂ ಚಾಚಿ ನಿಂತು ಫಲಭಾರಸಮನ್ವಿತಗೊಳಿಸಿತ್ತು. ಅದರ ಫಲವನ್ನುಂಡು ತೃಪ್ತರಾದವರೂ, ಛಾಯೆಯಲ್ಲಿ ವಿಶ್ರಮಿಸಿ ಶಾಂತರಾದವರೂ ಅಸಂಖ್ಯಾತರು.

## ಉದ್ದಾನ ಸ್ವಾಮಿಗಳ ಅನುಗ್ರಹ ದೃಷ್ಟಿ ಲೋಕೋತ್ತರ

ಇಷ್ಟೇ ಅಲ್ಲದೆ, ಇನ್ನೊಂದು ಮಹತ್ವದ ಅಂಶವೆಂದರೆ – ತಮ್ಮ ಮಠದಲ್ಲಿ ವಿದ್ಯಾಭ್ಯಾಸ ಮಾಡಿಸಿ, ಕಾಯಕದ ಮರ್ಮವನ್ನು ತಿಳಿಸಿ, ಮಠಮಾನ್ಯಗಳನ್ನು

ಆಶ್ರಯಿಸಿ, ಧರ್ಮ ಪ್ರಸಾರದ ಗುರುತರ ಹೊಣೆಗಾರಿಕೆಯ ಕಾರ್ಯನಿರ್ವಹಣಾ ಸಾಮರ್ಥ್ಯ ಪಡೆದ ವಟುಗಳನ್ನು ಸಿದ್ಧಗೊಳಿಸುವುದೂ ಇವರ ಇನ್ನೊಂದು ಬೃಹದ್ಯೋಜನೆ. ಈ ಕಾರ್ಯ ಇಂದಿಗೂ ಅಧಿಕ ಪ್ರಮಾಣದಲ್ಲಿಯೇ ನಡೆಯುತ್ತಿದೆ. ಉದ್ಧಾನಸ್ವಾಮಿಗಳವರ ಕೃಪಾಕಟಾಕ್ಷಕ್ಕೆ ಪಾತ್ರವಾದ ವಟುವೆಂದರಾಯಿತು. ಎಲ್ಲರಿಗೂ ಅಚ್ಚುಮೆಚ್ಚು.

ಉದ್ಧಾನಸ್ವಾಮಿಗಳು ತಮ್ಮ ಪ್ರಬಲಾಕರ್ಷಣೆಗೆ ಒಳಗುಮಾಡಿ 'ಶಿವಣ್ಣ' ಎಂಬ ವಿದ್ಯಾರ್ಥಿಯನ್ನು ತಮ್ಮ ಮಠಕ್ಕೆ ವಟುವಾಗಿ ಸ್ವೀಕರಿಸಿ ಅವರಿಗೆ 'ಶ್ರೀ ಶಿವಕುಮಾರಸ್ವಾಮಿಗಳು' ಎಂಬ ನೂತನ ನಾಮಕರಣದಿಂದ ತಮ್ಮ ಉತ್ತರಾಧಿಕಾರಿಗಳನ್ನಾಗಿ ಮಾಡಿಕೊಂಡ ಮೇಲಂತೂ ಸಮಸ್ತ ಭಕ್ತವೃಂದದ ಅಪಾರ ಹರ್ಷೋತ್ಸಾಹಗಳಿಗೆ ಕಾರಣವಾಗಿತ್ತು. ಇದನ್ನು ಅರಿತ ಪೂಜ್ಯತಪಸ್ವಿ ದೇಗುಲಮಠದ ಶ್ರೀ ನಿರ್ವಾಣ ಮಹಾಸ್ವಾಮಿಗಳು ತಮ್ಮ ಮಠಕ್ಕೂ ಉದ್ಧಾನ ಶಿವಯೋಗಿಗಳವರ ಕೃಪಾಪಾತ್ರರಾದ ವಟುಗಳೇ ಬೇಕೆಂಬ ಸಂಕಲ್ಪವುಳ್ಳವರಾದರು. ಅದೇ ಮೇರೆಗೆ ಕನಕಪುರದ ಪ್ರಮುಖರೊಡನೆ ವಿಚಾರವಿನಿಮಯ ಮಾಡಿ ಶ್ರೀ ಕೆ.ಪಿ. ಪರಮಶಿವಯ್ಯನವರು ಮತ್ತು ಶ್ರೀ ಪಂ. ಚ. ವೀರಭದ್ರಪ್ಪನವರು ಮುಂತಾದ ಪ್ರಮುಖರನ್ನು ಸಿದ್ಧಗಂಗೆಗೆ ಕಳಿಸಿಕೊಟ್ಟರು. ಅವರು ಸಿದ್ಧಗಂಗೆಗೆ ಬಂದು ಉದ್ಧಾನ ಶಿವಯೋಗಿಗಳಲ್ಲಿ ಕನಕಪುರ ದೇಗುಲಮಠದ ಉತ್ತರಾಧಿಕಾರಕ್ಕೆ ಯೋಗ್ಯ ವಟುವೊಂದುಬೇಕು. ಆ ವಟುವು ತಮ್ಮ ಅನುಗ್ರಹಕ್ಕೆ ಪಾತ್ರರಾದುದೇ ಆಗಬೇಕೆಂಬುದು ನಿರ್ವಾಣಮಹಾಸ್ವಾಮಿಗಳವರ ಸಂಕಲ್ಪ. ಎಂಬುದಾಗಿ ಬಿನ್ನವಿಸಿಕೊಂಡರು. ಆಗ ಉದ್ಧಾನಸ್ವಾಮಿಗಳವರ ಅತ್ಯಂತ ಪ್ರೀತಿ ವಿಶ್ವಾಸಕ್ಕೆ ಪಾತ್ರರಾಗಿದ್ದ ವಿದ್ಯಾರ್ಥಿಗಳಲ್ಲಿ ಕೆಂಬಳ್ಳು ಗ್ರಾಮದ ಕಾಳಪ್ಪ ಎಂಬುವರು ಪ್ರಮುಖರಾಗಿದ್ದರು. ಅವರು ತಮ್ಮ ಗುರುಸೇವಾತತ್ಪರತೆ, ವೈರಾಗ್ಯಬುದ್ಧಿ, ಸಹನಶಕ್ತಿ, ದಕ್ಷತೆ, ಪಾದರಸದಂತಹ ಕಾರ್ಯಚಟುವಟಿಕೆ, ಗಂಭೀರ ಸ್ವಭಾವ, ನಿರ್ದಾಕ್ಷಿಣ್ಯ ನಡೆನುಡಿ, ಸದಾ ನಗುಮುಖದ ಮಾತುಕತೆ, ಯಾವ ಕಾರ್ಯವನ್ನೂ ಮುಖಸೊಟ್ಟಮಾಡಿಕೊಳ್ಳದೆ ಉತ್ಸಾಹದಿಂದ ಮಾಡಿ ಮುಗಿಸುವ ಪ್ರಸನ್ನ ಭಾವದಿಂದ ಅಂದಿನ ವಿದ್ಯಾರ್ಥಿ ವೃಂದದಲ್ಲೆಲ್ಲ ಹೆಸರುವಾಸಿಯಾಗಿದ್ದರು. ಮೇಲಾಗಿ ಸಿದ್ಧಗಂಗಾಕ್ಷೇತ್ರದ ಉತ್ತರಾಧಿಕಾರಿಗಳಾಗಿದ್ದ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಅತ್ಯಂತ ನಿಕಟವರ್ತಿಗಳೂ ಆಗಿದ್ದರು. ಶ್ರೀ ನಿರ್ವಾಣಮಹಾಸ್ವಾಮಿಗಳವರ ಸಂಕಲ್ಪ ದೊಡ್ಡದು. ಅವರ ಸಂಕಲ್ಪ ಉದ್ಧಾನ ಶಿವಯೋಗಿಗಳವರ ಕೃಪಾಶೀರ್ವಾದ, ಕ್ಷೇತ್ರಾಧಿಪತಿ ಸಿದ್ಧಲಿಂಗೇಶ್ವರ ಕಾರುಣ್ಯ ಈ ಮುಪ್ಪುರಿಗೆ ಕಾಳಪ್ಪನವರು ಬಂಧಿತರಾದರು. ಕಾಳಪ್ಪನವರ ಪೂರ್ವಜನ್ಮದ ವಾಸನೆ ದಗ್ಧಗೊಂಡಿತು. ಉದ್ಧಾನ ಶಿವಯೋಗಿಗಳು ತಮ್ಮ ಕಾರುಣ್ಯವನ್ನು ಅವರ ಮೇಲಿರೆದು ಚರಿತ್ರಾರ್ಹ ಕನಕಪುರದ ದೇಗುಲಮಠಕ್ಕೆ ತಕ್ಕ ಉತ್ತರಾಧಿಕಾರಿಗಳೆಂದು ಗುರುತಿಸಿ, 'ಆಗಲಿ, ನಮ್ಮ ಕಾಳಪ್ಪನವರನ್ನು ನಿರಂಜನ ಪ್ರಣವ ಸ್ವರೂಪಿ ನಿರ್ವಾಣ

ಮಹಾಸ್ವಾಮಿಗಳವರ ಶಿಷ್ಯರನ್ನಾಗಿ ಕಳಿಸಿಕೊಡುತ್ತೇವೆ' ಎಂದು ಆಶೀರ್ವಾದಮಾಡಿದರು. ಈ ವಿಷಯವನ್ನು ಕಾಳಪ್ಪನವರಲ್ಲಿ ಉದ್ಧಾನ ಸ್ವಾಮಿಗಳು ಪ್ರಕಟಿಸಿದಾಗ ಕಾಳಪ್ಪನವರ ಮೈಸ್ವಲ್ಪ ಸಮಯ ಜುಂಮ್ಮೆಂದು ಅಲ್ಲಾಡಿ. ಸ್ವಲ್ಪ ಸಮಯದ ನಂತರ ಪ್ರಜ್ಞಾಸ್ಥಿತಿಗೆ ಬಂದವರಾಗಿ ಶಿವಯೋಗಿ ಕೃಪೆಯಿದ್ದ ಹಾಗಾಗಲಿ. ನಾನು ಯಾವುದರಲ್ಲೂ ಸ್ವತಂತ್ರನಲ್ಲ. ತಮ್ಮ ಆಜ್ಞಾಧಾರಕನಾಗಿ, ವ್ಯವಹರಿಸುವುದೇ ನನ್ನ ಪರಮ ಕರ್ತವ್ಯವೆಂದು ಸಾಷ್ಟಾಂಗ ಪ್ರಣಾಮ ಮಾಡಿದರು. ಶ್ರೀ ಸಿದ್ಧಗಂಗೆಯ ವಟು ಕಾಳಪ್ಪನವರು ಶ್ರೀ ನಿರ್ವಾಣಮಹಾಸ್ವಾಮಿಗಳ ಕರಕಂಜಸಂಜಾತರೆನಿಸಿ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಮಹಾಲಿಂಗಸ್ವಾಮಿಗಳೆಂಬ ನೂತನ ನಾಮಾಂಕಿತದಿಂದ ಕನಕಪುರ ದೇಗುಲಮಠದ ಉತ್ತರಾಧಿಕಾರಿಗಳಾದರು. ಮಹಾಲಿಂಗಸ್ವಾಮಿಗಳು ದೇಗುಲಮಠಕ್ಕೆ ಬಂದುದೇ ತಡ. ನಿರ್ವಾಣ ಮಹಾಸ್ವಾಮಿಗಳವರಿಗೆ ಅಪರಿಮಿತ ಆನಂದವುಂಟಾಯಿತು. ಏಕಕಾಲದಲ್ಲಿ ಸಹಸ್ರ ಬಾಹುಬಲ ಬಂದ ಹಾಗಾಯಿತು. ಕನಕಪುರ ದೇಗುಲಮಠದ ಭಾಗ್ಯದ ಬಾಗಿಲು ತೆರೆಯಿತು.

ಉದ್ಧಾನ ಶಿವಯೋಗಿಗಳ ಸಂಕಲ್ಪಶಕ್ತಿ, ಅನುಗ್ರಹ ಸಾಮರ್ಥ್ಯ ಬಹು ವಿಸ್ತಾರ ಮಟ್ಟದ್ದು. ಮಹಾಶಿವಯೋಗಿಯ ಅನುಗ್ರಹ ಮೂರು ತೆರನಾದುದು: ಸಂಕಲ್ಪಮಾತ್ರದಿಂದ, ದೃಷ್ಟಿಪಾತದಿಂದ, ಸ್ಪರ್ಶದಿಂದ. ಈ ಮೂರು ತೆರನಾದ ಅನುಗ್ರಹವನ್ನು ಬೀರಿ ಶಿವಯೋಗಿಗಳು ಅಸಂಖ್ಯಾತ ಶುದ್ಧಜೀವಿಗಳನ್ನು ಪವಿತ್ರಾತ್ಮರನ್ನಾಗಿಸಿದ್ದಾರೆ; ತೇಜೋಮಯರನ್ನಾಗಿಸಿದ್ದಾರೆ; ಓಜೋಮಯರನ್ನಾಗಿಸಿದ್ದಾರೆ. ಆ ಎಲ್ಲ ವಿಷಯಗಳನ್ನಿಲ್ಲಿ ದೀರ್ಘಲೇಖನ ಭಯದಿಂದ ವಿವರಿಸಲಾಗುವುದಿಲ್ಲ. ಮುಖ್ಯವಾಗಿ ಒಂದು ಘಟನೆ: ತಮ್ಮ ಉತ್ತರಾಧಿಕಾರಿಯ ಬಗೆಗೆ ಶಿವಯೋಗಿಗಳು ಸಂಕಲ್ಪಿಸಿದಾಗ ಅದು ಬೆಂಗಳೂರಿನ ತೋಟದಪ್ಪ ವಿದ್ಯಾರ್ಥಿ ನಿಲಯದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ 'ಶಿವಪ್ಪ' ಎಂಬ ಹೆಸರಿನ ವಿದ್ಯಾರ್ಥಿಯ ಮೇಲೆ ಹರಿದು ಹೋಗಿ ಆ ಶಿವಪ್ಪನವರನ್ನು ಅದಮ್ಯ, ಅನಿರ್ವಚನೀಯ ಆಕರ್ಷಣೆಗೊಳಗು ಮಾಡಿ ಮಠಕ್ಕೆಳೆತಂದ ಅವರ ಸಂಕಲ್ಪಶಕ್ತಿಯ ಪ್ರಬಲಶಕ್ತಿಯ ಒಂದು ಸನ್ನಿವೇಶವನ್ನು ನೆನೆದರೆ ಸಾಕು. ಮೈ ನವಿರೇಳುತ್ತದೆ. ಶಿವಪ್ಪನವರು ಕೆಳಗಿನ ತುಮಕೂರಿನಲ್ಲಿ ತರಗತಿಗಳಲ್ಲಿ ಓದುತ್ತಿದ್ದಾಗ ಶ್ರೀಮಠದಲ್ಲಿ ಅಶನವಸತಿಗಾಗಿ ಪ್ರಾರ್ಥಿಸಿಕೊಂಡಿದ್ದ ಪ್ರಾರ್ಥನೆ ಶಿವಯೋಗಿಗಳಿಂದ ತಿರಸ್ಕೃತವಾಗಿತ್ತು. ಆದರೂ ಶಿವಪ್ಪನವರಿಗೆ ಉದ್ಧಾನೇಶ್ವರರಲ್ಲಿ ಅನಿರ್ವಚನೀಯ ಶ್ರದ್ಧಾಭಕ್ತಿ ವಿಶ್ವಾಸಮಯ ಭಾವ ಬಂಧುರವಾಗಿತ್ತು. ಆದರೆ, ಶಿವಪ್ಪನವರಿಗೆ ಮುಂದೆ ತಾವು ಈ ಮಠದ ಆಧಿಪತ್ಯ ವಹಿಸಿಕೊಳ್ಳತಕ್ಕವರೆಂಬ ಭಾವ ಕನಸು ಮನಸ್ಸಿನಲ್ಲೂ ಸುಳಿದಿದ್ದಿಲ್ಲ. ಅದಕ್ಕಾಗಿ ಶಿವಪ್ಪ ಮೊದಲಿನಿಂದ ಸಿದ್ಧವಾದವರೂ ಅಲ್ಲ. ಉದ್ಧಾನೇಶ್ವರರ ಸಂಕಲ್ಪಶಕ್ತಿ ಅವರನ್ನು ಮಠಕ್ಕೆ ಬಂಧಿಸಿ ಎಳೆತಂದಿತು. ಅವರ ಸುತ್ತಮುತ್ತ ಬಿಗಿದಿದ್ದ ಶಾರೀರಿಕ, ಮಾನಸಿಕ, ಲೌಕಿಕ ಕಾಮನೆಗಳ ಬಂಧುರ ಹಗ್ಗಗಳು ಶಿವಯೋಗಿಯ

ಆರ್ಯರು. ವಿಗ್ರಹಾರಾಧಕರಲ್ಲ. ಬಲಿಕೊಟ್ಟ ಪ್ರಾಣಿಗಳ ದೇಹ ಭಾಗಗಳನ್ನು ಅಗ್ನಿಯಲ್ಲಿ ಹಾಕಿ ಇಂದ್ರಾದಿ ದೇವತೆಗಳಿಗೆ ಅರ್ಪಿಸುತ್ತಿದ್ದರು. ಅಶ್ವಮೇಧ ಯಾಗಾದಿ ಇಂತಹ ಯಜ್ಞ ಯಾಗಗಳು ಹಿಂಸಾತ್ಮಕವೂ ಅಸ್ವಾಭಾವಿಕವೂ ಆಗಿದ್ದುದರಿಂದ* ಸಿಂಧೂ ತೀರದ ದ್ರಾವಿಡ ನಾಗರಿಕರು ಯಜ್ಞ ಯಾಗಗಳನ್ನು ಧ್ವಂಸ ಮಾಡುತ್ತಿದ್ದರು. ಈ ಯಜ್ಞ ಧ್ವಂಸಕರಿಂದ ರಕ್ಷಣೆಗಾಗಿ ಇಂದ್ರನನ್ನು ಆರ್ಯರು ಬೇಡಿದುದನ್ನು ಹೇಳುವ ಅನೇಕ ಋಗ್‌ಮಂತ್ರಗಳಿವೆ. ಆರ್ಯರಲ್ಲಿಯೇ ಕೆಲವರು ಹಿಂಸಾತ್ಮಕ ಯಜ್ಞಗಳನ್ನು ಒಪ್ಪದೆ, ಯಜ್ಞ ಮಾಡಲು ಅಧಿಕಾರವನ್ನು ಕೊಡುವ ಯಜ್ಞೋಪವೀತವನ್ನು ತ್ಯಜಿಸಿ, ವ್ರಾತ್ಯ*೧ ರೆನಿಸಿಕೊಂಡು ದ್ರಾವಿಡರನ್ನು ಸೇರಿಕೊಂಡರು. ಇವರು ಯಜ್ಞಧ್ವಂಸಕರೇ ಆದುದರಿಂದ ಅಸುರ*೨ರೆನಿಸಿಕೊಂಡರು. ಅಲ್ಲದೆ 'ಯಜ್ಞಧ್ವಂಸಿ' 'ಕ್ರತುಧ್ವಂಸಿ' ಎಂದು ಹೆಸರಾಂತ ದ್ರಾವಿಡರ ದೇವನಾದ ಶಿವನ ಭಕ್ತರಾದರು. ಆ ಕಾಲದಲ್ಲಿ ಪಶುಪತಿ ಶಿವನು ಆರ್ಯರ ದೇವರಾಗಿರಲಿಲ್ಲ.

ಅಸುರರು, ರಾಕ್ಷಸರು ಎಂದು ಕರೆಯಲ್ಪಡುತ್ತಿದ್ದ ದ್ರಾವಿಡರನ್ನು ಸೇರಿಕೊಂಡ ಈ ಆರ್ಯರಲ್ಲಿಯೂ ದ್ರಾವಿಡರಲ್ಲಿದ್ದಂತೆ ಲಿಂಗಧಾರಣೆಯ ಪದ್ಧತಿಯು ಇದ್ದುದಕ್ಕೆ ಆಧಾರಗಳಿವೆ. ಪೌಲಸ್ತ್ಯ ಬ್ರಹ್ಮನ ವಂಶದವನಾದ ರಾವಣನು ಹೋದ ಕಡೆಗಳಿಗೆಲ್ಲಾ ಲಿಂಗವನ್ನು ಒಯ್ಯುತ್ತಿದ್ದನೆಂದು ರಾಮಾಯಣದಲ್ಲಿ ಹೇಳಿದೆ*೩. ಸ್ಕಾಂದಪುರಾಣದ ಮಾಹೇಶ್ವರ ಖಂಡದಲ್ಲಿ ಹೀಗೆ ಹೇಳಿದೆ. "ಮಹಿಷಾಸುರನನ್ನು ದೇವಿಯು ಕೊಂದಾಗ ಅವನ ಕೊರಳಲ್ಲಿದ್ದ ಲಿಂಗವು ದೇವಿಯ ಕೈಗೆ ಅಂಟಿಕೊಂಡಿತು*೪ ಗೌತಮಮುನಿಯನ್ನು ವಿಚಾರಿಸಿದಾಗ ಅವನು ತ್ರಿಪುರಾಸುರ ಸಂಹಾರ ಕಾಲದಲ್ಲಿಯೂ ಅವನ ಕೊರಳಲ್ಲಿದ್ದ ಲಿಂಗವನ್ನು ತೆಗೆದ ಹೊರತು ಅವನು ಸಾಯಲಿಲ್ಲ*೫. ಎಂದು ಹೇಳಿದನು. 'ಪದ್ಮ ಪುರಾಣದ ಪಾತಾಳ ಖಂಡದ ೧೩೪ ನೆಯ ಶ್ಲೋಕದಲ್ಲಿ ರಾಕ್ಷಸರಲ್ಲಿ ಉತ್ತಮರಾದವರು ಲಿಂಗವನ್ನು ಧರಿಸುತ್ತಿದ್ದರೆಂದು ಹೇಳಿದೆ*೬.

---

* ಕಸ್ತೂರಿ ಮಾಸಿಕದಲ್ಲಿ (೧೯೬೮ ಸೆಪ್ಟೆಂಬರ್, ಪುಟ ೧೦೬) ಮುದ್ರಣವಾದ ಅಶ್ವಮೇಧ ವಿಷಯ.

*೧ ಸಾವಿತ್ರೀ ಪತಿತಾ ವ್ರಾತ್ಯಾ ಭವಂತ್ಯಾರ್ಯ ವಿಗರ್ಹಿತಾಃ—ಮನು.

*೨ ಅಸುರಜನಾನಾ ಮಹಾಸುರತ್ವ— ಛಾಂದೋಗ್ಯೋಪನಿಷತ್: ಅಸುರಾಣಾಂ ಅಯಜನ ಸ್ವಭಾವಂ—ಶಾಂಕರ ಭಾಷ್ಯ

*೩ ಯತ್ರ ಯತ್ರ ಚ ಯಾತಿಸ್ಮ ರಾವಣೋ ರಾಕ್ಷಸೇಶ್ವರಃ |
ಜಂಬೂನದ ಮಯಂ ಲಿಂಗಂ ತತ್ರ ತತ್ರಚ ನೀಯತೆ

*೪ ಆದತ್ತ ಸಹಸಾಗೌರೀ ಲಿಂಗಂ ತಸ್ಯಗಳೇ ಸ್ಥಿತಂ

*೫ ಪುರತ್ರಯಾವಾಸಾದ್ಯೈತೇಯ ಲಿಂಗಧಾರಕಾಃ
ಅಜಿತಾ ಶಂಭುನಾ ಪೂರ್ವಂ ಮುಕ್ತಲಿಂಗ ವಿದೂಷಿತಾಃ ||

*೬ ಧಾರಯಂತಿ ತಥಾಲಿಂಗಂ ರಾಕ್ಷಸಾಃ ಕೇಚಿದುತ್ತಮಾಃ ||

‘ಯೂಪವಚ್ಛರೀರ ಪಾತಂ’ ಎಂದು ಮೊದಲಾಗುವ ಶ್ಲೋಕವನ್ನು ಹೇಳಿ ಆ ಶ್ಲೋಕ ವಿರುವ ಶಿವಮಹಾ ಪುರಾಣದಲ್ಲಿಯೇ ಪಾಶುಪತ ವ್ರತವನ್ನು ಹೇಳಿದೆಯೆಂದು ನಿರ್ದೇಶಮಾಡಿವೆ. ಲಿಂಗಪೂಜೆಯಿಂದಲೇ ಪಾಶುಪತ ವ್ರತವನ್ನು ಚರಿಸಬೇಕೆಂಬುದೂ, ಕರದಲ್ಲಿ ಲಿಂಗವನ್ನು ಪೂಜಿಸಿದ ಅನಂತರ ಅದನ್ನು ಸದಾ ತಲೆಯಲ್ಲಿ ಧರಿಸಬೇಕೆಂಬುದೂ ಶಿವಮಹಾಪುರಾಣದಲ್ಲಿ*ಯೇ ಉಕ್ತವಾಗಿದೆ ಸೂತಸಂಹಿತೆಯಲ್ಲಿಯೂ*೧ ಲಿಂಗವನ್ನು ಸದಾ ಧರಿಸಬೇಕೆಂದು ಹೇಳುತ್ತದೆ. ಅತ್ಯಾಶ್ರಮ, ಪಾಶುಪತ, ಶಾಂಭವ, ಶಿರೋವ್ರತವೆಂದು ಕರೆಯಲ್ಪಡುವ ಈ ವ್ರತಕ್ಕೆ ವೇಧಾ, ಮನು, ಕ್ರಿಯಾ ಎಂಬ ದೀಕ್ಷಾತ್ರಯಗಳಿಂದ ಸ್ಥೂಲ ಸೂಕ್ಷ್ಮ ಕಾರಣವೆಂಬ ತನುತ್ರಯಗಳಲ್ಲಿ, ಇಷ್ಟಪ್ರಾಣ ಭಾವವೆಂಬ ಲಿಂಗತ್ರಯಗಳನ್ನು ಧರಿಸುವುದು ಅವಶ್ಯವೆಂಬುದು ಅನೇಕ ಆಗಮಾಧಾರಗಳಿಂದ*೨ ಸಿದ್ಧಾಂತವಾಗುತ್ತದೆ. ಈ ವ್ರತವು ವರ್ಣಾಶ್ರಮಗಳಿಗೆ ಮೀರಿದುದಾದುದರಿಂದ ಅತ್ಯಾಶ್ರಮವೆಂದೂ ಪಶುಪತಿಯನ್ನು ಲಿಂಗರೂಪದಲ್ಲಿ ಪೂಜಿಸುವುದರಿಂದ ಪಾಶುಪತವೆಂದೂ ಕಾರಣೋತ್ತರ ತಂತ್ರದಂತೆಯೂ.*೩ ಸೂತ ಸಂಹಿತೆಯ ಅಷ್ಟಮಾಧ್ಯಾಯದಂತೆಯೂ ಮುಮುಕ್ಷುವಿಗೆ ಶಕ್ತಿಪಾತದ ಅವಶ್ಯವಿರುವುದರಿಂದ ‘ಶಾಂಭವ’ ಎಂದೂ, ಲಿಂಗವನ್ನು ತಲೆಯಲ್ಲಿ ಸದಾ ಧರಿಸಬೇಕಾದುದರಿಂದ ಶಿರೋವ್ರತವೆಂದೂ ಕರೆಯಲ್ಪಡುತ್ತದೆ. ಮುಂಡಕದಲ್ಲಿ ‘ನಾಯಮಾತ್ಮಾ ಬಲಹೀನೇನ ಲಭ್ಯಃ’ ಎಂದು ಹೇಳಿರುವುದಕ್ಕೆ ಮುಮುಕ್ಷುವಿಗೆ ಶಕ್ತಿಪಾತವಾಗದೆ ಮೋಕ್ಷವಾಗದು ಎಂದೇ ಅರ್ಥ. ಬಸವ ಪೂರ್ವ ಲಿಂಗಧಾರಿಗಳೆಲ್ಲರೂ ಯಜ್ಞೋಪವೀತವನ್ನೂ ಧರಿಸಿದ ಶ್ರೋತ್ರಿಯ ಬ್ರಾಹ್ಮಣರೆಂಬುದು ವ್ಯಕ್ತವಾದ ವಿಷಯ*೪

---

* ಶಿವಮಹಾಪುರಾಣ, ವಿದ್ಯೇಶ್ವರ ಸಂಹಿತಾ — ಕರಪೂಜಾ ನಿವೃತ್ತಾನಾಂ ಸ್ವಭೋಜ್ಯಂತು ನಿವೇದಯೇತ್ । ಪೂಜಾಂ ಕೃತ್ವಾಥ ತಲ್ಲಿಂಗಂ ಶಿರಸಾ ಧಾರಯೇತ್ ಸದಾ ।

*೧ ಸೂತ ಸಂಹಿತೆ, ಅಧ್ಯಾಯ ೮ — ಶಿವಾಗಮೋಕ್ತಾಶ್ರಮ ನಿಷ್ಠಮಾನವಃ
ತ್ರಿಪುಂಡ್ರಲಿಂಗಂತು ಸದೈವ ಧಾರಯೇತ್ ॥

*೨ (i) ಕಾರಣೋತ್ತರ ತಂತ್ರ (ಕ್ರಿಯಾಪದ) ಅತ್ಯಾಶ್ರಮಂ ಪಾಶುಪತಂ ಶಾಂಭವಂ ತಚ್ಛಿರೋವ್ರತಂ । ಇತಿ ಪಂ ನಾಮಭಿಃ ಪುಣ್ಯೈಃ ಸಿದ್ಧಾಂತೇಷು ಗೀಯತೇ ।
ತನುತ್ರಯ ಗತಾನಾದಿ ಮಲತ್ರಯ ಮಸೌಗುರುಃ ।
ದೀಕ್ಷಾತ್ರಯೇಣ ನಿರ್ದಗ್ಧ್ವಾ ಲಿಂಗತ್ರಯಮುಪಾದಿಶೇತ್ ॥
(ii) ಮಕುಟೋತ್ತರ ತಂತ್ರ (ಕ್ರಿ. ಪ.) ತನುತ್ರಯಗತಾನಾದಿ ಮಲತ್ರಯ ವಿಶೋಧನಾ ।
ಲಿಂಗತ್ರಯಾಣಾಂ ಸಂಧಾನ ವಿಶೇಷಿತ ಭವಾಬ್ಧಯಃ ॥
ಶಿರೋವ್ರತಂ ಮಹಾಗುಹ್ಯಮಿದಂ ತೇನೈವ ಲಭ್ಯತೇ ।
ಯಃ ಕರ್ಮ ನಾಮ್ನಾ ಸಂಗತ್ಯಾನಪುನರ್ಜನ್ಮ ಭಾಗ್ಭವೇತ್ ॥

*೩ ಕಾರಣೋತ್ತರ (ಕ್ರಿ. ಪ. ೧) ಷಡಧ್ವ ಶುದ್ಧಿ ಪೂರ್ವೇಣ ಶಾಂಭವೇನ ವ್ರತೇನತು ।
ದೀಕ್ಷಯಿಷ್ಯ ಇಮಂ ಶಿಷ್ಯಂ ಶಕ್ತಿಪಾತ ವಿಧಾನತಃ

*೪ ಪಾರಮೇಶ್ವರಾಗಮ: ಬ್ರಾಹ್ಮಣಾ ವೀರಶೈವ ಸ್ಯುಃ ಶಿಖಾಯಜ್ಞೋಪವೀತಿನಃ ।
ಲಿಂಗರುದ್ರಾಕ್ಷ ಭಸ್ಮಾಂಗಾ ಬ್ರಹ್ಮಕರ್ಮ ಸಮಾಶ್ರಿತಾಃ ॥
ಗೌತಮ ಸ್ಮೃತಿ: ಮುಖೇ ಮಂತ್ರೋ ಹೃದಿಧ್ಯಾನಂ ಮಸ್ತಕೇ ಲಿಂಗಧಾರಣಂ ।
ಶಿಖಾ ರುದ್ರಾಕ್ಷಿ ಭಸ್ಮಾನಿ ಇತಿ ಬ್ರಾಹ್ಮಣ ಲಕ್ಷಣಂ ॥

ಮುಂಡಕೋಪನಿಷತ್ತು **ನಾಯಮಾತ್ಮಾ ಲಭ್ಯಃ ಅಲಿಂಗಾತ್** ಎಂದು ಹೇಳಿರುವುದಕ್ಕೆ ಶಾಂಕರ ಭಾಷ್ಯದಲ್ಲಿ ಲಿಂಗರಹಿತನಿಗೆ ಮೋಕ್ಷವಾಗುವುದಿಲ್ಲವೆಂಬಂತೆ ಅರ್ಥ ಮಾಡಿರುವುದು ಸರಿಯಾಗಿದೆ. ಆದರೆ ಲಿಂಗವೆಂದರೆ ಶಿವಲಿಂಗವೆಂಬ ರೂಢಿಯ ಅರ್ಥವನ್ನು ಬಿಟ್ಟು ಸಂನ್ಯಾಸವೆಂದು ಕಾರಣವಿಲ್ಲದೆ ಅರ್ಥಮಾಡಿರುವುದು **ರೂಢಿರ್ಯೋಗಾತ್ ಬಲೀಯಸೀ** ಎಂಬ ನಿಯಮಕ್ಕೆ ವಿರುದ್ಧವಾಗಿದೆ. ಲಿಂಗವೆಂದರೆ ಸಂನ್ಯಾಸವೆಂದು ಅರ್ಥವಾಗದು. ಯಾವ ನಿಘಂಟಿನಲ್ಲಿಯೂ ಈ ಅರ್ಥವನ್ನು ಹೇಳಿಲ್ಲ. ಲಿಂಗಪದವು ಈ ಅರ್ಥದಲ್ಲಿ ಎಲ್ಲಿಯೂ ಪ್ರಯೋಗವಾಗಿಲ್ಲ. ಲಿಂಗವೆಂದರೆ ಚಿಹ್ನೆ. ಸಂನ್ಯಾಸಿಯ ಚಿಹ್ನೆ ಎಂದೂ ಆಗಬಹುದು. ಆದುದರಿಂದ ಲಿಂಗಿ ಎಂದರೆ ಸಂನ್ಯಾಸದ ಚಿಹ್ನೆಯುಳ್ಳವನು ಸಂನ್ಯಾಸಿ ಎಂದಾಗುವುದು. ಸಂನ್ಯಾಸಿಯ ಚಿಹ್ನೆಯು ಮೋಕ್ಷಕಾರಣವೆಂದರೆ "ನಲಿಂಗಂ ಮೋಕ್ಷಕಾರಣಂ" ಎನ್ನಬೇಕಾಗುವುದು. ಈ ಉಪನಿಷತ್ತನ್ನು ಉಪದೇಶಿಸಿರುವುದು ಸಂನ್ಯಾಸಿಗಲ್ಲ, ಶೌನಕನೆಂಬ ಮಹಾ ಗೃಹಸ್ಥನಿಗೆ.* ಈ ಉಪನಿಷತ್ತಿನ ಪರಂಪರೆಯೇ ಗೃಹಸ್ಥರದು. ಏಕೆಂದರೆ ಗೃಹಸ್ಥನಾದ ಬ್ರಹ್ಮನು ತನ್ನ ಜ್ಯೇಷ್ಠಪುತ್ರನಿಗೆ ಇದನ್ನು ಉಪದೇಶಿಸಿದನೆಂದು ಈ ಉಪನಿಷತ್ತೇ ಹೇಳುತ್ತದೆ. ಸಂನ್ಯಾಸಿಯು ಅವ್ರತ. ಆದರೆ ಈ ಉಪನಿಷತ್ತು ಶಿರೋವ್ರತವನ್ನು ಆಚರಿಸುವವನಿಗೇನೆ ಉಪದೇಶಿಸಬೇಕೆಂದು ಹೇಳಿದೆ. ಅವನು ಏಕರ್ಷಿ ಹೋಮ ಮಾಡುವ ಗೃಹಸ್ಥನೂ ಆಗಿರಬೇಕು. ಏಕರ್ಷಿ ಮಹರ್ಷಿ ಪದಗಳು ಅವನಿಗೆ ಅನ್ವಯಿಸುತ್ತವೆ. ಉಪನಿಷತ್ ಜ್ಞಾನವನ್ನು ಪಡೆದವನು ಬ್ರಹ್ಮವಿದನು. ಅವನ ವಂಶದಲ್ಲಿ ಅಬ್ರಹ್ಮವಿದನು ಹುಟ್ಟನೆಂದು ಹೇಳುವುದರಿಂದ ಅವನು ಗೃಹಸ್ಥನೇ ಆಗಿರಬೇಕಷ್ಟೆ. ಯಾವ ದೃಷ್ಟಿಯಿಂದ ನೋಡಿದರೂ ಶಿವಲಿಂಗರಹಿತನಾದವನಿಗೆ ಮೋಕ್ಷವಿಲ್ಲವೆಂಬುದೇ ಈ ಉಪನಿಷತ್ ವಾಕ್ಯಕ್ಕೆ ಅರ್ಥ.

ವೀರಶೈವರ ಶಿವಯೋಗಕ್ಕೆ ಆಧಾರಭೂತವಾದುದು ಪರಶಿವಬ್ರಹ್ಮಕ್ಕೂ ಓಂಕಾರಕ್ಕೂ ತಾದಾತ್ಮ್ಯವನ್ನು ಹೊಂದಿಸಿರುವ ಮಾಂಡೂಕ್ಯ ಉಪನಿಷತ್ತು. ಶಿವಯೋಗವು ಸಾಧಿಸುವ ತುರೀಯಾವಸ್ಥೆಯನ್ನು ಮಾಂಡೂಕ್ಯವು ಹೀಗೆವರ್ಣಿಸಿ **ಪ್ರಪಂಚೋಪಶಮಂ, ಶಾಂತಂ, ಶಿವಂ, ಅದ್ವೈತಂ, ಚತುರ್ಥಂ, ಮನ್ಯಂತೆ ಸ ಆತ್ಮಾ ಸ ವಿಜ್ಞೇಯಃ** ನನ್ನ 'ಮಾಂಡೂಕ್ಯೋಪನಿಷತ್ ಪ್ರಕಾಶ'ದಲ್ಲಿ ಅದರ ವಿವರವಿದೆ. ಅದರಲ್ಲಿ ತೋರಿಸಿರುವಂತೆ ಮಾಂಡೂಕ್ಯದ ಸಾರ ಸರ್ವಸ್ವವನ್ನು ನಿಜಗುಣ ಶಿವಯೋಗಿಗಳ ಈ ಚಿಕ್ಕ ಪದ್ಯದಲ್ಲಿ ಸಂಗ್ರಹಿಸಿದೆಯೆನ್ನಬಹುದು.

''ಅರಿವೆ ಬರಿಯರಿವೆ ನೀನು ।
ಮರೆಯದೊಮ್ಮೆಯು ಜಗ ।
ದಿರವ ನಿಂತರಿವೆ ॥ ಪ ॥

* ಶೌನಕೋ ಹ ವೈ ಮಹಾಶಾಲಃ (ಮುಂಡಕ ೧-೧-೩, ಶಾಂಕರಭಾಷ್ಯ-ಮಹಾಶಾಲಃ-ಮಹಾಗೃಹಸ್ಥಃ

ಜಾಗರಣದ ಜಡ ಪೂಗವಿದನು ವಿಶ್ವ ।
ನಾಗಿ ನೇತ್ರಾದಿಕ ಯೋಗದಿಂದರಿವೆ ॥ ॥ ೧ ॥

ಕನಸಿನ ಕಲ್ಪನೆಯನು ಮನವೆಂಬ ಸಾ ।
ಧನದಿಂದೆ ತೈಜಸ ನೆನಿಸಿ ನೀನರಿವೆ ॥ ॥ ೨ ॥

ಪರಮ ಸುಖವನು ನಿದ್ರೆವೆರೆಸಿ ಮಾಯಾವೃತ್ತಿ
ಕರಣದಿ ಪ್ರಾಜ್ಞ ಪೆಸರುದಳೆದರಿವೆ ॥ ॥ ೩ ॥

ಮರಹನರಿವ ಮೊದಲರಿವನರಿವೆ ಬಳಿ ।
ಕರಿವು ಮರವೆ ಸೋಂಕದರಿವ ನೀನರಿವೆ ॥ ॥ ೪ ॥

ಅರಿವು ತಾನೆ ಪರತರ ಶಂಭುಲಿಂಗದ ।
ಕುರುಹಿನ ಭಾವನೆ ತೊರೆದು ನೀನರಿವೆ ॥ ॥ ೫ ॥

ಶ್ವೇತಾಶ್ವತರ ಉಪನಿಷತ್ತು, ಇದರ ಅನೇಕ ಮಂತ್ರಗಳನ್ನು ಬಳಸಿಕೊಂಡಿರುವ ಶಿವಪುರಾಣಾಂತರ್ಗತ ವಾಯುವೀಯ ಸಂಹಿತೆ, ಇವುಗಳ ಹಿನ್ನೆಲೆಯಲ್ಲಿ ರಚಿತವಾಗಿರುವ ಸಿದ್ಧಾಂತ ಶಿಖಾಮಣಿ–ಇವು ವೀರಶೈವದ ಮುಖ್ಯ ಆಧಾರ ಗ್ರಂಥಗಳು. ಶಿವನಲ್ಲಿ ಅವ್ಯಕ್ತವಾಗಿದ್ದ ಶಕ್ತಿಯು ಹೊರಹೊಮ್ಮಿ ಅದರಿಂದ ಈ ಜಗತ್ತೆಲ್ಲವೂ ಆವಿರ್ಭೂತವಾಯಿತೆಂಬ ಸಿದ್ಧಾಂತಕ್ಕೆ ವೀರಶೈವರು ಆಧಾರವಾಗಿ ತೆಗೆದುಕೊಳ್ಳುವುದು. **ಮಾಯಾಂತು ಪ್ರಕೃತಿಂ ವಿದ್ಯಾನ್ಮಾಯಿನಂಚ ಮಹೇಶ್ವರಂ। ತಸ್ಯಾವಯವ ಭೂತೈಸ್ತು ವ್ಯಾಪ್ತಂ ಸರ್ವಮಿದಂ ಜಗತ್** ಎಂಬ ಶ್ವೇತಾಶ್ವತರಮಂತ್ರ. **ಏಕೋ ವರ್ಣೋ ಬಹುಧಾಶಕ್ತಿ ಯೋಗಾದ್ ವರ್ಣಾನನೇಕಾನ್ ನಿಹಿತಾರ್ಥೋ ದಧಾತಿ** ಎಂಬ ಈ ಉಪನಿಷತ್ತಿನ ಮಂತ್ರಭಾಗವಾದರೂ ಶಕ್ತಿಯೋಗದಿಂದ ಶಿವನು ವಿವಿಧ ಜಗತ್ತನ್ನು ಹೊರಹೊಮ್ಮಿಸುವುದನ್ನು ಹೇಳುತ್ತದೆ. **ಗುಣತ್ರಯಾತ್ಮಿಕಾ ಶಕ್ತಿಃ....ತದ್ವೈಷಮ್ಯಾತ್ ಸಮುತ್ಪನ್ನಾ....ಭೋಕ್ತಾ ಭೋಜ್ಯಂ ಪ್ರೇರಯಿತಾ ವಸ್ತುತ್ರಯಮಿದಂ ಸ್ಮೃತಂ** ಎಂದು ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಿರುವುದಕ್ಕೆ ಶ್ವೇತಾಶ್ವತರದಲ್ಲಿನ **ಭೋಕ್ತಾ ಭೋಜ್ಯಂ ಪ್ರೇರಿತಾರಂಚಮತ್ವಾ ಸರ್ವಂ ಪ್ರೋಕ್ತಂ ತ್ರಿವಿಧಂ ಬ್ರಹ್ಮಮೇತತ್** ಎಂಬ ಮಂತ್ರವೇ ಆಧಾರವು. **ಏಕ ಏವ ಶಿವಃ** ಎಂಬ ಸಿದ್ಧಾಂತ ಶಿಖಾಮಣಿಯ ವೀರಶೈವ ನಿಲುವಿಗೆ **ಏಕೋಹಿ ರುದ್ರೋ ನ ದ್ವಿತೀಯಾಯ ತಸ್ಥುಃ** ಎಂಬ ಶ್ವೇತಾಶ್ವತರ ಶ್ರುತಿಯೇ ಆಧಾರ. ಶಕ್ತಿ ವಿಶಿಷ್ಟ ಪರಶಿವ ಬ್ರಹ್ಮವು ಶಿವಯೋಗದಿಂದಲೇ ಅಭಿವ್ಯಕ್ತವಾಗುವುದೆಂಬ ವೀರಶೈವ ನಿಲುವಿಗೆ **ತೇ ಧ್ಯಾನ ಯೋಗಾನುಗತಾಅಪಶ್ಯನ್ ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಮ್** ಎಂಬ ಶ್ವೇತಾಶ್ವತರದ ಎರಡನೆಯ ಅಧ್ಯಾಯವು ಶಿವಯೋಗ ವಿಷಯಕ್ಕೇ ಮೀಸಲಾಗಿದೆ. ಅತ್ಯಾಶ್ರಮವೆಂದರೆ–ತ್ರಿವಿಧ ದೀಕ್ಷೆಯಿಂದ ತನುತ್ರಯದಲ್ಲಿ ಲಿಂಗತ್ರಯವನ್ನು ಸಂಬಂಧಿಸಿದ ಮೇಲೆ ಇಷ್ಟಲಿಂಗವನ್ನು ಕರದಲ್ಲಿ ಪೂಜಿಸಿ ತಲೆಯಲ್ಲಿ

ಆಧರಿಸುವ ಶಿರೋವ್ರತವೇ ಎಂಬುದಕ್ಕೆ ಹಿಂದೆ ವಿಪುಲ ಆಧಾರಗಳನ್ನು ಕೊಟ್ಟಿದೆ. ಅಂತಹ ಅತ್ಯಾಶ್ರಮಿ ಋಷಿಗಳಿಗೇ ಶ್ವೇತಾಶ್ವರೋಪನಿಷತ್ತು ಉಪದೇಶಿಸಲ್ಪಟ್ಟಿದೆ ಎಂದು ಅದರಲ್ಲಿ ಹೇಳಿದೆ. **ಅತ್ಯಾಶ್ರಮಿಭ್ಯಃ ಪರಮಂ ಪವಿತ್ರಂ ಪ್ರೋವಾಚ** ಎಂಬುದು ಆ ಭಾಗ-

ವೇದಪೂರ್ವ ವೀರಶೈವ ಲಿಂಗಧಾರೀ ಧರ್ಮ ಪ್ರಗತಿಗೆ ಆರ್ಯರು ಮೊದಲು ಅಡ್ಡ ಬಂದರೂ ತದನಂತರ ಅವರಿಂದಲೇ ಅದು ಮುಂದುವರೆಯಿತು. ಮುಂಡಕ ಮಾಂಡೂಕ್ಯ ಶ್ವೇತಾಶ್ವತರ ಉಪನಿಷತ್ತುಗಳ ಕಾಲದಲ್ಲಿ ಅದು ಪೂರ್ಣರೂಪವನ್ನು ತಳೆಯಿತು. ಅದರ ಪ್ರವಾಹದಲ್ಲಿ ಸೇರಿಕೊಂಡ ಕಲ್ಮಷಗಳನ್ನು ತೆಗೆದುಹಾಕಿ ಶುದ್ಧೀಕರಿಸಿದವರು ಲಕುಲೀಶ ಶ್ರೀಕಂಠ ಶಿವಾಚಾರ್ಯರು. ಅದರ ಸಂಪೂರ್ಣ ಶುದ್ಧೀಕರಣ ನಡೆದುದು ಬಸವೇಶ್ವರರಿಂದ; ಆಗ ದೊರೆತ ಅಮೃತಪಾನವನ್ನು ಮಾಡಿದವರು ಅನುಭವ ಮಂಟಪದ ಶರಣರು.

## ಆಗಮೋಕ್ತ ವೀರಶೈವ

ವಾಯುವೀಯ ಸಂಹಿತೆಯಲ್ಲಿ ಲಕುಲೀಶನ ಅವತಾರ, ಶಿಷ್ಯ ಪರಂಪರೆಯ ಯೋಗಾಚಾರ್ಯರ ವರ್ಣನೆ ಮೊದಲಾದ ವಿಷಯಗಳಿರುವುದರಿಂದ ಅದು ಕ್ರಿಸ್ತಶಕೆಯ ಆರಂಭಕಾಲದ್ದು ಎಂದು ಹೇಳಬಹುದು. ಆ ಕಾಲದಿಂದ ಬಸವೇಶ್ವರ ಯುಗದವರೆಗಿನ ಲಿಂಗಧಾರೀ ಧರ್ಮದ ವಿಷಯವನ್ನು ಚಾರಿತ್ರಿಕದೃಷ್ಟಿಯಿಂದ ವಿವೇಚಿಸುವ ಮೊದಲು ಲಿಂಗಧಾರೀ ಧರ್ಮವು ಬಸವೇಶ್ವರ–ಪಂಚಾಚಾರ್ಯಯುಗಗಳಿಗಿಂತಲೂ ಸನಾತನವಾದ ಧರ್ಮವೆಂಬುದನ್ನೂ, ಅದೇ ಆಗಮಗಳ ನಿಲುವೆಂಬುದನ್ನೂ ವಿವೇಚಿಸಬೇಕಾಗಿದೆ. ಶಿವೋಕ್ತವಾದ ಈ ಧರ್ಮವು ಆಗಮಗಳೆಷ್ಟು ಪುರಾತನವೋ ಅಷ್ಟೇ ಪುರಾತನವಾದುದು. ಈ ಮತದವರಲ್ಲಿ ಭಕ್ತಿಯು ಕಡಿಮೆಯಾದಾಗಲೆಲ್ಲಾ ಆಚಾರ್ಯರು ಹುಟ್ಟಿ ಭಕ್ತಿಯನ್ನು ವೀರಶೈವರಲ್ಲಿ ಸ್ಥಿರೀಕರಿಸಿ, ಸನಾತನವಾದ ಈ ಮತವನ್ನು ಪ್ರಬಲೀಕರಿಸಿದರೆಂಬುದೇ ಪಂಚಾಚಾರ್ಯರು ಚತುರ್ಯುಗಗಳಲ್ಲಿಯೂ ಅವತರಿಸಿದರೆಂದು ಆಗಮಗಳಲ್ಲಿ ಹೇಳಿರುವುದರ ಅಭಿಪ್ರಾಯ. ಅವರು ಮತ್ತೆ ಮತ್ತೆ ವೀರಶೈವ ಧರ್ಮವನ್ನು ಹೊಸ ಹೊಸದಾಗಿ ಸ್ಥಾಪಿಸಿದರೆಂದು ಆಗಮಗಳಲ್ಲಿ ಹೇಳಿಲ್ಲ. ಶಾಸ್ತ್ರಪುರಾಣಾಗಮಗಳಲ್ಲಿಯಲ್ಲದೆ ವೇದದಲ್ಲಿಯೂ ಬ್ರಾಹ್ಮಣನು ಲಿಂಗಧಾರಣೆಯನ್ನು ಮಾಡಿಕೊಳ್ಳಬೇಕೆಂದು ಹೇಳಿದೆಯೆಂಬುದು ವೀರಶೈವರ ನಿಲುವು.*

ವೀರಶೈವರ ಪ್ರಾಚೀನತೆಯನ್ನು ಶಂ. ಭಾ. ಜೋಶಿಯವರು ವೇದಗಳಲ್ಲಿ ಕಂಡಿದ್ದಾರೆ. ಶಿವರಹಸ್ಯವೆಂಬ ಅವರ ಗ್ರಂಥದಲ್ಲಿ ರುದ್ರನನ್ನು ಮತ್ತೆ ಮತ್ತೆ

* ವೇದೇಷು ಶಾಸ್ತ್ರ ಸಂಘೇಷು ಪುರಾಣೇಷ್ವಾಗಮೇಷು ಚ ।
ಲಿಂಗಧಾರಣ ಮಾಖ್ಯಾತಂ ಬ್ರಾಹ್ಮಣ್ಯಸ್ಯ ಸುಸಿದ್ಧ್ಯಯಾತ್ ॥ ಲಿಂಗಪುರಾಣ

ಋಗ್ವೇದವು ವೀರನೆಂದು ಕರೆದಿರುವ ಆಧಾರದ ಮೇಲೆ ಅವರು ಆ ರೀತಿ ನಿರ್ಧರಿಸಿರುವರು: ಅವರ ಪ್ರಕಾರ ಆ ವೀರರುದ್ರನೆ ವೀರಶೈವನು; ಅವನ ಅನುಯಾಯಿಗಳು ವೀರಶೈವರು; ಇಂದಿನ ವೀರಬಣಂಜುಗಳು ಅಂದಿನ ಪಣಿಗಳೆಂಬುದು ಅವರ ನಿಲುವು. ಆದರೆ, ವೀರಶೈವ ಪದದಲ್ಲಿನ ವೀರಪದವು ವೀರಭದ್ರನಿಂದ ಬಂದಿತು-ಎಂದೆನಿಸುವುದು. ವೀರಶೈವರ, ವೈಶಿಷ್ಟ್ಯವಾದ ಯಜ್ಞವಿರೋಧವನ್ನು ಸಾಧಿಸಿದವನು ದಕ್ಷಯಜ್ಞಧ್ವಂಸಿಯಾದ ವೀರಭದ್ರನು. ವೀರಶೈವ ಧರ್ಮವನ್ನು ಉಪದೇಶಿಸಿದ ಶಿವನೇ ಮೂಲಗುರು; ಗುರುಪುತ್ರನಾದ ವೀರಭದ್ರನೂ ಗುರುವೇ. ಅಲ್ಲದೆ, ಶಿವನ ವಾಹನವಾದ ನಂದಿಗೂ ವೀರಶೈವ ಧರ್ಮದ ಜ್ಞಾನವು ಪ್ರಥಮತಃ ಆಯಿತು. ಎಂದು ಸ್ಕಾಂದಪುರಾಣದಲ್ಲಿ ಹೇಳಿದೆ. ಆದ್ದರಿಂದಲೇ ಮುಂದೆ ಈ ಧರ್ಮದ ಉದ್ಧಾರವನ್ನು ಮಾಡಿದ ಬಸವೇಶ್ವರನು ನಂದಿಯ ಅವತಾರವೆನಿಸಿಕೊಂಡದ್ದು. ಈ ಧರ್ಮವನ್ನು ಆಸೇತು ಹಿಮಾಚಲದವರೆಗೂ ಪ್ರಚಾರಮಾಡಿದ ರೇಣುಕಾಚಾರ್ಯರ ಪೀಠದವರಿಗೆ ವೀರಭದ್ರನು ಪೂಜ್ಯಮೂರ್ತಿಯಾಗಿದ್ದಾನೆ. ಇಂದೂ ವೀರಶೈವರ ಉತ್ಸವಕಾಲದಲ್ಲಿ ನಂದಿಧ್ವಜವನ್ನು ಕುಣಿಸುತ್ತ ವೀರಭದ್ರನ ಹಲಗೆಯ ನರ್ತನದೊಡನೆ ಅವನ ಪ್ರತಾಪವನ್ನು ಉದ್ಘೋಷಿಸುತ್ತಾರೆ. ಶಿವನಿಂದ ಸ್ಕಂದನಿಗೆ ವೀರಶೈವ ಧರ್ಮದ ಉಪದೇಶವಾದುದು ಆಗಮೋಕ್ತವಾದುದು; ಸ್ಕಂದನು ತನಗೆ ಉಪದೇಶವಾದುದನ್ನು ಅಗಸ್ತ್ಯನಿಗೆ ಉಪದೇಶಿಸಿದನೆಂದೂ ಸ್ಕಾಂದಪುರಾಣದಲ್ಲಿ ಹೇಳಿದೆ. ಒಟ್ಟಿನಲ್ಲಿ ಹೇಳುವುದಾದರೆ ಗೋತ್ರಪುರುಷರಾದ ವೀರ, ನಂದಿ, ವೃಷಭ, ಭೃಂಗಿ ಮತ್ತು ಸ್ಕಂದರ ಕಾಲದಲ್ಲಿಯೇ ಈ ಧರ್ಮವು ಪ್ರಚಾರವಾಗಿದ್ದಿತು. ಇಂದಿನಂತೆ, ದೇಹಾಂತದವರೆಗೂ ಲಿಂಗವನ್ನು ಧರಿಸಿರುವುದಲ್ಲದೆ, ಸತ್ತಮೇಲೂ ಅದನ್ನು ತೆಗೆಯದೆ ಇರುವ ವೀರಶೈವ ಪದ್ಧತಿಯು ಪ್ರಾಚೀನ ಕಾಲದಿಂದಲೂ ಇದ್ದುದಕ್ಕೆ ಪುರಾಣದ ಆಧಾರವಿದೆ.* ಇದರಲ್ಲಿ

* ಕಥಿತಾ ಶ್ಯಂಕರೇಣೈವ ಲಿಂಗಸ್ಯಾರ್ಚನ ಸೂಚಕಾ: |
ಸಂಕ್ಷೇಪೇಣ ಕಥಿತಃ ಶಿವಧರ್ಮಸ್ಸನಾತನಃ |
ವೀರಭದ್ರೋಽಯಮಾದ್ಯಸ್ತು ಸ್ಕನ್ದೋಚ ಗುರವಃ ಸ್ಮೃತಾಃ |
ಗುರೋರ್ಜಾತಾಸ್ತ್ವಗೋತ್ರೋ ವಿಖ್ಯಾತಾ ಭುವನತ್ರಯೇ |
ಲಿಂಗಸ್ಯ ಮಹಿಮಾನಂ ಚ ನಂದೀ ಜಾನಾತಿ ತತ್ತ್ವತಃ |
ತಥಾ ಸ್ಕಂದೋಽಪಿ ಭಗವಾನನ್ಯೇ ತೇ ನಾಮಧಾರಕಾಃ |
ಯಥೋಕ್ತಾಃ ಶಿವಧರ್ಮಾಶ್ಚ ನಂದಿನಾ ಪರಿಕೀರ್ತಿತಾಃ |
ಶೈಲಾದೇನ ಮಹಾಭಾಗ ವಿಚಿತ್ರಾ ಲಿಂಗಧಾರಕಾಃ |
ಶಿವಸ್ಯೋಪರಿ ಲಿಂಗಂ ಚ ಧ್ರಿಯತೇ ಚ ಪುರಾತನೈಃ |
ಲಿಂಗೇನ ಸಹ ಪಂಚತ್ವಂ ಲಿಂಗೇನ ಸಹಜೀವಿತಂ |
ಏತೇ ಧರ್ಮಾಃ ಸುಪ್ರತಿಷ್ಠಾಃ ಶೈಲಾದೇನ ಪ್ರತಿಷ್ಠಿತಾಃ |
ಧರ್ಮಃ ಪಾಶುಪತ ಶ್ರೇಷ್ಠ: ಸ್ಕಂದೇನ ಪ್ರತಿಪಾದಿತಃ|
ಸ್ಕಂದಾತ್ ತತ್ ಸಮನುಪ್ರಾಪ್ತ ಮಗಸ್ತ್ಯೇನ ಮಹಾತ್ಮನಾ |
ವೀರ ಮಹೇಶ್ವರಾಜ್ಞೋಯಂ ಪಾಪಕ್ಷಯ ಕರಾ ನೃಣಾಂ |

ಈ ಆಧಾರವು ರಚಿತವಾದ ಕಾಲದಲ್ಲಿಯೂ ಈ ಧರ್ಮವು ಸನಾತನವಾಗಿದ್ದಂತೆ ಹೇಳಿದೆ.

ಆಗಮಗಳು ಬಹುಮಟ್ಟಿಗೆ ಮುದ್ರಿತವಾಗಿಲ್ಲ. ಪಾಂಡಿಚೆರಿಯಲ್ಲಿ ಆಗಮಗಳು ತಾಡವಾಲೆ ಗ್ರಂಥಗಳ ಆಧಾರದಿಂದ ಮುದ್ರಣವಾಗುತ್ತಿವೆ. ಪ್ರಕ್ಷಿಪ್ತ ಶ್ಲೋಕಗಳಿರದ ಹಾಗೆ ಮುದ್ರಣವಾದ ಆಗಮಗಳಿಂದ ಆಗಮೋಕ್ತ ವೀರಶೈವ ನಿಲುವನ್ನು ನಿರ್ಧರಿಸಬೇಕಾಗುತ್ತದೆ. ಪಂಡಿತರತ್ನ ಬಿರುದಾಂಕಿತ ಆಸ್ಥಾನ ಮಹಾ ವಿದ್ವಾನ್ ಪಿ. ಆರ್. ಕರಿಬಸವಶಾಸ್ತ್ರಿಗಳೆಂಬವರು ಈ ಶತಮಾನದ ಆದಿಯಲ್ಲಿ ಅದ್ವಿತೀಯ ಪಂಡಿತರೆಂದು ಹೆಸರುವಾಸಿಯಾಗಿದ್ದರು. ಗುರುವಿರಕ್ತ ವಿವಾದಗಳಿಲ್ಲದ ಕಾಲವದು. ವೀರಶೈವರನ್ನು ವೀರಶೈವೇತರರು ಶೂದ್ರರೆನ್ನುತ್ತಿದ್ದರು. ಶಾಸ್ತ್ರಿಗಳು ಇದನ್ನು ಪ್ರತಿಭಟಿಸಿ ವೀರಶೈವೋದ್ಧಾರಕ್ಕಾಗಿ ಅವರ ಅಧ್ಯಕ್ಷತೆಯಲ್ಲಿ "ವೀರಶೈವಮತ ಸಂವರ್ಧಿನಿ" ಎಂಬ ಸಂಸ್ಥೆಯನ್ನು ೧೯೦೬ರಲ್ಲಿ ಸ್ಥಾಪಿಸಿ, ಅದರಆಶ್ರಯದಲ್ಲಿ ಉಪನ್ಯಾಸಗಳನ್ನು ಪ್ರಖ್ಯಾತ ವಿದ್ವಾಂಸರಿಂದ ಏರ್ಪಡಿಸಿದರು. ಆ ವಿದ್ವಾಂಸರ ಅಭಿಪ್ರಾಯಗಳೂ ಅವರು ಆಧಾರವಾಗಿ ಹೇಳಿರುವ ಆಗಮಶ್ಲೋಕಗಳೂ ಈಗ ಮುದ್ರಣವಾಗಿರುವ ಆಗಮಗಳೂ ಆಗಮೋಕ್ತ ವೀರಶೈವವನ್ನು ನಿರ್ಧರಿಸಲು ಸಹಾಯಕವಾಗಿವೆ.

ಸಿದ್ಧಾಂತ ಶಿಖಾಮಣಿಯು ತಂತ್ರಗಳಲ್ಲಿ ಕೊನೆಯದು. **ಶೈವ ತಂತ್ರಾಣಾಮುತ್ತರತ್ವಾನ್ನಿರುತ್ತರಂ** ಎಂದು ಹೇಳಿಕೊಳ್ಳುತ್ತದೆ. **ಶೈವಾಗಮೇಷು ಸರ್ವೇಷು ಪುರಾಣೇಷ್ವಬಲೇಷು ಚ। ಪುರಾದೇವೇನ ಕಥಿತಂ ದೇವ್ಯೈ ತನ್ನಂದನಾಯ ಚ। ತತ್ ಸಂಪ್ರದಾಯ ಸಿದ್ಧೇನ ರೇಣುಕೇನ ಮಹಾತ್ಮನಾ ಗಣೇಶ್ವರೇಣ ಕಥಿತಮಗಸ್ತ್ಯಾಯ ಪುನಃಕ್ಷಿತೌ॥**ಎಂದು ವೀರಶೈವದ ಸನಾತನತ್ವವನ್ನು ಹೇಳಿದೆ. ವೀರಶೈವ ಧರ್ಮವನ್ನು ಹೇಳಿದವನು ಸಾಕ್ಷಾತ್ ಶಿವನೆ; ಅವನು ಪಾರ್ವತಿಗೂ ಷಣ್ಮುಖನಿಗೂ ಹೇಳಿರುವನೆಂದಿರುವುದರಿಂದ ವೀರಶೈವವು ರೇಣುಕಾಚಾರ್ಯರಿಗೂ ಹಿಂದಿನದು. ಅವರ ಕಾಲದಲ್ಲಾಗಲೇ ವೀರಶೈವ ಸಂಪ್ರದಾಯ ಬೆಳೆದು ನಿಂದಿತ್ತು. ಆ ಸಂಪ್ರದಾಯದಲ್ಲಿ ರೇವಣಸಿದ್ಧರು ಎಂದರೆ ರೇಣುಕಾಚಾರ್ಯರು ಸಿದ್ಧರಾಗಿದ್ದರು. ಅದನ್ನು ಮತ್ತೆ ಅಗಸ್ತ್ಯರಿಗೆ ಅವರು ಉಪದೇಶ ಮಾಡಿದರು ಎಂದಾಯಿತು; ಅರ್ಥಾತ್ ವೀರಶೈವವನ್ನು ಅವರು ಹೊಸದಾಗಿ ಸ್ಥಾಪಿಸಲಿಲ್ಲ; ಹಿಂದೆ ಇದ್ದುದನ್ನು ಬಲಪಡಿಸಿದರು.

ಪಂಚಾಚಾರ್ಯರ ಉತ್ಪತ್ತಿಯನ್ನು ಹೇಳುವ ಆಗಮಗಳು ಅವರು ಪ್ರತಿಯೊಂದು ಯುಗದಲ್ಲಿಯೂ ಬೇರೆ ಬೇರೆ ಹೆಸರುಗಳಿಂದ ಹುಟ್ಟಿ ವೀರಶೈವವನ್ನು ಉದ್ಧರಿಸಿದುದಾಗಿ ಹೇಳುತ್ತದೆ. ಋಗ್ವೇದಕ್ಕಿಂತಲೂ ಬಹಳ ಹಿಂದೆಯೇ ಪ್ರಚಾರದಲ್ಲಿದ್ದ ವೀರಶೈವ ಲಿಂಗೀಧರ್ಮದ ಪ್ರಗತಿಯಲ್ಲಿ ಏರಿಳಿತಗಳಿದ್ದುದರಲ್ಲಿ ಆಶ್ಚರ್ಯವಿಲ್ಲ. ಅವರ ಇಳಿತ ಕಾಲದಲ್ಲೆಲ್ಲ ಆಗ ಇದ್ದ ಆಚಾರ್ಯರು ವೀರಶೈವ ಧರ್ಮ

ವನ್ನು ಉದ್ಧರಿಸದಿದ್ದರೆ ಅದು ಉಳಿಯುತ್ತಿರಲಿಲ್ಲ. ಆದುದರಿಂದ ಯುಗ ಯುಗಗಳಲ್ಲಿ ವೀರಶೈವದ ಅಧಃಪತನವಾದಂತೆಲ್ಲ ಆಚಾರ್ಯರುಹುಟ್ಟಿ ಅದನ್ನು ಉದ್ಧರಿಸಿರಬೇಕು. ಅವರ ವಿಷಯಗಳಲ್ಲಿ ಪವಾಡಗಳು ಉಕ್ತವಾಗಿವೆ. ಇದು ದೊಡ್ಡವರ ವಿಷಯದಲ್ಲಿ ಸ್ವಾಭಾವಿಕ. ಹಾಗೆ ನೋಡಿದರೆ ಶಂಕರಾಚಾರ್ಯರ ವಿಷಯದಲ್ಲಿ ಹೇಳಿರುವ ಅದ್ಭುತ ವಿಷಯಗಳು ಪಂಚಾಚಾರ್ಯರಿಗಿರುವವುಗಳನ್ನು ಮೀರಿಸಿವೆ.

ಪಂಚಾಚಾರ್ಯರನ್ನು ಜಗತ್ತಿಗೆ ಕಳುಹಿಸುವ ಮೊದಲು ಶಿವನು ಅವರಿಗಿತ್ತ ಆದೇಶವು ಸ್ವಯಂಭುವಾದಿ ಆಗಮಗಳಲ್ಲಿ ಹೀಗಿದೆ– **ದೀಕ್ಷಾಂ ಕೃತ್ವಾಥ ಮದ್ ಭಕ್ತಿಂ ಸ್ಥಾಪಯಿತ್ವಾ ಮಹೀತಲೇ। ಮನ್ಮತಂ ಪ್ರಬಲೀ ಕೃತ್ವಾಹತ್ವಾ ಮದ್ಭಕ್ತನಿಂದಕಾನ್॥** ದೀಕ್ಷೆಯನ್ನು ಮಾಡಿ ನನ್ನ ಭಕ್ತಿಯನ್ನು ಭೂಲೋಕದಲ್ಲಿ ಸ್ಥಾಪಿಸಿ; ವೀರಶೈವ ಮತವನ್ನು ಪ್ರಬಲೀಕರಿಸಿ ಹೀಗೆಂದು ಶಿವನು ಆಜ್ಞಾಪಿಸಿರುವುದರಲ್ಲಿ ವೀರಶೈವ ಮತವನ್ನು ಪ್ರಬಲೀಕರಿಸಿ ಎಂದೇ ಹೊರತು ಅದನ್ನು ಹೊಸದಾಗಿ ಸ್ಥಾಪಿಸಿ ಎಂದಲ್ಲ. ಭಕ್ತಿಯು ಇಲ್ಲವಾಗಿತ್ತು. ಶಿವನಲ್ಲಿ ಭಕ್ತಿಯನ್ನು ಸ್ಥಾಪಿಸಬೇಕಾಯಿತು. ಮತವನ್ನು ಪ್ರಬಲೀಕರಿಸಿ ಎಂದು ಹೇಳಿರುವುದರಿಂದ ಇರುವ ಮತವನ್ನು ಹೆಚ್ಚಿಸಬೇಕೆಂದಾಯಿತು. ಆದುದರಿಂದ ಆಗಮೋಕ್ತಿಯಂತೆಯೇ ಆಚಾರ್ಯರಾಗಲೀ ಬಸವಾಲ್ಲಮರಾಗಲೀ ಇಲ್ಲದ ಮತವನ್ನು ಹುಟ್ಟಿಸಿ ಸ್ಥಾಪಿಸಲಿಲ್ಲ.

ಸ್ವಯಂಭುವಾಗಮದ ಅಷ್ಟಮ ಪಟಲದಲ್ಲಿ ಹೇಳಿರುವ ವಿಚಾರವು ಗಮನಾರ್ಹವಾಗಿದೆ. ಅದರ ಸಾರಾಂಶವೇನೆಂದರೆ— ಪಂಚವಕ್ತ್ರಗಣಾಧೀಶನು ತನ್ನ ಪಂಚಪುತ್ರರ ದೀಕ್ಷೆಗಾಗಿ ಪಂಚಮುತ್ಪಿಜರನ್ನು ಕಳುಹಿಸಿಕೊಡಬೇಕೆಂದು ಶಿವನನ್ನು ಪ್ರಾರ್ಥಿಸುತ್ತಾನೆ. ಪಂಚಗಣವರರು ಪಂಚಸ್ಥಾವರ ಲಿಂಗಗಳಲ್ಲಿ ಪಂಚಾಚಾರ್ಯರಾಗಿ ಹುಟ್ಟುವಂತೆ ಶಿವಾಜ್ಞೆಯಾಗುತ್ತದೆ; ಆದರೆ ಅವರು ಗುರುಗಳಾದ ತಮಗೆ ಶಿಷ್ಯರ ಪಾಪವು ತಟ್ಟುವುದೆಂದು ಭಯಪಡುತ್ತಾರೆ. ಆಗ ಶಿವನು ತನ್ನ ಶಿಖಾಚಕ್ರದಿಂದ ಹೊರ ಹೊಮ್ಮಿದ ಚರಲಿಂಗವು ಅವರ ಗುರುವಾಗಿ ಅವತರಿಸಿ ಅವರನ್ನು ರಕ್ಷಿಸುವುದೆಂದು ಅಭಯವನ್ನು ನೀಡುತ್ತಾನೆ. ಮುಂದೆ ಸ್ವಯಂಭುವಾಗಮವು ಜಂಗಮ ಮಹಿಮೆಯನ್ನು ಹೇಳುತ್ತದೆ. ಪಂಚಾಚಾರ್ಯರು ಚರಲಿಂಗದ ಎಂದರೆ ಜಂಗಮದ ಪಾದತೀರ್ಥ ಪ್ರಸಾದಗಳಿಂದ ಅಭಿಷೇಕ ನಿವೇದನೆಗಳನ್ನು ಮಾಡುವುದರಿಂದ ಲಿಂಗದ ಶಿಲಾಭಾವವು ಹೋಗುವುದೆಂದೂ, ಜಂಗಮವು ಪಂಚಾಚಾರ್ಯರಿಗೆ ಗುರುವೆಂದೂ, ಜಂಗಮವನ್ನು ಬಿಟ್ಟು ಅವರು ದೀಕ್ಷೆಯನ್ನು ಮಾಡಿದರೆ ಶಿವದ್ರೋಹಿಗಳಾಗುವರೆಂದೂ ಹೇಳಿದೆ. ಅಲ್ಲದೆ ಪಂಚಾಚಾರ್ಯರು ಬೇರೆ ಬೇರೆ ಯುಗಗಳಲ್ಲಿ ಬೇರೆ ಬೇರೆ ಹೆಸರಿಂದ ಸ್ಥಾವರ ಲಿಂಗಗಳಲ್ಲಿ ಹುಟ್ಟುವಂತೆ, ಚರಲಿಂಗವು ಕೃತಯುಗದಲ್ಲಿ ನಿರಂಜನ ಜಂಗಮವೆಂದೂ, ತ್ರೇತಾಯುಗದಲ್ಲಿ ನಿರ್ಮಾಯ ಜಂಗಮವೆಂದೂ

ಜಂಗಮರಾಗಿರುವರು." ಇವಕ್ಕೆ ಅವರು ಅಚಿಂತ್ಯಾಗಮದ ಆಧಾರಗಳನ್ನು ಕೊಟ್ಟಿರುವರು.

ವಿರಕ್ತರು ಅವಿವಾಹಿತರೆಂದೂ ಸ್ತ್ರೀ ಸಂಪರ್ಕವನ್ನು ಮಾಡಿದರೆ ಶಿವದ್ರೋಹಿಗಳಾಗುವರೆಂದೂ* ಗುರುಸ್ಥಲದವರು ಗೃಹಸ್ಥರೆಂದೂ ಅವರು ಪರಸ್ತ್ರೀ ಸಂಗವನ್ನು ಮಾಡಬಾರದೆಂದೂ*೧ಹೇಳಿ ಅದಕ್ಕೂ ಶಿವಾಗಮಾಧಾರಗಳನ್ನು ಕೊಟ್ಟಿರುವರು. ಪಂಚವಿಧ ಆಚಾರ್ಯರೂ ಅವರಿಂದ ಪಾಣಿಗೃಹೀತ ಸ್ತ್ರೀಯರೂ ಪೂರ್ವೋಕ್ತ ಪಂಚವಿಧ ಪಂಚಮರೂ, ಅವರಿಂದ ಪಾಣಿಗೃಹೀತರಾದ ಸ್ತ್ರೀಯರೂ ಕ್ರಮವಾಗಿ ವೀರಶೈವ ವಂಶಾವಳಿಗೆ ಮೂಲಭೂತ ಸ್ತ್ರೀ ಪುರುಷರೆಂದೆನಿಸುವರು — ಎಂದು ಪಂಡಿತ ಗುರುಮೂರ್ತಿಶಾಸ್ತ್ರಿಗಳು ಅವರ ಉಪನ್ಯಾಸದಲ್ಲಿ ಹೇಳಿರುವರು. ಇದರಿಂದ ಪಂಚಾಚಾರ್ಯರೂ, ಅವರ ಉಪಾಚಾರ್ಯರೂ ಗೃಹಾಸ್ಥಾಶ್ರಮದವರೇ ಎಂಬ ಪ್ರಶ್ನೆಯು ಏಳುವುದು. "ಮದುವೆನಿಂದು ಮಹೇಶ್ವರ ಪುತ್ರಿಯರ್ಕರೊಳ್........ರೇವಣಪ್ರಭು ಪಡೆದಂ ರುದ್ರ ಮುನೀಶ್ವರನೆಂಬ ಪುತ್ರನಂ" ಎಂದು 'ರಾಜಶೇಖರ ವಿಲಾಸ' ದಲ್ಲಿ ಉಪಾಚಾರ್ಯನಾದ ಷಡಕ್ಷರ ದೇವನಿಂದ ವರ್ಣಿಸಲ್ಪಟ್ಟಿರುವ ರೇವಣಸಿದ್ಧರು ಗೃಹಸ್ಥರು. ಡಾ॥ ಎಸ್. ಶ್ರೀಕಂಠಶಾಸ್ತ್ರಿಗಳು 'ದೇವರ ದಾಸಿಮಯ್ಯ' ಗ್ರಂಥದ ಪ್ರಶಸ್ತಿಯಲ್ಲಿ ಹೇಳುವಂತೆ— ಶ್ರೀಪತಿ ಪಂಡಿತ ಮತ್ತು ಲಕ್ಕಣ್ಣ ಪಂಡಿತ ವಂಶವೃಕ್ಷಗಳು 'ಬಸವ ಪುರಾಣ' ಮತ್ತು 'ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರಮು' ಉಪೋದ್ಘಾತಗಳಲ್ಲಿ ಕೊಟ್ಟಿದೆ. ಪಂಡಿತತ್ರಯ ಗೃಹಸ್ಥರೆಂದು ವ್ಯಕ್ತವಾಗುವುದು. ಪಂಡಿತಾರಾಧ್ಯರ ಅಭಿಪ್ರಾಯಪ್ರಕಾರ 'ಸಂಸಾರ ನುಂಡಿಮುಕ್ತುಲೈಸುಖಮನನುಭವಿಂಚಿತರು" ಏಕೋರಾಮೇಶ್ವರ ಪುರಾಣದ ಏಕೋರಾಮಶಿವಾಚಾರ್ಯರು ಕಮ್ಮೆಕುಲದವರು. ಅವರ ಮಗ ಚೆನ್ನರಾಮ ಶಿವಾಚಾರ್ಯ. ಇವರು ಬ್ರಾಹ್ಮಣರು. ಶ್ರೀಕರ ಭಾಷ್ಯದಂತೆ ಶ್ರೀ ಮದ್ದಂಡ ಶಿಖೋಪವೀತರು. ರೇವಣ ಸಿದ್ಧರನ್ನು ಹರೀಶ್ವರನು **ಲಾಕುಳದ ಲಾಕ್ಷಣಿಕ** ಸಿದ್ಧರಾಮನೂ ಶಿವನಿಂದ ಲಾಕುಳವನ್ನು ಪಡೆದನು. ಲಾಕುಳ ಪಾಶುಪತರು ವೀರಶೈವರ ಪೂರ್ವಜರೆಂಬ ಸಿದ್ಧಾಂತವನ್ನು ಕಪಟರಾಳ ಕೃಷ್ಣರಾಯರು ಕರ್ನಾಟಕದ ಲಾಕುಳ

---

* ಕಾಮಕ್ರೋಧಾದಿ ರಹಿತಶ್ಚಿನಜ್ಞಾನೀ ಜಿತೇಂದ್ರಿಯಃ ।
ಜಂಗಮಸ್ತು ಚರೇದ್ಭಿಕ್ಷಾಂ ಯಾವತ್ಪೋದರ ಪೂರಣಂ ।
ಸ್ತ್ರೀ ಸಂಗಂ ಕುರುತೇಯಸ್ತು ಮಮದ್ರೋಹೀ ನಸಂಶಯಃ ।
ಅಶಿವರ್ಣಾಶ್ರಮೀ ಮುಂಡೀ ಪ್ರಾಣ ಲಿಂಗಾಂಗ ಯೋಗ ಭಾಕ್ ।

*೧ ನಿರ್ಮತ್ಸರೋ ನಿರತ್ಸೇಕಃ ಕಾಮಾದಿಗುಣವರ್ಜಿತಃ ।
ಸ್ವದಾರ ನಿರತಶ್ಶಾಂತಃ ಸಮಸ್ತಾಗಮ ಪಾರಗಃ ।
ಸದಾ ಚಾರೈಕ ನಿರತೋ ಸದ್ವಂಶೇನ ಸಮುದ್ಭವಃ ।
ಏವ ಮಾದಿ ಗುಣೋಪೇತೋ ಗುರುಶೀಶಾದಿ ಶೋಧಕಃ ।

ಶೈವರ ಇತಿಹಾಸ ಗ್ರಂಥದಲ್ಲಿ ಇವರೀರ್ವರ ಪದ್ಧತಿಗಳನ್ನು ತುಲನೆ ಮಾಡಿ ನಿರ್ಧರಿಸುವುದು ಒಪ್ಪತಕ್ಕದ್ದೇ ಆಗಿದೆ. ಆದರೆ ಲಾಕುಳ ಶೈವರು ಬ್ರಾಹ್ಮಣರಲ್ಲ ಎಂಬ ಅವರ ಮಾತು ನಿರಾಧಾರವಾದುದು. ಲಾಕುಳ ಶೈವರಲ್ಲಿ ಕಾಳಾಮುಖ ದೀಕ್ಷೆಯನ್ನು ಪಡೆದವರು ಅವರು ಹೇಳುವಂತೆಯೇ ಕಾಳಾಮುಖರು. ಫ್ಲೀಟರು ಸಂಪಾದಿಸಿರುವ ಮುನಗೋಳಿ ಶಾಸನದಲ್ಲಿ "ಭುಜಂಗಾವಳಿ ಕುಳ ತಿಲಕ ಕಾಳಾಮುಖ ನೈಷ್ಠಿಕ, ಪರಮ ತಪೋನಿಷ್ಠ ಬ್ರಾಹ್ಮ ಕುಲ ಬಾಲಬ್ರಹ್ಮಚಾರಿ ಶ್ರೀ ಸದ್ಯೋಜಾತ ಪಂಡಿತರ ಉಲ್ಲೇಖವಿದೆ. ಇದರಿಂದ ಲಾಕುಳ ಪಾಶುಪತ ಮಾಹೇಶ್ವರರು ಬ್ರಾಹ್ಮಣರೆಂಬುದು ಸ್ಪಷ್ಟ. ಯಮ ನಿಯಮ ಸ್ವಾಧ್ಯಾಯ ಧ್ಯಾನಧಾರಣ ಮೌನಾನುಷ್ಠಾನ ಜಪತಪ ಸಮಾಧಿ ಶೀಲಗುಣಸಂಪನ್ನರಾಗಿಯೂ ಋಗ್ಯಜುಸ್ಸಾಮಾಥರ್ವ ವೇದ ವೇದಾಂಗಗಳನ್ನು ಕಲಿಸುವ ವಿದ್ಯಾ ಕೇಂದ್ರದ ಅಧಿಪತಿಗಳಾಗಿಯೂ ರಾಜ ಗುರುಗಳಾಗಿಯೂ ಎಂಟರಿಂದ ಹದಿನಾಲ್ಕನೆಯ ಶತಮಾನದವರೆಗೂ ವಿಜೃಂಭಿಸಿದ ಈ ಪಾಶುಪತ ಮಾಹೇಶ್ವರರು ಬ್ರಾಹ್ಮಣರೇ. ಬಸವ ಪೂರ್ವ ಕಾಲದಲ್ಲಿ ವೇದ ವೇದಾಂಗಗಳನ್ನು ಕಲಿಸುವುದು ವರ್ಣಾಶ್ರಮ ಧರ್ಮಪಾಲಕರಾದ ರಾಜ ಗುರುಗಳಾಗುವುದೂ ಅಬ್ರಾಹ್ಮಣರಿಗೆ ಅಸಾಧ್ಯವಾಗಿದ್ದಿತು. ಈ ಪಾಶುಪತ ಮಾಹೇಶ್ವರರು ಬ್ರಾಹ್ಮಣರಾಗಿದ್ದಂತೆಯೇ ಲಿಂಗಧಾರಿಗಳೂ ಆದುದು. ಇದಕ್ಕೆ ವಿಪುಲ ಆಧಾರಗಳಿದ್ದರೂ ಇದನ್ನು ವಿದ್ವಾಂಸರು ಲಕ್ಷಿಸದಿರುವುದಕ್ಕೆ ಕಾರಣ ಬಸವೇಶ್ವರರೇ ಲಿಂಗಧಾರೀ ಧರ್ಮವನ್ನು ಸ್ಥಾಪಿಸಿದರೆಂಬ ಭಾವನೆ. ಹನ್ನೆರಡನೆಯ ಶತಮಾನಕ್ಕೆ ಹಿಂದೆ ಪ್ರಚಾರದಲ್ಲಿಲ್ಲದ ವೀರಶೈವ ಪದವು ಇವರ ಬಗೆಗೆ ಉಪಯೋಗದಲ್ಲಿಲ್ಲದುದೂ ಮತ್ತೊಂದು ಕಾರಣ. ಅಷ್ಟೇಕೆ? ಆ ಕಾಲದ ಸಮೀಪದವರಾದ ಹರಿಹರ ರಾಘವಾಂಕರು, ರೇವಣಸಿದ್ಧ, ಸಿದ್ಧರಾಮ, ಬಸವೇಶ್ವರರ ವಿಷಯದಲ್ಲಿಯೂ, 'ವೀರಶೈವ' ಪದವನ್ನು ಉಪಯೋಗಿಸಿಲ್ಲ. ಏಕೆಂದರೆ ಆಗ ಲಿಂಗಧಾರಿಗಳಿಗೆ ಪ್ರಚಾರದಲ್ಲಿದ್ದ ಹೆಸರುಗಳು ಜಂಗಮ ಮಹೇಶ್ವರ, ಶುದ್ಧಶೈವ, ಶಿವಭಕ್ತ ಎಂಬವು. ಬಸವರಾಜದೇವರ ರಗಳೆಯಂತೆ ಬಸವೇಶ್ವರನು ಕೇತಕೀವನಗಳನ್ನು ತೋರಿಸಲು, 'ಸಹಸ್ರ ಮಾಹೇಶ್ವರರ ಕಕ್ಷಪುಟದ ಸಜ್ಜೆಗಳನುಪ್ಪರಿಸಬೇಕಾಯಿತು. ಬಸವೇಶ್ವರನು ಶುದ್ಧಶೈವ ಸರೋನಿಧಿ ತರಂಗ ಮಾಲಾಪ್ರ ಮಗ್ನಚಿತ್ತನಾಗಿರ್ದಂ. ಪ್ರಚಾರದಲ್ಲಿ ಆಗ ಇರದ 'ವೀರಶೈವ' ಪದವನ್ನು ಸಿದ್ಧರಾಮರೇವಣಸಿದ್ಧರುಗಳ ವಿಷಯದಲ್ಲಿ ಉಪಯೋಗಿಸಿಲ್ಲವೆಂದ ಮಾತ್ರಕ್ಕೆ ಅವರು ವೀರಶೈವರಲ್ಲವೆನ್ನುವುದು, ಅದೇ ಕಾರಣಕ್ಕೆ ಬಸವೇಶ್ವರನು ವೀರಶೈವನಲ್ಲವೆನ್ನುವುದು ಒಂದೇ. 'ಕರ್ಮಲತೆಯಂತಿರ್ದ ಜನ್ನಿವಾರವಂ' ತೊರೆದು ಲಿಂಗಧಾರೀ ಧರ್ಮವನ್ನು ಬಸವೇಶ್ವರನು ಸಂಸ್ಕರಿಸಿದ ಮೇಲೆ ಆ ಮತಕ್ಕೆ ಚೆನ್ನಬಸವೇಶ್ವರನು ಆ ಹಿಂದೆ ಆಗಮಗಳಲ್ಲಿ ಕ್ವಚಿತ್ತಾಗಿ ಉಪಯೋಗದಲ್ಲಿದ್ದ ವೀರಶೈವ ಪದವನ್ನು ಸಂಸ್ಕರಿಸಲ್ಪಟ್ಟ ಲಿಂಗಧಾರೀ ಧರ್ಮವನ್ನು ನಿರ್ದೇಶಿಸಲು ಉಪಯೋಗಿಸಿದನು. ಬ್ರಾಹ್ಮಣ್ಯವನ್ನು ತೊರೆಯಲೊಪ್ಪದ ಪಂಡಿತಾರಾಧ್ಯರ ಅನುಯಾಯಿಗಳು

ಬ್ರಾಹ್ಮಣ್ಯಕ್ಕೆ ಪ್ರಾಧಾನ್ಯ ಕೊಟ್ಟು ತಾವು ಲಿಂಗಧಾರಿಗಳಾದರೂ ಶೂದ್ರರಲ್ಲವೆಂಬುದನ್ನು ವ್ಯಕ್ತಪಡಿಸಲು 'ಆರಾಧ್ಯ ಬ್ರಾಹ್ಮಣ' ಎಂದು ಕರೆದುಕೊಳ್ಳಲಾರಂಭಿಸಿದರು. ಈ ಶುದ್ಧಶೈವ ಬ್ರಾಹ್ಮಣರಲ್ಲಿ ಲಿಂಗಾಧಾರಣೆಯಿದ್ದುದನ್ನು ಹರಿಹರ ರಾಘವಾಂಕಾದಿಗಳು ಶುದ್ಧಶೈವ ಬ್ರಾಹ್ಮಣ ಸಮಾಜಕ್ಕೆ ಸೇರಿದವರೆಂದು ಕಪಟರಾಳ ಕೃಷ್ಣರಾಯರು ಅವರ ಪೂರ್ವೋಕ್ತ ಗ್ರಂಥದಲ್ಲಿ ಹೇಳಿದ್ದಾರೆ. ವಚನಗಳಲ್ಲಿ ಶೈವರು ವೀರಶೈವರಾದರೆ ಶೈವರು ಆ ಮೊದಲು ಧರಿಸಿದ್ದ ಲಿಂಗವನ್ನು ತ್ಯಜಿಸಬೇಕೇ ಎಂಬಪ್ರಶ್ನೆಯು ಎದ್ದುದು ಈ ನಿಲುವನ್ನು ಸಮರ್ಥಿಸುತ್ತದೆ.

ಮಹಾಮಹೋಪಾಧ್ಯಾಯ ಅರ್ಥಶಾಸ್ತ್ರ ವಿಶಾರದ ಡಾ॥ ಆರ್. ಶಾಮಾಶಾಸ್ತ್ರಿಗಳು 'ಜಯಕರ್ನಾಟಕ' ಏಂಭತ್ತನೆಯ ಸಂಪುಟದಲ್ಲಿ ಪ್ರಕಟಿಸಿದ 'ದ್ರಾವಿಡ ಸಂಸ್ಕೃತಿ' ಎಂಬ ಲೇಖನದಲ್ಲಿ ಹೇಳಿದಂತೆ "ವೈದಿಕ ಆರ್ಯಪೂಜೆ ಮುಖ್ಯವಾಗಿ ಅಗ್ನಿಪೂಜೆ....ಆರ್ಯರ ರುದ್ರನು ಈಗಿನ ತ್ರಿಶೂಲಧಾರಿಯಾದ ಶಿವನಲ್ಲ; ಅದ್ಭುತ ಶಕ್ತಿಯುಳ್ಳ ಪ್ರಚಂಡ ವಾಯುವು: ಆರ್ಯರ ವಿಷ್ಣುವು ಶಂಖಚಕ್ರಧಾರಿಯಾದ ಈಗಿನ ವಿಷ್ಣುವಲ್ಲ ವಿಶ್ವಪೋಷಕನಾದ ಸೂರ್ಯನು..........ಬ್ರಾಹ್ಮಣರು ತಮ್ಮ ಪ್ರತಿಕಕ್ಷಿಗಳಾದ ಬೌದ್ಧ ಜೈನರನ್ನು ಎದುರಿಸಲು ದ್ರಾವಿಡರಲ್ಲಿಯ ಶೈವ-ವೈಷ್ಣವ ಪಂಥಗಳನ್ನು ಸೇರಿಕೊಂಡರು." ದ್ರಾವಿಡ ಅಸುರ ವ್ರಾತ್ಯರನ್ನು ಮೊದಲು ಮೊದಲು ಆರ್ಯರು ವಿರೋಧಿಸಿದರೂ, ಈ ವ್ರಾತ್ಯರು ಅಥರ್ವವೇದದ ಕಾಲಕ್ಕೆ ಸಂಪೂಜ್ಯರಾದರು. ಅಲ್ಲದೆ ವ್ರಾತ್ಯಸ್ತೋಮವೆಂಬ ಕರ್ಮದಿಂದ ವೈದಿಕರೊಳಗೆ ಸೇರಿಕೊಂಡರು. ಮಹಾಭಾರತದ ಕಾಲದ ಹೊತ್ತಿಗೆ ಲಿಂಗಿಬ್ರಾಹ್ಮಣರು ಅಲಿಂಗಿ ಬ್ರಾಹ್ಮಣರು ಎಂಬ ಎರಡು ಪಂಗಡವಾಗಿದ್ದವು. ಬ್ರಹ್ಮಸೂತ್ರದಲ್ಲಿ ಪಾಶುಪತರಾದ ಈ ಲಿಂಗಬ್ರಾಹ್ಮಣರನ್ನು ಅವೈದಿಕರೆಂದು ಗಣಿಸಲ್ಪಟ್ಟಿತ್ತು. ಆದರೆ ಮಹಾಭಾರತಕಾಲದೊಳಗೆ ಲಿಂಗಿಬ್ರಾಹ್ಮಣರುಗೌರವವನ್ನುಸಂಪಾದಿಸಿಕೊಂಡಿದ್ದರು. ಮಹಾಭಾರತದ ಅನುಶಾಸನ ಪರ್ವದಲ್ಲಿ **"ಕಿಮಾಹು ರ್ಭರತ ಶ್ರೇಷ್ಠ ಪಾತ್ರಂ ವಿಪ್ರಾಃ ಸನಾತನಾಃ। ಬ್ರಾಹ್ಮಣಂ ಲಿಂಗಿನಂ ಚೈವ ಬ್ರಾಹ್ಮಣ ವ್ಯಾಪ್ಯ ಲಿಂಗಿನಂ."**– ಎಂದರೆ, ದಾನಾರ್ಹತೆಯಲ್ಲಿ ಲಿಂಗಿ ಬ್ರಾಹ್ಮಣರು ಶ್ರೇಷ್ಠರೋ? ಎಂಬ ಪ್ರಶ್ನೆ ಎದ್ದಿದೆ. ಇಲ್ಲಿ 'ಲಿಂಗಿ' ಎಂದರೆ ಬ್ರಾಹ್ಮಣ ಸಂನ್ಯಾಸಿ ಎಂದು. ಸಂನ್ಯಾಸಿಗೆ ಬ್ರಾಹ್ಮಣ್ಯವಿರುವಂತೆ ಕಪಟರಾಳ್ ಕೃಷ್ಣರಾಯರು ಅರ್ಥಮಾಡುತ್ತಾರೆ. ಮುಂಡೋಽಪರಿಗ್ರಹಃ' ಎಂದರೆ ಸಂನ್ಯಾಸಿಯು ದಾನಾರ್ಹನಲ್ಲ ಎಂಬುದನ್ನು ಬೃಹದಾರಣ್ಯಕದ ಶಾಂಕರಭಾಷ್ಯದಲ್ಲಿಯೇ ಹೇಳಿದೆ. ದಾನಾರ್ಹರಾದ ಬ್ರಾಹ್ಮಣ ಗೃಹಸ್ಥರಲ್ಲಿ ಲಿಂಗಧಾರಿ ಬ್ರಾಹ್ಮಣರು ಹೆಚ್ಚೋ ಅಲಿಂಗಿ ಬ್ರಾಹ್ಮಣರು ಹೆಚ್ಚೋ ಎಂಬ ಪ್ರಶ್ನೆಯು ಎದ್ದಿದೆ-- ಎಂಬುದೇ ಸರಿಯಾದ ಅರ್ಥ.

## ಬಸವಪೂರ್ವ ಲಿಂಗಧಾರೀ ಧರ್ಮ

ಕಾಲಕ್ರಮದಲ್ಲಿ ಪಾಶುಪತಮತವು ಅಧೋಗತಿಗೆ ಇಳಿಯಿತು; ಇವರಲ್ಲಿ ಉಗ್ರ ಪಂಥದವರು ಸ್ಮಶಾನದಲ್ಲಿ ವಾಸಮಾಡುತ್ತ ವಿಚಿತ್ರ ಶಬ್ದಗಳನ್ನು ಮಾಡುತ್ತಾ ಸೌಮ್ಯ ಪಂಥದವರಿಗೆ ಅಸಹನೀಯವಾಗುವಂತೆ ವರ್ತಿಸುತ್ತಿದ್ದರು. ಪಾಶುಪತ ಮತವನ್ನು ವರ್ಣಿಸುವವರು ಈ ಉಗ್ರಪಂಥದ ಚಿತ್ರವನ್ನೇ ಇಂದೂ ಮೂಡಿಸುತ್ತಾರೆ. ಲಕುಲೀಶನು ಈ ಪಂಥವನ್ನು ಸಂಸ್ಕರಿಸಿ ವೈದಿಕವನ್ನಾಗಿ ಮಾಡಿದನು. ಇದು ಪ್ರಸ್ಥಾನ ತ್ರಯಗಳಿಗೊಪ್ಪುವಂತೆ ಭಾಷ್ಯವನ್ನು ಬರೆದ ಹಿರಿಮೆ ಶ್ರೀಕಂಠಶಿವಾಚಾರ್ಯನಿಗೆ ಸೇರಿದುದು. ಪಾಶುಪತದಲ್ಲಿ ಪಾಶುಪತ, ಶೈವ, ಕಾಳಾಮುಖ, ಕಾಪಾಲಿಕ ಎಂದು ನಾಲ್ಕು ಶಾಖೆಗಳಾದವು. ಇವುಗಳಲ್ಲಿ ಹಳೆಯ ಪಾಶುಪತ ಶಾಖೆಯಲ್ಲಿ ಹಿಂದಿನ ಅಸಹನೀಯ ಶಾಕ್ತ ಪದ್ಧತಿಗಳಿದ್ದವಾದರೆ ಕಾಪಾಲಿಕ ಶಾಖೆಯಲ್ಲಿ ಘೋರಪದ್ಧತಿಗಳಿದ್ದವು. ಈ ಎರಡೂ ಜನಾದರಣೆಯನ್ನು ಗಳಿಸಲಿಲ್ಲ. ಶುದ್ಧಶೈವವು ಲಕುಳೀಶಪಾಶುಪತವಾಗಿ ಕಾಳಾಮುಖದೊಡನೆ ಮುಂದುವರಿಯಿತು. ಇವೆರಡೂ ವೈದಿಕವೆಂದೆನಿಸಿಕೊಂಡು ರಾಜ ರಾಜರುಗಳ ಗುರುಗಳ ಧರ್ಮವಾಗಿ ಹನ್ನೆರಡನೆಯ ಶತಮಾನದವರೆಗೆ ಪ್ರಸಿದ್ಧವಾಗಿದ್ದವು: ವೇದವೇದಾಂಗಗಳನ್ನು ಕಲಿಸುವ ವಿದ್ಯಾಸಂಸ್ಥೆಗಳನ್ನು ನಡೆಸುತ್ತಿದ್ದವು. ವೈದಿಕವಾದವೆಂದಮೇಲೆ ವರ್ಣಾಶ್ರಮ ಧರ್ಮ ಯಜ್ಞಯಾಗಾದಿಗಳ ಪ್ರೋತ್ಸಾಹ ಇವುಗಳಿಗೆ ಅನಿವಾರ್ಯವಾದವು. ಅಲ್ಲದೆ, ಶಾಕ್ತ ಸಂಪ್ರದಾಯದಲ್ಲಿ ಇವರು ಸಮಯಾನುಯಾಯಿಗಳಾಗಿದ್ದರು. ಈ ಧರ್ಮದವರಲ್ಲೇ ಬಸವೇಶ್ವರನು ಹುಟ್ಟಿ ಅವರಲ್ಲಿ ಸುಧಾರಣೆಗಳನ್ನು ಮಾಡಿದುದು. ಇವರಲ್ಲಿ ಬಹುಜನರು ಬಸವೇಶ್ವರನ ಸುಧಾರಣೆಗೊಪ್ಪಿ ಸಂಸ್ಕರಿಸಲ್ಪಟ್ಟ ವೀರಶೈವವನ್ನಪ್ಪಿದರು. ಉಳಿದವರಲ್ಲಿ ಮಹಿಮ ಭಾಷ್ಯವು ಹೇಳುವಂತೆ **ಶೈವ ಸೈವರಗಾದ, ಪಾಶುಪತಿ ಪಥವನರಿಯ ಕಾಳಾಮುಖಿ ಕಂಗೆಟ್ಟ** ಈ ಧರ್ಮಗಳೆಲ್ಲವೂ ಹೇಳ ಹೆಸರಿಲ್ಲದಂತಾಗಿ ಹೋದವು.

ಪಾಶುಪತರ ಎಲ್ಲ ಶಾಖೆಗಳಲ್ಲಿಯೂ ಸಂನ್ಯಾಸಿಗಳಾದ ಯತಿಗಳೂ ಸಂಸಾರಿಗಳಾದ ಯತಿಗಳೂ ಇರುತ್ತಿದ್ದ ಪದ್ಧತಿಯು ವೀರಶೈವರಲ್ಲಿಯೂ ಮುಂದುವರಿಯಿತು. ಇವರ ಕ್ಷೇತ್ರಗಳಾದ ಶ್ರೀಶೈಲ, ಕೇದಾರ, ಹೂಲಿ ಮೊದಲಾದವು ವೀರಶೈವರ ಕ್ಷೇತ್ರಗಳಾಗಿ ಮುಂದುವರಿದಿವೆ. ಇವರು ತೋಳಿನಲ್ಲಾಗಲೀ ತಲೆಯಲ್ಲಾಗಲೀ ಜಟೆಯೊಳಗಾಗಲೀ ಲಿಂಗವನ್ನು ಧರಿಸುತ್ತಿದ್ದರೆಂದು ಹರಿಭದ್ರ ಸೂರಿಯೆಂಬ ಜೈನನ ಷಡ್ದರ್ಶನ ಸಮುಚ್ಚಯದಲ್ಲಿ ಹೇಳಿದೆ. 'ಸಾಯಣಮಾಧವ ಪ್ರಣೀತ ಸರ್ವದರ್ಶನಸಂಗ್ರಹ'ದಲ್ಲಿ ಇವರ ವಿಷಯದಲ್ಲಿ ಲಿಂಗವನ್ನು ಪೂಜಿಸಿದ ಪತ್ರಪುಷ್ಪಗಳೊಡನೆ ಆ ಲಿಂಗವನ್ನು ಪಾಶುಪತರು ಧರಿಸುತ್ತಿದ್ದರೆಂದು ಹೇಳಿದೆ. ಇದರ ಆಧಾರದ ಮೇಲೆ ಡಾ॥ ಭಂಡಾರ್ಕರರು ಇವರು ಲಿಂಗಧಾರಿಗಳೆಂದು ಹೇಳಿದ್ದಾರೆ. ಕೂರ್ಮ ಪುರಾಣದಲ್ಲಿ ಪಾಶುಪತರ ವಿಷಯದಲ್ಲಿ **ಲಿಂಗ ರುದ್ರಾಕ್ಷ ಭಸ್ಮಾದಿ ಧಾರಣಂ ವೈದಿಕಂ ಭವೇತ್** ಎಂದು ಹೇಳಿದೆ. ಶಂಕರ ವಿಜಯದಲ್ಲಿ **ಶಿರಸಿ**

**ಪಾಷಾಣ ಲಿಂಗಂಚ ಧಾರಿಣಃ ಜಂಗಮಾಃ ಲಲಾಟೇ ಭುಜದ್ವಯೇ ಹೃನ್ನಾಭಿಷು ಲಿಂಗಧಾರಿಣಃ ಪಾಶುಪತಾಃ** ಎಂದು ಹೇಳಿದೆ. ಇವೆಲ್ಲಕ್ಕೂ ಮೇಲಾಗಿ ಪಾಶುಪತ ಸೂತ್ರದಲ್ಲಿಯೇ 'ಲಿಂಗಧಾರೀ' ಎಂಬ ಸೂತ್ರವಿದೆ. ಇದರ ಕೌಂಡಿನ್ಯ ಭಾಷ್ಯದಲ್ಲಿ **ಲಿಂಗಂ, ತದ್‌ಧಾರಯಸ್ ಲಿಂಗಧಾರೀ ಭವತಿದಂಡವಾದಿತ್ಯರ್ಥಃ** ಎಂದರೆ; ಲಿಂಗವನ್ನು ಧರಿಸಿದವನು ಲಿಂಗಧಾರಿ, ದಂಡವನ್ನು ಧರಿಸಿದವನು ದಂಡಧಾರಿ ಎಂಬಂತೆ ಎಂಬ ವಿವರಣೆ ಇದೆ. ಈ ಎಲ್ಲ ಆಧಾರಗಳಿಂದಲೂ ಪಾಶುಪತ ಮಾಹೇಶ್ವರರು ಲಿಂಗಧಾರಿಗಳೆಂಬುದರಲ್ಲಿ ಸಂದೇಹವಿಲ್ಲ.

ಈ ಪಾಶುಪತ ಗುರುಗಳಲ್ಲಿ ಕೆಲವರೂ ಕ್ರಿಸ್ತಶಕೆಯ ಪ್ರಾರಂಭದಲ್ಲಿ ಆಳುತ್ತಿದ್ದ ಪಲ್ಲವರಾಜರಲ್ಲಿ ಕೆಲವರೂ, ಚೋಳರಾಜರಲ್ಲಿ ಕೆಲವರೂ ಮಹಾಮಾಹೇಶ್ವರೆಂದು ಕರೆದುಕೊಳ್ಳುತ್ತಲಿದ್ದರಲ್ಲದೆ **'ಶಿರಸಿ ಶಂಕರಂ ಶಿವಸಿರಸಿ ಧಾರಯಿತಾ, ಮಹೇಶ್ವರ ಶಿಖಾಮಣಿ ದೀಪ್ತಿತ್ರಾಲಃ ಶಿವಚೂಡಾಮಣಿ, ಶಿವಪಾದಶೇಖರ** ಮೊದಲಾದ ಬಿರುದುಳ್ಳವರಾಗಿದ್ದರು. ಮದರಾಸಿನ ಶಾಸನ ಸಂಶೋಧನಾಧಿಕಾರಿಗಳಾಗಿದ್ದ ಹೆಚ್. ಕೃಷ್ಣಶಾಸ್ತ್ರಿಗಳು ಇಂತಹ ಬಿರುದುಳ್ಳವರೆಲ್ಲ ಲಿಂಗಧಾರಿಗಳೆಂದೂ ಬಸವ ಪೂರ್ವಲಿಂಗಧಾರಣೆಯು ಇದ್ದಿತು ಎಂದಿದ್ದಾರೆ* ಶ್ರೀಕರ ಭಾಷ್ಯದಲ್ಲಿ ವೀರಶೈವವನ್ನು ಪಾಶುಪತವೆಂದೇ ಕರೆಯಲಾಗಿದೆ. ಸಿದ್ಧಾಂತಶಿಖಾಮಣಿಯ ಪ್ರಥಮಾಧ್ಯಾಯದಲ್ಲಿ **'ಪಶುಪತಿ ಮತ'** ವೆಂದು ಈ ಮತವನ್ನು ಕರೆಯಲಾಗಿದೆ. **'ಬಾರದು ಬಾರದು ವಿಷಯಿಗೆ ಪಶುಪತಿಯ ವ್ರತ'** ಎಂದು ಬಸವೇಶ್ವರ ವಚನದಲ್ಲಿದೆ. ಪಶುವಾದ ಜೀವನು ಮಾಯಾಪಾಶದಿಂದ ಬಿಡುಗಡೆಯಾಗಿ ಪತಿಯೆಂಬ ಶಿವನನ್ನು ಪಡೆಯಬೇಕೆಂಬ ವೀರಶೈವಸಿದ್ಧಾಂತವು ಬಸವೇಶ್ವರರ ಕಾಲಕ್ಕಿಂತಲೂ, ಅಷ್ಟೇಕೆ, ವೇದಾಗಮಗಳ ಕಾಲಕ್ಕಿಂತ ಹಿಂದಿನಿಂದಲೂ ಬಂದುದೇ.

ಏಕೋರಾಮೇಶ್ವರ ಪುರಾಣದಲ್ಲಿ ಏಕೋರಾಮ ಶಿವಾಚಾರ್ಯರು ಕಮ್ಮೆಕುಲದ ಶಾಮಭಟ್ಟಾಚಾರ್ಯನ ಪುತ್ರರೆಂದು ಹೇಳಿರುವುದರಿಂದ ಕಮ್ಮೆಕುಲದವರಲ್ಲಿ ಲಿಂಗ ಯಜ್ಞೋಪವೀತ ಧಾರಣೆಯ ಪದ್ಧತಿಯಿದ್ದಿತೆಂದಾಯಿತು. ರಾಘವಾಂಕ ಚರಿತ್ರೆಯಲ್ಲಿ ಹೇಳಿದಂತೆ **'ಶಿರದೊಳೆಸೆವ ಲಿಂಗದಿಂ ಯಜ್ಞಸೂತ್ರದಿಂ'** ಮೆರೆವ ಹರೀಶ್ವರನೂ ಅವನ ಅಳಿಯ ರಾಘವಾಂಕನೂ, ರಾಘವಾಂಕನಿಗೆ ಸಮಾಧಿಯನ್ನು ಕರುಣಿಸಿದ ವಿರೂಪಾಕ್ಷ ಪಂಡಿತನು ಹೇಳುವಂತೆ 'ಪದ್ಮರಸನೆನಿಸುವ ಬ್ರಾಹ್ಮಣೋತ್ತಮಂ ವೀರಶೈವಾಚಾರ್ಯಂ' ಲಿಂಗಧಾರಿ ಬ್ರಾಹ್ಮಣರು. ಕವಿಚರಿತ್ರೆಯಲ್ಲಿ ಗಮನಿಸಿರುವಂತೆ

---

* It looks as if the Pallava King did actually wear a figure of Siva or rather his symbol linga on his head... All these references clearly point to the existance of a linga-cult long before the revtval of the Veerasaiva faith under the auspicies of the famous Kalachuri Minister Basava.

'ಕಮ್ಮೆ ಕುಲ ವಲ್ಲಭ ಗೌರಪನ ಅಕ್ಕ ಮಂಗಳೆ'ಯ ಪುತ್ರ ಕೆರೆಯ ಪದ್ಮರಸ. ಕಮ್ಮೆ ಕುಲದವರು ಲಿಂಗಧಾರೀ ಬ್ರಾಹ್ಮಣರು. ಬಸವರಾಜದೇವರರಗಳೆಯಲ್ಲಿ ಮತ್ತೆ ಮತ್ತೆ ಬಸವೇಶ್ವರನು ಕಮ್ಮೆ ಕುಲದವನೆಂದು ಹೇಳಿದೆ. ಆದುದರಿಂದ ಲಿಂಗ ಯಜ್ಞೋಪವೀತಧಾರಿ ಬ್ರಾಹ್ಮಣ ಮಾಹೇಶ್ವರ ಕುಲದವನೇ ಬಸವೇಶ್ವರ.

ಈ ಲಿಂಗಿ ಮಾಹೇಶ್ವರ ಧರ್ಮಕ್ಕೆ ತೌರು ಮನೆ ಆಂಧ್ರದೇಶ.**'ಮದ್ ಭಕ್ತಿಂ ಸ್ಥಾಪಯಿತ್ವ ಮಹೀತಲೇ ಮನ್ಮತಂ ಪ್ರಬಲೀ ಕೃತ್ವಾ** ಎಂಬ ಶಿವಾಜ್ಞೆಯಂತೆ ಪಂಡಿತಾರಾಧ್ಯರು ಸೋಮನಾಥನು ಬರೆದಿರುವ ಅವರ ಚರಿತ್ರೆಯಂತೆ ವಾದಿಗಳನ್ನು ಜಯಿಸಿ ಬೌದ್ಧ ಜೈನ ಚಾರ್ವಾಕಾದಿ ಮತಗಳನ್ನು ನಿರಸನ ಮಾಡಿ ಶಿವಭಕ್ತಿಯನ್ನು ಧರಣೀತಲದಲ್ಲಿ ಸ್ಥಾಪಿಸಿ, ಶಿವಮತವಾದ ಲಿಂಗಿ ಬ್ರಾಹ್ಮಣ ಧರ್ಮವನ್ನು ಪ್ರಬಲೀಕರಿಸಿದರು. ಹೀಗೆಯೇ ಈ ಮತವನ್ನು ಏಕೋರಾಮರು ಉದ್ಧಾರ ಮಾಡಿದುದು ಅವರ ಚರಿತ್ರೆಯಿಂದ ತಿಳಿದು ಬರುತ್ತದೆ. ವೀರಶೈವ ಧರ್ಮವನ್ನು ದಕ್ಷಿಣ ದೇಶದಲ್ಲೆಲ್ಲ ಹರಡಿದ ಕೀರ್ತಿ ರೇವಣಸಿದ್ಧರದು. ಅವರು ಮಾಡಿದ ಉದ್ಧಾರದ ಗುರುತಾಗಿ ಅವರ ಕ್ಷೇತ್ರಗಳು ಕರ್ನಾಟಕದ ಎಲ್ಲ ಕಡೆಯಲ್ಲಿಯೂ ಇವೆ. ಇವರು ಬಸವೇಶ್ವರನ ಕಾಲಕ್ಕೆ ಬಹಳ ಹಿಂದಿನಿಂದ ಇದ್ದವರು. ಇವರು ಲಿಂಗ ಯಜ್ಞೋಪವೀತಧಾರಿಗಳಾಗಿದ್ದ ಆ ಕಾಲದಲ್ಲಿ ಲಿಂಗಯಜ್ಞೋಪವೀತಧಾರಿ ಹಂಪೆಯ ಹರೀಶ್ವರನ ಗುರುವಿನ ಪರಮ ಗುರು ಸ್ವಮತದ ಹಂಪೆಯ ಶಂಕರಾಚಾರ್ಯರಿಗೆ ಆ ಕಾಲದ ಪದ್ಧತಿಯಂತೆ ಲಿಂಗವೊಂದನ್ನು ಅನುಗ್ರಹಿಸಿದ್ದರು ಇದೇ ಚಂದ್ರಮೌಳೀಶ್ವರ ಲಿಂಗ: ಇದು ಹಂಪೆಯ ಮಠದಲ್ಲಿ ಇದ್ದು ಅಲ್ಲಿಯೇ ಸಮಾಧಿಯಾಗಿರುವ ಕ್ರಿಯಾಶಕ್ತಿ ವಿದ್ಯಾರಣ್ಯರ ಕೈಗೆ ಬಂದು, ಅವರು ಶೃಂಗೇರಿ ಮಠವನ್ನು ಸ್ಥಾಪಿಸಿ ಅದರ ಮೊದಲನೆಯ ಗುರುವಾದಾಗ ಶೃಂಗೇರಿ ಮಠವನ್ನು ಸೇರಿತು —ಎಂಬುದು ನನ್ನ ಕ್ರಿಯಾಶಕ್ತಿ ವಿದ್ಯಾರಣ್ಯ ವಿಷಯಕ ಗ್ರಂಥದಿಂದ ಸಿದ್ಧಾಂತವಾಗಿದೆ. ಶೃಂಗೇರಿ ಪೀಠವು ಅದ್ವೈತ ಸಿದ್ಧಾಂತ ಪ್ರತಿಪಾದಕ ಶಂಕರಾಚಾರ್ಯರಿಂದ ಸ್ಥಾಪಿತವಾಯಿತೆಂಬ ಕಟ್ಟುಕತೆಯು ರೇವಣಸಿದ್ಧರು ಆ ಶಂಕರಾಚಾರ್ಯರಿಗೆ ಲಿಂಗವನ್ನು ಕೊಟ್ಟರು ಎಂಬ ಭ್ರಾಂತಿಗೆ ಕಾರಣವಾಗಿ, ರೇವಣಸಿದ್ಧದತ್ತವಾದುದು ಚಂದ್ರಮೌಳೀಶ್ವರ ಲಿಂಗವೆಂದು ಶೃಂಗೇರಿ ಮಠದವರೇ ಬರೆಸಿರುವ ಗುರುವಂಶ ಕಾವ್ಯದಲ್ಲಿಯೇ ಹೇಳಿರುವುದನ್ನು ನಂಬದಂತೆ ಮಾಡಿತು. ಅದೆಲ್ಲ ಹಿಂದಿನ ಮಾತು; ಶೃಂಗೇರಿ ಮಠದಲ್ಲಿ ರೇವಣಸಿದ್ಧ ಸಂಪ್ರ

ದಾಯವಿದ್ದುದಕ್ಕೆ ಸಾಕಾದಷ್ಟು ಆಧಾರಗಳು *ಈಗ ದೊರೆತಿವೆ. ಶ್ರೀಶೈಲದ ಭಿಕ್ಷಾವರ್ತಿಗಳ ಸಂಪ್ರದಾಯವನ್ನೂ ಬಾಳೆಹಳ್ಳಿಯಲ್ಲಿಯ ಜಗದ್ಗುರು ಪೀಠದ ಸಂಪ್ರದಾಯವನ್ನೂ ಪ್ರಾರಂಭಿಸಿದ ಕೀರ್ತಿ ರೇವಣಸಿದ್ಧರಿಗೇ ಸೇರಿದುದಾಗಿದೆ.

ಈ ಲಿಂಗಿದ್ವಿಜ ಮಾಹೇಶ್ವರ ಸಂಪ್ರದಾಯದಲ್ಲಿ ಜೈನ ಬೌದ್ಧ ಮತಗಳನ್ನು ನಿರ್ಮೂಲ ಮಾಡುವ ಆವೇಶವೆದ್ದು ಮೂಢ ಸಂಪ್ರದಾಯಗಳಿಗೆ ಶ್ರದ್ಧೆ ಹೆಚ್ಚಿತು. ವರ್ಣತಾರತಮ್ಯ, ಯಜ್ಞಯಾಗಾದಿಗಳಲ್ಲಿ ಆಸಕ್ತಿ, ದೇವಾಲಯಗಳಲ್ಲಿ ಅನೇಕ ದೇವರುಗಳನ್ನು ಪೂಜಿಸುವುದು ಮೊದಲಾದವುಗಳಿಗೆ ಬೆಲೆ ಹೆಚ್ಚಿತು. ಇದೂ ಅಲ್ಲದೆ, ಶಾಕ್ತಾಚಾರಗಳು ಸ್ವಲ್ಪಮಟ್ಟಿಗೆ ಬಳಕೆಗೆ ಬಂದವು. ಶ್ರೀಕಂಠ ಭಾಷ್ಯದಲ್ಲಿಯೂ ಲಿಂಗಿ ಮಾಹೇಶ್ವರ ಧರ್ಮದವರಿಂದ ರಚಿತವಾದ ಶ್ರೀಕರ ಭಾಷ್ಯದಲ್ಲಿಯೂ 'ಅಪಶೂದ್ರಾಧಿಕರಣ'ವಿದೆ. ಶ್ರೀಕಂಠ ಭಾಷ್ಯದ ಕಾರಿಕೆಯಾದ ಕ್ರಿಯಾಸಾರದಲ್ಲಿಯೂ ಅಪಶೂದ್ರಾಧಿಕರಣವಿರುವುದಲ್ಲದೆ ಅಶ್ವಮೇಧಾಂತವಾದ ಯಜ್ಞಯಾಗಗಳನ್ನು ಶಿವ ಪ್ರೀತ್ಯರ್ಥವಾಗಿ ಮಾಡಿದರೆ ಮೋಕ್ಷವಾಗುವುದೆಂದು ಹೇಳಿದೆ. ವಿವಿಧ ಜಾತಿಯವರು ಬೇರೆ ಬೇರೆ ತರದ ಲಿಂಗಗಳನ್ನು ಪೂಜಿಸಬೇಕೆಂದು ಹೇಳಿದೆ. ಈ ಎಲ್ಲ ದೋಷಗಳನ್ನು ಲಿಂಗಿ ಮಾಹೇಶ್ವರ ಧರ್ಮದಿಂದ ದೂರಮಾಡಿ ಲಿಂಗಿ ಮಾಹೇಶ್ವರ ಧರ್ಮವನ್ನು ಸಂಸ್ಕರಿಸಿದ ಕೀರ್ತಿ ಬಸವೇಶ್ವರರಿಗೆ ಸೇರಿದುದು. ಮಹಾತ್ಮಗಾಂಧಿಯವರ ಮಾತಿನಲ್ಲಿ ಬಸವೇಶ್ವರರ ಸುಧಾರಣೆಯ ಹಿರಿಮೆಯನ್ನು ಚಿತ್ರಿಸಬಹುದು. "ಬಸವೇಶ್ವರರು ಹೇಳಿದ ತತ್ತ್ವಗಳನ್ನೆಲ್ಲ ಆಚರಣೆಯಲ್ಲಿ ತಂದಿದ್ದರು. ಅದರಲ್ಲಿ ಅಸ್ಪೃಶ್ಯತಾ ನಿವಾರಣೆ, ಕಾಯಕ ತತ್ತ್ವ ಬಹು ಮುಖ್ಯವಾದುವು. ಯಾವುದೇ ಪ್ರಕಾರ ಜಾತಿ ಭೇದ ಅವರಲ್ಲಿ ಕಂಡುಬಂದಿಲ್ಲ. ಈ ಕಾಲದಲ್ಲಿ ಅವರು ಇರುತ್ತಿದ್ದರೆ ಜಗತ್ತಿಗೇ ಪೂಜ್ಯ ವ್ಯಕ್ತಿಯಾಗಿ ಪರಿಣಮಿಸುತ್ತಿದ್ದರು. ಅವರು ಉಪದೇಶಿಸಿದ ತತ್ತ್ವಗಳನ್ನು ಆ ಧರ್ಮದವರಾದ ನೀವು ಆಚರಣೆಗೆ ತಂದರೆ ಭರತಭೂಮಿ, ಅಷ್ಟೇ ಏಕೆ, ಜಗತ್ತನ್ನೇ ಉದ್ಧಾರ ಮಾಡಬಲ್ಲಿರಿ."—
**ಬೆಳಗಾಂ ಕಾಂಗ್ರೆಸ್ ಅಧಿವೇಶನದಲ್ಲಿ ಭಾಷಣ.** ★

---

* ಶ್ರೀ ಶಂಕರಾಚಾರ್ಯರು ಶೃಂಗೇರಿ ಮೊದಲಾದ ಮಠಗಳನ್ನು ಸ್ಥಾಪಿಸಲಿಲ್ಲವೆಂದು ಶಾಂಕರ ಭಾಷ್ಯಗಳನ್ನೆಲ್ಲ ಭಾಷಾಂತರಿಸಿ ವ್ಯಾಖ್ಯಾನ ಬರೆದಿರುವ ಹೊಳೆನರಸೀಪುರದ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು ಸಿದ್ಧಾಂತ ಮಾಡಿದ್ದಾರೆ. ಹರಿಹರನ ಕಾಲಕ್ಕೆ ಹಿಂದೆ ಈ ಮಠವಿದ್ದುದಕ್ಕೆ ಯಾವ ಆಧಾರವೂ ಇಲ್ಲ. ಆ ಮಠದ ಶಾಸನಗಳು ಅಲ್ಲಿಂದೀಚಿನವು. ಕ್ರಿಯಾಶಕ್ತಿಯು ಶೃಂಗೇರಿ ಮಠದ ಒಬ್ಬ ಗುರುವೆಂದು ಪ್ರಾಕ್ತನ ವಿಮರ್ಶ ವಿಚಕ್ಷಣ ಆರ್. ನರಸಿಂಹಾಚಾರ್ಯರು ಒಪ್ಪಿದ್ದಾರೆ; ಶಾಸನ ಇಲಾಖೆಯ ಡಾ|| ವೆಂಕಟಸುಬ್ಬಯ್ಯನವರು ಕ್ರಿಯಾಶಕ್ತಿಯೇ ವಿದ್ಯಾರಣ್ಯ ಎಂದು ನಿಶ್ಚಯಿಸಿದ್ದಾರೆ. "ಕ್ರಿಯಾಶಕ್ತಿ ವಿದ್ಯಾರಣ್ಯ ಶ್ರೀ ಚರಣಾನಾಂ" ಎಂದು ಹೇಳುವ ಶಾಸನಾಧಾರದಿಂದ ಇದನ್ನೂ ನನ್ನ ಗ್ರಂಥದಲ್ಲಿ ಪ್ರತಿಪಾದಿಸಲಾಗಿದೆ.

# "ವೀರಶೈವದ ಉಗಮ—ವಿಕಾಸ
ಮತ್ತು
ವೀರಶೈವ ಸಂಸ್ಕೃತ ಸಾಹಿತ್ಯ"

● ವಿದ್ವಾನ್ : ಎಂ. ಎಸ್. ಬಸವರಾಜಯ್ಯ
ಸೀನಿಯರ್ ರಿಸರ್ಚ್ ಅಸಿಸ್ಟೆಂಟ್
ಪ್ರಾಚ್ಯ ವಿದ್ಯಾಸಂಶೋಧನಾಲಯ, ಮೈಸೂರು

ಭಾರತೀಯ ಸಂಸ್ಕೃತಿಯ ಉಗಮಸ್ಥಾನಗಳು ವೇದಾಗಮಗಳು. ಉತ್ತರದಲ್ಲಿ ವೇದ, ದಕ್ಷಿಣದಲ್ಲಿ ಆಗಮಗಳು ಪ್ರತಿಷ್ಠಿತಗಳಾಗಿ ಬೇರೂರಿ ಭಾರತದ ದಶದಿಕ್ಕುಗಳಲ್ಲಿಯೂ. ಅಷ್ಟೇ ಏಕೆ, ಪ್ರಪಂಚದ ನಾನಾ ಭಾಗಗಳಲ್ಲಿಯೂ ಹಾಸು ಹೊಕ್ಕಾಗಿ ಸೇರಿ ಉದಾತ್ತ ಸಂಸ್ಕೃತಿಯನ್ನುಂಟು ಮಾಡಿರುತ್ತವೆ.

ಈ ಪವಿತ್ರತಮಗಳಾದ ಭಾರತೀಯ ವೇದಾಗಮ ವಾಙ್ಮಯ ಪ್ರವಾಹವು ಬ್ರಹ್ಮಪುತ್ರಾನದಿಯಂತೆ ಕೆಲವೆಡೆ ವ್ಯಕ್ತವಾಗಿಯೂ ಕೆಲವೆಡೆ ಅವ್ಯಕ್ತವಾಗಿಯೂ ಪ್ರವಹಿಸುತ್ತಾ ಜನಮನದ ಮಾಲಿನ್ಯವನ್ನು ತೊಳೆದು ಪವಿತ್ರತೀರ್ಥ ಸ್ನಾನಾರ್ಹಗಳಾಗಿ ಪ್ರಭುಸಮ್ಮಿತಗಳೆನಿಸಿ ಪರಮ ಪ್ರಮಾಣಭೂತಗಳೆನಿಸಿ ಇಂದಿಗೂ ರಾರಾಜಿಸುತ್ತಿವೆ.

ಇವುಗಳಲ್ಲಿ ಈಶ್ವರ ಪ್ರಣೀತ (ನಿಶ್ವಸಿತ) ವೇದವು ಋಗಾದಿ ನಾಲ್ಕು ಬಗೆಯುಳ್ಳುದಾಗಿ ೧೧೩೧ ಪ್ರಭೇದಾತ್ಮಕವಾಗಿ* ಕರ್ಮ-ಜ್ಞಾನ ಕಾಂಡಾತ್ಮಕವಾಗಿ ಜೈಮಿನ್ಯಾದಿ ಷಡ್ದರ್ಶನಗಳನ್ನೊಳಗೊಂಡ ವೈದಿಕ ಶಾಸ್ತ್ರವೆನಿಸಿದೆ.

ಆಗಮವು ಕಾಮಿಕಾದಿ ವಾತೂಲಾಂತವಾಗಿ ೨೮ ಬಗೆಯುಳ್ಳುದಾಗಿ ೧೯೮ ಪ್ರಭೇದಾತ್ಮಕವಾಗಿ "ಸದಾಶಿವನ ಪಂಚಮುಖಗಳಿಂದುದಿಸಿದವಾಗಿ 'ಈಶಾನಸ್ಸರ್ವವಿದ್ಯಾನಾಮೀಶ್ವರ' ಎಂಬ ಶ್ರುತ್ಯರ್ಥದನುಸಾರವಾಗಿ ಅಷ್ಟಾದಶ ಮಹಾವಿದ್ಯೆಗಳುಂ ಅಷ್ಟಾದಶ ಉಪವಿದ್ಯೆಗಳುಂ ಚತುಷ್ಷಷ್ಟಿತಂತ್ರಗಳುಂ ಚತುಷ್ಷಷ್ಟಿ ಉಪತಂತ್ರಗಳುಂ ಇಹಪರ ತತ್ವಾರ್ಥ ಸರ್ವಸ್ವಮುಂ ಸಕಲಮತ, ಕುಲ, ಧರ್ಮ, ಶಿಲ್ಪ, ವ್ಯಾಪಾರದವಸ್ಥೆಯುಂ ಶಿವಾಗಮದಿಂದಲೇ ಉಪದಿಷ್ಟವಾಗಿ ಅನುಭವ ಸಿದ್ಧಮಪ್ಪುದುಂ ಪ್ರಪಂಚವೆಲ್ಲಮುಂ ಶಿವಾಗಮಜ್ಞೇಯಮಾಗಿ ಜೀವಕೋಟಿಯೆಲ್ಲಮುಂ ಶೈವಮುಕ್ತ್ಯಃ*" ಎನಿಸಿ ಮಹಿಮಾನ್ವಿತವಾಗಿ ವಿರಾಜಿಸುತ್ತಿದೆ.

---

* ವಿವೇಕ ಚಿಂತಾಮಣಿ ಪ್ರ.ಕ. ೨. ಪುಟ೩,೫. *೧ ವಿ.ಚಿಂ. ಪ್ರ. ೨. ಪು.೭೭

ಈ ೨೮ ಶಿವಾಗಮಗಳಲ್ಲುಪದಿಷ್ಟವಾದ ಧರ್ಮವು ಶಿವಧರ್ಮ ಶಾಸ್ತ್ರವೆಂದು ಪ್ರಸಿದ್ಧವಾಗಿದೆ. ಈ ಆಗಮಗಳು ಕ್ರಿಯಾ–ಚರ್ಯಾ–ಯೋಗ–ಜ್ಞಾನ ಪಾದಗಳನ್ನು ಉಳ್ಳವಾಗಿ "ಪತಿ, ಕುಂಡಲಿನಿ, ಮಾಯೆ, ಪಶು, ಪಾಶ, ಕಾಂಕ್ಷೆ ಎಂಬ ಷಟ್ಪದಾರ್ಥಗಳನ್ನೂ (೧) ಗುರು ಮುಖೋದಿತ ಜ್ಞಾನವೆಂಬ (೨) ಪತ್ಯಾದಿ ಪದಾರ್ಥ ವಾದ ಜ್ಞೇಯವೆಂಬ (೩) ಲಿಂಗಾರ್ಚನಾಲಕ್ಷಣವಾದ ಅನುಷ್ಠೇಯವೆಂಬ (೪) ಭಸ್ಮ ಧಾರಣಾತ್ಮಿಕವಾದ ಅಧಿಕೃತವೆಂಬ (೫) ಶಿವಮಂತ್ರ ರೂಪವಾದ ಸಾಧನವೆಂಬ (೬) ಶಿವಸಮಾನತಾ ಮುಕ್ತಿರೂಪವಾದ ಸಾಧ್ಯವೆಂಬ ಷಟ್ಪದಾರ್ಥಂಗಳನ್ನೂ ಪ್ರತಿಪಾದಿಸುತ್ತವೆ *"

ವೇದವು ಕರ್ಮಕಾಂಡ–ಜ್ಞಾನಕಾಂಡ (ವೇದ–ವೇದಾಂತ) ವೆಂದು ವಿಭಕ್ತವಾಗಿರುವಂತೆ, ಆಗಮವೂ ಕ್ರಿಯಾ–ಚರ್ಯಾ ಪಾದಾತ್ಮಕ ಪೂರ್ವಭಾಗ ಯೋಗ–ಜ್ಞಾನ ಪಾದಾತ್ಮಕ ಉತ್ತರಭಾಗ (ಶಿವಧರ್ಮೋತ್ತರ)ವೆಂದೂ ವಿಭಕ್ತವಾಗಿರುತ್ತದೆ. ಆಗಮ ಪೂರ್ವಭಾಗವು ಶೈವಷಡ್ದರ್ಶನ (ಶೈವ–ಪಾಶುಪತ–ಕಾಳಾಮುಖ–ಮಹಾವ್ರತ–ಸಂನ್ಯಾಸ-ಕಾಪಾಲಿಕ*೧)ಗಳಿಗೂ, ಆಗಮೋತ್ತರ ಭಾಗವು (ಶಿವಧರ್ಮೋತ್ತರ) ಸಪ್ತಮ ಶೈವದರ್ಶನವೆನಿಸಿದ ವೀರಮಾಹೇಶ್ವರ (ವೀರಶೈವ) ದರ್ಶನಕ್ಕೂ ಆಕರವಾಗಿರುತ್ತದೆ. ಈ ಆಗಮೋತ್ತರ ಭಾಗವು ಶಿವಧರ್ಮೋತ್ತರ, ಸಿದ್ಧಾಂತ ಷಟ್ಸ್ಥಲ ದರ್ಶನ, ಮಹಾ ಪಾಶುಪತ ಇತ್ಯಾದಿ ನಾಮಂಗಳಿಂದ ಸಂಶೋಭಿತವಾಗಿ ಇರುತ್ತದೆ.

"ಶೈವವು ೧ ಅನಾದಿಶೈವ ೨ ಆದಿಶೈವ ೩ ಮಹಾಶೈವ ೪ ಅನುಶೈವ ೫ ಅವಾಂತರ ಶೈವ ೬ ಪ್ರವರ ಶೈವವೆಂದೂ ಮತ್ತಮಾ ಶೈವವೇ ೧ ವಾಮ ೨ ದಕ್ಷಿಣ ೩ ಮಿಶ್ರ ೪ ಸಿದ್ಧಾಂತವೆಂದೂ ಭೇದ ಹೊಂದಿದ್ದು ಮತ್ತೆ ಆ ಶೈವಂಗಳಲ್ಲಿ ಮುಖ್ಯವಾದ ೧ ಸಾಮಾನ್ಯ ಶೈವ ೨ ಮಿಶ್ರಶೈವ ೩ ಶುದ್ಧಶೈವ ೪ **ವೀರಶೈವವೆಂದೂ** ನಾಲ್ಕು ಪ್ರಭೇದಗಳನ್ನುಳ್ಳದಾಗಿದೆ *೨"

ಶೈವವು ಸಾಲೋಕ್ಯ–ಸಾಮೀಪ್ಯ–ಸಾರೂಪ್ಯ–ಸಾಯುಜ್ಯ–ಸಾರ್ಷ್ಟಿರೂಪಗಳಾದ ಮುಕ್ತಿ ಪ್ರಭೇದಗಳುಳ್ಳದಾಗಿದ್ದು, ವೀರಶೈವವು "ಮತ್ತಮಾ ಪರಮೇಶ್ವರ ನಿರ್ಮಿತವಾದಜಗತ್ತಿನಲ್ಲಿ ವೀರಶೈವ-ಚರಮಶರೀರಿ-ಸರ್ವೋತ್ಕೃಷ್ಟಮಪ್ರತಿ-ಅಪ್ರತಿಹತ ಶಿವವ್ರತಿ-ಲೋಕ ಪಾವನನೆಂದು ಸಜ್ಜನರಿಂ ಕೊಂಡಾಡಲ್ಪಟ್ಟು ಸಮಸ್ತ ಶೈವರೊಳಗೆ ವರಿಷ್ಠನಾಗಿ ಇತರ ಶೈವರಂತೆ ಕ್ರಿಯಾಬಾಹುಳ್ಯದಿಂದಲ್ಪಫಲಮಂ ಪಡೆಯದೆ ಅಲ್ಪ ಕ್ರಿಯೆಯಿಂದನಂತ ಫಲಮಂ ಪಡೆವಾತನಾಗಿ ಶಿವದೀಕ್ಷೆಯಿಂ ಮೇಲೆ ಸ್ನಾನ ಭೋಜನ

* ವಿ. ಚಿಂ. ಪು. ೭೭

*೧ ಚನ್ನಬಸವಣ್ಣನವರ ವಚನಗಳು ಸಂ. ೫೪೫ (ಕ.ವಿ. ಧಾರವಾಡ)

*೨ ವಿ. ಚಿಂ. ಪು. ಪುಟ ೬೭–೭೮

ನಿದ್ರಾ ಜಾಗರಣ ಮಲ ಮೂತ್ರ ವಿಸರ್ಜನ ಕಾಲಂಗಳಲ್ಲಿ ಅಶುಚಿಯ ಭಾವನೆಯಂ ತೊರೆದು ಸದಾ ಲಿಂಗಾನುಬಂಧಿಯಾಗಿ ಲಿಂಗಭೋಗೋಪಭೋಗಿಯಾಗಿ ತನ್ನಿಷ್ಟ ಲಿಂಗದಲ್ಲಿ ಆವಾಹನ-ವಿಸರ್ಜನೆ ಕ್ರಿಯೆಗಳಂ ಮಾಡದಾತನಾಗಿ, ತ್ರಿಕಾಲ ಲಿಂಗಾರ್ಚನಾಸಕ್ತನಾಗಿxxx ಪಂಚಸೂತಕಗಳಳಿದಾತನಾಗಿ, ಜೀವಲಿಂಗಮಂ ಶಿವಲಿಂಗದೊಳೈಕ್ಯಗೊಳಿಸಿ ಮೆರೆವಾತನಾಗಿ ವೀರಶೈವ ಧರ್ಮಗಳಿಂ ಕೃತಕೃತ್ಯನಾಗಿ ಲಿಂಗಾಂಗಸಂಗಾದ್ವೈತಭಾವನೆಯಿಂ ಭಯವರ್ಜಿತನಾಗಿ xxx ಶಾಂಭವವಿದ್ಯೆಯಲ್ಲಿ ರಮಿಸುವ ಶೈವನಪ್ಪುದರಿಂ ತತ್ಸಂಜ್ಞೆ (ವೀರಶೈವ) ಯುಳ್ಳಾತನಾಗಿ ಜಗತ್ಪೂಜ್ಯನಪ್ಪಾತನೇ ವೀರಶೈವನಪ್ಪಂ"* ಮತ್ತ ಮಾ ವಿಶೇಷ ವೀರಶೈವನು ತನಗೆ ಶ್ರೀ ಗುರುವಿನಿಂದುಪದೇಶವಾದ ವೇದ-ಪುರಾಣಾಗಮ ಸಾರವುಪ್ಪ ಪುರಾತನ ಮಾರ್ಗವಾದ ಸರ್ವೋತ್ಕರ್ಷವುಪ್ಪ ಷಟ್ಸ್ಥಳಗಳಲ್ಲಿ ಭಕ್ತಿ-ಕರ್ಮಕ್ಷಯ-ನಿರ್ಮಲಮತಿ-ವಿಚಾರ-ದರ್ಪಸಂಕ್ಷಯ-ಸಮ್ಯಕ್ ಜ್ಞಾನವೆಂಬ ಆರು ಫಲಕ್ರಮಂಗಳುಳ್ಳ ಭಕ್ತ-ಮಹೇಶ್ವರ-ಪ್ರಸಾದಿ-ಪ್ರಾಣಲಿಂಗಿ-ಶರಣ-ಐಕ್ಯವೆಂಬ ಷಟ್ಸ್ಥಳಂಗಳಲ್ಲಿ xx ಶ್ರದ್ಧಾಭಕ್ತಿ-ನಿಷ್ಠಾಭಕ್ತಿ-ಅವಧಾನಭಕ್ತಿ-ಅನುಭವಭಕ್ತಿ-ಆನಂದಭಕ್ತಿ-ಸಮರಸಭಕ್ತಿಯೆಂಬ ಷಡ್ವಿಧ ಭಕ್ತಿಗಳಂ ಪರಿಪರಿವಿಧವರಿದಾಚರಿಸುವುದು."*೧

ಷಟ್ಸ್ಥಳ ಭೇದೋಪಭೇದಗಳೇ ಪಿಂಡಾದಿ ಜ್ಞಾನಶೂನ್ಯಾಂತವಾದ ನೂರೊಂದು ಸ್ಥಲಗಳು. ಮೊದಲ ಮೂರು ಸ್ಥಲಗಳಲ್ಲಿ ಕರ್ಮ ಪ್ರಾಧಾನ್ಯತೆಯೂ ದ್ವೈತಭಾವವೂ, ಕೊನೆಯ ಮೂರು ಸ್ಥಲಗಳಲ್ಲಿ ಜ್ಞಾನಪ್ರಾಧಾನ್ಯತೆಯೂ ಅದ್ವೈತ ಭಾವವೂ ಅಳವಟ್ಟಿರುತ್ತದೆ. ಇದೇ ವೀರಮಾಹೇಶ್ವರ ಧರ್ಮವು. 'ತಂತ್ರ-ವೇದೋಭಯಮಿಶ್ರಿತವಾದ ಮಾರ್ಗವಿದೆನಿಸಿದೆ*೨ ಇಂತಪ್ಪ ಷಟ್ಸ್ಥಲ ಬ್ರಹ್ಮಿಗಳನ್ನು " ಅಪ್ರಾಕೃತರು - ಪ್ರಮಥರು - ವೀರಶೈವರು - ವೀರಮಾಹೇಶ್ವರರು - ಲಿಂಗಿಗಳು ಅತಿವರ್ಣಾಶ್ರಮಿಗಳು—ಬ್ರಾಹ್ಮಣರು*೩— ಶಿವಯೋಗಿಗಳು — ಶಿವಭಕ್ತರು---ಚರಮಶರೀರಗಳು-ಸರ್ವೋತ್ತಮವ್ರತಿಗಳು-ಶಿರೋವ್ರತಿಗಳು-ಅಪ್ರತಿಹತ-ಶಿವವ್ರತಿಗಳು ಶಿವಾಶ್ರಮಿಗಳು- ಲೋಕಪಾವನರು -ಸದಾಶುಚಿಗಳು- ಲಿಂಗಾಂಗಿಗಳು -ಆಗಮಿಕರು ಲಿಂಗಭೋಗೋಪಭೋಗಿಗಳು-ಶಿವಾಚಾರ್ಯರು-ಘೋರರುದ್ರರು -ಜಂಗಮಲಿಂಗಿಗಳು ಅಸಂಖ್ಯಾತರು-ಗಣಂಗಳು-ಮಹಾವ್ರತಿಗಳು- ಮಹಾಪಾಶುಪತರು- ಲಿಂಗಾಯತ್ತರು ಶಿವಭಾಗವತರು" ಇತ್ಯಾದಿ ಪರ್ಯಾಯ ನಾಮಂಗಳಿಂದ ಶಿವಧರ್ಮದಲ್ಲಿ ಬಣ್ಣಿಸಿರುತ್ತದೆ.

---

* ವಿ. ಚಿಂ. ಪ್ರ ೩ ಪು. ೧೧೬-೧೧೭

*೧ ವಿ. ಚಿಂ. ಪ್ರ. ೩. ಪು. ೧೩೦

*೨ ವಿ. ಚಿಂ. ಪ್ರ. ೩ ಪು. ೧೫೬.

*೩ ವಿ. ಚಿಂ. ಪ್ರ. ಪು. ೧೫೬.

ವೇದಾಗಮಗಳ ರಹಸ್ಯವನ್ನು ಉಪಬೃಂಹಣ ಮಾಡುವ ಪುರಾಣೇತಿಹಾಸಾದಿಗಳಾದ ಸುಪ್ರತ್ನಸ್ಮೃತಿಗಳಲ್ಲೂ ಈ ಶಿವಧರ್ಮದ ವಿಚಾರವು ವಿವರಿಸಲ್ಪಟ್ಟಿದೆ. ಆದ್ದರಿಂದ ವೀರಶೈವ ಸಿದ್ಧಾಂತ ಶಾಸ್ತ್ರವು ವೇದಾಗಮಗಳ ಕಾಲದಿಂದಲೂ ಪ್ರವಹಿಸುತ್ತಾ ಬಂದು ಅನಾದಿಯೆನಿಸಿರುತ್ತದೆ.

ಭಾರತೀಯರು ಈ ವೇದಾಗಮಗಳ ಕಾಲವನ್ನೂ ಅವುಗಳ ಕರ್ತೃತ್ವವನ್ನೂ ನಿಶ್ಚಯಿಸಲು ಗೋಚರವಾಗದೇ ಅಪೌರುಷೇಯವೆಂದೂ ಅನಾದಿಯೆಂದೂ ಭಾವಿಸಿರುವರು. ಇತರರೂ ಸಹ ಇವುಗಳ ಕಾಲ-ಕರ್ತೃತ್ವಾದಿಗಳನ್ನು ತಿಳಿಯಲಾಗದೇ ಅನೇಕ ವಿತರ್ಕಗಳಿಗೆ ಗುರಿಯಾಗಿ ಅಂತೂ ಪ್ರಪಂಚದ ವಾಙ್ಮಯದಲ್ಲಿ ಪ್ರಾಚೀನವಾದುದು ವೇದಾಗಮವಾಙ್ಮಯವೆಂಬ ಅಭಿಪ್ರಾಯವನ್ನೂ ಪವಿತ್ರವಾದ ವಾಙ್ಮಯವೆಂಬುದನ್ನೂ ಮನಗಂಡು ಸಾರಿರುವರು.

ಹೀಗೆ ವೇದಾಗಮಗಳ ಸಮ್ಮಿಶ್ರಣದಿಂದ ಭಾರತೀಯ ಸಂಸ್ಕೃತಿಯು ಫಲವತ್ತಾಗಿ, ತ್ರಯೀ-ಸಾಂಖ್ಯ-ಯೋಗ-ಪಾಶುಪತ- ವೈಷ್ಣವರೂಪ ಸನಾತನ ಪಂಚ ಮಹಾ ಪ್ರಸ್ಥಾನಗಳಾಗಿ* ವಿಶಾಲಗೊಂಡು ಮತ್ತೆ ಅರ್ವಾಚೀನವಾಗಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪ್ರಸ್ಥಾನ ತ್ರಯಗಳಾಗಿ ಸಮಾವೇಶಗೊಂಡು ಭಾರತೀಯ ಸಂಸ್ಕೃತಿಯನ್ನು ಸರ್ವತೋಮುಖವಾಗಿ ಉಜ್ವಲಗೊಳಿಸಿದೆ.

ಈ ಉದಾತ್ತ ಭಾರತೀಯ ಸಂಸ್ಕೃತಿಯಲ್ಲಿ ಮಿಂಚಿನಂತೆ ಮಿಗಿಲಾಗಿ ಕೋರೈಸಿ ಸಕಲ ಸಂಸ್ಕೃತಿಯನ್ನೂ ಬೆಳಗಿಸಿ ತನ್ನದನ್ನಾಗಿಸಿಕೊಂಡು ವಿಶಿಷ್ಟತೆಯನ್ನು ಒಳಗೊಂಡುದು ಶೈವಸಂಸ್ಕೃತಿ. ಅದರಲ್ಲೂ ವೀರಶೈವ (ವೀರಮಾಹೇಶ್ವರ) ಅಥವಾ ಮಹಾಪಾಶುಪತ ಸಂಸ್ಕೃತಿ.

ಈ ಸಂಸ್ಕೃತಿಯು ಅಡ್ಡ-ಅಗಲ-ಎತ್ತರಅಪಾರವಾದುದು ಮತ್ತು ಬಹು ಪುರಾತನವಾದುದು. ಸಮಗ್ರ ಭಾರತದಲ್ಲಿ ಇದರ ವ್ಯಾಪ್ತಿಯುಂಟು. ಇಷ್ಟು ವ್ಯಾಪಕ ಧರ್ಮ ಮತ್ತೊಂದಿಲ್ಲ. ವೈದಿಕ ಧರ್ಮವನ್ನು ಮೀರಿ ನಿಂತಿತೆನ್ನುವುದಕ್ಕಿಂತ ವೈದಿಕ ಧರ್ಮದ ಸಮಗ್ರ ತಿರುಳನ್ನೂ ತನ್ನೊಳಗು ಮಾಡಿಕೊಂಡು ಆಗಮಿಕ ಸಂಸ್ಕೃತಿಯು ಏಕದೇವತೋಪಾಸನಾತತ್ವದಿಂದ ಸ್ವಸ್ವರೂಪೋಪಾಸನಾಪರ್ಯಂತವಾಗಿ ಬೆಳೆದು ನಿಂತಿದೆ. ವೈದಿಕಷಡ್ದರ್ಶನಕಾರರು ಬಹುಶಃ ಶೈವರೇ ಆಗಿರುವರೆಂಬುದೊಂದೇ ಸಾಕು*೧ ಈ ಶಿವಧರ್ಮದ ವ್ಯಾಪ್ತಿಗೆ.

---

* ಶಿವಮಹಿಮ್ನಸ್ತೋತ್ರಂ ಪ. ೭ 'ತ್ರಯೀಸಾಂಖ್ಯಂ ಯೋಗಃ ಪಶುಪತಿಮತಂ ವೈಷ್ಣವಮಿತಿ ಪ್ರಭಿನ್ನೇ ಪ್ರಸ್ಥಾನೇ x x x x

*೧ ಷಡ್ದರ್ಶನ ಸಮುಚ್ಚಯ :- ಹರಿಭದ್ರಸೂರಿ ಬೆನಾರಸ್ ೧೯೦೫.

ಪ್ರಸ್ತುತ ಈ ಶೈವ ಪ್ರಭೇದಗಳಲ್ಲಿ ವೀರಶೈವ (ವೀರಮಾಹೇಶ್ವರ) ಅಥವಾ ಮಹಾಪಾಶುಪತದ ಪ್ರಭೇದವನ್ನು ಪರಿಶೀಲಿಸೋಣ:–

ಶಿವಧರ್ಮವು ಶಿವನನ್ನು ಕೇವಲ ಲಿಂಗರೂಪದಲ್ಲಿಯೇ ('ಶಿವ ಶಕ್ತಿಗಳ ಸಾನ್ನಿಧ್ಯಮಿಪ್ಪುದಾಗಿ ಜಗತ್ತೇ ಶಿವಲಿಂಗಾಕಾರಮಾದರುಂ ಪೂಜಾಧಿಷ್ಠಾನ ಬಿಂಬಗಳಲ್ಲಿ ಲಿಂಗಾಧಿಷ್ಠಾನಮೇ ಮಹಾವಿಶೇಷವಾಗಿ ಶಿವಲಿಂಗಾರ್ಚನಮೇ ಸರ್ವೋತ್ತಮವೆಂದು ನಿಗಮಾಗಮಂಗಳು ಸಾರುತ್ತಿರಲ್ಕೆ*') ಪೂಜಿಸಬೇಕೆಂದು ಪ್ರತಿಪಾದಿಸುತ್ತದೆ. ವಿಗ್ರಹೋಪಾಸನೆಯು ಕನಿಷ್ಠವೆಂದು ತಿಳಿಸುತ್ತದೆ. "ನಿಗಮಾಗಮೋಕ್ತಮಪ್ಪಂತೆ ಮನುಷ್ಯರೊಳಗಿವರವರೆನ್ನದೆಲ್ಲರುಂ ಸ್ವಯಂ ವ್ಯಕ್ತವಾದ ಸ್ವಯಂಭುಲಿಂಗ (ಜ್ಯೋತಿರ್ಲಿಂಗ)ಮಂ ಸಾಧಾರಣವಾಗಿ ಪೂಜಿಸಲಪ್ಪುದಾದರುಂ ಶೈವಸಿದ್ಧಾಂತ ಸಮ್ಮತ ಮಾದ ಪಂಚಲಿಂಗಾರ್ಚನದೊಳು ಸ್ವಯಂಭುಲಿಂಗ, ಬಾಣಲಿಂಗ, ಚರಲಿಂಗ, ಸಂಕೀರ್ಣ ಲಿಂಗ, **ಪ್ರಾಣಲಿಂಗ** ಮೆಂಬೈದರೊಳಗೆ ತಮ್ಮ ತಮ್ಮ ಶಕ್ತ್ಯನುಸಾರವಾಗಿ ಅರ್ಚನ ತತ್ಪರರಾಗಬೇಕೆಂದು ನಿಶ್ಚಯಿಸಲಕ್ಕುಂ"*೧ ಈ ಲಿಂಗೋಪಾಸನೆಯು ಉರ, ಶಿರ, ಕರದವರೆಗೆ ಚಾಚಿ ಬೆಳೆದು ನಿಂತುಕೊಂಡಿರುವುದನ್ನು ವೀರಶೈವರ ಇಷ್ಟ, ಪ್ರಾಣ ಭಾವಲಿಂಗಪೂಜಾ ವಿಧಾನಗಳಿಂದ ತಿಳಿಯಬಹುದಾಗಿದೆ. ದೀಕ್ಷಾ ಕಾಲಕ್ಕೆ ಶ್ರೀ ಗುರುವು "ಪ್ರಾಣವತ್ ಧಾರಣೀಯಂ ತತ್ **ಪ್ರಾಣಲಿಂಗಮಿದಂ** ತವ ಕದಾಚಿತ್ ಕುತ್ರ ಚಿದ್ವಾಪಿ ನ ವಿಯೋಜಯ ದೇಹತಃ" ಎಂಬುದಾಗಿ ಉಪದೇಶಿಸಿ ಅನುಗ್ರಹಿಸಿದ ಇಷ್ಟ (ಪ್ರಾಣ) ಲಿಂಗಾರಾಧನೆ (ಲಿಂಗಧಾರಣೆ) ಮತ್ತು ಕರ ಪೀಠಾರ್ಚನೆಯೂ ಶಿವಧರ್ಮದಲ್ಲಿ ಪ್ರತಿಪಾದಿತವಾಗಿರುತ್ತದೆ. ಮೇಲ್ಕಂಡ ತ್ರಿವಿಧ ಲಿಂಗೋಪಾಸಕರು ಅನಾದಿಯಿಂದಲೂ ಬಂದಿರುವರು. 'ದೇಹದಿಂದ ನಿನ್ನೀ ಪ್ರಾಣ ಲಿಂಗ'ವನ್ನು ಎಂದಾಗಲೂ ಎಲ್ಲೆಡೆಯೂ ವಿಯೋಗಿಸಬಾರದು' ಎಂಬ ಶಿವಶಾಸನದಿಂದ ವಾಮಹಸ್ತದಲ್ಲಿಟ್ಟು ಪೂಜಿಸಬೇಕೆಂಬುದು ಸಹಜ ಸಿದ್ಧವಾಗಿರುತ್ತದೆ. ಅಭಿನಯ ದರ್ಪಣದಲ್ಲಿ ಶ್ರೀ ನಂದಿಕೇಶ್ವರನು ಶಿವಲಿಂಗಹಸ್ತ ಲಕ್ಷಣವನ್ನು ಹೇಳುವಲ್ಲಿ 'ವಾಮೇऽರ್ಧಚಂದ್ರೇ ವಿನ್ಯಸ್ತೋ ಶಿಖರಃ ಶಿವಲಿಂಗಕಃ' ಎಂದರೆ ಹೆಬ್ಬೆರಳೆತ್ತಿದ ಬಲಹಸ್ತದ ಮುಷ್ಟಿ (ಶಿಖರಹಸ್ತ)ಯನ್ನು ಅರ್ಧ ಚಂದ್ರದ (ಹೆಬ್ಬೆರಳು ಚಾಚಿದ ಪತಾಕಹಸ್ತ) ವಾಮಹಸ್ತದಲ್ಲಿ ಇರಿಸಿದಲ್ಲಿ ಶಿವಲಿಂಗ ಹಸ್ತವೆನಿಸುವುದೆಂಬಲ್ಲಿ ಶಿವಲಿಂಗವನ್ನು ವಾಮಕರ ಪೀಠದಲ್ಲಿ ವಾಮಗೋಮುಖವಾಗಿಯೇ ಇಟ್ಟು ಅರ್ಚಿಸಬೇಕೆಂದು ಸ್ಪಷ್ಟಪಡಿಸಿರುವನು. ಈ ಲಿಂಗಧಾರಣೆಯೂ ಮತ್ತು ಕರಪೀಠಾರ್ಚನೆಯೂ 'ಅಮೃತಸ್ಯ ದೇವಧಾರಣೋ ಭೂಯಾಸಂ' 'ಅಯಂಮೇ ಹಸ್ತೋ ಭಗವಾನಯಂ ಶಿವಾಭಿಮರ್ಶನಃ', 'ಪಾಣಿಮಂತ್ರಂ ಪವಿತ್ರಮ್' 'ಪವಿತ್ರಂ

* ವಿ. ಚಂ. ಪ್ರ. ಪು. ೧೪೮.

*೧ ವಿ. ಚಂ. ಪ್ರ. ೩. ಪು. ೧೦೯.

ತೇವಿತತಂ' ಇತ್ಯಾದಿ ಶೃತಿಯಿಂದಲೂ ಸಂಸ್ತೋಯಮಾನವೂ ಆಗಿರುತ್ತದೆ. ಶಿರಸ್ಸು, ಕಂಠ (ಕೊರಳು) ಮುಂತಾದ ಸ್ಥಾನಗಳಲ್ಲಿ ಲಿಂಗ ಧರಿಸಬೇಕೆಂಬುದೂ ಶಿವಧರ್ಮಶಾಸನ.*

ಪೂರ್ವೋಕ್ತ ಆಗಮದ ಕ್ರಿಯಾ ಚರ್ಯಾ ಪಾದಗಳು ಸಾಮಾನ್ಯ ಮಿಶ್ರ ಶುದ್ಧ ಶೈವರಿಗೂ, ಯೋಗಜ್ಞಾನ ಪಾದಗಳು ವೀರಶೈವ (ವೀರಮಾಹೇಶ್ವರ) ರಿಗೂ ವಿಶೇಷತಃ ಸಂಬಂಧಿಸಿರುತ್ತವೆ. ಅಲ್ಲದೆ ಉಭಯರಿಗೂ ಅನೇಕ ಅಂತರಗಳೂ ಅನೇಕ ಸಾಮ್ಯಗಳೂ ಕಾಣಬರುತ್ತಿವೆ.

ವೀರಶೈವದ ಅಥವಾ ಲಿಂಗಧಾರಣೆಯ ಉಗಮವೇದಾಗಮ ಮೂಲವೆಂಬುದು "ಶ್ರೀವೇದಾಗಮ ವೀರಶೈವಸರಣಿಂ*೧ ವೇದಾಗಮಾರ್ಥತತ್ವಜ್ಞ ಶೈವಾನಾಂ ಮೋಕ್ಷಕಾಂಕ್ಷಿಣಾಮ್ ವೈದಿಕಾನಾಂವಿಶುದ್ಧಾನಾಂ ಏತದ್ಭಾಷ್ಯಂ ಹಿ ಕಲ್ಪಕಮ್*೨ "ನಾನಾ ವೇದೇಷು ಶಾಸ್ತ್ರೇಷು ವೇದಾಂತೇಷು ಬಹುಷ್ವಪಿ। ಆಗಮೇಷು ಚ ಶಾಖಾಸು ಪುರಾಣೇಷ್ವಖಿಲೇಷು ಚ॥ ಇ ತಿ ಹಾ ಸಾ ದಿ ಸೂಕ್ತೇಷು ಪೌ ರು ಷೇ ಯೇ ಷು ಚಾನ್ಯಥಾ। ವೀರಮಾಹೇಶ್ವರಾಚಾರಸಾರೋದ್ಧಾರಃಪ್ರವಕ್ಷ್ಯತೇ*೩ "ಇತ್ಯಾಗಮೇಷು ಸರ್ವೇಷು ವೇದಾಂತೋಪನಿಷತ್ಸು ಚ। ಶಾ ಖಾ ಸು ಧರ್ಮಶಾಸ್ತ್ರೇಷು ಪುರಾಣೇಷ್ವಖಿಲೇಷು ಚ। ಇ ತಿ ಹಾ ಸೇ ಷು ಸೂಕ್ತೇಷು ಪೌ ರು ಷೇ ಯೇ ಷು ಸರ್ವತಃ। ವೀ ರ ಮಾ ಹೇ ಶ್ವ ರಾ ಚಾರಸ್ತುದುದ್ಧಾರಃ ಪ್ರಕಲ್ಪ್ಯತೇ*೪ "xxx ಸಕಲಶ್ರುತಿಸ್ಮೃತೀತಿಹಾಸಾಗಮ ಪುರಾಣೋಕ್ತ ಪ್ರಕಾರೇಣ ಶ್ರೀ ನಂದಿನಾಥ ವೀರಕ ವೀರಭದ್ರ ಭೃಂಗಿರಿಟಿ ಪುಷ್ಪದಂತಾಂಡಾಭರಣ ಕುಂಭೋಧರಣ ದಂಡಪಾಣಿ ಚಂಡೇಶ್ವರ ದಾರುಕ ರೇಣುಕ ವೀರಕರ್ಣ ವಿಜಯಕರ್ಣ ಘಂಟಾಕರ್ಣ ರೇಣುಕರ್ಣ ಭೀಮಕರ್ಣ ಶಂಕುಕರ್ಣ ಗೋಕರ್ಣ ಸುಕೇತು ರುರೂಪಮನ್ಯು ಭೃಗು ದಧೀಚಿ ಗೌತಮಾದಿ ಪ್ರಮಥಗಣೈರ್ಮುನಿಗಣೈಃ ಪುರಾತನ ಭಕ್ತಗಣೈಶ್ಚೈವ ಮನುಷ್ಯತತ್ವಾದಯಮಪಿ ತೇಷಾಂಮಾರ್ಗಮೇವಾಲಂಬ್ಯ ವರ್ತಯಂತಸ್ತಮೇವಾರ್ಥಂ ತೈರೇವ ಶ್ಲೋಕೈಸ್ಸಾರಮುದ್ಧೃತ್ಯ ಶ್ರೀ ವೀ ರ ಶೈವಮಾರ್ಗಾವಲಂಬಿನಾಂ ಮಾಹೇಶ್ವರಾಣಾಂ ಸುಪ್ರಬೋಧಾಯ ಶೈವರತ್ನಾಕರಂ ವಕ್ಷ್ಯಾಮಿ*೫ "ಮತ್ತಮಾ ವಿಶೇಷ ವೀರಶೈವನು ತನಗೆ ಶ್ರೀಗುರುವಿನಿಂದ

---

* ಮೂರ್ಧ್ನಿ [illegible] ಕ್ಷೇವಕ್ಷಸ್ಥಳೇऽಪಿ ವಾ। ಕುಕ್ಷೌ ಹಸ್ತಸ್ಥಳೇ ವಾऽಪಿ ಧಾರಯೇಲ್ಲಿಂಗ ದ್ಮೃಶ್ವರ ವಮ್॥ ಸಿ. ಶಿ. ಪರಿ. ೬. ಲಿಂಗಧಾರಣಸ್ಥಲ ಶ್ಲೋ. ೫೨ [illegible]

*೧ ಸಿದ್ಧಾಂತ ಶಿಖಾಮಣಿ : ಪರಿ. ೨೧ ಶ್ಲೋ. ೫೬.

*೨ ಶ್ರೀಕರಭಾಷ್ಯಮ್ ಪೀಠಿಕಾ ಶ್ಲೋ. ೧೩.

*೩ ಬಸವ ರಾಜೀಯಮ್ (ಸೋಮನಾಥ ಭಾಷ್ಯಮ್) ಪ್ರಕರಣ ೧.

*೪ ಶೈವರತ್ನಾಕರಃ ಅಧ್ಯಾ ೧-೫೬ ನೆಯ ಶ್ಲೋಕ.

*೫ ಶೈ.ರ.ಅ. ೧ ಪುಟ ೪-೯.

ಪದೇಶವಾದ ವೇದಪುರಾಣ ಆಗಮ ಸಾರವುಪ್ಪ ಪುರಾತನ ಮಾರ್ಗವಾದ ಸರ್ವೋತ್ಕರ್ಷವುಪ್ಪ ಷಟ್ಸ್ಥಳಗಳಲ್ಲಿ* ಇತ್ಯಾದಿ ಶಿವಧರ್ಮೀಯರ ಸಂಸ್ಕೃತ ಕರ್ಣಾಟ ಕೃತಿಗಳ ಉಲ್ಲೇಖಗಳಿಂದಲೂ ಕ್ರಿ. ಶ. ೧೧–೧೨ ನೆಯ ಶತಕದ ವಚನ ದ್ರಷ್ಟಾರರಾದ ದೇವರ ದಾಸಿಮಯ್ಯ, ಬಸವೇಶ್ವರ, ಚೆನ್ನಬಸವೇಶ್ವರ, ಸಿದ್ಧರಾಮ, ಪ್ರಭುದೇವ, ಆದಯ್ಯ, ಉರಿಲಿಂಗಪೆದ್ದಿ, ಅಕ್ಕಮಹಾದೇವಿ ಮುಂತಾದ ಶಿವಶರಣ ಶರಣೆಯರು ತಮ್ಮ ತಮ್ಮ ವಚನಗಳಲ್ಲಿ ಉಲ್ಲೇಖಿಸಿರುವ ವೇದಾಗಮಗಳ ಉಲ್ಲೇಖಗಳಿಂದಲೂ ಈ ಶಿವಧರ್ಮವು ತಂತ್ರ ವೇದೋ ಭಯ ಪ್ರೀತವಾದುದೆಂದೂ ವಿದಿತವಾಗುತ್ತದೆ. ಈ ಶಿವಧರ್ಮೀಯರು ತಂತ್ರ ವೇದೋಭಯಪ್ರೀತರೆಂದೂ ನಿಗಮಾಗಮಗಳಿಗೆ ಸಮಪ್ರಾಮಾಣ್ಯವನ್ನು ಅಂಗೀಕರಿಸಿದವರೆಂದೂ ಶಿವಧರ್ಮ ಪ್ರಾಣರೆಂದೂ ಸ್ಫುಟವಾಗುತ್ತದೆ. ಅಲ್ಲದೆ "ವಿದಧತು ಮತಿಮಸ್ಮಿನ್ ವೀರಶೈವಾ ವಿಶಿಷ್ಟಾಃ **ಪಶುಪತಿಮತಸಾರೇ** ಪಂಡಿತಶ್ಲಾಘನೀಯೇ*೧॥" "xಪಶುವಾನು ಪಶುಪತಿ ನೀನು*೨ "ಚಾರದು ಚಾರದು **ಪಶುಪತಿ ಬ್ರತವು***೩" ಇತ್ಯಾದಿ ಉಲ್ಲೇಖಗಳು ಈ ವೀರಮಾಹೇಶ್ವರಧರ್ಮ(ವೀರಶೈವ)ಕ್ಕೆ ಪಾ ಶು ಪ ತ ಮ ತ ವೆಂ ಬ ಹೆಸರುಂಟೆಂಬುದನ್ನು ಸೂಚಿಸುತ್ತವೆ.

ಈ ಲಿಂಗಧಾರಣೆಯ (ಶಿವಧರ್ಮದ) ಐತಿಹಾಸಿಕ ವಿಚಾರವನ್ನವಲೋಕಿಸುವಾಗ ನಮಗೆ ಪ್ರಾಕ್ತನ ವೇದಾಗಮವಾಙ್ಮಯಗಳಲ್ಲದೇ ಅಷ್ಟಾದಶ ಪುರಾಣಗಳಲ್ಲಿಯೂ ಮಹಾಭಾರತಾದಿಗಳಲ್ಲಿಯೂ ಈ ಸಿದ್ಧಾಂತದ ಸಾರವು ಕಾಣಬರುತ್ತದೆ. ಚಾರಿತ್ರಿಕವಾಗಿ ಈ ರೀತಿ ಗೋಚರವಾಗುತ್ತದೆ:—

ಮೂಲಭೂತವಾಗಿ ಪಂಚನದ (ಪಂಜಾಬ್–ಹರಪ್ಪ–ಮೊಹೆಂಜೋದಾರೋ ಪ್ರದೇಶ) ಪ್ರದೇಶವಾಸಿಗಳಾಗಿ, ಬಳಿಕ ಯಮುನಾ ನದಿಯ ದಕ್ಷಿಣದಲ್ಲಿ ನೆಲಸಿ, ಅನಂತರ ವಾರಣಾಸಿ ಕೌಶಾಂಬಿಗಳ ಮಧ್ಯಪ್ರದೇಶದಲ್ಲಿ ರಾಜ್ಯಕಟ್ಟಿ, ತದನಂತರ ವಿಂಧ್ಯಪರ್ವತಕ್ಕೆ ಉತ್ತರದಲ್ಲಿ ಪದ್ಮಾವತಿಯೆಂಬ ನಗರವನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಿದ ನಾಗಕುಲದವರು **'ಭಾರಶಿವ'** ರೆಂಬ ಹೆಸರಿನಿಂದ ದಶಾಶ್ವಮೇಧ ಮಾಡಿದವರಾಗಿರುವರು. ಈ ಭಾರಶಿವರ ಸಾಮ್ರಾಜ್ಯವು ಕ್ರಿ. ಶ. ೧೮೦ರಲ್ಲಿ ಭದ್ರವಾಯಿತು. ಈ ಭಾರಶಿವ ವಂಶವು **'ವಾಕಾಟಕ ವಂಶ'** ದಲ್ಲಿ ಮುಂದೆ ಲೀನವಾಯಿತು. ಈ ಭಾರಶಿವರು ಮತ್ತು ವಾಕಾಟಕರು ಈಶ್ವರ ವಂಶೀಯರೆಂದೂ (ಶಿವ ಸಮುತ್ಪಾದಿಕ ರಾಜವಂಶಾನಾಂ), ಮಾಹೇಶ್ವರರೆಂದೂ ಪರಮ ಮಾಹೇಶ್ವರ

---

* ವಿ. ಚಿಂ. ಪ್ರ. ೨. ಪು. ೧೩೦.

*೧ ಸಿ. ಶಿ. ಪರಿ. ೧–೩೨.

*೨ ಬಸವೇಶ್ವರ ವಚನಗಳು. ಫ. ಗು. ಹಳಕಟ್ಟಿ (೧೯೩೦) ಪುಟ. ೯. ೪೭.

*೩ ಬ. ಪ. ಪು. ೧೧೭. ನಂ. ೫.

ರೆಂದೂ, ಮಹಾಭೈರವ ಭಕ್ತರೆಂದೂ, ಶಿವಲಿಂಗಧಾರಿಗಳೆಂದೂ ಇವರ ಶಾಸನಗಳಲ್ಲಿನ "**ಅಂಸಭಾರ ಸನ್ನಿವೇಶಿತ ಶಿವಲಿಂಗೋದ್ವಹನ ಶಿವಪರಿತುಷ್ಟ ಸಮುತ್ಪಾದಿತ ರಾಜವಂಶಾನಾಮ್** xx * ಇತ್ಯಾದಿ ವರ್ಣನೆಗಳಿಂದ ಸಿದ್ಧವಾಗುತ್ತದೆ. ಈ ಭಾರಶಿವ ವಾಕಾಟಕರ ಸಮಯದಲ್ಲೇ ದಕ್ಷಿಣಾಪಥವೆಲ್ಲವೂ ಶೈವವಾಯಿತು. ಕೊರಳಲ್ಲಿ ಭುಜದ ಮೇಲೆ ನಿಲ್ಲುವಂತೆ ಸದಾ ಶಿವಲಿಂಗವನ್ನು ಭಾರಶಿವರೂ–ವಾಕಾಟಕರೂ ಧರಿಸುತ್ತಿದ್ದರು.

ವಾಕಾಟಕವಂಶದ ಕಿರಿಯಶಾಖೆಯವರು '**ಪಲ್ಲವರು**' ಎಂಬ ಹೆಸರನ್ನು ಧರಿಸಿ ಈಶಾನ್ಯದಲ್ಲಿ ಇಕ್ಷ್ವಾಕು ಕುಲಜರನ್ನೂ ಬನವಾಸಿಯ ಚುಟುಕುಲದವರನ್ನೂ ಕೊನೆಗಾಣಿಸಿ ಕಾಂಚೀ ನಗರವನ್ನಾಕ್ರಮಿಸಿಕೊಂಡು ಆ ನಗರವನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡು ಉತ್ತರದಲ್ಲಿ ಕಾಶಿಯು ಹೇಗಿದ್ದಿತೋ ಹಾಗೆಯೇ ದಕ್ಷಿಣದಲ್ಲಿ ಕಾಂಚೀನಗರವನ್ನು ಪವಿತ್ರಗೊಳಿಸುತ್ತಿದ್ದರು *೧.

ಕ್ರಿ. ಶ. ೬ ನೆಯ ಶತಮಾನದಲ್ಲಿ ಕಾಂಚಿಯನ್ನಾಳುತ್ತಿದ್ದ (೧) ಅತ್ಯಂತಕಾಮ (೨) ಗುಣಭರ (೩) ರಾಜಸಿಂಹರೆಂಬ ಪಲ್ಲವ ಚಕ್ರವರ್ತಿಗಳೂ ಶಿವಲಿಂಗಧಾರಿಗಳಾಗಿದ್ದರೆಂಬುದು ಮದ್ರಾಸ್ ಪ್ರಾಂತದ ನಂ. ೧೮, ೨೧, ೨೪, ೩೩, ಮತ್ತು ೩೪,ರ ಶಾಸನಗಳಲ್ಲಿನ *೨—

೧) "ಯಸ್ಯಾಂಗುಷ್ಠಭರಾಕ್ರಾಂತಃ ಕೈಲಾಸಃ ಸಗಶಾನನಃ
ಪಾತಾಲಮಗ ಮನ್ಮೂರ್ಧ್ನಾ ಶ್ರೀನಿಧಿಸ್ತಂ ಬಿಭರ್ತ್ಯಜಮ್॥
ಭಕ್ತಿ ಪ್ರಹ್ವೇಣ ಮನಸಾ ಭವಂ ಭೂಷಣ ಲೀಲಯಾ॥"

(ನಂ. ೧೮)

೦ ೦ ೦

"ಶ್ರೀಮತೋಽತ್ಯಂತ ಕಾಮಸ್ಯ ದ್ವಿಷದ್ದರ್ಪಾಪಹಾರಿಣಃ
ಶ್ರೀನಿಧೇಃ ಕಾಮರಾಗಸ್ಯ ಹರಾರಾಧನಸಂಗಿನಃ॥
ಅಭಿಷೇಕಜಲಾಪೂರ್ಣೇ ಚಿತ್ರರತ್ನಾಂಬುಜಾಕರೇ
ಆಸ್ತೇ ವಿಶಾಲೇ ಸುಮುಖಃ ಶಿರಸ್ಸರಸಿ ಶಂಕರಃ॥" (ನಂ. ೨೧)

---

* INDIAN ANTIQUARY. VOL. XII. P ೨೪೩ ಮತ್ತು ಹಿಂದೀ 'ಕಲ್ಯಾಣ್–ಶಿವಾಂಕ' ಪುಟ ೫೯೯–೬೦೦.

*೧ ಭಾರತೀಯ ಇತಿಹಾಸ ಪ್ರವೇಶಿಕಾ ಭಾಗ I ತೃತೀಯ ಕಲ್ಲೋಲ. ಕಂ. ಕೃಷ್ಣಯ್ಯಂಗಾರ್, ಬಿ.ಎ., ಬೆಂಗಳೂರು, ನೋಡಿ

*೨ ನಂ ೧೮ ಮಾಮಲ್ಲಪುರಂ ಶಾಸನ. ನಂ ೨೧ ಸಾಲವಂ ಕುಪ್ಪಂ ಗ್ರಾಮದ ಶಾಸನ ನಂ. ೨೪ ಕಾಂಚೀ ರಾಜಸಿಂಹೇಶ್ವರ (ಕೈಲಾಸನಾಥ್) ದೇವಾಲಯದ ಶಾಸನ. ನಂ. ೧೧–೩೪ ತ್ರಿಚನಾಪಳ್ಳಿಯ ಸಮೀಪವಾದ ಕಾವೇರಿ ತೀರದ ಬೆಟ್ಟದ ಗವಿಯ ಕಂಬಗಳಲ್ಲಿನ ಶಾಸನಗಳು.

South Indian Inscriptions Vol. by Dr. E. Hultzsch ನೋಡಿ

ಎಂದರೆ "ಯಾವ ಶಿವನ ಪಾದಾಂಗುಷ್ಠ ಮಾತ್ರದ ಒತ್ತುವಿಕೆಯಿಂದಲೇ ರಾವಣ ಸಮೇತವಾಗಿ ಕೈಲಾಸ ಪರ್ವತವು ಪಾತಾಳಕ್ಕೆ ಒಯ್ಯಲ್ಪಟ್ಟಿತೋ ಅಂತಪ್ಪ ಜನನರಹಿತನಾದ ಪರಶಿವ ಬ್ರಹ್ಮ (ಇಷ್ಟಲಿಂಗ) ವನ್ನು ಶ್ರೀನಿಧಿ ಎನಿಸಿದ ಅತ್ಯಂತ ಕಾಮ ಪಲ್ಲವ ಚಕ್ರವರ್ತಿಯು ಭಕ್ತಿನಮ್ರವಾದ ಮನಸ್ಸಿನಿಂದ ಭೂಷಣದೋಪಾದಿ ಶಿರಸ್ಸಿ (ಮಸ್ತಕ) ನಿಂದ ಧರಿಸಿರುತ್ತಾನೆ".

"ಶತ್ರುದರ್ಪಾಪಹಾರಿಯೂ ಶ್ರೀಯುತನೂ ಕಾಮನಂತೆ ಸುಂದರನೂ ಹರಾರಾಧನಾಸಕ್ತನೂ ಶ್ರೀನಿಧಿಯೂ ಎನಿಸಿದಂಥಾ ಅತ್ಯಂತಕಾಮಪಲ್ಲವ ಚಕ್ರವರ್ತಿಯ,– ಜಲಪೂರ್ಣವಾದ ಸರಸ್ಸಿನಂತೆ ಶಿವಲಿಂಗಾಭಿಷೇಕ ಜಲಪರಿಪೂರ್ಣವಾದಂಥಾ, ಚಿತ್ರವಿಚಿತ್ರಗಳಾದ ರತ್ನ ಮತ್ತು ಕಮಲಗಳಿಗೆ ಆಕರವಾದ ಸರಸ್ಸಿನಂತೆ ಚಿತ್ರವಿಚಿತ್ರ ರತ್ನಖಚಿತ ಕಮಲಸದೃಶ ಕಿರೀಟಯುಕ್ತವಾದಂಥಾ, ವಿಶಾಲವಾದ **ಶಿರಸ್ಸೆಂಬ ಸರೋವರದಲ್ಲಿ**, ಒಳ್ಳೆಯ ಮುಖವುಳ್ಳ ಶಂಕರ ಎಂದರೆ ಶಂಖವು ಸರೋವರದಲ್ಲಿಪ್ಪಂತೆ ಪ್ರಸನ್ನವದನನಾದ ಶಂಕರ ಎಂದರೆ ಶಿವನು ನೆಲೆಸಿರುತ್ತಾನೆ" ಎಂಬ ವರ್ಣನೆಯಿಂದಲೂ.

೨) ತ್ರಿಚನಾಪಳ್ಳಿಯ ಸಮೀಪದ ನಂ. ೩೩ ರ ಶಾಸನದಲ್ಲಿ ಗುಣಭರ ಚಕ್ರವರ್ತಿಯು ಶಿವಲಿಂಗಧಾರಕನೆಂಬ ವಿಷಯ ಪ್ರತಿಪಾದಿತವಾಗಿದ್ದು ನಂ. ೩೪ ನೆಯ ಶಾಸನದಲ್ಲಿ ಇದೇ ಗುಣಭರನ ವಿಚಾರ ವರ್ಣಿಸುತ್ತಾ

'ನಿರ್ಮಾಪಿತಾ ಮತಿಮುದಾ ಪುರುಷೋತ್ತಮೇನ
ಶೈಲೀಂ ಹರಸ್ಯ ತನುಮ ಪ್ರತಿಮಾಮನೇನ
ಕೃತ್ವಾ ಶಿವಂ ಶಿರಸಿ ಧಾರಯತಾಽಽತ್ಮ ಸಂಸ್ಥ–
ಮುಚ್ಚೈಶ್ಶಿರಸ್ತ್ವಮಚಲಸ್ಯ ಕೃತಂ ಕೃತಾರ್ಥಮ್॥' (ನಂ. ೩೪)

ಎಂದರೆ ಶಿವಲಿಂಗ (ಪ್ರಾಣಲಿಂಗ) ವನ್ನು ಶಿರಸ್ಸಿನಲ್ಲಿ ಧರಿಸಿಕೊಂಡಿರತಕ್ಕಂಥಾ ಪುರುಷಶ್ರೇಷ್ಠನೆನಿಸಿದ ಗುಣಭರ ಮಹಾರಾಜನಿಂದ ಪ್ರತಿಮಾಕಾರವಲ್ಲದ ಶಿಲಾಮಯ ಶಿವಲಿಂಗಮೂರ್ತಿಯು ಪರ್ವತ ಶಿಖರದಲ್ಲಿ ಸಂತೋಷದಿಂದ ಪ್ರತಿಷ್ಠಿಸಲ್ಪಟ್ಟು, ಆ ಪರ್ವತದ ಉನ್ನತ ಶಿಖರವು ಕೃತಾರ್ಥವಾಗಿಸಲ್ಪಟ್ಟಿತು ಎಂಬುದು ಈ ಪದ್ಯದ ಆಶಯವಾಗಿರುತ್ತದೆ.

ಈ ಪದ್ಯದಲ್ಲಿ ಗುಣಭರನಿಗೆ **'ಶಿವಂ ಶಿರಸಿ ಧಾರಯತಾಽಽತ್ಮ ಸಂಸ್ಥಂ'** ಎಂದಿರುವ ವಿಶೇಷಣದಿಂದಲೂ,

೩. ಕಾಂಚೀಕ್ಷೇತ್ರದರಾಜಸಿಂಹೇಶ್ವರ (ಕೈ ಲಾ ಸ ನಾ ಥ) ದೇವಾಲಯದ ನಂ. ೨೪ ನೆಯ ಶಾಸನದಲ್ಲಿ—

"ರಾಜಸಿಂಹೋ ರಣಜಯಃ ಶ್ರೀಭರಶ್ಚಿತ್ರಕಾರ್ಮುಕಃ
ಏಕವೀರಶ್ಚಿರಂ ಪಾತು **ಶಿವ ಚೂಡಾಮಣಿ** ರ್ಮಹೀಮ್॥" (ನಂ. ೨೪)

ಎಂಬ ರಾಜಸಿಂಹನ ವರ್ಣನೆಯಲ್ಲಿನ 'ಶಿವಚೂಡಾಮಣಿಃ' ಎಂಬ ವಿಶೇಷಣ ದಿಂದ (ಶಿವನೇ ಚೂಡಾಮಣಿಯಾಗಿ ಉಳ್ಳವನು ಎಂದರೆ ಶಿವನನ್ನು ಮಸ್ತಕದಲ್ಲಿ ಚೂಡಾಮಣಿಯೋಪಾದಿ ಧರಿಸಿಕೊಂಡಿರತಕ್ಕವನು) ಲೂ. ಮತ್ತು ಚಂಗಲ್ಪೇಟೆ ಜಿಲ್ಲೆಯ ವಾಯುಲೂರು ಗ್ರಾಮದ ವ್ಯಾಘ್ರಪುರೀಶ್ವರ ದೇವಾಲಯದ ಕಂಬಗ ಳೆರಡರ ಮೇಲೆ ಇರುವ ಶಾಸನದಲ್ಲಿ *೧ ರಾಜಸಿಂಹನ ಗುಣಗಳು ವರ್ಣಿಸಲ್ಪಟ್ಟಿದ್ದು **"ಜೀಯಾನ್ಮಹೇಶ್ವರ ಶಿಖಾಮಣಿ ದೀಪ್ತಮೌಲಿಃ"** ಎಂಬ ಅಲ್ಲಿನ ವಿಶೇಷಣ ದಿಂದಲೂ ಶಿರಸ್ಸಿನಲ್ಲಿ ಶಿವಲಿಂಗಧಾರಕನೆಂಬುದೂ ಸುವಿದಿತವಾಗುತ್ತದೆ. ಹಾಗೂ ಮೇಲ್ಕಂಡ ರಾಜಸಿಂಹೇಶ್ವರ ದೇವಾಲಯದ ಪ್ರಾಕಾರದ ಗೋಡೆಯ ಮೇಲೆ ಈ ರಾಜಸಿಂಹನನ್ನು ಶ್ರೀ ಪೂರ್ವಕವಾದ ೨೫೪ ವಿಶೇಷಣಗಳಿಂದ ವರ್ಣಿಸಿ ಕೆತ್ತ ಲ್ಪಟ್ಟಿದ್ದು ಅವುಗಳಲ್ಲಿ 'ಶ್ರೀ ಋಷಭ ಲಾಂಛನಃ', 'ಶ್ರೀ ಆಗಮ ಪ್ರಮಾಣಃ', 'ಶ್ರೀ ಆಗಮಾನುಸಾರೀ' ಎಂಬ ವಿಶೇಷಣಗಳಿಂದಲೂ ಸಹ ಪಲ್ಲವ ಚಕ್ರವರ್ತಿಗಳಾದ ಈ ಮೇಲ್ಕಂಡ ಮೂವರೂ ಮಸ್ತಕದಲ್ಲಿ ಶಿವಲಿಂಗವನ್ನು ಧಾರಣಮಾಡಿಕೊಂಡಿದ್ದ ರೆಂಬುದು ಸ್ಪಷ್ಟವಾಗುತ್ತದೆ. ಅಲ್ಲದೆ ನಂದಿಮುದ್ರೆ-ನಂದೀಧ್ವಜ-ನಂದೀಶ್ವರ (ಋಷಭ ಲಾಂಛನ) ಇವುಗಳು ಇವರಿಗೆ ವಿಶಿಷ್ಟವೆನಿಸಿದ್ದವೆಂದೂ ಶಿವಾಗಮಗಳೇ ಪರಮ ಪ್ರಮಾಣಗಳಾಗಿದ್ದವೆಂದೂ ಇವರು ಶಿವಾಗಮಾನುಸಾರಿಗಳಾಗಿದ್ದರೆಂಬುದೂ ಗೋಚರವಾಗುತ್ತದೆ ."**ಶ್ರೀ ಮಾನೀಶ್ವರ ವಂಶಜಃ ತ್ರಿಣಯನಃ ಕಾಂಚೀಪತಿಃ ಪಲ್ಲವಃ***೧" ಎಂಬ ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನ ಹೇಮಾವತಿ ಗ್ರಾಮದ ೨೮ ನೆಯ ನಂಬರಿನ ಶಿಲಾಶಾಸನದಿಂದ ಇವರೂ ಈಶ್ವರ ವಂಶೀಯ ರೆಂದೂ ಸಿದ್ಧವಾಗುತ್ತದೆ. ನಂ. ೨೪ ರ ಶಾಸನದಲ್ಲಿ **'ಈಶ್ವರಾದಾತ್ತಜನ್ಮಾ'**- ಈ ರಾಜಸಿಂಹನನ್ನು ವರ್ಣಿಸಿರುತ್ತದೆ.

ಸನಾತನ ಶಿವಧರ್ಮ-ಶಿವಾಗಮ-ಶಿವಲಿಂಗಧಾರಣೆಗೆ ಈ ಚಾರಿತ್ರಿಕ ಸಂಗತಿ ಗಳು ಸಾಕ್ಷೀಭೂತಗಳೆನಿಸಿ ಮೈಲಿಗಲ್ಲುಗಳಾಗಿರುತ್ತವೆ. ಇಷ್ಟು ಪ್ರಾಕ್ತನ ವೀರ ಶೈವದ ಉಗಮ-ವಿಕಾಸವು.

ಮುಂದೆ ಈ ಲಿಂಗಧಾರಣೆಯ ಶೈವ ಸಿದ್ಧಾಂತವು ಪ್ರಸ್ಫುಟಗೊಂಡುದು ಕ್ರಿ. ಶ. ೧೧ ನೆಯ ಶತಕದ ಶ್ರೀ ರೇವಣ್ಣಸಿದ್ಧ-ದೇವರದಾಸಿಮಾರ್ಯ-ಶ್ರೀಪತಿ

---

* ಮದ್ರಾಸ್ ಸರ್ಕಾರದಿಂದ ಪ್ರಕಟಿತ ಶಾಸನಗಳು (೧೯೦೮).

*೧ EPIGRAPHI CARNATICA. VOL. XII (ತುಮಕೂರು ಡಿಸ್ಟ್ರಿಕ್ಟ್ ನಲ್ಲಿರುವ ಶಾಸನಗಳು) ಲೂಯಿರೈಸ್. ೧೯೦೪.

ಪಂಡಿತಾದಿಗಳಿಂದ ಮತ್ತೆ ೧೨ನೆಯ ಶತಕದಲ್ಲಿ ಕರ್ನಾಟಕದಲ್ಲಿ ಕಲ್ಯಾಣ ಪಟ್ಟಣದಲ್ಲಿ ಶ್ರೀ ಬಸವೇಶ್ವರಾದಿ ಶಿವಶರಣಶರಣೆಯರಿಂದ ಎಂಬುದಂತೂ ಸುಸ್ಪಷ್ಟವೇ ಆಗಿರುತ್ತದೆ.

ಆದರೆ ೧೪ ನೆಯ ಶತಕದಲ್ಲಿ ಈ ಶಿವಧರ್ಮ ಶಾಸ್ತ್ರವು (ಶಿವಧರ್ಮೋತ್ತರ) ಸಂಸ್ಕೃತದಿಂದ ಪ್ರಾಂತ ಭಾಷೆಗೆ (ಕನ್ನಡಕ್ಕೆ) ಅವತರಿಸಿ ಪ್ರಸ್ಫುಟಗೊಂಡರೂ ಭಾರತೀಯ ತತ್ತ್ವಜ್ಞರ (ಕನ್ನಡವನ್ನರಿಯದ ತತ್ತ್ವಜ್ಞರ) ವಿಚಾರ-ವಿಮರ್ಶೆಗಳಿಗೆ ಕೆಲಕಾಲ ಅಸ್ಫುಟವೇ ಆಯಿತು. ಸರ್ವದರ್ಶನ ಸಂಗ್ರಹಕಾರನಿಗೂ (ಮಾಧವಾಚಾರ್ಯ. ಕ್ರಿ. ಶ. ೧೪) ಈ ವೀರಶೈವ ಮತ ದೃಷ್ಟಿಗೆ ಬೀಳದುದು ಆಶ್ಚರ್ಯವಲ್ಲವೇ*

ಶಿವಸಿದ್ಧಾಂತ ಶಾಸ್ತ್ರವು ಜ್ಞಾನಿಗಳ ಮಸ್ತಿಷ್ಕದಿಂದ ಸಾಮಾನ್ಯರ ಉರ-ಶಿರ-ಕರ ಪರ್ಯಂತವಾಗಿ ಪ್ರವಹಿಸಿ, ಪ್ರಾಕ್ತನ ಆಗಮ ಯುಗವು ಭಾರತದಲ್ಲಿ ಬಸವ ಯುಗದಲ್ಲಿ ಮೆರೆದು, ಬಹುದೊಡ್ಡ ಕಲ್ಯಾಣಕಾರಕ ಕ್ರಾಂತಿ ಕಲ್ಯಾಣನಗರದಲ್ಲಿ ಕರ್ನಾಟಕದಲ್ಲಿ ಉಂಟಾಯಿತು.

ಈ ಕ್ರಾಂತಿಯ ಪ್ರಭಾವಕ್ಕೆ ಅಖಂಡ ಭರತಖಂಡವೇ ಅಚಿರ ಕಾಲದಲ್ಲಿಯೇ ಪಕ್ಕಾಯಿತೆನ್ನಲು ಭಾರತಾದ್ಯಂತ ಬಸವಣ್ಣನ ಕ್ರಾಂತಿಗೆ ಮಣಿದು ಬಂದು ಈ ಶಿವಧರ್ಮವನ್ನಪ್ಪಿಕೊಂಡ ಮಹಾಭಕ್ತರ ಉದಾಹರಣೆಗಳೂ ಅನಂತವಾಗಿರುತ್ತವೆ.

ಇಷ್ಟಲಿಂಗಧಾರಣೆಯು (ವೀರಶೈವವು) ಯೋಗ-ಜ್ಞಾನಗಳಿಗೇ ಹೆಚ್ಚು ಸಂಬಂಧಿಸಿದುದಾದುದರಿಂದ ಈ ಯೋಗ-ಜ್ಞಾನಗಳು ಸರ್ವ ಜನರಿಗೂ ಸುಲಭಸಾಧ್ಯಗಳಲ್ಲವಾದ್ದರಿಂದ ಶ್ರೀ ಬಸವಯುಗಕ್ಕೆ ಹಿಂದೆ ಯೋಗ-ಜ್ಞಾನವಿಶಾರದರಾದ ಸಿದ್ಧಪುರುಷರು ಶಿವಯೋಗಿಗಳು ಶಿವಾಗಮ ಚಕ್ರವರ್ತಿಗಳು ಶಿವಾಚಾರ್ಯರು ಹಾಗೂ ತತ್ತ್ವವಿದರು ಇತ್ಯಾದಿಗಳಿಂದ ಮಾತ್ರ ಆಶ್ರಯಿಸಲ್ಪಟ್ಟು ಸೀಮಿತವಾಗಿದ್ದಿತಾಗಿ ಈ ಪಂಥ ಅಷ್ಟಾಗಿ ಜನಪ್ರಿಯವಾಗಿ ಹೆಚ್ಚು ಬೆಳೆದು ಹರಡದೇ ಕೇವಲ ಮಿತವಾಗಿ ಅಲ್ಲಲ್ಲಿ ಮಾತ್ರ ಕಂಗೊಳಿಸುತ್ತಾ ಮಾನ್ಯತೆ ಪಡೆದಿದ್ದಿತು. ಗ್ರಹಗಳಲ್ಲಿ ಸೂರ್ಯ-ಚಂದ್ರ-ಶುಕ್ರಾಂಗಾರಕ ಗ್ರಹಗಳಂತೆ.

ಎ. ಓ. ಹ್ಯೂಂ ಸ್ಥಾಪಿಸಿದ ಕಾಂಗ್ರೆಸ್ಸು ಮೊದಮೊದಲಿಗೆ ಕೇವಲ ತತ್ತ್ವವಿದ್ವರ ಗುಂಪುಮಾತ್ರಕ್ಕೇ ಸೀಮಿತವಾಗಿದ್ದು ಬರಬರುತ್ತಾ ಮಹಾತ್ಮಾಗಾಂಧೀಜಿಯವರ ಕಾಲಕ್ಕೆ ಹೆಚ್ಚು ಜನಪ್ರಿಯವಾಗಿ ರಾಷ್ಟ್ರೀಯತೆ ಉಂಟಾಗಿ ಕಾಂಗ್ರೆಸ್ ಸಂಸ್ಥೆ ದೇಶಾದ್ಯಂತ ಬಡಾಯಿಸಿ ಮೆರೆದಂತೆ, ಶಿವಾಗಮಗಳ ಕಾಲದಲ್ಲಿ ಉಚ್ಛ್ರಾಯ ಸ್ಥಿತಿ

* ಕನ್ನಡ ನಾಡಿನ ಚರಿತ್ರೆ ಭಾಗ II ಶ್ರೀ S. C. ನಂದೀಮಠ. ಪು. ೩೦೪.

ಯಲ್ಲಿದ್ದು. ಬಳಿಕ ಖಿಲವಾಗಿ, ಮತ್ತೆ ಭಾರ-ಶಿವ-ವಾಕಾಟಕ-ಪಲ್ಲವರ ಕಾಲಕ್ಕೆ ಊರ್ಜಿತವಾಗಿ ಬೆಳೆದುಬಂದ ಈ ಶಿವ ಧರ್ಮವು (ಲಿಂಗಧಾರಣೆಯ ಶೈವಧರ್ಮವು) ಮಡಿವಾಳ ಮಾಚಿದೇವರ "ಎತ್ತೆತ್ತ ನೋಡಿದಡತ್ತತ್ತ ಬಸವನೆಂಬ ಬಳ್ಳಿ. ಎತ್ತಿ ನೋಡಿದಡೆ ಲಿಂಗವೆಂಬ ಗೊಂಚಲು" ಎಂಬ ಹೇಳಿಕೆಯಂತೆ ಶ್ರೀ ಬಸವಯುಗದಲ್ಲಿ ವೀರ ಮಾಹೇಶ್ವರ ಧರ್ಮವು ವಿಸ್ತಾರಗೊಂಡು ಭಾರತೀಯ ಸಂಸ್ಕೃತಿಯ ಹೊನಲು ಉಕ್ಕಿ ಹರಿದು ಜನಮನವನ್ನು ಪಾವನಗೊಳಿಸಿ ಮೆರೆಯಿತು.

ಬಸವಾದಿಗಳು ಪ್ರಾಂತೀಯ ಭಾಷೆಗಳಲ್ಲಿ ಬುದ್ಧನಂತೆ ಕಾರಣಿಕರಾಗಿ ಕೈಗೊಂಡ ಶಿವಧರ್ಮಪ್ರಸಾರ ಕಾರ್ಯವು ಉಪನಿಷತ್ತುಗಳಿಗೂ ಮಿಗಿಲೆನಿಸುವ ಪ್ರಸಾರಕಾರ್ಯ ಹಾಗೂ ಮಿಗಿಲೆನಿಸುವ ವಾಙ್ಮಯ (ವಚನೋಪನಿಷತ್-ವಚನ ವಾಙ್ಮಯ)ವೆನಿಸಿ ಶಿವಧರ್ಮದ ಕಳೆಯು ಕನ್ನಡದಿಂದ ಹೊಗರೇರಿತು. ಆದರೂ ಪ್ರಾಂತೀಯರಿಗೇ ಮತ್ತು ನಾನಾ ಭಾಷಾಕೋವಿದರಾದ ಸುಜ್ಞಾನಿಗಳಿಗೆ ಮಾತ್ರ ಸೀಮಿತವಾಯಿತು. ಭಾರತಾದ್ಯಂತ ಝಗಝಗಿಸಲು ಪ್ರಾಂತಭಾಷಾಮಾಧ್ಯಮವು ಅಡಚಣೆಯಾಯಿತು. ಅಕ್ಕಪಕ್ಕದ ಪ್ರಾಂತಭಾಷೆಗಳವರೂ ಈ ಶಿವಧರ್ಮವನ್ನು ಪ್ರಾಂತೀಯ ಭಾಷೆಗಳಲ್ಲಿಯೇ ಹೆಚ್ಚು ಪ್ರಚಾರಗೈದು ಕ್ರಾಂತಿಮಾಡಿದರು. ವಿನೂತನ ಸಾಹಿತ್ಯ ಪ್ರಸ್ಥಾನವೊಂದು ಸೃಷ್ಟಿಯಾಯಿತು.

ಈ ಶಿವಧರ್ಮದ ಇತಿ-ಮಿತಿ-ಗುಟ್ಟು-ಗುರಿ-ಗರಿಮೆಗಳು ಈ ಕನ್ನಡ ಭಾಷೆಗೇ ಮೀಸಲೆಂಬಂತೆ ಬೆಳೆದು ಬಂದಿದೆ. ಈ ಶಿವಧರ್ಮದ ವಿವರವು ಶ್ರೀಮನ್ನಿಜಗುಣ ಶಿವಯೋಗಿಗಳಿಂದ ಮಾತ್ರವೇ 'ವಿವೇಕಚಿಂತಾಮಣಿ' ಯೆಂಬ ಅಮೂಲ್ಯ ವಿಶ್ವ ಕೋಶದಲ್ಲಿ (ಕನ್ನಡಗ್ರಂಥ) ಬೆಳುಗನ್ನಡದಗದ್ಯದಲ್ಲಿ ಪ್ರಾಮಾಣಿಕವಾಗಿ ಸಮಷ್ಟಿಯಾಗಿ ಸೂತ್ರರೂಪವಾಗಿ ಪ್ರಸಾರ ಮಾಡಲ್ಪಟ್ಟಿರುತ್ತದೆ. ಈ ಗ್ರಂಥವು ಶಿವ ಧರ್ಮದ ಅಧಿಕೃತವಾದ ಆಕರಗ್ರಂಥವೆನಿಸಿರುವುದು. ಇಂತಪ್ಪ ಪ್ರಸಾರಕಾರ್ಯದ ಪ್ರಕರಣ ಗ್ರಂಥವು ಮತ್ತಾವ ಭಾಷೆಗಳಲ್ಲೂ, ಏಕೆ ? ಸಂಸ್ಕೃತದಲ್ಲಿಯೂ ಸಹ ಏಕತ್ರ ಪ್ರಸಾರವಾಗಿಲ್ಲವೆಂದೇ ಹೇಳಬಹುದಾಗಿದೆ. ಸಮಗ್ರ ಶಿವಾಗಮ ಸಂಸ್ಕೃತಿಯ ಆದರ್ಶವೆನಿಸಿದೆ ಈ ಗ್ರಂಥರತ್ನ.

ಈ ಶಿವಧರ್ಮ ಜ್ಯೋತಿಯನ್ನು ಕಲ್ಯಾಣ (ನಗರ) ವೆಂಬ ಹಣತೆಯಲ್ಲಿ ಸಂಸ್ಕೃತ-ಕರ್ಣಾಟೋಭಯ ಭಾಷಾಪರಿಣತರೂ ಜ್ಞಾನಿಗಳೂ ಮಹಾತ್ಮರೂ ವಚನ ವಾಙ್ಮಯದ್ರಷ್ಟಾರರೂ ಆದ ಶ್ರೀ ಬಸವಾದಿ ಶಿವಶರಣ-ಶರಣೆಯರು ಸವ್ಯಸಾಚಿಗಳಂತೆ ಕನ್ನಡನುಡಿಯಲ್ಲಿ ಸಾಮೂಹಿಕವಾಗಿ ಒಂದೇ ತಲೆಮಾರಿನಲ್ಲಿ ಸುಮಾರು ೨೦೦ ಜನಕ್ಕೂ ಮೇಲ್ಪಟ್ಟು ಸಾಧಿಸಿ ಬೆಳಗಿಸಿರುವರು. ಇವರಲ್ಲಿ ಸ್ತ್ರೀ-ಪುರುಷ-ಬಾಲ-ಬ್ರಹ್ಮಚಾರಿ-ಗುರು-ಜಂಗಮರೆಲ್ಲರೂ ಸಮಾವೇಶರಾಗಿದ್ದಾರೆ.

ಹೀಗೆ ಬಸವಯುಗದಲ್ಲಿ ಕನ್ನಡ ಭಾಷೆಯಲ್ಲಿ ಮತ್ತೆ ಶಿವಾಗಮಯುಗವು ಮೂಡಿ ಬಂದರೂ ಈ ಶಿವಧರ್ಮಕ್ಕೆ ಮಾರುಹೋದ ಕರ್ನಾಟ-ಆಂಧ್ರ-ದ್ರಾವಿಡ-ಮಹಾರಾಷ್ಟ್ರದ ಶಿವಧರ್ಮೀಯರು ಇವರೊಡನೆ ಟೊಂಕಕಟ್ಟಿ ನಿಂತು ಶಿವಧರ್ಮದ ಪ್ರಸಾರ ಕಾರ್ಯವನ್ನು ಸಂಸ್ಕೃತದಲ್ಲಿಯೂ ಪ್ರಕರಣ-ಪ್ರಬಂಧ-ನಿಬಂಧಾದಿಗಳಿಂದ ಮಾಡಲು ಬಹು ಪರಿಶ್ರಮಿಸಿರುವರು.

ಈ ಸಂಸ್ಕೃತ ಸಾಹಿತ್ಯದ ಮತ್ತು ಲೇಖಕರ ಪಟ್ಟಿಯೊಂದನ್ನು ಈ ಲೇಖನಾಂತ್ಯದಲ್ಲಿ ಸ್ಥೂಲವಾಗಿ ಸಮೀಕ್ಷಿಸಿ ಕೊಡಲಾಗಿರುತ್ತದೆ. ಇವರಲ್ಲಿ ಶಿವಯೋಗಿ-ಸೋಮಶಂಭು-ಜ್ಯೋತಿರ್ನಾಥ-ಈಶಾನಶಿವಗುರು-ಶ್ರೀಪತಿಪಂಡಿತ-ಮಲ್ಲಿಕಾರ್ಜುನಪಂಡಿತ – ಮಂಚಣಪಂಡಿತ- ಪಾಲ್ಕುರಿಕಿ ಸೋಮನಾಥ – ಮಲ್ಲಯಾರ್ಯಗುರು-ಲಕ್ಷ್ಮೀಧರ ಪದ್ಮರಸ-ನೀಲಕಂಠ ನಾಗನಾಥಾಚಾರ್ಯ ನೀಲಕಂಠಶಿವಾಚಾರ್ಯ-ಮಹಲಿಂಗ-ಚಕ್ಕಣಾರ್ಯ-ಮಲ್ಲಣಾರ್ಯ-ಮಾಯಿದೇವ-ಸಿದ್ಧವೀರಣಾರ್ಯನಿಟ್ಟೂರ ನಂಜಣಾರ್ಯ ಬಸವಭೂಪಾಲ-ಮೌನಪ್ಪಪಂಡಿತ-ನಿರ್ವಾಣಮಂತ್ರಿ-ಮರಿತೋಂಟದಾರ್ಯ-ನಂದಿಕೇಶ-ಸಂಗಮೇಶ್ವರಯತಿ-ಸರ್ಪೇಶ್ವರಯತಿ-ಷಡಕ್ಷರದೇವ-ಇಮ್ಮಡಿ-ಮುರಿಗಾಗುರುಸಿದ್ಧ-ಸರ್ಪಭೂಷಣಶಿವಯೋಗಿ ಇತ್ಯಾದ್ಯನಂತ ಪ್ರಮುಖವಿಬುಧರು ಮೂಲಭೂತ ಶಿವಧರ್ಮ ಪ್ರಚಾರವನ್ನು ನಾನಾ ಪ್ರಬಂಧಗಳ ಮೂಲಕ ಪ್ರಚಾರಗೈದು ಶಿವಧರ್ಮೀಯರ ಕೃತಜ್ಞತೆಗೆ ಹಾಗೂ ಭಕ್ತಿಗೆ ಪಾತ್ರರೆನಿಸಿರುವರು.

ವೈದಿಕ ಪಂಥಾನುಯಾಯಿಗಳೂ-ಆಗಮಿಕರೂ ಮೊದಲಿಂದಲೂ ಬೇರೆ ಬೇರೆಯಾಗಿಯೇ ಹೋರಾಡುತ್ತಾ ಬಂದರೂ ಬರ ಬರುತ್ತಾ ಕೊನೆ ಕೊನೆಗೆ ಪೂರ್ಣವಾಗಿ ಆಗಮಾನುಯಾಯಿಗಳ ಮಾರ್ಗವನ್ನೇ ಹಿಡಿದು ನಿಂತರು. ಶಿವಾಗಮ ಪ್ರಸ್ಥಾನವೇ ಮಹಾಪ್ರಸ್ಥಾನವಾಯಿತು.

ಸದ್ಯಃ ವೈದಿಕ ಕಾಲದ ದೇವತೆಗಳಿಗೆ ಈ ಹಿಂದೂಧರ್ಮದಲ್ಲಿ ಸ್ಥಾನವೇ ಇಲ್ಲ. ಅವರ ಸ್ವರೂಪವೇ ಬದಲಾಗಿ ಹೋಗಿರುವುದು. ಈಗ ಉಳಿದಿರುವುದು ಶೈವ-ವೈಷ್ಣವರೆಂಬ ಉಭಯ ಆಗಮಿಕ ಪಂಥಗಳು ಮಾತ್ರ. ಭಾರತೀಯರೆಲ್ಲರೂ ಶೈವ ವೈಷ್ಣವಗಳೆಂಬ ಆಗಮ ಪಂಥಾನುಯಾಯಿಗಳೇ ವಿನಾ ಕೇವಲ ವೈದಿಕ ಪಂಥವೊಂದು ಇಲ್ಲವೇ ಇಲ್ಲ. ಬಲು ಪ್ರಾಚೀನ ಕಾಲದಿಂದ ಶೈವ ಮತ್ತು ವೈಷ್ಣವ ಮತಗಳು ಹಿಂದೂಧರ್ಮದ ರಥದ ಚಕ್ರಗಳಂತೆ ಇರುವುವು:*

ಪ್ರಾಚೀನಗಳಾದ ಶಿವಾಗಮಗಳಲ್ಲಿನ ಭೇದ-ಅಭೇದ-ಭೇದಾಭೇದಗಳಲ್ಲಿ*೧. ಅರ್ವಾಚೀನಗಳಾದ ದ್ವೈತ-ಅದ್ವೈತ-ವಿಶಿಷ್ಟಾದ್ವೈತಗಳೂ ಲೀನವಾಗಿ ಹೋಗಿವೆ.

* ಕನ್ನಡನಾಡಿನ ಚರಿತ್ರೆ ಭಾಗ II ಪು. ೧೭೯–೧೮೦ ನೋಡಿ.

*೧ Contribution of Kashmir to Sanskrit Literature. CH. IV. P. 326-327.

ಅಲ್ಲದೆ ೧೨ನೆಯ ಶತಕದ ಬಸವಾದಿ ಶಿವಶರಣರ ಶಿವಧರ್ಮದ ಕ್ರಾಂತಿಯಿಂದಾಗಿ ಶೈವಷಡ್ದರ್ಶನಗಳೂ ಸಪ್ತಮ ಶೈವವೆನಿಸಿದ ವೀರಶೈವದರ್ಶನದಲ್ಲಿಯೇ ಲೀನವಾಗಿ ಹೋದವು ಎಂಬುದನ್ನು ನಾವು ಶ್ರೀ ಚನ್ನಬಸವಣ್ಣನವರ"ಶೈವ ಸೈವೆರಗಾದ. ಪಾಶು ಪತಿಪಥವರಿಯ.ಕಾಳಾಮುಖಿ ಕಂಗೆಟ್ಟ. ಮಹಾವ್ರತಿ ಮದವೇರಿದ. ಸಂನ್ಯಾಸಿ ಪಾಷಂಡಿ ಯಾದ. ಕಾಪಾಲಿ ಮರುಳಾಗಿ ತಿರುಗಿದ. ಈ ಆರೂಭಕ್ತಿಪಥಕ್ಕೆ ಸಲ್ಲವು ಕೇಳಿ ರಣ್ಣಾ!!xxx*"॥ ಎಂಬ ವಚನದಿಂದ ಅರಿಯಬಹುದಾಗಿದೆ. 'ಆ ಕಾಲದ ಶೈವಗ್ರಂಥ ಗಳನ್ನು ಒಳಗೊಂಡ ಈಗಿನ ವೀರಶೈವ ಮತ ಆ ಪ್ರಾಚೀನ ಕಾಲದ ಪಾಶುಪತಪಂಥ ವಾಗಲೀ ಅದರ ಒಳಭೇದವಾಗಲೀ ಆಗಿರಬಹುದೆಂದು ತರ್ಕಿಸಲವಕಾಶವಿದೆ.*೧' ಹೀಗೆ ಸಮಸ್ತ ಶೈವ ಪ್ರಭೇದಗಳೂ ಸಾರವತ್ತಾಗಿ ಈ ವೀರಮಾಹೇಶ್ವರ ಧರ್ಮ (ವೀರಶೈವ)ದಲ್ಲಿ ತಮ್ಮ ತಮ್ಮ ಅಸ್ತಿತ್ವವನ್ನೇ ಕಳೆದುಕೊಂಡು ಲೀನವಾಗಿ, ಸ್ಥಾವರ ಲಿಂಗಪೂಜೆಯು ಖಿಲವಾಗಿ ಇಷ್ಟಲಿಂಗಧಾರಣೆಯು ಉರ, ಶಿರ, ಕರ ಪರ್ಯಂತವಾಗಿ ಚಾಚಿ ಬೆಳೆದು 'ಪ್ರಾಣಲಿಂಗ' ಪೂಜೆಯೇರ್ಪಟ್ಟು ವೀರಮಾಹೇಶ್ವರ ಧರ್ಮಾನು ಯಾಯಿಗಳಾಗಿ ಹೋಗಿರುವುವು. ಶಿವನೇತಾನು, ತಾನೇ ಶಿವ ಎಂಬ ಶಿವಾದ್ವೈತವಾಗಿ ಬೆಳೆದು ನಿಂತಿತು.

"ವೇದ ವೇದಾಂತಾಗಮ ಪುರಾಣಂಗಳಲ್ಲಿ ಸಾರತರಮೆನಿಸಿದತಿರಹ ಸ್ಯಾರ್ಥ ಪ್ರತಿ ಪಾದಕಮಾದ ವೀರಶೈವಮಾರ್ಗದಿಂ ಲಿಂಗಾಂಗಸಂಬಂಧಿಗಳಾದ ಷಟ್ಸ್ಥಳ ಜ್ಞಾನಿಗಳಿಗೆ ಸರ್ವೋತ್ಕರ್ಷವಾದ ಅವಿರಳ ಶಿವೈಕ್ಯಪ್ರಾಪ್ತಿ*"ಯೇ ಪರಮ ಧ್ಯೇಯವೆನಿಸುತ್ತದೆ.

ಶಿವಯೋಗಿಯು ಸಿದ್ಧಾಂತ ಶಿಖಾಮಣಿಯಲ್ಲಿ 'ವಿದಧತು ಮತಿಮಸ್ಮಿನ್ ವೀರ ಶೈವಾ ವಿಶಿಷ್ಟಾಃ **ಪಶುಪತಿಮತಸಾರೆ** ಪಂಡಿತ ಶ್ಲಾಘನೀಯೇ*೧'ಎಂದು ಹೇಳಿರು ವಂತೆ ಪಾಶುಪತಮತಸಾರಭೂತವಾದುದೇ ಈ ವೀರಶೈವ ಅಥವಾ ವೀರಮಾಹೇ ಶ್ವರ ಧರ್ಮವಾಗಿರುತ್ತದೆ. "ಈಗ ನಾಮಶೇಷವಾಗಿರುವ ಅತಿ ಪ್ರಾಚೀನ ಶೈವ ಮತವಾದ ಪಾಶುಪತ ಧರ್ಮದಲ್ಲಿಯ ಆಚಾರ ವಿಚಾರಗಳು ಇನ್ನೂ ವೀರಶೈವರಲ್ಲಿ ಕಂಡು ಬರುವುದೆಂಬುದನ್ನು ಒಪ್ಪಿಕೊಳ್ಳಬೇಕಾಗುವುದು.*೨" 'ನಮಗೆ ಗೊತ್ತಿದ್ದ ಮಟ್ಟಿಗೆ ಪಾಶುಪತಮತ ಬಹಳ ಹಳೆಯದೂ ಮಹತ್ವವಾದುದೂ ಆಗಿರುವುದು. ಈ ಮತ ಕರ್ನಾಟಕದಲ್ಲಿ ಪ್ರಬಲ ಇದ ಮತಗಳಲ್ಲಿ ಒಂದಾಗಿತ್ತು.*೩ '೧೨ನೆಯ ಶತಕ ದಿಂದೀಚೆಗೆ ಹೆಚ್ಚಾಗಿ 'ವೀರಶೈವ' ಪದವೂ ಬಳಿಕ ಅರ್ವಾಚೀನವಾಗಿ 'ಲಿಂಗಾಯತ'

---

* ಚನ್ನಬಸವಣ್ಣನವರ ವಚನಗಳು ಕ.ವಿ. ಧಾರವಾಡ. ನಂ. ೫೮೫.

*೧ ಕನ್ನಡನಾಡಿನ ಚರಿತ್ರೆ ಭಾಗ II ಪು. ೨೦೫ ಹ. ವಿ. ಚಿಂ ಪ್ರ. ೯ ಪು ೩೮೦

*೨ ಸಿದ್ಧಾಂತ ಶಿಖಾಮಣಿ N.R.K. ೧೯೨೨ ಪರಿ ೧–೩೨

*೩ ಕ. ನಾ. ಚ. ಭಾಗ 11 ಪು. ೨೦೩. ೪. ನಾ. ಚ. ಭಾಗ 11 ಪು. ೧೫೫.

ಎಂಬ ಪದವು ಬಳಕೆಯಾಗಿ ಪ್ರಾಚೀನ ಕಾಲದಲ್ಲಿದ್ದ ಪರ್ಯಾಯ ಪದಗಳು ಮರೆಯಾಗಿ ಈ ವೀರಮಾಹೇಶ್ವರ ಧರ್ಮಕ್ಕೆ, ಧರ್ಮೀಯರಿಗೆ ನೆಲೆ ನಿಂತಿದೆ. ದ್ವೈತಾದ್ವೈತ ವಿಶೇಷಾದ್ವೈತ, ಶಕ್ತಿವಿಶಿಷ್ಟಾದ್ವೈತ, ಶಿವಾದ್ವೈತ, ವಿಶುದ್ಧಾದ್ವೈತ ಎಂಬ ಹೆಸರುಗಳೂ ಈ ಸಿದ್ಧಾಂತಕ್ಕೆ ಉಂಟು.

ವೀರಶೈವ–ಲಿಂಗಾಯತ ಎಂಬೀ ನೆಲೆಯೊಂದನ್ನೇ ನಿಟ್ಟಿಸಿದಲ್ಲಿ ಶಿವಧರ್ಮದ ನಿಲುವು ಸಿಕ್ಕದು–ದಕ್ಕದು, ಆದ ಕಾರಣ ಪುರಾತನ ಕಾಲದಿಂದಲೂ ಈ ಶಿವ ಧರ್ಮೀಯರಿ (ಶಿವಾಶ್ರಮಿ)ಗೆ ಇದ್ದಂಥಾ ಪರ್ಯಾಯ ಪದ (ಬಳಕೆಯ ಪದ) ಗಳನ್ನು ಗುರುತಿಸಿಕೊಂಡೇ ಈ ಶಿವ ಧರ್ಮದ ವಿಸ್ತಾರ ವೈವಿಧ್ಯತೆ ಗೊತ್ತು ಗುರಿಗಳನ್ನು ವೇದ–ಆಗಮ–ಪುರಾಣೇತಿಹಾಸಾದಿಗಳಲ್ಲಿ ಅರಿಯಬಹುದಾಗಿದೆ.

ವೇದಗಳು ಶ್ರುತಿಗಳೆಸಿಕೊಂಡುದು ಕರ್ಣಾಕರ್ಣಿಕೆಯಾಗಿ ಕೇಳಿಕೆಯಿಂದ ಬಂದುದರಿಂದ ಹಾಗೂ ಬಾಯಿಪಾಠದಿಂದ. ಹೀಗೆಯೇ ಆಗಮಗಳೂ ಒಂದು ಕ್ರಮ ಹಿಡಿದ ಪರಂಪರೆಯಿಂದ ಶ್ರುತಿಗಳೆನಿಸಿಯೇ ಬಂದವುಗಳಾಗಿವೆ. ಇವೆರಡೂ ಶ್ರುತಿಗಳಿಂದೇ ಪ್ರಾಕ್ತನ ವ್ಯವಹಾರವೇರ್ಪಟ್ಟಿರುವುದೂ ಸ್ಮೃತೀತಿಹಾಸಾದಿಗಳಿಂದ ವ್ಯಕ್ತವಾಗುತ್ತದೆ. ವೈದಿಕ ವಿಮರ್ಶಾಪ್ರಬಂಧಗಳೂ–ಆಗಮವಿಮರ್ಶಾಪ್ರಬಂಧಗಳೂ ಉಂಟಾದುದು ಕಾಲಾ ನಂತರವೇ.

ವೇದಾಗಮ ವಾಙ್ಮಯವು ಬಹು ಹಿಂದಿನ ಕಾಲದಲ್ಲೇ ಉಗಮವಾದರೂ ವೈದಿಕ ಪ್ರವಾಹವು ಬರುಬರುತ್ತಾ ಅವ್ಯಕ್ತವಾಗುತ್ತಾ ಹೋಗಿ ಕ್ರಿ. ಶ. ೧ ರಿಂದ ೬ ರವರೆಗೂ ಹಾಗೂ ಹೀಗೂ ಜೊತೆಗೂಡಿ ಸೀಮಿತವಾಗಿ ಬಂದರೂ ೬ ರಿಂದ ೧೧ ರವರೆಗೂ ಈ ಆಗಮ ಪ್ರವಾಹವು ಭಾರತಾದ್ಯಂತ ಪ್ರವಹಿಸಿ ಹಿಂದಿನ ಸಂಸ್ಕೃತಿಯನ್ನೆಲ್ಲಾ ತನ್ನೊಳಗುಮಾಡಿಕೊಂಡು ತನ್ನದೇ ಆದ ವಿಶಿಷ್ಟ (ಆಗಮಿಕ) ಸಂಸ್ಕೃತಿಯ ಪ್ರಭಾವಕ್ಕೆ ಭಾರತೀಯರನ್ನೆಲ್ಲಾ ಒಳಗುಮಾಡಿಕೊಂಡಿತು.

ಈ ಆಗಮ ಸಂಸ್ಕೃತಿಗೆ ಮಹತ್ವವಾದ ಕಾಣಿಕೆಯಿತ್ತವರಲ್ಲಿ ಕಾಶ್ಮೀರದವರು ಪ್ರಮುಖರು. ನೇಪಾಳದಲ್ಲಿಯೂ ಈ ಪಂಥ ಬೆಳೆದಿದೆ. ಹಾಗೆಯೇ ಶತಕ ೧೧–೧೨ ರಲ್ಲಿ ಕರ್ನಾಟಕ–ಆಂಧ್ರ–ದ್ರಾವಿಡ ದೇಶಗಳಲ್ಲಿ ಆಯಾ ಪ್ರಾಂತೀಯ ಭಾಷೆಗಳ ಮೂಲಕ ಆಗಮ ಸಂಸ್ಕೃತಿಯು ಹೊಸಲಾಗಿ ಹರಿದು ಉದಾತ್ತ ಸಂಸ್ಕೃತಿಯನ್ನುಳ್ಳ ಪ್ರಾಂತಗಳನ್ನಾಗಿಸಿತು. ದ್ರಾವಿಡ ದೇಶದಲ್ಲಿ ನಾಯನಾರರಿಂದ ದ್ರಾವಿಡ ಭಾಷೆಯಲ್ಲಿ ಅಧಿಕ ಪ್ರಚಾರವಾಗಿರುತ್ತದೆ.

ಸಂಸ್ಕೃತ-ಕರ್ನಾಟ ಆಂಧ್ರ-ದ್ರಾವಿಡ ಭಾಷೆಗಳ ಸಮಷ್ಟಿ ಜ್ಞಾನದಂಡವೊಂದೇ ಈ ಆಗಮ ಸಂಸ್ಕೃತಿಯ ಅಳತೆಗೋಲೆನಿಸಬಲ್ಲುದು. ಅನ್ಯಥಾ ನಿಲುಕಲಾರದು.

ಭಾರತದ ಉತ್ತರದಲ್ಲಿ ವೇದದ ಕರ್ಮಕಾಂಡವೂ ದಕ್ಷಿಣದಲ್ಲಿ ವೇದದ ಜ್ಞಾನಕಾಂಡವೂ ಪ್ರಚಾರಕ್ಕೆ ಬಂದಿತು. ಹಾಗೆಯೇ ಆಗಮದ ಮೊದಲೆರಡು ಪಾದಗಳು ಕಾಶ್ಮೀರ–ನೇಪಾಳ–ದ್ರವಿಡ–ಆಂಧ್ರ ದೇಶದಲ್ಲಿ ಹೆಚ್ಚಾಗಿಯೂ ಆಗಮದ ಉತ್ತರ ಪಾದಗಳೆರಡು ಹೆಚ್ಚಾಗಿ ಕರ್ಣಾಟಾಂಧ್ರ ದೇಶಗಳಲ್ಲಿಯೂ ಪ್ರಚಾರಕ್ಕೆ ಬಂದುವು. ಈಗ ಭರತಖಂಡವೆಲ್ಲಾ ಆಗಮ ಸಂಸ್ಕೃತಿಗೆ ಒಳಗಾಗಿರುತ್ತದೆ.

ಪ್ರಕೃತ ಈ ಶಿವಧರ್ಮದ (ವೀರಮಾಹೇಶ್ವರ ಧರ್ಮ) ಸಂಸ್ಕೃತದ ವಿವಿಧ ಸಾಹಿತ್ಯ ಸಾಮೀಕ್ಷೆಯ ಸ್ಥೂಲ ನೋಟವನ್ನು ಈ ಮುಂದಿನ ಟಿಪ್ಪಣಿಯಿಂದ ಗಮನಿಸಬಹುದಾಗಿದೆ.

## ವೀರಶೈವ ಸಂಸ್ಕೃತ ಸಾಹಿತ್ಯದ ಸ್ಥೂಲ ಸಮೀಕ್ಷೆ:—

೧ ಶಿವಯೋಗೀ ಕಾಲ? — ಸಿದ್ಧಾಂತ ಶಿಖಾಮಣಿಃ

೨ ಈಶಾನ ಶಿವಗುರುಃ ಕ್ರಿ. ಶ. ೧೦ — ರೇಣುಕ ಚರಿತಮ್

೩ ಸೋಮಶಂಭುಃ ಸು ೧೦೭೩ — ಸೋಮಶಂಭು ಪದ್ಧತಿಃ

೪ ಶ್ರೀಪತಿ ಪಂಡಿತಃ ೧೦೭೦ — ಶ್ರೀಕರ ಭಾಷ್ಯಮ್

೫ ಮಲ್ಲಿಕಾರ್ಜುನ ಪಂಡಿತಃ ಸು ೧೧೬೦

೧ ಶ್ರೀಮುಖ ದರ್ಶನಮ್. ೨ ರುದ್ರಮಹಿಮಾ.
೩ ಲಿಂಗೋದ್ಭವಗದ್ಯಂ ೪ ಅಮರೇಶ್ವರಾಷ್ಟಕಂ.
೫ ಸ್ತುತಿಶ್ಲೋಕ ಪಂಚಕಂ. ೬ ಪರ್ವತ ವರ್ಣನಂ.
೭ ಸಂಸಾರಮಾಯಾಸ್ತವಃ ೮ ಶಂಕರಗೀತಾ.
೯ ಆನಂದಗೀತಾ.

೬ ಪಾಲ್ಕುರಿಕಿ ಸೋಮನಾಥಃ ಸು ೧೧೬೫

೧ ಬಸವರಾಜೀಯಂ. ೨ ಪಂಚಪ್ರಕಾರ ಗದ್ಯಂ.
೩ ಬಸವೋದಾಹರಣಂ. ೪ ಷಟ್‌ಸ್ಥಲಗದ್ಯಂ.
೫ ವೀರಶೈವಶಿಖಾಮಣಿಃ ೬ ವೃಷಭಾಷ್ಟಕಂ.
೭ ಬಸವಾಕ್ಷರ ಮಾಲಾಗದ್ಯಂ.
೮ ವೃಷಭಾವತರಣಂ. ೯ ಬಸವ ಪಂಚರತ್ನಂ.
೧೦ ಬಸವಮುಕ್ತ ಪದಗ್ರಸ್ತ ಸ್ತೋತ್ರಂ.

೭ ಮಲ್ಲಯಾರ್ಯಗುರುಃ ಸು ೧೧೬೫ — ಶಿವಜ್ಞಾನ ಪ್ರದೀಪಿಕಾ.

೮ ಲಕ್ಷ್ಮೀದೇವಗುರುಃ " — ಸಾರೋದ್ಧಾರಃ

೯ [ತಟಾಕ] ಪದ್ಮರಾಜಃ " — ಸಾನಂದ ಚರಿತಂ.

೧೦ ಜ್ಯೋತಿರ್ನಾಥಃ " — ಶೈವರತ್ನಾಕರಃ.

೧೧ ಜಗದಾರಾಧ್ಯ ನಾಗೇಶಗುರುಃ ,, ಶಿವಜ್ಞಾನ ಸಮುಚ್ಚಯಃ

೧೨ ನೀಲಕಂಠ ನಾಗನಾಥಾಚಾರ್ಯಃ ,, ವೀರಮಾಹೇಶ್ವರಾಚಾರ ಸಂಗ್ರಹಃ

೧೩ ಗುರುದೇವಃ ಸು ೧೩೫೦ ವೀರಶೈವಾಚಾರ ಪ್ರದೀಪಿಕಾ.

೧೪ ನೀಲಕಂಠ ಶಿವಾಚಾರ್ಯಃ ಸು ೧೪೦೦ ಕ್ರಿಯಾಸಾರಃ.

೧೫ ಮಾಯಿದೇವಃ ಸು ೧೪೩೦

೧ ಅನುಭವಸೂತ್ರಂ. ೨ ವಿಶೇಷಾರ್ಥ ಪ್ರಕಾಶಿಕಾ.

೩ ಶಿವಾಧವಶತಕಂ. ೪ ಶಿವಾ ವಲ್ಲಭ ಶತಕಂ.

೫ ಐಪುರೀಶ್ವರ ಶತಕಂ. ೬ ಪ್ರಭುಗೀತಾ.

೧೬ ಚಕ್ಕಣಾರ್ಯಃ ಸು ೧೪೩೦ ಏಕೋತ್ತರ ಶತಸ್ಥಲೀಲೀ.

೧೭ ಗುರುರಾಜಃ ,, (ಮಲ್ಲಿಕಾರ್ಜುನ) ಪಂಡಿತಾರಾಧ್ಯ ಚರಿತಂ

೧೮ ಕಾಂಚೀ ಶಂಕರಾರಾಧ್ಯಃ ,, ಬಸವ ಪುರಾಣಂ.

೧೯ ಸ್ವಪ್ರಭಾನಂದನಾಥಃ ,, ಶಿವಾದ್ವೈತಮಂಜರೀ.

೨೦ ಚೆನ್ನಸದಾಶಿವಯೋಗೀ ಸು ೧೫೦೦ ಶಿವಯೋಗ ಪ್ರದೀಪಿಕಾ.

೨೧ ಆನಂದ ಬಸವಲಿಂಗಯತಿಃ ,, ಮಾಚೀದೇವ ಮನೋವಿಲಾಸಃ

೨೨ ಸಂಪಾದನಾ ಸಿದ್ಧವೀರಣಾರ್ಯಃ ಸು ೧೬೦೦

ಅನಾದಿ ವೀರಶೈವಾಚಾರ ಸಂಗ್ರಹಃ.

೨೩ ಷಡಕ್ಷರಿದೇವಃ ೧೬೫೫ ೧ ಕವಿಕರ್ಣ ರಸಾಯನಂ.

೨ ಭಕ್ತಾಧಿಕ್ಯ ರತ್ನಾವಲಿಃ.

೩ ಶಿವಾಧಿಕ್ಯ ರತ್ನಾವಲಿಃ.

೪ ಶಿವಸ್ತವ ಮಂಜರೀ.

೫ ನಮಶ್ಶಿವಾಯಾಷ್ಟಕಂ.

೬ ವೀರಭದ್ರೋದಾಹರಣ ಗದ್ಯಂ.

೭ ಶಿವಸ್ತೋತ್ರ ಸುಮಂಗಲೀ.

೮ ಇಂದುಧರ ಸ್ತೋತ್ರಂ.

೯ ಸಿದ್ಧಲಿಂಗಾಷ್ಟಕಂ.

೧೦ ಶಿವಮಾನಸ ಸ್ತೋತ್ರಂ.

೧೧ ಇಷ್ಟಲಿಂಗಾಷ್ಟಕಂ. ೧೨ ಇಷ್ಟಲಿಂಗ ಸ್ತವನಂ.

೧೩ ಬಸವಾಷ್ಟಕಂ. ೧೪ ನೀಲಾಂಬಿಕಾಸ್ತೋತ್ರಂ.

೧೫ ಷಡಕ್ಷರಮಂತ್ರ ಸ್ತೋತ್ರಂ.

೧೬ ತತ್ತ್ವತ್ರಯ ಸ್ತೋತ್ರಂ.

೧೭ ವೀರಭದ್ರ ವಿಜಯ ದಂಡಕಂ.

೨೪ ನಂದಿಕೇಶ್ವರಃ ೧೭೦೦ ಲಿಂಗಧಾರಣ ಚಂದ್ರಿಕಾ.

೨೫ ಬಸವರಾಜಃ ,, ಬಸವರಾಜೀಯಂ (ವೈದ್ಯಂ).

೨೬ ಕೆಳದೀ ಬಸವಭೂಪಾಲಂ ೧೬೯೮–೧೭೧೫

೧ ಶಿವತತ್ತ್ವರತ್ನಾಕರಃ

೨ ಸುಭಾಷಿತ ಸುರದ್ರುಮಃ

೩ ಸೂಕ್ತಿ ಸುಧಾಕರಃ

೨೭ ಸಂಗಮೇಶ್ವರಯತಿಃ ೧೭೦೦ ಸಂಗಮೇಶ್ವರವಿಲಾಸಭಾಷ್ಯಂ.

೨೮ ಗುರುಬಸವಃ ,, ವೀರಶೈವಾಚಾರ ಸುಧಾನಿಧಿಃ.

೨೯ ಮರಿತೋಂಟದಾರ್ಯಃ ,, ವೀರಶೈವಾನಂದ ಚಂದ್ರಿಕಾ.

೩೦ ಮೌನಪ್ಪ ಪಂಡಿತಃ ,, ವೀರಶೈವಾಚಾರ ಕೌಸ್ತುಭಃ

೩೧ ಸಪ್ಪೇಶ್ವರಯತಿಃ ,, ಅಮೃತ ಸಪ್ಪೇಶ್ವರ ಭಾಷ್ಯಂ.

೩೨ ನಿರ್ವಾಣಮಂತ್ರೀ ೧೭೨೫ ಕ್ರಿಯಾಸಾರವ್ಯಾಖ್ಯಾ.

೩೩ ನಿಟ್ಟೂರು ನಂಜಣಾರ್ಯಃ ,, ವೇದಾಂತಸಾರ ವೀರಶೈವ ಚಿಂತಾಮಣಿಃ

೩೪ ಬಸವಭೂಪಃ ,, ಪಂಚಶ್ಲೋಕೀ ವ್ಯಾಖ್ಯಾ (ವೀರಶೈವ ಸಂಜೀವಿನೀ).

೩೫ ದ್ವಿತೀಯ ಮುರಿಗಾಗುರುಸಿದ್ಧ ,, ೧ ಪ್ರಭುಲೀಲಾ

೨ ಲಿಂಗಾಚಾರ ರಚನಾಗಮಃ

೩೬ ನಂಜರಾಜಃ ೧೭೪೦

೧ ವೈದ್ಯಸಾರ ಸಂಗ್ರಹಃ ೨ ಸಂಗೀತ ಗಂಗಾಧರಂ.

೩೭ ಷಡಕ್ಷರ ಮಂತ್ರೀ ೧೭೪೦–೧೭೪೫ ವೀರಶೈವ ಧರ್ಮ ಶಿರೋಮಣಿಃ

೩೮ ಸರ್ಪಭೂಷಣ ಶಿವಯೋಗೀ ೧೭೪೫ ಜ್ಞಾನಶತಕಂ.

೩೯ ವೀರೇಶ್ವರಶಾಸ್ತ್ರೀ ೧೮೬೦ ವೀರಶೈವಾನ್ವಯ ಚಂದ್ರಿಕಾ.

೪೦ ಮಲ್ಲನಾರಾಧ್ಯಃ ೧೮೦೦ ಶಿವಲಿಂಗ ಸೂರ್ಯೋದಯಃ (ನಾಟಕ)

೪೧ ಅಭಿನವಕಾಳಿದಾಸ ಬಸವಪ್ಪಶಾಸ್ತ್ರೀ ೧೮೪೩–೧೮೯೧

೧ ತ್ರಿಷಷ್ಟಿ ಪುರಾತನಗಣಸ್ತವಃ

೨ ಶಿವಾಷ್ಟಕಂ.

೩ ಅಂಬಾಷೋಡಶ ಮಂಜರೀ.

೪ ಶಿವಭಕ್ತ ಸುಧಾರಸತರಂಗಿಣೀ

೫ ಆರ್ಯಾಶತಕಂ.

೪೨ ಸೋಸಲೆ ರೇವಣಾರಾಧ್ಯಃ ೧೬೨೩

೧ ವೀರಶೈವ ಸಿದ್ಧಾಂತ ಪ್ರಸಿದ್ಧ ಗಣ ಪದ್ಧತಿಃ

೨ ಶಿವಾಧಿಕ್ಯ ಶಿಖಾಮಣಿಃ

೩ ಶಿವಾಧಿಕ್ಯ ಪ್ರದೀಪಿಕಾ

೪ ಕವಿ ಸಮಯ ವಿಲಾಸಃ

೫ ಕರ್ಮವಿಪಾಕ ಪ್ರದೀಪಿಕಾ

೪೩ ಸರ್ವಾತ್ಮಶಂಭುಃ ಸಿದ್ಧಾಂತ ದೀಪಿಕಾ.

೪೪ ನನ್ನಯ್ಯಃ ಕರ್ಣಾವತಂಸಃ (ಸುಭಾಷಿತಂ)

೪೫ ರೇವಣಸಿದ್ಧಃ ವೀರಾಭಟ್ಟೀಯಂ.

೪೬ ? ಶ್ರುತಿಸಾರ ಭಾಷ್ಯಂ.

೪೭ ಮುಮ್ಮಡಿ ತಮ್ಮನೃಪಾಲಃ ೧೬೬೫

೧ ಕೌಮುದೀ ವ್ಯಾಖ್ಯಾನಂ (ವ್ಯಾಕರಣಂ)

೨ ರಸಿಕ ಮನೋರಂಜನಂ.

ಇಷ್ಟು ಶಿವ ಧರ್ಮೀಯರ ಸಂಸ್ಕೃತ ಸಾಹಿತ್ಯದ ಸ್ಥೂಲ ಸಮೀಕ್ಷೆ.

---

## ಗ್ರಂಥಋಣ


೧ ಕರ್ಣಾಟಕ ಕವಿಚರಿತ್ರೆ. ರಾ॥ ಬ॥ ಆರ್. ನರಸಿಂಹಾಚಾರ್
ಭಾಗ I. II. III.

೨ ಕರ್ಣಾಟಕ ಕವಿಚರಿತ್ರೆ ಕೈಪಿಡಿ. ಪ್ರೊ॥ ಜಿ. ಕುಲಕರ್ಣಿ
ಭಾಗ I, II, III.

೩ ಲಿಂಗವಂತರ ಅಪೂರ ಕೃತಿಗಳು ಮತ್ತು ಲಿಂಗವಂತ ಕವಿಗಳು
ಗುರುಸಿದ್ದಪ್ಪ ಬಸವಪ್ಪ ಬಳ್ಳಾರಿ ೧೯೬೦.

೪ ಅನಾದಿ ವೀರಶೈವ ಸಮಾಜ ಅಥವಾ ಹಳಬ ಲಿಂಗವಂತ
ಮಲ್ಲಿಕಾರ್ಜುನ ದೇಶಿಕೇಂದ್ರಸ್ವಾಮಿ ಮೈಸೂರು ೧೯೫೦.

೫ ವಿಜಯನಗರ ಸಾಮ್ರಾಜ್ಯ. ದೇಸಾಯಿ ಪಾಂಡುರಂಗರಾಯ ೧೯೩೬.

೬ ಪ್ರಾಚೀನ ಶೀಲಮಾಲಾ. ವಿ. ಪ್ರ. ಚಾಂಜೆ. ಭಾಗ I. II. III.

೭ ಕರ್ಣಾಟಕ ಲಾಕುಳ ಶೈವರ ಇತಿಹಾಸ. ಕಪಟರಾಳ ಕೃಷ್ಣರಾಯರು.
ಧಾರವಾಡ ೧೯೫೫.

೮ ಭಾರತೀಯ ಇತಿಹಾಸ ಪ್ರವೇಶಿಕಾ ಭಾಗ I.
ಕಂ. ಕೃಷ್ಣಯ್ಯಂಗಾರ್.

೯ ವಿವೇಕ ಚಿಂತಾಮಣಿ. ನಿಜಗುಣ ಶಿವಯೋಗಿ. ೧೮೯೫ ಬಳ್ಳಾರಿ.

೧೦ ಕನ್ನಡ ನಾಡಿನ ಚರಿತ್ರೆ ಭಾಗ II. ಡಾ॥ ಎಸ್. ಸಿ. ನಂದೀಮಠ
ಬೆಂಗಳೂರು ೧೯೪೪

೧೧ South India Inscriptions vol. I

೧೨ Indian Antiquary, vol. XII

೧೩ Contribution of Kashmir to Sanskrit Literature
By. K. S. Nagarajan 1970 Bangalore.

೧೪ The Vakat aka Gupta age R. C. Majumdar 1960
A. S. Altekar. Banaras

೧೫ ಅಭಿನಯ ದರ್ಪಣಂ. ನಂದಿಕೇಶ್ವರ:

೧೬ ಷಡ್ಡರ್ಶನ ಸಮುಚ್ಚಯಃ ಹರಿಭದ್ರಸೂರಿಃ
ಬೆನಾರಸ್—೧೯೦೫.


ವೀರಶೈವ ವಚನ ವಾಙ್ಮಯ ಹಾಗೂ ಸಂಸ್ಕೃತ ವಾಙ್ಮಯ.

---

ದೇವಾ, ಕಂಬಳಕ್ಕೆ ಹೋಗಿ ಕನಕದ ಕೊಡನ ಕಂಡಂತೆ,
ಮರ್ತ್ಯಲೋಕಕ್ಕೆ ಬಂದು ಮಾನವ ಜನ್ಮವ ಕಂಡೆ.
ಆ ಮಾನವ ಜನ್ಮಕ್ಕೆ ಲಿಂಗ ಬಂದುದ ಕಂಡೆ.
ಎನಗಿದು ಚೋದ್ಯವಯ್ಯ ! ಎನಗಿದು ವಿಪರೀತವಯ್ಯ !
ಇದಕ್ಕೆ ನುಡಿದಂತೆ ನಡೆಸು. ನಡೆದಂತೆ ನುಡಿಸು.
ನುಡಿ ನಡಗೆ ಭಿನ್ನವಾದರೆ, ನಿಮ್ಮ ಶರಣರೊಪ್ಪರು.
ನಿಮ್ಮ ಶರಣರೊಪ್ಪದಲ್ಲಿಯೇ ನೀನೊಪ್ಪೆ.
ನೀನೊಪ್ಪದಲ್ಲಿಯೇ ಎನಗೆ ಬಂದಿತ್ತು ಹಿಂದಣ ಭವದ ಹೆಮ್ಮಾರಿ.
ಅದಕ್ಕೆ ನಾನಂಜುವೆನಯ್ಯಾ; ನಾ ನಳುಕುವೆನಯ್ಯಾ.
ನಡೆ ನುಡಿ ಎರಡಾಗದಂತೆ ನಡೆಸಯ್ಯಾ.
ಘನಲಿಂಗಿಯ ಮೋಹದ ಮಲ್ಲಿಕಾರ್ಜುನಾ.

# ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ
ಅಥವಾ
# ವೀರಶೈವ ಧರ್ಮ

---

ಆಸ್ಥಾನ ವಿದ್ವಾನ್, ಕೀರ್ತನಾಚಾರ್ಯ, ಪಂಡಿತ ರತ್ನ
**ಲಿಂಗೈಕ್ಯ ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು**
ಬೆಂಗಳೂರು

ಭಾರತೀಯ ದರ್ಶನ ಪ್ರಪಂಚದಲ್ಲಿ 'ವೀರಶೈವಧರ್ಮವು' ತನ್ನದೇ ಆದ ಕೆಲವು ವೈಶಿಷ್ಟ್ಯಗಳಿಂದ ಕೂಡಿದೆ. ವೇದ ಮತ್ತು ಆಗಮಗಳ ಪ್ರಾಮಾಣ್ಯವನ್ನು ಅಂಗೀಕರಿಸಿ ಮತಸಿದ್ಧಾಂತಗಳ ಪರಂಪರೆಗೆ ಅನುಗುಣವಾಗಿ, ಅನುಭವವನ್ನೂ ಮುಖ್ಯವೆಂದು ಭಾವಿಸಿ, ದೇವರನ್ನೂ, ಮೋಕ್ಷವನ್ನೂ ಒಪ್ಪಿಕೊಂಡು ಅದನ್ನು ಸಾಧಿಸುವ ಮಾರ್ಗದಲ್ಲಿ ತನ್ನ ವಿಶಿಷ್ಟ ನೀತಿಯನ್ನು ನಿರೂಪಿಸಿರುವುದು ಈಸಿದ್ಧಾಂತದ ಹಿರಿಯ ಗುಣವಾಗಿದೆ. ಭರತ ಖಂಡದಲ್ಲಿ ಅತಿ ಪ್ರಾಚೀನವೆನಿಸಿರುವ ಶೈವಧರ್ಮದ ಉತ್ಕ್ರಾಂತಿಯ ಫಲವಾಗಿ 'ವೀರಶೈವ ಮತವು' ರೂಪುಗೊಂಡಿದೆ. ಶಿವಾಗಮಗಳು ಹೇಳುವ ಸಪ್ತಶೈವಗಳಲ್ಲಿ ಅನಾದಿಶೈವ, ಆದಿಶೈವ, ಮಹಾಶೈವ, ಅನುಶೈವ, ಅವಾಂತರಶೈವ, ಯೋಗಶೈವ, ವೀರಶೈವ ಎಂಬಲ್ಲಿ ಈ ವೀರಶೈವವು ಅಂತಿಮವಾಗಿದ್ದು ಸರ್ವೋತ್ಕೃಷ್ಟವೆನಿಸಿದೆ. ಶ್ರೀ ನಿಜಗುಣಶಿವಯೋಗಿಗಳು ರಚಿಸಿರುವ 'ವಿವೇಕ ಚಿಂತಾಮಣಿ' ಎಂಬ ವಸ್ತುಕೋಶದಲ್ಲಿ ವೀರಶೈವವನ್ನು ಕುರಿತು ಈ ರೀತಿ ಹೇಳಿದೆ: "ಆ ಪರಮೇಶ್ವರ ನಿರ್ಮಿತವಾದ ಈ ಜಗತ್ತಿನಲ್ಲಿ, ವೀರಶೈವ ಚರಮ ಶರೀರಿ, ಸರ್ವೋತ್ತಮ ವ್ರತಿ ಅಪ್ರತಿಹತ ಶಿವವ್ರತನು, ಲೋಕ ಪಾವನನು ಎಂದು ಸಮಸ್ತ ಸಜ್ಜನರಿಂ ಕೊಂಡಾಡಲ್ಪಟ್ಟು, ಸಮಸ್ತ ಶೈವರೊಳಗೆ ವರಿಷ್ಠನಾಗಿ, ಇತರ ಶೈವರಂತೆ ಕ್ರಿಯಾ ಬಾಹುಳ್ಯದಿಂದ ಅಲ್ಪ ಫಲಮಂ ಪಡೆಯದೆ, ಅಲ್ಪ ಕ್ರಿಯೆಯಿಂದ ಅನಂತ ಫಲಮಂ ಪಡೆವಾತನಾಗಿ, ಶಿವದೀಕ್ಷೆಯಿಂ ಮೇಲೆ, ಸ್ನಾನ, ಭೋಜನ, ನಿದ್ರಾ, ಜಾಗರಣ, ಮಲಮೂತ್ರ ವಿಸರ್ಜನ ಕಾಲಂಗಳಲ್ಲಿ ಅಶುಚಿಯ ಭಾವನೆಯಂ ತೊರೆದು ಸದಾ ಲಿಂಗಾಂಗಾನುಬಂಧಿಯಾಗಿ, ತನ್ನಿಷ್ಟ ಲಿಂಗದಲ್ಲಿ ಆವಾಹನ, ವಿಸರ್ಜನಂಗಳಂ ಮಾಡದಾತನಾಗಿ, ತ್ರಿಕಾಲ ಲಿಂಗಾರ್ಚನಾಸಕ್ತನಾಗಿ, ಲಿಂಗಲೋಪಂಗಳಲ್ಲಿ ಪ್ರಾಣ ತ್ಯಾಗವಲ್ಲದೆ ಬೇರೊಂದು ಪ್ರಾಯಶ್ಚಿತ್ತವಿಲ್ಲದಾತನಾಗಿ, ಗುರುನಿಂದೆ, ಶಿವನಿಂದೆ, ಶಿವಧರ್ಮನಿಂದೆ, ಶಿವಾಗಮ, ಶಿವಾಚಾರ, ಸಂಪ್ರದಾಯ ನಿಂದೆಗಳಂ ಸೈರಿಸದೆ, ಶಿವಧರ್ಮಾಭಿವೃ

ಗೋಸುಗ, ತನ್ನ ತನು ಮನ ಧನಂಗಳಂ ಸೂರೆಗೊಳ್ಳುವಾತನಾಗಿ, ಪಂಚಸೂತಕಂಗಳನು ಅಳಿದಾತನಾಗಿ, ಪಂಚಾಚಾರ ನಿಷ್ಠನಾಗಿ, ಶಿವಾತ್ಮರ್ಗೆಭೇದಭ್ರಾಂತಿ ತೊರೆದಾತನಾಗಿ, ಜೀವಲಿಂಗಮುಂ ಶಿವಲಿಂಗದೊಳೈಕ್ಯಗೊಳಿಸಿ, ಮೆರೆವಾತನಾಗಿ ಲಿಂಗಾಂಗಸಂಗ ಅದ್ವೈತ ಭಾವನೆಯಿಂ ಭಯ ವರ್ಜಿತನಾಗಿ, ವೀರಶೈವ ಧರ್ಮಗಳಿಂ ಕೃತಕೃತ್ಯನಾಗಿ ಧೈರ್ಯ ಸಂಪನ್ನನಾಗಿ, ಜಗತ್ಪೂಜ್ಯನಪ್ಪಾತನೇ ವೀರಶೈವನಪ್ಪಂ" ಎಂದು ಹೇಳಿರುತ್ತಾರೆ. (ವಿವೇಕ ಚಿಂತಾಮಣಿ, ಪ್ರಕರಣ ೨)

ಈ ಮೇಲಿನ ನಿಜಗುಣರ ನಿರೂಪಣೆಯಲ್ಲಿ ವೀರಶೈವದ ಲಕ್ಷಣವನ್ನು ನಾವು ಸಂಗ್ರಹವಾಗಿ, ಸುಲಭವಾಗಿ, ಸುಸ್ಪಷ್ಟವಾಗಿ ತಿಳಿಯಬಹುದಾಗಿದೆ.

ವೀರಶೈವ ಮತವನ್ನು ಶಿವಾದ್ವೈತ, ಶಕ್ತಿವಿಶಿಷ್ಟಾದ್ವೈತ, ವಿಶೇಷಾದ್ವೈತ, ದ್ವೈತಾದ್ವೈತ, ಅತಿವರ್ಣಾಶ್ರಮಧರ್ಮ, ಲಿಂಗಾಯತ ಧರ್ಮ, ಷಟ್ಸ್ಥಲ ಧರ್ಮ ಎಂದು ಮೊದಲಾಗಿ ಕರೆಯುತ್ತಾರೆ. 'ವೀರಶೈವ' ಎಂಬುದರ ಅರ್ಥವನ್ನು ಶಾಸ್ತ್ರಕಾರರು:

ವಿದ್ಯಾಯಾಂ ಶಿವರೂಪಾಯಾಂ ವಿಶೇಷಾದ್ರಮಣಂ ಯತಃ ।
ತಸ್ಮಾದೇತೇ ಮಹಾಭಾಗಾ ವೀರಶೈವಾ ಇತಿ ಸ್ಮೃತಾಃ ।
ವಿಶಬ್ದೇನೋಚ್ಯ ತೇ ವಿದ್ಯಾ ಶಿವಜೀವೈಕ್ಯ ಬೋಧಿನೀ ।
ತಸ್ಯಾಂರಮಂತೇ ಯೇ ಶೈವಾಃ ವೀರಶೈವಾ ಸ್ತುತೇಮತಾಃ ॥
ವೇದಾಂತಜನ್ಯಂ ಯದ್ ಜ್ಞಾನಂ ವಿದ್ಯೇತಿ ಪರಿಕೀರ್ತಿತಾಃ ।
ವಿದ್ಯಾಯಾಂ ರಮತೇ ತಸ್ಯಾಂ ವೀರ ಇತ್ಯಭಿಧೀಯತೇ ॥

(ಸಿದ್ಧಾಂತ ಶಿಖಾಮಣಿ. ಪರಿಚ್ಛೇದ ೫)

'ವಿ' ಎಂಬುದು. ಶಿವ ಜೀವರ ಐಕ್ಯ ಬೋಧಕವಾದ ವಿದ್ಯೆಯನ್ನು ನಿರ್ದೇಶಿಸುವುದು, 'ರ' ಎಂಬುದು ರಮಿಸು ಎಂಬರ್ಥವುಳ್ಳುದು "ಶೈವಾಃ" ಎಂಬುದು 'ಶಿವಭಕ್ತರು' ಎಂದು ತಿಳಿಸುವುದು. ಆದುದರಿಂದ 'ವೀರಶೈವ' ಎಂದರೆ 'ಶಿವಜೀವೈಕ್ಯ ವಿದ್ಯೆಯಲ್ಲಿ ಕೂಡಿರತಕ್ಕವರು' ಎಂದು ಅರ್ಥವಾಗುವುದು. ವೀರಶೈವ ಮತದ ಪರವಾಗಿ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದಿರುವ ಶ್ರೀಪತಿ ಪಂಡಿತರು ತಮ್ಮ ಭಾಷ್ಯದ ಪ್ರಾರಂಭದಲ್ಲಿ:

ಅಶೇಷೋಪನಿಷತ್ಸಾರ ವಿಶೇಷಾದ್ವೈತ ಮಂಡನಂ ।
ಶಿವಜ್ಞಾನಪ್ರದಂ ಸೂತ್ರ ಭಾಷ್ಯಂ ಜಯತು ಸರ್ವದಾ ॥

ಶೃತ್ಯೈಕ ದೇಶ ಪ್ರಮಾಣ್ಯಂ ದ್ವೈತಾ ದ್ವೈತ ಮತಾದಿಷು ।
ವೀರಶೈವೈಕಾ ಸಿದ್ಧಾಂತೇ ಸರ್ವಶೃತಿ ಸಮನ್ವಯಃ ॥

ವೀರಶೈವ ಮತಕ್ಕೆ, ದ್ವೈತಾದ್ವೈತ, ವಿಶೇಷಾದ್ವೈತ, ಶಿವಾದ್ವೈತ ಎಂಬ ಹೆಸರುಗಳನ್ನೂ ಹೇಳುತ್ತಾರೆ 'ಲಿಂಗಾಯತ' ಎಂಬುದು ವ್ಯಾವಹಾರಿಕ ನಾಮ ವಾಗಿ ಕಂಡರೂ. ಅದಕ್ಕೂ ಸಂಸ್ಕೃತದ ಅರ್ಥವನ್ನು ಇತ್ತೀಚಿನ ಪಂಡಿತರು ಸಾಹಸ ದಿಂದ ಹಚ್ಚಿದ್ದಾರೆ. 'ಲಿಂಗೇನ ಆಯತಃ' ಅಥವಾ 'ಲಿಂಗೇ ಆಯತಃ' ಎಂಬುದೇ ಆ ಅರ್ಥ. ಒಟ್ಟಿನಲ್ಲಿ ವೀರಶೈವ. ವಿಶೇಷಾದ್ವೈತ,ಶಕ್ತಿವಿಶಿಷ್ಟಾದ್ವೈತ. ದ್ವೈತಾದ್ವೈತ. ಲಿಂಗಾಯತ, ಲಿಂಗವಂತ ಎಂಬಿವು ಒಂದೇ ಮತವನ್ನು ನಿರ್ದೇಶಿಸುವ ಪರ್ಯಾಯ ನಾಮಗಳಾಗಿವೆ. 'ವೀರ' ಎಂದರೆ ಶ್ರೇಷ್ಠ 'ಶೈವ', ಎಂದರೆ ಶಿವಭಕ್ತ ಎಂಬ ಅರ್ಥವು ಕೂಡಾ ಸುಪ್ರಸಿದ್ಧವಾಗಿದೆ.

**ಗ್ರಂಥ ಪ್ರಾಮಾಣ್ಯ** :– ವೀರಶೈವರು ವೇದ–ಆಗಮಗಳೆರಡನ್ನೂ ನಂಬು ತ್ತಾರೆ. ಆದರೆ ಅಹಿಂಸಾವಾದಿಗಳಾದ ಇವರು ವೇದದ ಕರ್ಮಕಾಂಡವನ್ನು ನಂಬುವು ದಿಲ್ಲ. ವೇದದ ಜ್ಞಾನಕಾಂಡ ಮತ್ತು ಕಾಮಿಕಾದಿ ವಾತುಲ ಪರ್ಯಂತವಾದ ಶಿವಾ ಗಮಗಳು, ಇದಕ್ಕೆ ಅನುಗುಣವಾದ ಶಿವಶರಣರ ವಚನಗಳು, ಆಗಮಾರ್ಥವನ್ನು ನಿರೂಪಿಸುವ ಶಿವಪುರಾಣಗಳು ಇವನ್ನು ಪ್ರಮಾಣವಾಗಿ ನಂಬುತ್ತಾರೆ. ವೀರಶೈವ ಮತಪ್ರತಿಪಾದನೆಗಾಗಿ ಕ್ರಿ. ಶ. ೮ ನೆಯ ಶ ತ ಕ ದಲ್ಲಿ ಗೋಕರ್ಣದಲ್ಲಿದ್ದ ಶ್ರೀ ನೀಲ ಕಂಠ ಶಿವಾಚಾರ್ಯನೂ ಕ್ರಿ. ಶ. ೧೩ನೆಯ ಶತಮಾನದಲ್ಲಿ ಆಂಧ್ರಪ್ರದೇಶದಲ್ಲಿದ್ದ ಶ್ರೀಪತಿ ಪಂಡಿತನೂ, ಬ್ರಹ್ಮಸೂತ್ರಗಳ ಮೇಲೆ ಭಾಷ್ಯಗಳನ್ನು ಬರೆದಿದ್ದಾರೆ. ಅಲ್ಲದೆ ನಾರಾಯಣೋಪನಿಷತ್, ಕೇನೋಪನಿಷತ್, ಸಿದ್ಧಾಂತ ಶಿಖೋಪನಿಷತ್ ಈಶಾವಾ ಸ್ಯೋಪನಿಷತ್, ಮೊದಲಾದವುಗಳಿಗೆ ವೀರಶೈವ ವಿದ್ವಾಂಸರು ಸ್ವಮತದ ಪರವಾಗಿ ಭಾಷ್ಯಗಳನ್ನು ಬರೆದಿದ್ದಾರೆ. ಇದೇ ರೀತಿ ಭಗವದ್ಗೀತೆಗೆ ಕೂಡ ವೀರಶೈವ ಭಾಷ್ಯವನ್ನು ಈಗ ಬರೆಯಲಾಗಿದೆ ವೀರಶೈವರು ವಿಶೇಷವಾಗಿ ಆಗಮ ಪ್ರಮಾಣ ಹಾಗೂ ಅನುಭವ ಪ್ರಮಾಣವನ್ನು ಅಂಗೀಕರಿಸಿರುವುದರಿಂದ ಇವ ರಿಗೆ ಪ್ರಸ್ಥಾನತ್ರಯ ಭಾಷೆಗಳ ಅಗತ್ಯ ಕಾಣಲಿಲ್ಲವೆಂದು ಹೇಳಬಹುದು. ಆದರೂ ಕ್ರಿ. ಶ. ೧೫ನೆಯ ಶತಮಾನದಲ್ಲಿದ್ದ ಆಚಾರ್ಯ ನಂದಿಕೇಶ್ವರನು 'ಲಿಂಗಧಾರಣ ಚಂದ್ರಿಕೆ' ಯಲ್ಲಿಯೂ, ೧೮ನೆಯ ಶತಮಾನದಲ್ಲಿದ್ದ ಮರಿತೋಂಟದಾರ್ಯನು 'ವೀರಶೈವಾನಂದ ಚಂದ್ರಿಕೆ'ಯಲ್ಲಿಯೂ ವೀರಶೈವ ಮತವು ವೇದಾಗಮ ಸಮ್ಮತ ವೆಂದು ವಿದ್ವತ್ಪೂರ್ಣವಾಗಿ ಸಮರ್ಥಿಸಿದ್ದಾರೆ. ಪೂರ್ವಾಚಾರ್ಯರಿಂದ ನಿರೂಪಿತ ವಾಗಿರುವ, ಸಿದ್ಧಾಂತಶಿಖಾಮಣಿ, ಕ್ರಿಯಾಸಾರ, ಅನುಭವ ಸೂತ್ರ, ಶಿವಾದ್ವೈತ ಮಂಜರಿ, ಧರ್ಮಶಿರೋಮಣಿ, ವೀರಶೈವಾಚಾರ ಕೌಸ್ತುಭ, ಸೋಮನಾಥ ಭಾಷ್ಯ, ಕೈವಲ್ಯಸಾರ. ಶಿವರಹಸ್ಯ, ಪರಮರಹಸ್ಯ, ಶಿವಗೀತೆ, 'ಸ್ಕಾಂದ–ಲಿಂಗ ಪುರಾಣ ಗಳು,' ಶಿವಧರ್ಮ ಪುರಾಣ, ಶ್ವೇತಾಶ್ವತರೋಪನಿಷತ್, ಶಿವಯೋಗ ಪ್ರದೀಪಿಕಾ, ವೇದಾಂತಸಾರ ವೀರಶೈವ ಚಿಂತಾಮಣಿ, ಶ್ರುತಿಸಾರ ಭಾಷ್ಯಂ, ಪಂಚ ಬ್ರಹ್ಮೋ

ನಾಮ ಭಾಷ್ಯಂ, ದೀಕ್ಷಾಬೋಧೆ, ಭಕ್ತ್ಯಾಧಿಕ್ಯ, ಶಿವಾಧಿಕ್ಯ, ಶೂನ್ಯಸಂಪಾದನೆ, ಗಣ ಭಾಷಿತ ರತ್ನಮಾಲಾ, ಲಿಂಗಲೀಲಾವಿಲಾಸ, ಶತಕತ್ರಯ, ಬಸವೇಶ್ವರ, ಚೆನ್ನಬಸವೇಶ್ವರ, ಸಿದ್ಧರಾಮೇಶ್ವರ, ಪ್ರಭುದೇವರು, ಅಕ್ಕಮಹಾದೇವಿ, ದೇವರ ದಾಸಿಮಯ್ಯ, ಸಿದ್ಧಲಿಂಗೇಶ್ವರಾದಿಗಳ ವಚನಗಳು ಮೊದಲಾದುವನ್ನು ವೀರಶೈವರು ಪ್ರಮಾಣಗಳನ್ನಾಗಿ ತಿಳಿಯುತ್ತಾರೆ. ವೀರಶೈವವು ಆಗಮ ಪ್ರಧಾನವಾದ ತಾಂತ್ರಿಕ–ವೈದಿಕ ಮತ, ಅಪ್ರಾಕೃತ ಹಾಗೂ ಅತಿವರ್ಣಾಶ್ರಮ ಧರ್ಮವಾದುದರಿಂದ ಪ್ರಾಕೃತರಿಗೆ ಬೇಕಾದ ಪ್ರಸ್ಥಾನತ್ರಯಗಳ ಅಗತ್ಯ ಇವರಿಗೆ ತೋರಲಿಲ್ಲವೆಂಬುದನ್ನು ಈ ಮೊದಲು ಹೇಳಲಾಗಿದೆ.

## ಶಿವದೀಕ್ಷೆ–ಲಿಂಗಧಾರಣ

ವೀರಶೈವರ ಬಹುಮುಖ್ಯವಾದ ಲಾಂಛನ ಇಷ್ಟಲಿಂಗಧಾರಣ. ಅಂಗದ ಮೇಲೆ ಲಿಂಗವಿಲ್ಲದವನು ಲಿಂಗವಂತನಾಗುವುದಿಲ್ಲ. ಆದರೆ ಲಿಂಗಧರಿಸಿದವರೆಲ್ಲರೂ ವೀರಶೈವರೆನಿಸುವುದಿಲ್ಲ.* ಶಿವದೀಕ್ಷಾ ಸಂಸ್ಕಾರದಿಂದ ಶುದ್ಧನಾದವನೇ, ಅಷ್ಟಾವರಣ, ಪಂಚಾಚಾರ, ಷಟ್ಸ್ಥಲ ತತ್ತ್ವವನ್ನು ಆಚರಿಸುವವನೇ ವೀರಶೈವನೆನಿಸುತ್ತಾನೆ.*೧ ಶಿವದೀಕ್ಷೆಯು ವೀರಶೈವರ ದಶಕರ್ಮಗಳಲ್ಲಿ ಬಹು ಮುಖ್ಯವಾದ ಸಂಸ್ಕಾರವಾಗಿದೆ.

> ಬ್ರಹ್ಮೇತಿ ಲಿಂಗಮಾಖ್ಯಾತಂ ಬ್ರಹ್ಮಣಃ ಪತಿರೀಶ್ವರಃ॥
> ಪವಿತ್ರಂ ತದ್ಧಿ ವಿಖ್ಯಾತಂ ತತ್ಸಂಪರ್ಕಾತ್ತನುಶ್ಶುಚಿಃ।
> ಲಯಂ ಗಚ್ಛತಿ ಯತ್ರೈವ ಜಗದೇತಚ್ಚರಾಚರಂ।
> ಪುನಃಪುನಃ ಸಮುತ್ಪತ್ತಿಃ ತಲ್ಲಿಂಗಂ ಬ್ರಹ್ಮಶಾಶ್ವತಂ।
> ಲಿಂಗಂತು ತ್ರಿವಿಧಂ, ಪ್ರೋಕ್ತಂ ಸ್ಥೂಲಂ ಸೂಕ್ಷ್ಮಂ ಪರಾತ್ಪರಂ।
> ಇಷ್ಟಲಿಂಗಮಿದಂ ಸ್ಥೂಲಂ ಯದ್ಬಾಹ್ಯೇಧಾರ್ಯತೇತನೌ॥
> (ಸಿದ್ಧಾಂತ ಶಿಖಾಮಣಿಃ, ಲಿಂಗಧಾರಣ ಸ್ಥಲ)

ಮೇಲಿನ ಶ್ಲೋಕಗಳಲ್ಲಿ ಇಷ್ಟಲಿಂಗವು ಪರಬ್ರಹ್ಮರೂಪವೆಂದೂ ಅದು ಉಪಾಸನೆಗಾಗಿ, ಸ್ಥೂಲ, ಸೂಕ್ಷ್ಮ, ಕಾರಣ ದೇಹಗಳಲ್ಲಿ ಇಷ್ಟ, ಪ್ರಾಣ, ಭಾವ

---

* ಕನ್ನಡನಾಡು ಮತ್ತು ತಮಿಳುನಾಡಿನಲ್ಲಿ ಲಿಂಗಧಾರಿಗಳಾದರೂ ಲಿಂಗವಂತರಲ್ಲದ ಹಲವು ಜನರಿದ್ದಾರೆ. ಅವರಲ್ಲಿ ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಗಳ ಅನುಸಂಧಾನವಿಲ್ಲ, ಶಿವದೀಕ್ಷೆಯಿಲ್ಲ, ಆಹಾರ ವ್ಯವಹಾರಗಳಲ್ಲಿಯೂ ವ್ಯತ್ಯಾಸವಿದೆ. ಕೆಲವರು ಲಿಂಗ, ಜನಿವಾರ, ಎರಡೂ ಹಾಕಿದ್ದಾರೆ, ಎಂಬುದು ಗಮನಾರ್ಹ. (ನಂ)

೧* ವೀರಶೈವನಿಗೆ ಅಷ್ಟಾವರಣವೇ ಅಂಗ, ಪಂಚಾಚಾರವೇ ಪ್ರಾಣ, ಷಟ್ಸ್ಥಲವೇ ಆತ್ಮ ಎಂದು ಅನುಭವಿಗಳಿಂದ ಹೇಳಲಾಗಿದೆ.

ಲಿಂಗವೆನಿಸಿ ಪೂಜೆಗೊಳ್ಳುವುದೆಂದೂ ಹೇಳಲಾಗಿದೆ. ಇಂತಹ ಮನೋನಿಗ್ರಹಕ್ಕೆ ಯೋಗಸಿದ್ಧಿಗೆ ಇದು ಸಾಧನವೆನಿಸಿದೆ. ಲಿಂಗವು ಅದ್ಯಂತರಹಿತನಾದ ಸಚ್ಚಿದಾನಂದ ರೂಪಿಯಾದ ಪರಬ್ರಹ್ಮನ ಸಂಕೇತವಾಗಿದೆ. ಸಾಕಾರ, ನಿರಾಕಾರ ಈ ರೂಪಗಳ ಸಂಕೇತವೂ ಆಗಿದೆ. ಪರಬ್ರಹ್ಮರೂಪವಾದ ಇಷ್ಟಲಿಂಗವನ್ನು ಭಕ್ತನ ಅಂಗದಲ್ಲಿ ನೆಲೆಗೊಳಿಸಿ, ಸ್ಥೂಲ, ಸೂಕ್ಷ್ಮ, ಕಾರಣ ದೇಹಗಳಲ್ಲಿ ಅಂದರೆ, ತ್ಯಾಗಾಂಗ, ಭೋಗಾಂಗ, ಯೋಗಾಂಗಗಳಲ್ಲಿ, ಇಷ್ಟಪ್ರಾಣ, ಭಾವಲಿಂಗ ರೂಪದಿಂದ ಪೂಜೆ ಗೊಂಬಂತೆ ಮಾಡುವ ಸಂಸ್ಕಾರವೇ ಶಿವದೀಕ್ಷೆಯು. ಇದು ವೇಧಾ, ಮನು, ಕ್ರಿಯಾ ಎಂಬ ಮೂರು ವಿಧದಿಂದಿರುವುದು. ಜೀವನದಲ್ಲಿರುವ, ಆಣವ, ಮಾಯಾ, ಕಾರ್ಮಿಕ ಎಂಬ ಮಲತ್ರಯಗಳನ್ನು ಕಳೆದು, ಜೀವನನ್ನು ದೇವನನ್ನಾಗಿ ಮಾಡುವುದು ಅಂದರೆ, ವೀರಶೈವ ಪರಿಭಾಷೆಯಲ್ಲಿ ಹೇಳಬೇಕೆಂದರೆ ಅಂಗನನ್ನು ಲಿಂಗನನ್ನಾಗಿ ಮಾಡುವುದಕ್ಕೆ ಶಿವದೀಕ್ಷೆಯು ಸಾಧನವೆನಿಸುವುದು.

ದೀಯತೇ ಕರ್ಮಸಂಬಂಧಃ ಕ್ಷೀಯತೇಚ ಮಲತ್ರಯಂ ।
ದೀಯತೇ ಕ್ಷೀಯತೇ ಯೇನ ಸಾದೀಕ್ಷೇತಿ ನಿಗದ್ಯತೇ ॥

—ದೀಕ್ಷಾ ಬೋಧೆ

ಶಿವಾರ್ಚನಾದಿ ಕರ್ಮಗಳಿಗೆ ಅಧಿಕಾರವನ್ನು ಕೊಡುವುದು, ಮತ್ತು ಆಣವಾದಿ ಮಲಗಳನ್ನು ಕಳೆಯುತಕ್ಕದು ಶಿವದೀಕ್ಷೆಯು.

ಯಥಾ ಮೃಗಪತಿಂ ದೃಷ್ಟ್ವಾವಧಾಭೀತೋಽವನೇಗಜಃ ।
ಅದೀಕ್ಷಿತೋಽರ್ಚಯಾಲ್ಲಿಂಗಾತ್ ತಥಾ ಭೀತೋ ಮಹೇಶ್ವರಃ ॥

—ದೀಕ್ಷಾಬೋಧೆ

ಅಡವಿಯಲ್ಲಿ ಸಿಂಹವನ್ನು ಕಂಡ ಆನೆಯು ಓಡಿಹೋಗುವಂತೆ ಶಿವದೀಕ್ಷಾರಹಿತನು ಮಾಡುವ ಪೂಜೆಯಲ್ಲಿ ಶಿವಚೈತನ್ಯವು ಇರುವುದಿಲ್ಲ–ಎಂದು ಶಿವಾಗಮಗಳಲ್ಲಿ ಹೇಳಿದೆ. ಆದುದರಿಂದ ಶಿವದೀಕ್ಷೆಯು ವೀರಶೈವರಿಗೆ ಅತಿಮುಖ್ಯವೆನಿಸಿದೆ. ಶಿವದೀಕ್ಷೆಯಿಲ್ಲದವನಿಗೆ ಶಿವಪೂಜಾಧಿಕಾರವಿಲ್ಲ. ಅಂಥವನು ಮಾಡುವ ಪೂಜೆಯು ಫಲಪ್ರದವಲ್ಲ. ಈಗ ಲಿಂಗವಂತ ಸಮಾಜದಲ್ಲಿ ಶಿವದೀಕ್ಷೆ ಕಡ್ಡಾಯವಿಲ್ಲದಿರುವುದೇ ಎಲ್ಲ ಅನರ್ಥದ ಮೂಲವೆನಿಸಿದೆ. ಮತಸಂಸ್ಕಾರವು ಸಮಾಜದಲ್ಲಿ ಪರಂಪರಾಗತವಾಗಿ ಬರದಿರಲು ಕಾರಣವೆನಿಸಿದೆ.

## ಲಿಂಗಧಾರಣವು ಅತಿ ಪ್ರಾಚೀನವಾದುದು

ವೀರಶೈವ ಗ್ರಂಥಕಾರರು ಲಿಂಗಧಾರಣವು ಪ್ರಾಚೀನವೆಂದೂ, ವಿಷ್ಣುಬ್ರಹ್ಮಾದಿಗಳು ಕೂಡಾ ಲಿಂಗಧಾರಿಗಳೆಂದೂ ಹೇಳಿರುವರು. ಭಾರತದಲ್ಲಿ ಪ್ರಖ್ಯಾತ ಕ್ಷೇತ್ರಗಳಾದ ಅನಂತಶಯನದ ಪದ್ಮನಾಭ, ಪಂಡರಾಪುರದ ವಿಠಲ, ಕೊಲ್ಲಾಪುರದ ಲಕ್ಷ್ಮೀ

ದೇವಿ, ತುಳಜಾಪುರದ ಭವಾನಿ, ಕೊಲ್ಲೂರಿನ ಮೂಕಾಂಬಿಕೆ, ಬೆಂಗಳೂರು ಗವಿಪುರದ ವೀರಭದ್ರಸನ್ನಿಧಿಯಲ್ಲಿರುವಮಾರುತಿ ಮೊದಲಾದ ವಿಗ್ರಹಗಳ ತಲೆಯಲ್ಲಿ ಶಿವ ಲಿಂಗದ ಲಾಂಛನವಿರುವುದನ್ನು ನಾವು ಇಂದಿಗೂ ಕಾಣಬಹುದು. ಪದ್ಮನಾಭನ ಹಸ್ತದಲ್ಲಿ ಶಿವಲಿಂಗ ಲಾಂಛನವಿರುತ್ತದೆ. ಮಿಕ್ಕ ವಿಗ್ರಹಗಳ ತಲೆಯಲ್ಲಿ ಶಿವಲಿಂಗ ಇದೆ. ಈ ಮಾತಿಗೆ ಪೋಷಕವಾಗಿ :

ಬ್ರಹ್ಮ ವಿಷ್ಣ್ವಾದಯೋ ದೇವಾಃಮುನಯೋ ಗೌತಮಾದಯಃ ।
ಧಾರಯಂತಿ ಸದಾ ಲಿಂಗಂ ಉತ್ತಮಾಂಗೇ ವಿಶೇಷತಃ ॥
ಲಕ್ಷ್ಮ್ಯಾದಿ ಶಕ್ತಯಸ್ಸರ್ವಾಃ ಶಿವಭಕ್ತಿ ವಿಭಾವಿತಾಃ ।
ಧಾರಯಂತ್ಯಳಿಕಾಗ್ರೇಷು ಶಿವಲಿಂಗ ಮಹರ್ನಿಶಂ ॥
ವೇದ ಶಾಸ್ತ್ರ ಪುರಾಣೇಷು ಕಾಮಿಕಾದ್ಯಾಗಮೇಷುಚ ।
ಲಿಂಗಧಾರಣಮಾಖ್ಯಾತಂ ವೀರಶೈವಸ್ಯ ನಿಶ್ಚಯಾತ್ ॥

(ಸಿದ್ಧಾಂತ ಶಿಖಾಮಣಿಃ ಪರಿಚ್ಛೇದ-೯)

ಬ್ರಹ್ಮವಿಷ್ಣುಸುರೇಶಾದಿ ದೇವತಾಃ ಪರಯಾ ಮುದಾ ।
ಧಾರಯಂತ್ಯಳಿಕಾಗ್ರೇಷು ಶಿವಲಿಂಗಂತು ಸುಂದರಂ ॥

(ಪಂಡಿತಾರಾಧ್ಯಚರಿತಂ, ದೀಕ್ಷಾಪ್ರಕರಣಂ)

ಶ್ರೀ ನಂದೀಶ್ವರ ಭೃಂಗಿ ವೀರವೃಷಭಸ್ಕಂದಾಸ್ತಥಾ ಶೈಲಜಾ ।
ಸ್ವೂರ್ಜದ್ದಾರುಕ ರೇಣುಕಾದಿ ಗಣಕಾಃ ಸಾನಂದ ಕುಂಭೋದ್ಭವೌ ।
ಪೂರ್ಣಾನಂದ ಭೃಗೂಪಮನ್ಯು ಕಣಭೃಗ್ ಭ್ರಾಜದ್ದಧೀಚ್ಯಾದಯೋ ।
ಜ್ಞೇಯಾ ಸುಸ್ಫುಟ ವೀರಶೈವ ನಿಯತಾಃ ಪ್ರಾಂಚಃಪರಂ ಪಂಡಿತಾಃ ॥

(ಭಕ್ತಾದಿತ್ಯರತ್ನಾವಳಿಃ೧)

ಈ ಮೇಲೆ ಕಂಡ ಪ್ರಮಾಣಗಳು ಲಿಂಗಧಾರಣವು ಅತಿ ಪ್ರಾಚೀನವೆಂಬುದಕ್ಕೆ ನಿದರ್ಶನವಾಗಿವೆ. ವಿಷ್ಣು, ಬ್ರಹ್ಮಾದಿ ದೇವತೆಗಳೂ, ದಧೀಚಿ, ಭೃಗು ಮೊದಲಾದ ಮಹರ್ಷಿಗಳೂ, ನಂದಿ, ವೃಷಭಾದಿಪ್ರಮಥರೂ ಪ್ರಾಚೀನಕಾಲದ ಲಿಂಗವಂತರೆಂದು ಮೇಲಿನ ಉಲ್ಲೇಖಗಳು ನಿರೂಪಿಸುವುವು.

ಉಪನಯನವು ಬ್ರಾಹ್ಮಣಾದಿಗಳಿಗೆ ದ್ವಿಜತ್ವವನ್ನು ಕೊಡುವಂತೆ, ಶಿವ ದೀಕ್ಷೆಯು ವೀರಶೈವರಿಗೆ ಲಿಂಗಾರ್ಚನಾದಿ ಮೋಕ್ಷಾಧಿಕಾರವನ್ನು ಕೊಡುತ್ತದೆಂದು ಧರ್ಮಗ್ರಂಥಗಳಲ್ಲಿ ಹೇಳಲಾಗಿದೆ. * ವೇದವ್ಯಾಸನ ವೇದಾಂತ ಸೂತ್ರಗಳ ಮೇಲೆ, ವೀರಶೈವ ಮತಪರವಾಗಿ ಭಾಷ್ಯವನ್ನು ಬರೆದಿರುವ ಆಚಾರ್ಯ ಶ್ರೀಪತಿ ಪಂಡಿತನು

---

* ಜನ್ಮನಾ ಜಾಯತೇ ಶೂದ್ರಃ ಕರ್ಮಣಾದ್ವಿಜ ಉಚ್ಯತೇ–ಮಹಾಭಾರತ

ಬ್ರಹ್ಮವಿಷ್ಣ್ವಾದಿ ದೇವಾಂಶ್ಚ ಮುನಯೋ ಗೌತಮಾದಯಃ ।
ಧಾರಯಂತಿ ಸದಾಲಿಂಗಂ ಉತ್ತಮಾಂಗೇ ವಿಶೇಷತಃ ॥
ಉರಸ್ಥಲೇ ಹರಿರ್ಲಿಂಗಂ ಧೃತ್ವಾಮೂರ್ಧ್ನಿಪಿತಾಮಹಃ ।
ಲಿಂಗಸ್ಥಂ ಮಾಂ ಸಮಾರಾಧ್ಯ ಸ್ವಂಸ್ವಂಪದಮವಾಪತುಃ ॥

(ಶ್ರೀಕರಭಾಷ್ಯ, ಪುಟ ೨೫, ಕಾಶೀನಾಥ ಗ್ರಂಥಮಾಲಾ, ಮೈಸೂರು)

ಭಾಷ್ಯಕಾರನು ಉದಾಹರಿಸಿರುವ ಮೇಲಿನ ಶ್ಲೋಕಗಳು, ಕ್ರಮವಾಗಿ, ಲಿಂಗ ಪುರಾಣ, ಸ್ಕಾಂದಪುರಾಣಗಳಿಂದ ತೆಗೆದುಕೊಂಡವು ಎಂದು ಹೇಳಲಾಗಿದೆ. 'ಬ್ರಹ್ಮಾದೀನಾಂಶಿವಲಿಂಗಾದಿ ಧಾರಣ ದರ್ಶನಾತ್ ಲೋಕೇ ಅನಂತ ಪದ್ಮನಾಭ ವಿಠಲೇಶ್ವರಾದಿ ಕ್ಷೇತ್ರೇಷು ನಾರಾಯಣ ಸ್ವಾಮಿ ಪಾಣಿಶಿರೋದೇಶೇಷು ಪ್ರತ್ಯಕ್ಷ ಶಿವಲಿಂಗ ಧಾರಣ ದರ್ಶನಾಚ್ಚ ನ ಸಂದೇಹ ಕಲಂಕ ಪ್ರಸಂಗಃ " ಎಂದು ಅದೇ ಸನ್ನಿವೇಶದಲ್ಲಿ ಹೇಳಿರುತ್ತಾನೆ. ಶ್ರೀಪತಿ ಪಂಡಿತನು ಹೇಳಿರುವಂತೆ ತಿರುವಾಂಕೂರಿನ ಅನಂತ ಪದ್ಮನಾಭನ ಹಸ್ತದಲ್ಲಿ ಪಂಡರಾಪುರದ ವಿಠಲನ ತಲೆಯಲ್ಲಿರುವ ಶಿವಲಿಂಗ ಲಾಂಛನವನ್ನು ಈಗಲೂ ನಾವು ನೋಡಬಹುದು. ಅದರಂತೆಯೇ ಕೊಲ್ಹಾಪುರದ ಲಕ್ಷ್ಮೀದೇವಿ ತುಳಜಾಪುರದ ಭವಾನೀದೇವಿಯರ ತಲೆಯಲ್ಲಿಯೂ ಶಿವಲಿಂಗ ಲಾಂಛನವಿರುವುದನ್ನು ಈ ಮೊದಲೇ ತಿಳಿಸಿದ್ದೇವೆ. ಹಾಗೂ ಅವನ್ನು ನಾವು ಕಣ್ಣಾರೆ ನೋಡಿದ್ದೇವೆ. ಇದು ಲಿಂಗಧಾರಣದ ಪ್ರಾಚೀನತೆಗೆ ಸುಸ್ಪಷ್ಟವಾದ ನಿದರ್ಶನವೆನಿಸಿದೆ.

**ದಶಕರ್ಮಗಳು** :–ವೈದಿಕಮತೀಯರಲ್ಲಿ ಷೋಡಶಕರ್ಮಗಳಿರುವಂತೆ ಆಗಮ ಪ್ರಧಾನರಾದ ವೀರಶೈವರಿಗೆ ದಶಸಂಸ್ಕಾರಗಳನ್ನು ಮಾತ್ರ ಹೇಳಲಾಗಿದೆ. ಗರ್ಭಾದಾನ, ಪುಂಸವನ. ಸೀಮಂತ, ಜಾತಕರ್ಮ (ಲಿಂಗಧಾರಣ) ನಾಮಕರಣ, ಅನ್ನಪ್ರಾಶನ, ಉಪನಿಷಕ್ರಮಣ, ಚೌಲ, ಶಿವದೀಕ್ಷೆ, ವಿವಾಹ ಎಂಬಿವು ಆ ದಶಸಂಸ್ಕಾರಗಳು. ಇವುಗಳ ವಿವರವನ್ನು ತಿಳಿಸಲು, ವಿವಾಹ ವಿಧಿ, ದೀಕ್ಷಾವಿಧಿ, ಮೊದಲಾದ ದಶಕರ್ಮವಿಧಿಗಳು ಪ್ರಾಚೀನರಿಂದ ನಿರೂಪಿತವಾಗಿವೆ. ಹಾಗೂ ಸಮಾಜದಲ್ಲಿ ಬಳಕೆಯಲ್ಲಿವೆ.

ವಿಶ್ವದ ಎಲ್ಲ ಸಿದ್ಧಾಂತಗಳೂ ಮುಖ್ಯವಾಗಿ ದೇವರು, ಜೀವರು. ಪ್ರಕೃತಿ ಈ ಮೂರು ವಿಷಯಗಳನ್ನು ನಿರೂಪಿಸುತ್ತವೆ. ಈ ದೃಷ್ಟಿಯಿಂದ ವೀರಶೈವ ಸಿದ್ಧಾಂತವನ್ನು ನಾವು ಪರಿಶೀಲಿಸಬಹುದು.

**ದೇವರು**: ವೀರಶೈವರಲ್ಲಿ 'ಏಕಂಸತ್ ವಿಪ್ರಾ ಬಹುಧಾ ವದಂತಿ' ಎಂಬ ವೇದ ವಾಕ್ಯದಂತೆ 'ದೇವರು ಒಬ್ಬನೇ. ಆತನು ಲಿಂಗರೂಪನು, ಅವನನ್ನು ಶಿವನೆಂದೂ. ಶಕ್ತಿವಿಶಿಷ್ಟನೆಂದೂ ಕರೆದಿದ್ದಾರೆ. ಹೂ ಮತ್ತು ವಾಸನೆ, ವಾಕ್ ಮತ್ತು ಅರ್ಥ. ರತ್ನ ಮತ್ತು ಕಾಂತಿಗಳಂತೆ. ಶಿವನು ಶಕ್ತಿ ವಿಶಿಷ್ಟನಾಗಿ ಅದ್ವೈತರೂಪನಾಗಿ

ದ್ದಾನೆ. ಶ್ರೀ ಬಸವೇಶ್ವರನು "ಇಬ್ಬರು ಮೂವರು ದೇವರೆಂದು ಉಬ್ಬುಬ್ಬಿ ಮಾತನಾಡಬೇಡ. ದೇವನೊಬ್ಬನೇ ಕಾಣಿರೋ. ಇಬ್ಬರೆಂಬುದು ಹುಸಿ. ಕೂಡಲ ಸಂಗಮದೇವನೊಬ್ಬನಲ್ಲದಿಲ್ಲವೆಂದಿತ್ತು ವೇದ. ದೇವನೊಬ್ಬ ನಾಮ ಹಲವು" ಎಂದು ಹೇಳಿದ್ದಾನೆ. ವೀರಶೈವರು ಪೂಜಿಸುವ ಇಷ್ಟ ಪ್ರಾಣ ಭಾವ ರೂಪವಾದ ಶಿವಲಿಂಗವು ಸಚ್ಚಿದಾನಂದ ರೂಪವಾದುದು. 'ಸಹಸ್ರಾಕ್ಷಸ್ಸಹಸ್ರಪಾತ್' ಎಂಬ ಶ್ರುತಿ ವಾಕ್ಯಗಳಿಗೆ ಅನುಗುಣವಾದುದು. ದಿಕ್ಕಾಲಾದ್ಯನವಚ್ಛಿನ್ನಾನಂತ ರೂಪವಾದುದು, ವಿಷ್ಣು ಬ್ರಹ ರುದ್ರರೆಂಬ ತ್ರಿಮೂರ್ತಿಗಳನ್ನೂ ಒಳಗೊಂಡುದು ಇತ್ಯಾದಿಯಾಗಿ ಶಾಸ್ತ್ರಕಾರರೂ ವಚನಕಾರರೂ ಹೇಳಿರುತ್ತಾರೆ. ವಿಜ್ಞಾನಿಗಳು ವಿಶ್ವದ ಮೂಲ Matter and Energy ಎಂದು ಹೇಳುವುದನ್ನೇ ಶಿವಶರಣರು 'ಶಿವ ಮತ್ತು ಶಕ್ತಿ ಎಂದು ಹೇಳುತ್ತಾರೆ' ವೇದಾಂತಗಳು ಇದನ್ನು ಬ್ರಹ್ಮ ಮತ್ತು ಮಾಯಾ ಎನ್ನುತ್ತಾರೆ.

ಪರಮೇಶ್ವರನನ್ನು ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗ ರೂಪದಿಂದ ಲಿಂಗವಂತರು ಪೂಜಿಸುತ್ತಾರೆ. ಇಷ್ಟಲಿಂಗ ಮೂಲದಿಂದ ಪ್ರಾಣಲಿಂಗ ಭಾವಲಿಂಗಗಳ ಪೂಜೆಯನ್ನು ನಡೆಸುತ್ತಾರೆ. ಆದರೆ ಮೂರ್ತಿ ಪೂಜೆಯನ್ನು ಲಿಂಗವಂತರು ಮಾಡುವುದಿಲ್ಲ. ಶಿವಯೋಗಿಗಳ ತಪೋಭೂಮಿಯಲ್ಲಿರುವ ಲಿಂಗದೇವರುಗಳನ್ನಲ್ಲದೆ ಮತ್ತುಳಿದ ತೀರ್ಥಕ್ಷೇತ್ರಗಳನ್ನು ವೀರಶೈವರು ಬಯಸುವುದಿಲ್ಲ. ಇಂತಹ ನಿಷ್ಠೆಯನ್ನು ವೀರವ್ರತ ಎಂದು ಕರೆಯಲಾಗಿದೆ. ಶಿವಭಕ್ತನು ಸರ್ವೋತ್ತಮವಾದ ಶಿವರೂಪವಾದ ಲಿಂಗದಲ್ಲಿ ನಿಷ್ಠೆಯುಳ್ಳವನಾಗಿ 'ಶರಣಸತಿ ಲಿಂಗಪತಿ' ಎಂಬ ರೀತಿಯಿಂದ ಅನು ಸಂಧಾನ ಮಾಡಬೇಕು. (ಶತಕತ್ರಯ, ಶಿವಾಧವ ಶತಕ, ೮೦). ಇದನ್ನೇ 'ಶರಣಸತಿ ಲಿಂಗಪತಿ' ನ್ಯಾಯ ಎನ್ನುತ್ತಾರೆ. ಒಟ್ಟಿನಲ್ಲಿ ಲಿಂಗವಂತರು ಏಕೇಶ್ವರವಾದಿಗಳು. ಆಸ್ತಿಕ್ಯ ಬುದ್ಧಿಯುಳ್ಳವರು. ಪರಬ್ರಹ್ಮರೂಪಿ ಶಿವಲಿಂಗದಲ್ಲಿ ನಿಷ್ಠೆಯುಳ್ಳವರು ಹಾಗೂ ಆದಿಬ್ರಹ್ಮರೂಪಿ ಮಹಾ ಲಿಂಗದಲ್ಲಿ ನಿಕಟ ಬಾಂಧವ್ಯವುಳ್ಳವರು.

**ಪ್ರಕೃತಿ** :–ಪರಮೇಶ್ವರನಿಂದ ನಿರ್ಮಿತವಾದ ಈ ಜಗತ್ತು ಶಾಶ್ವತವೆಂದೂ, ವಿಶ್ವವು ಪರಿವರ್ತನಾತ್ಮಕವೆಂದೂ ವೀರಶೈವರು ನಂಬುತ್ತಾರೆ. ಅದ್ವೈತಿಗಳು ಜಗತ್ತು ಸುಳ್ಳೆಂದೂ ವಿಶಿಷ್ಟಾದ್ವೈತಿಗಳು ಮತ್ತು ದ್ವೈತಿಗಳು ಜಗತ್ತು ನಿಜವೆಂದೂ ವಾದಿಸಿದ್ದಾರೆ. ನಿರಾಶಾವಾದದ ಬೌದ್ಧಧರ್ಮದಲ್ಲಿ ಕೂಡ ಜಗತ್ತು ಸತ್ಯವೆಂದೇ ತಿಳಿಯಲಾಗಿದೆ. ಜೈನರು ಕೂಡ ಜಗತ್ತು ಸತ್ಯವೆನ್ನುತ್ತಾರೆ. ಸಂಸಾರವು ಸುಖಮಯವೆಂದೂ. ಅದು ಜೀವನದ ಪ್ರಗತಿಗೆ ಸಾಧನವೆಂದೂ ಲಿಂಗವಂತರು ತಿಳಿಯುತ್ತಾರೆ. ಈ ಅರ್ಥದಲ್ಲಿ ಶ್ರೀ ಬಸವೇಶ್ವರನು ಹೇಳುವುದು ಗಮನಾರ್ಹ. "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ. ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ ಕೂಡಲ ಸಂಗಮದೇವ" ಎಂದು ಬಸವಣ್ಣನವರು ಹೇಳಿದ್ದಾರೆ.

ಧರ್ಮ, ಅರ್ಥ, ಕಾಮ, ಮೋಕ್ಷ ಇವು ಚತುರ್ವಿಧ ಪುರುಷಾರ್ಥಗಳು. ಸಂಸಾರವನ್ನು ಕಡೆಗಣಿಸಿದರೆ, ಅರ್ಥ, ಕಾಮಗಳ ಸಿದ್ಧಿಯಾಗುವುದೆಂತು ? ಸಂಸಾರಿಯು ಗುರು, ಲಿಂಗ, ಜಂಗಮ ಈ ತ್ರಿವಿಧ ದಾಸೋಹದಲ್ಲಿ ನಿರತನಾಗಿ, ಇವೆಲ್ಲಕ್ಕೂ ಪರಶಿವನು ಕಾರಣನು, ನಿಜವಾಗಿಯೂ ಅವನೇ ಜಗತ್ತಿಗೆ ಯಜಮಾನನು ಜೀವನದಲ್ಲಿ ತಾನು ನಿಮಿತ್ತ ಮಾತ್ರನು ಎಂದು ತಿಳಿದು 'ತೇರು ಹೊತ್ತ ಎತ್ತಿನಂತೆ' ಇದ್ದರೆ ಅವನಿಗೆ ದುಃಖ ಪ್ರಾಪ್ತಿಯಾಗದೆ ಸುಖಮಯವಾದ ಬಾಳು ನಡೆಯುತ್ತದೆ ಎಂದು ಶರಣರು ಹೇಳಿದ್ದಾರೆ. ಎಣ್ಣೆ ಮತ್ತು ಚಾಕು ನೆರವಿನಿಂದ ಹಲಸಿನ ಹಣ್ಣು ಬಿಚ್ಚುವಂತೆ, ವೈರಾಗ್ಯ ಮತ್ತು ವಿವೇಕಗಳ ಸಹಾಯದಿಂದ ಸಂಸಾರವನ್ನು ನಿರ್ವಹಿಸಬೇಕು. ಸಂಸಾರವೆಂಬ ಹಲಸಿನ ಹಣ್ಣಿನಲ್ಲಿರುವ ಅಹಂಕಾರವೆಂಬ ಮುಳ್ಳು, ಮಮಕಾರವೆಂಬ ಅಂಟು ಇವುಗಳ ಹಿಂಸೆಯನ್ನು ಪರಿಹರಿಸಿಕೊಳ್ಳಬೇಕು ಎಂದು ಶಿವಶರಣರು ಹೇಳುತ್ತಾರೆ.

ನೀರಿನಲ್ಲಿ ಹಾಕಿದ ಸಕ್ಕರೆ ಕರಗಿ ಹೋಗುತ್ತದೆ, ಅದರ ನಿಜಸ್ವರೂಪ ಅಳಿಯುತ್ತದೆ. ಆದರೆ ಸಕ್ಕರೆಯು ದ್ರವರೂಪದಲ್ಲಿ-ಸಿಹಿಯ ಗುಣದಲ್ಲಿ,-ನೀರಿನಲ್ಲಿರುತ್ತದೆ. ಇದರಿಂದ ಸಕ್ಕರೆ ಇಲ್ಲದಂತಾಗುವುದಿಲ್ಲ. ವಿಜ್ಞಾನಿಗಳು ಮತ್ತೆ ಸಕ್ಕರೆ ಮತ್ತು ನೀರನ್ನು ಬೇರೆ ಮಾಡಲು ಸಾಧ್ಯವಿದೆ. ಹಾಗೆಯೇ ಪ್ರಕೃತಿಯು ಪರಿವರ್ತನಾತ್ಮಕವೇ ಹೊರತು ಅಸತ್ಯವಾದುದಲ್ಲ ಎಂಬುದು ವೀರಶೈವರ ನಂಬುಗೆ. ಇದಕ್ಕೆ ಉಪನಿಷತ್ತಿನ ಬೆಂಬಲವಿದೆ. ಉಪನಿಷತ್ತು 'ಸರ್ವಂ ಖಲ್ವಿದಂ ಬ್ರಹ್ಮ. ಅಣೋರಣೀಯಾನ್ ಮಹತೋ ಮಹೀಯಾನ್' ಎಂದೂ, ಸರ್ವಾಂತರ್ಯಾಮಿಯೆಂದೂ ಪರಬ್ರಹ್ಮನನ್ನು ಕುರಿತು ಹೇಳಿದೆ. ಆದುದರಿಂದ ಸತ್ಯರೂಪನಾದ ಬ್ರಹ್ಮನಿಂದ ಕೂಡಿದ ಜಗತ್ತು ಸತ್ಯಸ್ವರೂಪವೇ ಆಗಬೇಕಾಗುತ್ತದೆ. ದೇಹವು ನಿರುಪಯೋಗವಲ್ಲ. 'ದೇವನನೊಲಿಸ ಬಂದ ಪ್ರಸಾದ ಕಾಯ.' ನಮ್ಮ ದೇಹವೇ ದೇವಾಲಯ. ಕೈಕಾಲುಗಳೇ ಕಂಭ ತೋರಣಗಳು, ಹೃದಯವೇ ಗರ್ಭಗುಡಿ. ಶಿರವೇ ಗೋಪುರ, ಒಳಗಿರುವ ಆತ್ಮನೇ ಪರಮಾತ್ಮನು ಎಂದು ಬಸವೇಶ್ವರನು ಹೇಳಿದ್ದಾನೆ.* ದೇಹದ ಸಹಾಯದಿಂದಲೇ ಕರ್ಮ, ಜ್ಞಾನ, ಭಕ್ತಿಗಳನ್ನು ಆಚರಿಸಬೇಕು. ದೇಹವಿಲ್ಲದೆ ಭೌತಿಕ ಪ್ರಪಂಚದಲ್ಲಿ ಮಾನವನು ವ್ಯವಹರಿಸುವುದೆಂತು? ಆದುದರಿಂದ ದೇಹವು ಪವಿತ್ರವಾದುದು, ದೇವಾಲಯ ರೂಪವಾದುದು ಎಂಬುದು ವೀರಶೈವರ ಸಿದ್ಧಾಂತ. ಸಂಸಾರವು ಸುಖಮಯ, ಅಹಂಕಾರ ಮಮಕಾರಗಳನ್ನಳಿದು ಶಿವಾರ್ಪಿತ ಬುದ್ಧಿಯಿಂದ ನಾವು ಸಂಸಾರ ನಿರ್ವಹಿಸಬೇಕು. ಕಾರಣರೂಪನಾದ ಪರಮೇಶ್ವರನ ಶಕ್ತಿರೂಪವಾದ ಪ್ರಪಂಚವನ್ನು ನಶ್ವರವೆನ್ನಬಾರದು. ಇದು ಜೀವನಿಗೆ ಪ್ರಯೋಗಶಾಲೆಯೆನ್ನಬೇಕು ಎಂದು ಶರಣರು ಹೇಳಿ

* ಇದರಿಂದಲೇ ಸತ್ತವರ ದೇಹವನ್ನು ಲಿಂಗವಂತರು ಸುಡುವುದಿಲ್ಲ (ಸಂ),

ದ್ದಾರೆ. ಕಾರಣರೂಪನಾದ ಪರಮೇಶ್ವರನು ಸತ್ಯರೂಪನಾದರೆ, ಅವನ ಕಾರ್ಯರೂಪಿ ಪ್ರಪಂಚವು ಅಸತ್ಯವಾಗುವುದೆಂತು? ಎಂದು ಶಿವಶರಣರು ತರ್ಕಿಸಿದ್ದಾರೆ.

'ಶರೀರ ಮಾದ್ಯಂಖಲು ಧರ್ಮ ಸಾಧನಂ' ಎಂದು ಕಾಳಿದಾಸ ಮಹಾಕವಿಯೂ (ಕುಮಾರ ಸಂಭವಂ), Your body is the living temple of God ಎಂದೊಬ್ಬ ಆಂಗ್ಲಕವಿಯೂ ಹೇಳಿರುವ ಮಾತು ಇಲ್ಲಿ ಸ್ಮರಣಾರ್ಹವಾಗಿದೆ.

**ಜೀವರು :** 'ಜೀವ' ಎಂದರೆ ಮಾನವನ ದೇಹವನ್ನು ವ್ಯಾಪಿಸಿರುವ ಶಿವ ಚೈತನ್ಯ. 'ಅಹಂ ಬ್ರಹ್ಮಾಸ್ಮಿ, ಸರ್ವಂ ಖಲ್ವಿದಂ ಬ್ರಹ್ಮ, ಸೋಽಹಂ' ಇತ್ಯಾದಿ ಉಪನಿಷದ್ವಾಕ್ಯಗಳಂತೆ 'ನಾನೇ ಬ್ರಹ್ಮನು' ಎಂಬುದು ಅದ್ವೈತ. 'ಜೀವನು ದೇವನಿಗಿಂತ ಭಿನ್ನನು, ತರತಮ ಭಾವವುಳ್ಳವನು' ಎಂಬುದು ದ್ವೈತ. 'ಜೀವನು ದೇವರ ಒಂದು ಅಂಶ-ದಾಳಿಂಬೆ ಫಲದಲ್ಲಿ ಬೀಜವು ಹಣ್ಣಿನ ಒಂದಂಶವಾಗಿರುವಂತೆ-ಜೀವನು ದೇವನ ಒಂದಂಶ' ಎಂಬುದು ವಿಶಿಷ್ಟಾದ್ವೈತ. ವೀರಶೈವವು ಶಿವಾದ್ವೈತ, ದ್ವೈತಾದ್ವೈತ ಎಂದು ಹೇಳಿರುವುದರಿಂದ ಸಾಧಕಾವಸ್ಥೆಯಲ್ಲಿ ಜೀವನು ದ್ವೈತಿಯಾಗಿ ಷಟ್ ಸ್ಥಲಗಳನ್ನು ಸಾಧಿಸಿ, ಕಡೆಗೆ ಸಿದ್ಧಾವಸ್ಥೆಯಲ್ಲಿ ಅದ್ವೈತಿಯಾಗಿ ಶಿಖಿಕರ್ಪೂರ ನ್ಯಾಯದಂತೆ ಶಿವನಲ್ಲಿ ಸೇರುವನೆಂಬುದು ವೀರಶೈವ ಸಿದ್ಧಾಂತ. ಇದರಿಂದ ಉಪನಿಷತ್ತಿನಲ್ಲಿರುವ ದ್ವೈತ ಹಾಗೂ ಅದ್ವೈತ ಮಂತ್ರಗಳ ಸಾರ್ಥಕ್ಯವೆಂದು ಶಿವಶರಣರು ತಿಳಿಯುತ್ತಾರೆ. ಕಾರಣ ಶ್ರೀಕಂಠ ಹಾಗೂ ಶ್ರೀಕರ ಭಾಷ್ಯದಲ್ಲಿ ಹೇಳುವಂತೆ ಸರ್ವಶ್ರುತಿ ಸಮನ್ವಯತ್ವವು ವೀರಶೈವಕ್ಕೆ ಲಭಿಸುತ್ತದೆ ಎಂಬುದು ಇಲ್ಲಿ ಸಮಾಧಾನದ ಸಂಗತಿ. ಉಪನಿಷದ್ರಹಸ್ಯದಲ್ಲಿಯೂ ಪ್ರೊ. ರಾನಡೆಯವರೂ ಈ ಮಾತು ಹೇಳಿದ್ದಾರೆ.

ಆಣವ. ಮಾಯಾ. ಕಾರ್ಮಿಕ ಎಂಬ ಮಲತ್ರಯಗಳಿಂದ ಆವೃತನಾದ ಜೀವನು. ವೇಧಾ, ಕ್ರಿಯಾ. ಮನು ಎಂಬ ಶಿವದೀಕ್ಷೆಯಿಂದ ಅವನ್ನು ಕಳೆದುಕೊಂಡು ತ್ರಿವಿಧಲಿಂಗ ಪೂಜೆಯಿಂದ ಕರ್ಮತ್ರಯಗಳನ್ನು (ಆಗಾಮಿ, ಸಂಚಿತ, ಪ್ರಾರಬ್ಧ) ಕಳೆದುಕೊಂಡು ಮೋಕ್ಷವನ್ನು ಪಡೆಯುವನು. ವಿಶ್ವದ ಎಲ್ಲ ನದಿಗಳೂ ಸಮುದ್ರದಲ್ಲಿ ಲೀನವಾಗುವಂತೆ, ಸೂರ್ಯಕಿರಣಗಳು ಸಂಜೆಯಲ್ಲಿ ಸೂರ್ಯನಲ್ಲಿಯೇ ಅಡಗುವಂತೆ, ಕಡೆಗಾಲದಲ್ಲಿ ಎಲ್ಲ ಜೀವಿಗಳೂ ಪರಶಿವನಲ್ಲಿ ಲೀನವಾಗುತ್ತವೆ ಎಂಬುದು ಲಿಂಗವಂತರ ನಂಬುಗೆಯಾಗಿದೆ.

**ಪುನರ್ಜನ್ಮವಿಲ್ಲ :** ತ್ರಿವಿಧ ದಾಸೋಹಿಗಳಾದ ಲಿಂಗವಂತರು ಒಂದಿನ ಜನ್ಮವನ್ನು ನಂಬಿದರೂ ಪುನರ್ಜನ್ಮವನ್ನು ಒಪ್ಪುವುದಿಲ್ಲ. 'ಏಕೇನ ಜನ್ಮನಾ ಮುಕ್ತಿಃ ವೀರಾಣಾಂತು ಮಹೇಶ್ವರೀ' ಎಂಬ ಶಿವಾಗಮ ವಾಕ್ಯದಂತೆ ಶಿವಪೂಜೆ ಮತ್ತು ಶಿವದೀಕ್ಷೆಗಳ ಪ್ರಭಾವದಿಂದ ಕರ್ಮರಹಿತರಾಗುವ ವೀರಶೈವರು ಮರಣವನ್ನು ಸ್ವಾಗತಿಸಿ ಗೌರವಿಸುವರು. 'ಮರಣವೇ ಮಹಾನವಮಿ' ಎಂಬ ಬಸವೇಶ್ವರನ ವಚನದಲ್ಲಿ ಈ ಅರ್ಥವು ತುಂಬಿದೆ. ಮರಣವು ಜೀವನಪ್ರಗತಿಗೆ ಕಾರಣವಾದುದು,

ಇದು ವೀರಶೈವ ಸಿದ್ಧಾಂತದಂತೆ ನಡೆಯುವವರಿಗೆ ಮಾತ್ರ ಅನ್ವಯಿಸುತ್ತದೆ. ಮೃತರ ದೇಹವನ್ನು ಅಲಂಕರಿಸಿ ವಾದ್ಯವೈಭವದಿಂದ ರುದ್ರಭೂಮಿಗೆ ಕೊಂಡೊಯ್ಯುವುದು ಈ ಅರ್ಥದಲ್ಲಿಯೇ. ದೇಹವನ್ನು ಶಿವಾಲಯದಂತೆ ಪವಿತ್ರವೆಂದು ಭಾವಿಸಿ ಲಿಂಗವಂತರು ಮೃತರ ದೇಹವನ್ನು ಸುಡುವುದಿಲ್ಲ, ಸಮಾಧಿ ಮಾಡುವರೆಂಬುದು ಇಲ್ಲಿ ಗಮನಾರ್ಹವಾಗಿದೆ.

**ವರ್ಣಾಶ್ರಮಗಳಿಲ್ಲ:** ವೀರಶೈವರಿಗೆ ನಾಲ್ಕು ವರ್ಣಗಳಾಗಲೀ, ನಾಲ್ಕು ಆಶ್ರಮಗಳಾಗಲಿ ಇಲ್ಲ. ಶಿವದೀಕ್ಷೆಯಿಂದ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮುಂತಾದವರ ವರ್ಣಗಳಳಿದು ಹೋಗುತ್ತವೆ. ಲಿಂಗವಂತರು ಅಪ್ರಾಕೃತರಾಗುತ್ತಾರೆ. ಅಲ್ಲದೆ ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಾಚರಣೆಗಳಿಗೆ ಅರ್ಹರಾಗಿ ಮೋಕ್ಷಾಧಿಕಾರಿಗಳಾಗುತ್ತಾರೆ.

ಶಿವಸಂಸ್ಕಾರ ಯುಕ್ತೇಷು ಜಾತಿಭೇದೋ ನವಿದ್ಯತೇ ।
ಕಾಷ್ಠೇಷು ವಹ್ನಿದಗ್ಧೇಷು ಯಥಾ ರೂಪಂ ನವಿದ್ಯತೇ ॥
ತಸ್ಮಾತ್ಸರ್ವಪ್ರಯತ್ನೇನ ಶಿವಸಂಸ್ಕಾರ ಸಂಯುತಃ ।
ಜಾತಿಭೇದಂ ನಕುರ್ವೀತ....

(ಸಿದ್ಧಾಂತ ಶಿಖಾಮಣಿ, ಪೂ.ನಿ, ಸ್ಥಳ ೪)

ಜನ್ಮನಾ ಜಾಯತೇ ಶೂದ್ರಃ ಕರ್ಮಣಾ ದ್ವಿಜ ಉಚ್ಯತೇ ।
ಇತೀಹ ಜನ್ಮನಾ ಶೂದ್ರೋದೀಕ್ಷಯಾ ಶಿವತಾಂ ವ್ರಜೇತ್ ॥
ಶಿವದೀಕ್ಷಾಭಿಜಾತಸ್ಯ ಪೂರ್ವಜಾತಿರ್ನವಿದ್ಯತೇ ।

(ಭಕ್ತಾಧಿಕ್ಯ ರತ್ನಾವಳಿ, ಪುಟ ೩೨)

ಈ ಮೇಲೆ ಕಂಡ ಶಾಸ್ತ್ರಕಾರರ ಮಾತಿನಂತೆ, ಅಗ್ನಿಯಲ್ಲಿ ಸುಟ್ಟ ಕಟ್ಟಿಗೆಗೆ ಪೂರ್ವಜಾತಿ ಇಲ್ಲದಂತೆ, ಶಿವದೀಕ್ಷೆಯಿಂದ ಪುನೀತನಾದ ಜೀವನಿಗೆ ಪೂರ್ವಜಾತಿಯಿಲ್ಲ ಎಂಬುದು ಸಿದ್ಧಾಂತವಾಗುತ್ತದೆ. ಬಸವೇಶ್ವರರು "ಪಟ್ಟವ ಕಟ್ಟಿದ ಬಳಿಕ ಗುಣಾವನರಸುವರೆ?" "ವರ್ಣಾನಾಂ ಕಿಂ ಪ್ರಯೋಜನಂ" ಎಂಬ ವಚನಗಳಲ್ಲಿ ಈ ಅರ್ಥವನ್ನು ಸ್ಪಷ್ಟಪಡಿಸಿದ್ದಾರೆ. ಜನ್ಮತಃ ಅಬ್ರಾಹ್ಮಣರಾದ ವ್ಯಾಸ, ವಾಲ್ಮೀಕಿ, ವಶಿಷ್ಠ, ಸೂತ, ವಿಶ್ವಾಮಿತ್ರ ಮೊದಲಾದವರು ಅವರವರ ತಪಸ್ಸಿನಿಂದ, ಸತ್ಕರ್ಮದಿಂದ ಬ್ರಾಹ್ಮಣರ ಮೂಲಪುರುಷರಾದುದನ್ನು ಇಲ್ಲಿ ನಾವು ಗಮನಿಸಬಹುದು,

**ಸ್ತ್ರೀ ಪುರುಷರು ಸಮಾನರು:**–ಭಾರತದಲ್ಲಿನ ಜೈನ, ವೈದಿಕ ಮತಗಳಲ್ಲಿ ಸ್ತ್ರೀಯರಿಗೆ ಮೋಕ್ಷಾಧಿಕಾರವಿಲ್ಲ. ಆದರೆ ವೀರಶೈವರಲ್ಲಿ ಸ್ತ್ರೀ ಪುರುಷರಿಬ್ಬರೂ ಮೋಕ್ಷಾಧಿಕಾರಿಗಳು. ಈ ಉಭಯರಿಗೂ ಲಿಂಗಧಾರಣ ಮತ್ತು ಶಿವದೀಕ್ಷೆ ಗಳುಂಟು. ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಗಳಲ್ಲಿ ತಾರತಮ್ಯ ಭಾವವಿಲ್ಲ. ಉಪನಿಷತ್ಕಾಲದಲ್ಲಿ ಹಾಗೂ ಬುದ್ಧದೇವನ ಕಾಲದಲ್ಲಿ ಸ್ತ್ರೀಯರಿಗೆ ಧಾರ್ಮಿಕ

ಸ್ವಾತಂತ್ರ್ಯವಿತ್ತು. ಅನಂತರ ಪುರಾಣ ಯುಗದಲ್ಲಿನ 'ಸ್ತ್ರೀ ಸ್ವಾತಂತ್ರ್ಯ ಮರ್ಹತಿ' ಎಂದಾಯಿತು. 'ಜಂತೂನಾಂ ನರಜನ್ಮ ದುರ್ಲಭಂ,–ಅತಃ ಪುಂಸ್ತ್ವಂ' ಎಂದು ಶ್ರೀ ಶಂಕರಾಚಾರ್ಯರು ವಿವೇಕ ಚೂಡಾಮಣಿಯಲ್ಲಿ ಹೇಳಿದ್ದಾರೆ. (ಶ್ಲೋಕ–೨) ಆಚಾರ್ಯರ ಅಂಬೋಣದಲ್ಲಿ ಸ್ತ್ರೀ–ಪುರುಷರ ತರತಮ ಭಾವಕ್ಕೆ ಇದು ಸಾಕ್ಷಿಯಾಗಿದೆ. ಆದರೆ ವೀರಶೈವಾಚಾರ್ಯರು ಸ್ತ್ರೀ–ಪುರುಷರಿಬ್ಬರೂ ಮನುಷ್ಯತ್ವದಲ್ಲಿ ಸಮಾನರೆಂದು ತಿಳಿದು ಅವರಿಗೆ ಸಮಾನಾಧಿಕಾರ ಕೊಟ್ಟಿದ್ದಾರೆ. ಬಸವೇಶ್ವರನಂತೆಯೇ ಅಕ್ಕಮಹಾದೇವಿಯು ಕೂಡ ಅನುಭವ ಮಂಟಪದಲ್ಲಿ ಸಮಾನ ಮನ್ನಣೆ ಪಡೆದುದನ್ನು ಇಲ್ಲಿ ನಾವು ಗಮನಿಸಬಹುದು. ವೀರಶೈವ ಧರ್ಮದ ಹೃದಯವೆನಿಸಿದ ಕಲ್ಯಾಣದ ಅನುಭವ ಮಂಟಪದಲ್ಲಿ (ಕ್ರಿ. ಶ. ೧೧೬೨–೧೧೬೭) ಅಲ್ಲಮ, ಸಂಗನಬಸವ, ಚೆನ್ನಬಸವ, ಮೋಳಿಗೆ ಮಾರಯ್ಯ, ಮಾಚಿದೇವ, ರುದ್ರಮುನಿ, ಸಿದ್ಧರಾಮ ಇವರಿಗೆ ಸರಿಸಮರಾಗಿ ಅಕ್ಕನಾಗಮ್ಮ, ನೀಲಾಂಬಿಕೆ, ರೇಮವ್ವೆ, ಸತ್ಯಕ್ಕ, ಅಕ್ಕಮ್ಮ, ಲಿಂಗಮ್ಮ, ರಾಣಿ ಮಹಾದೇವಿ ಮೊದಲಾದ ಮಹಿಳೆಯರು ವಿರಾಜಮಾನರಾದುದನ್ನು ವಚನ ಶಾಸ್ತ್ರದಿಂದ ನಾವು ಅರಿಯುತ್ತೇವೆ. ಇದು ಸ್ತ್ರೀ-ಪುರುಷರ ಸಮಾನತೆಯ ಸುಸ್ಪಷ್ಟ ನಿದರ್ಶನವಾಗಿದೆ.

## ಕರ್ಮ-ಜ್ಞಾನಗಳೆರಡೂ ಬೇಕು;

ವೈದಿಕರಲ್ಲಿ ಕರ್ಮದಿಂದಲೇ ಮೋಕ್ಷವೆಂದು ಪೂರ್ವ ಮೀಮಾಂಸಾಕಾರ ಜೈಮಿನಿಯೂ, ಜ್ಞಾನದಿಂದಲೇ ಮೋಕ್ಷವೆಂದು ಉತ್ತರ ಮೀಮಾಂಸಾಕಾರ ವೇದವ್ಯಾಸನೂ, ಅನಂತರ ಶಂಕರಾಚಾರ್ಯರೂ ವಾದಿಸಿರುತ್ತಾರೆ. ಶ್ರೀ ಶಂಕರಾಚಾರ್ಯರು 'ಚಿತ್ತಸ್ಯ ಶುದ್ಧಯೇ ಕರ್ಮ ನತುವಸ್ತೂಪಲಬ್ಧಯೇ' (ವಿವೇಕ ಚೂಡಾಮಣಿ, ಶ್ಲೋಕ ೧೧) ಎಂದು ಹೇಳಿದ್ದಾರೆ. ಆದರೆ, ವೀರಶೈವರು ಕರ್ಮ–ಜ್ಞಾನ ಇವೆರಡೂ ಸಾಧಕನಿಗೆ ಬೇಕೆನ್ನುತ್ತಾರೆ. 'ಕ್ರಿಯಾಜ್ಞಾನ ಸಮಾಯುಕ್ತಂ ವೀರಶೈವಸ್ಯಲಕ್ಷಣಂ' ಎಂದು ಶಾಸ್ತ್ರಕಾರರೂ, 'ಪರಸ್ತ್ರೀಯನು ನೋಡಬಾರದು ಎಂಬುದು ಜ್ಞಾನ, ಅದರಂತೆ ನಡೆಯುವುದು ಕ್ರಿಯೆ' ಎಂದು ಚನ್ನಬಸವೇಶ್ವರರೂ ಹೇಳಿದ್ದಾರೆ. (ಚೆ.ಬ.ವ.) ಒಂದು ಪಕ್ಷಿಯು ಎರಡು ರೆಕ್ಕೆಗಳ ಸಹಾಯದಿಂದ ತನ್ನ ಗುರಿಯನ್ನು ಸೇರುವಂತೆ ಕರ್ಮ-ಜ್ಞಾನಗಳ ಸಹಾಯದಿಂದ ಮೋಕ್ಷವು ಜೀವನಿಗೆ ಬೇಗನೆ ಸಿಗುವುದೆಂದು ಶಿವಶರಣರು ಹೇಳುತ್ತಾರೆ. ಅಲ್ಪ ಪ್ರಯತ್ನದಿಂದ ಮಿಗಿಲಾದ ಮೋಕ್ಷ ಪ್ರಾಪ್ತಿಯಾಗುವುದು ವೀರಶೈವರಲ್ಲಿ ಮಾತ್ರ ಎಂಬುದು ಗಮನಾರ್ಹವಾಗಿದೆ.

## ಭಕ್ತಿಯು ಮುಕ್ತಿಗೆ ಸಾಧನ:

ವೀರಶೈವ ಧರ್ಮದಲ್ಲಿ ಭಕ್ತಿಗೆ ಪ್ರಾಮುಖ್ಯತೆಯಿದೆ. ಬಸವೇಶ್ವರನು ದೇವರನ್ನು ಕುರಿತು "ವೇದ ಪ್ರಿಯನೂ ಅಲ್ಲ, ನಾದಪ್ರಿಯನೂ ಅಲ್ಲ, ಭಕ್ತಿಪ್ರಿಯ ನಮ್ಮ

ಕೂಡಲ ಸಂಗಮದೇವ" ಎಂದು ತನ್ನ ವಚನದಲ್ಲಿ ಹೇಳಿದ್ದಾನೆ. ಶಿವಗೀತೆಯಲ್ಲಿ "ಕೋಟಿ ಜನ್ಮಾರ್ಜಿತೈಃ ಪುಣ್ಯೈಃ ಶಿವೇಭಕ್ತಿಃ ಪ್ರಜಾಯತೇ" (ಅಧ್ಯಾಯ ೧ ಶ್ಲೋಕ ೧೬) ಎಂದು ಹೇಳಿದೆ. ಮಹಾಕವಿ ಮಗ್ಗೆ ಮಾಯಿದೇವನು ತನ್ನ ಶತಕ ತ್ರಯದಲ್ಲಿ 'ಭಕ್ತಿಯು ಮುಕ್ತಿಗೆ ಅತಿ ಸಮೀಪವೆಂದೂ, ಭಕ್ತಿ-ಮುಕ್ತಿಗಳು ಬೀಜ ವೃಕ್ಷ ನ್ಯಾಯದಂತೆ ಇವೆಯೆಂದೂ ಬಸವಾದಿ ಪ್ರಮಥರು ಅದಕ್ಕಾಗಿಯೇ ಭಕ್ತಿಯನ್ನು ಆಶ್ರಯಿಸಿದರೆಂದೂ ಹೇಳಿದ್ದಾನೆ.

"ಪಿನೆನಲುಂಟು ಭಕ್ತಿಯ ಮಹಾತ್ಮ್ಯತೆಯಂ ಶ್ರುತಿಶಾಸ್ತ್ರ ಪಂಕ್ತಿಯೊಳಗೇನ ಅಪರಾ ಎನುತ್ತಮಳ ಭಕ್ತಿಯ ವೈಭವವಂ ಪೊಗಳ್ದು ಸತ್ಕ್ರಾಸಿಸಿತಾಗಿ" ಎಂದೂ....

"ಭಕ್ತ, ಶಿವಪ್ರಸಾದ ಜನನೀಭವನಂ, ಶಿವನ ಪ್ರಸಾದವು ಆ ಭಕಿ ಗೆ ಜನ್ಮ. ಭೂಮಿ" (ಶತಕತ್ರಯ, ಶಿವಾಧವ ಶತಕಂ, ಪ. ೭-೮) ಎಂದೂ ಹೇಳುವಲ್ಲಿ ಭಕ್ತಿಯ ಮಹಿಮೆಯನ್ನು ಸ್ಪಷ್ಟಪಡಿಸಿದ್ದಾನೆ. ಷಟ್ಸ್ಥಲದಲ್ಲಿ ಭಕ್ತ, ಮಹೇಶ, ಪ್ರಸಾದಿ ಈ ಮೂರು ಸ್ಥಲಗಳು ಭಕ್ತಿ ಪ್ರಧಾನವಾಗಿವೆ. ಉಳಿದುವು ಪ್ರಾಣಲಿಂಗಿ, ಶರಣ, ಐಕ್ಯ ಜ್ಞಾನ ಪ್ರಧಾನವಾಗಿವೆ. ಆಗಮಗಳಲ್ಲಿ ಭಕ್ತಿಯು ಪಂಚಮ ಪುರುಷಾರ್ಥವೆನಿಸಿದೆ.

**ಅಹಿಂಸೆ** :–ವೀರಶೈವರಲ್ಲಿ ಅಹಿಂಸೆಯು ಮನೆಮಾಡಿಕೊಂಡಿದೆ. ಇದು ವೀರಶೈವ ಧರ್ಮದಂತೆಯೇ ಜೈನ–ಬೌದ್ಧ ಧರ್ಮಗಳಲ್ಲಿಯೂ ಪ್ರಚಲಿತವಿದೆ. ಶ್ರೀ ಬಸವೇಶ್ವರನು "ದಯೆಯಿಲ್ಲದ ಧರ್ಮವಾವುದಯ್ಯ? ದಯೆಯೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ, ದಯೆಯೇ ಧರ್ಮದ ಮೂಲವು" ಎಂದು ತನ್ನ ವಚನಗಳಲ್ಲಿ ಹೇಳಿದ್ದಾನೆ. ಶಿವಶರಣನಾದ ಸರ್ವಜ್ಞಮೂರ್ತಿಯು ತನ್ನ ತ್ರಿಪದಿಗಳಲ್ಲಿ

"ಕೊಲುವ ಧರ್ಮವನೊಯ್ದು ಒಲೆಯೊಳಗೆ ಹಾಕಲಿ ।
ಕೊಲಲಾಗದು ಎಂಬ ಜೈನರಾಮತವು ಎನ್ನ ತಲೆಯಮೇಲಿರಲಿ "

ಎಂದು ಹೇಳಿದ್ದಾನೆ. ವೀರಶೈವರು ಯಜ್ಞಯಾಗಗಳನ್ನೂ, ಪಶುಬಲಿ ಮೊದಲಾದುವುಗಳನ್ನೂ ಮಾಡುವುದಿಲ್ಲ. ಆದಕ್ಕಾಗಿ ವೇದದ ಕರ್ಮಕಾಂಡವನ್ನು ಲಿಂಗವಂತರು ಮಾನ್ಯಮಾಡುವುದಿಲ್ಲ. ವೀರಶೈವರಲ್ಲಿ ಮಾಂಸಾಹಾರ, ಮದ್ಯಪಾನಗಳು ನಿಷೇಧಿಸಲ್ಪಟ್ಟಿವೆ.. ಶ್ರೀ ಬಸವೇಶ್ವರನು 'ಕೊಲ್ಲುವವನೇ ಮಾದಿಗ, ಹೊಲಸು ತಿನ್ನುವವನೇ ಹೊಲೆಯ' ಎಂದು ಟೀಕಿಸಿದ್ದಾನೆ. ಲಿಂಗಭೋಗೋಪಭೋಗಿಯಾದ ವೀರಶೈವನು ತಾನು ಸೇವಿಸುವ ಪ್ರತಿಯೊಂದು ಪದಾರ್ಥವನ್ನೂ ಲಿಂಗಕ್ಕೆ ನೈವೇದ್ಯಮಾಡಿ ಪ್ರಸಾದ ರೂಪದಿಂದ ಸೇವಿಸಬೇಕಾಗಿರುವುದರಿಂದ ಅಪವಿತ್ರ ಪದಾರ್ಥಗಳನ್ನು ಮುಟ್ಟಬಾರದು ಎಂದು ಶಾಸ್ತ್ರಗಳು ಹೇಳಿವೆ.

**ಸಮನ್ವಯ ಯೋಗ**:– ವೀರಶೈವರು, ದ್ವೈತ- ಅದ್ವೈತ, ಕರ್ಮ ಜ್ಞಾನ, ಭಕ್ತಿಗಳನ್ನು ಸಮನ್ವಯ ಗೊಳಿಸುವುದರಿಂದ ಇದು 'ಸಮನ್ವಯಯೋಗ' ವೆನಿಸಿದೆ. ರಾಜಯೋಗ, ಹಠಯೋಗ, ಮಂತ್ರಯೋಗ, ಕರ್ಮಯೋಗಗಳನ್ನು ಮೀರಿದ ಶಿವಯೋಗವನ್ನು ವೀರಶೈವರು ಅಂಗೀಕರಿಸಿದ್ದಾರೆ. ಇದು ಶಿವಾಗಮಗಳ ಲ್ಲಿಯೂ, ಶಿವಯೋಗ ಪ್ರದೀಪಿಕೆಯಲ್ಲಿಯೂ ನಿರೂಪಿತವಾಗಿದೆ. ವೀರಶೈವರಲ್ಲಿ ಸಿದ್ಧ ರಾದವರನ್ನು ಶಿವಯೋಗಿಗಳೆನ್ನುತ್ತಾರೆ. ಹಿರಿಯರಾದವರನ್ನು ಅಣ್ಣ, ಅಕ್ಕ. ತಂದೆ' ತಾಯಿ ಎಂದು ಕರೆಯುತ್ತಾರೆ. ಉದಾಹರಣೆಗಾಗಿ ಬಸವಣ್ಣ, ಚೆನ್ನಬಸವಣ್ಣ' ಮಹದೇವಿಯಕ್ಕ ಅಕ್ಕನಾಗಮ್ಮ, ಏಕಾಂತರಾಮ ತಂದೆ ಮಾಚಿದೇವ ತಂದೆ ಇತ್ಯಾದಿ.

**ಕಾಯಕತತ್ವ** : ವೀರಶೈವವು ಕಾಯಕ ತತ್ವಕ್ಕೆ ಮನ್ನಣೆ ಇತ್ತಿದೆ. ಕಾಯಕವೇ ಕೈಲಾಸ' ಎಂದು ಶರಣರು ಹೇಳಿದ್ದಾರೆ. ಶಿವಾರ್ಪಿತ ಬುದ್ಧಿಯಿಂದ, 'ಕಾಯಕ' ಮಾಡಿದರೆ, ಸಮಾಜವೂ ದೇಶವೂ ಉನ್ನತಿ ಹೊಂದುವುದೆಂದು ಶಿವ ಶರಣರ ಮತ. ಬಸವೇಶ್ವರನು ಶ್ರೀಮಂತನಾಗಿದ್ದರೂ 'ಭವಿಬಿಜ್ಜಳನ ಪದತಳದಲ್ಲಿ ಕುಳಿತು ಸಾವಿರ ಹೊನ್ನಿಗೋಸುಗವಾಗಿ ಸೇವೆಯನು ಮಾಡುವುದು ಎನ್ನಯ ಹೊಟ್ಟೆಯ ಪಾಡಿಗಲ್ಲ, ಗುರು ಲಿಂಗ ಜಂಗಮರ ಸೇವೆಗೋಸುಗವಾಗಿ" ಎಂದು ಹೇಳಿದ್ದಾನೆ. ಶಿವಶರಣರೆಲ್ಲರೂ ಕಾಯಕ ಹಿಡಿದು ಜೀವಿಸಿದರೇ ಹೊರತು ಸೋಮಾರಿಗಳಾಗಿರಲಿಲ್ಲ. ಯಾವ ಕಾಯಕವಾಗಲಿ ಅದರಲ್ಲಿ ತರ ತಮ ಭಾವಗ ಳಿಲ್ಲವೆಂದು ಬಸವೇಶ್ವರನು ಹೇಳಿದ್ದಾನೆ. ಕಾಯಕವು ವ್ಯಕ್ತಿಯ, ಸಮಾಜದ ಹಾಗೂ ದೇಶದ ಸಂಪದಭಿವೃದ್ಧಿಗೆ ಕಾರಣವೆನಿಸುತ್ತದೆ. ಸಂಪತ್ತು ಸಮಾಜಕ್ಕೆ ಪ್ರಾಣಸ್ವರೂಪವೆನಿಸುತ್ತದೆ. 'ಸುಖಸ್ಯಮೂಲಂ ಅರ್ಥಃ, ಅರ್ಥಾಃ ಬಹಿಶ್ಚರಃ ಪ್ರಾಣಾಃ, ಎಂದು ಶಾಸ್ತ್ರಕಾರರು ಹೇಳಿದ್ದಾರೆ.'Money is God, God is in the banks, not in the tembles' ಎಂದು ಆಧುನಿಕರು ಕೂಡಾ ಹೇಳುತ್ತಿರುವುದು ಇಲ್ಲಿ ಗಮನಾರ್ಹವಾಗಿದೆ. ಕಾಯಕವು ಸಂಪದಭಿವೃದ್ಧಿಗೆ ಮಾತೃಸ್ಥಾನವೆನಿಸಿದೆ. ಸೋಮಾರಿತನವು ಬಡತನಕ್ಕೆ ಕಾರಣವಾದುದು, 'ಆರಾಂ ಹರಾಂ ಹೈ' ಎಂದು ಪಂಡಿತ ಜವಾಹರಲಾಲ್ ನೆಹರು ಹೇಳಿದ್ದಾರೆ. ಸೋಮಾರಿಯು ಶಿವದ್ರೋಹಿ (ಉಮಾಯಯಾ ಸಹಿತಃ ಸೋಮಃ, ಸೋಮಸ್ಯ ಅರಿಃ ಸೋಮಾರಿಃ) ಎಂದು ಶಿವ ಶರಣರು ಹೇಳಿದ್ದಾರೆ. ಲಿಂಗ ಪೂಜೆ ಪರಲೋಕಕ್ಕೂ ಕಾಯಕವು ಈ ಲೋಕಕ್ಕೂ ಸಾಧನ ವೆಂದು ಶರಣರು ಮನಗಂಡಿದ್ದಾರೆ.

'ಉದ್ಯೋಗಿನಂ ಪುರುಷಸಿಂಹಂ ಉಪೈತಿ ಲಕ್ಷ್ಮೀಃ' ಎಂದು ಭರ್ತೃಹರಿ ಕವಿಯು ಹೇಳಿದ್ದಾನೆ. ಸಂಪತ್ತು ಸಮಾಜವನ್ನು ಸುಭದ್ರಗೊಳಿಸುತ್ತದೆ. ಆ ಸಂಪತ್ತು ಕಾಯಕದಿಂದ ಲಭಿಸುತ್ತದೆ.

"ಆವ ಕಾಯಕವಾದಡೇನು? ಶಿವಭಕ್ತನು ಶ್ರೇಷ್ಠನು, ಶೆಟ್ಟಿಯೆಂಬೆನೆ ಸಿರಿಯಾಳನ? ಮಡಿವಳನೆಂಬೆನೆ ಮಾಚಯ್ಯನ? ಡೋಹರನೆಂಬೆನೆ ಕಕ್ಕಯ್ಯನ? ಆನು ಹಾರುವನೆಂದೊಡೆ ಕೂಡಲಸಂಗಮದೇವ ನಗುವನಯ್ಯಾ" ಎಂಬ ವಚನದಲ್ಲಿ ಶಿವಶರಣರೆಲ್ಲರೂ ಸಮಾನರು, ಕಾಯಕನಿಷ್ಠರೆಲ್ಲರೂ ಧನ್ಯರು. ಕಾಯಕದಲ್ಲಿ ತಾರತಮ್ಯ ಭಾವವಿಲ್ಲ ಎಂದು ಬಸವೇಶ್ವರನು ಹೇಳಿದ್ದಾನೆ.

**ಅನುಭವ ಪ್ರಧಾನ ಮತ**:-ವೀರಶೈವರು ವೇದಾಗಮ ಪುರಾಣಗಳನ್ನು ನಂಬಿದರೂ ಅವರು ಮುಖ್ಯವಾಗಿ ಅನುಭವ ಪ್ರಧಾನರಾದವರು.

"ವೇದವನು ಹಿರಿದೆಂದು ವಾದವನು ಮಾಡುವಿರಿ,
ವೇದದೊಳಗೇನು ಹಿರಿದುಂಟು? ಅನುಭವಿಯ ವೇದವೇ ವೇದ"

ಎಂದು ಜನಪ್ರಿಯ ರಾಷ್ಟ್ರಕವಿ ಸರ್ವಜ್ಞಮೂರ್ತಿಯು ಹೇಳಿದ್ದಾನೆ. ಶಿವಶರಣರು ೧೨ ನೆಯ ಶತಕದಲ್ಲಿ ಕಲ್ಯಾಣದಲ್ಲಿ ಅನುಭವ ಮಂಟಪವನ್ನು ಸ್ಥಾಪಿಸಿ, ಜನರ ಅನುಭವ ಜೀವನಕ್ಕೆ ಮಹತ್ವ ಕೊಟ್ಟಿರುತ್ತಾರೆ. ಶಬ್ದ ಪ್ರಮಾಣವು ಭಿನ್ನತೆಗೆ ಅವಕಾಶವೀಯುತ್ತದೆ. ಆದರೆ ಅನುಭವವು ಸದಾಕಾಲ ಏಕ ಪ್ರಕಾರವಾಗಿರುತ್ತದೆ ಎಂದು ಶರಣರು ಹೇಳಿದ್ದಾರೆ. ಗ್ರೀಸ್ ದೇಶದ ಸಾಕ್ರಟೀಸ್, ಚೀಣಾದೇಶದ ಕಾನ್‌ಪ್ಯೂಶಿಯಸ್, ಭಾರತದ ಬಸವೇಶ್ವರ ಇವರೆಲ್ಲರೂ ಸತ್ಯವನ್ನು ದೇವರೆಂದು ತಮ್ಮ ತಮ್ಮ ಅನುಭವದಿಂದ ಹೇಳಿದ್ದಾರೆ. ಆದುದರಿಂದ ಅನುಭವವು ತ್ರಿಕಾಲಾಬಾಧಿತವಾದುದು, ಅತ್ಯಂತ ಮಹತ್ವದ್ದು ಎಂಬುದು ಶರಣರ ಅಂಬೋಣವಾಗಿದೆ.

**ಪಂಚ ಸೂತಕಗಳಿಲ್ಲ–ಅಸ್ಪೃಶ್ಯತೆಯಿಲ್ಲ**:-ಶಿವದೀಕ್ಷೆಯಿಂದ ಶುದ್ಧನಾದ ವೀರಶೈವನು, ಪಂಚ ಸೂತಕಗಳನ್ನೂ* ಅಸ್ಪೃಶ್ಯತೆಯನ್ನೂ ಮನ್ನಿಸುವುದಿಲ್ಲ. ಮನುಷ್ಯನು ವಿಚಾರಪರನಾಗಬೇಕು. ಪರಮೇಶ್ವರನಿರುವ ಮಾನವನ ದೇಹವನ್ನು ಅಸ್ಪೃಶ್ಯವೆನ್ನಬಾರದೆಂದು ಶಿವಶರಣರು ವಾದಿಸಿದ್ದಾರೆ. ಅನುಭವ ಮಂಟಪದಲ್ಲಿ ಶಿವನಾಗಿಮಯ್ಯ, ಕಕ್ಕಯ್ಯ, ಹರಳಯ್ಯ ಮೊದಲಾದ ಅಂತ್ಯಜರು ಶಿವದೀಕ್ಷೆಯನ್ನು ಪಡೆದು ಸ್ಪರ್ಶಮಣಿ ಮುಟ್ಟಿದ ಕಬ್ಬಿಣ ಚಿನ್ನವಾದಂತೆ ಶರಣರಾಗಿ ಧನ್ಯರಾದರೆಂಬುದನ್ನು ನಾವು ಬಸವ ಪುರಾಣಾದಿಗಳಲ್ಲಿ ಓದಬಹುದು.

ಮಗ್ಗೆಯ ಮಾಯಿದೇವನೆಂಬ ಆಚಾರ್ಯನು 'ವೀರಶೈವರಲ್ಲಿ ಅಸ್ಪೃಶ್ಯತೆಯಿಲ್ಲ' ಎಂದು ವಾದಿಸುತ್ತಾ "ಲಿಂಗಧಾರೀ ಸದಾಶುಚಿಃ" ಎಂದು ಹೇಳುತ್ತಾನೆ.

ಶ್ವಪಚನ ದೈವದಂತರವನೊರ್ವ ವಿಚಾರಿಸೋಡೆ ಲೋಕದೊಳ್।
ಶ್ವಪಚನೆ ಬಲ್ಲಲಾಜನದ ಬುದ್ಧಿಗೆ ದೈವಮನೊಲ್ದು ಮುಟ್ಟಿದ।

---

* ಜಾತಿ, ಜನನ, ಉಚ್ಛಿಷ್ಟ, ರಜ, ಮರಣ ಇವು ಪಂಚ ಸೂತಕಗಳು (ಸಂ.)

ಲ್ಲಿ ಪರಮಶುದ್ಧತಾ ಸ್ಮರಣೆ ಇಲ್ಲದ ಶುದ್ಧ ಸಲೇಪ ಭಾವವಾ॥
ಶ್ವಪಚನ ತಟ್ಟುಮುಟ್ಟಿ ನಡೆಯಲ್ಲಿಯೆ ಬರ್ಪುದರಿಂ ಶಿವಾಧವಾ॥
(ಶತಕತ್ರಯಂ, ಶಿವಾಧವಶತಕ. ಪದ್ಯ, ೨೬)

ಮೇಲಿನ ಪದ್ಯದಲ್ಲಿ ಪಂಚಮವರ್ಣದವನು ಒಂದು ದೇವತಾ ವಿಗ್ರಹವನ್ನು ಮುಟ್ಟಿದರೆ ಅದು ಅಪವಿತ್ರವಾಗುವುದು ಎಂಬ ಕರ್ಮಭ್ರಾಂತರ ಮಾತಿನಲ್ಲಿ ದೇವತಾವಿಗ್ರಹದ ಶಕ್ತಿಗಿಂತ ಪಂಚಮನ ಅಸ್ಪೃಶ್ಯತಾ ಶಕ್ತಿ ಅಧಿಕವೆಂದು ಅರ್ಥವಾಗುವುದಿಲ್ಲವೆ? ಆದುದರಿಂದ ಈ ತರದ ಕರ್ಮಭ್ರಾಂತಿಯು ವಿವೇಕ ರಹಿತವಾದುದು. ಗಂಗೆಯಲ್ಲಿ ಸ್ನಾನಮಾಡಿದ ಪಾಪಿಗಳೆಲ್ಲರೂ ಪರಿಶುದ್ಧರಾಗುತ್ತಾರೆ. ಅದರಿಂದ ಗಂಗೆಗೆ ಅಪವಿತ್ರತೆ ಉಂಟಾಗುವುದೆ? ಸೂರ್ಯ ಕಿರಣಗಳು ಚಂಡಾಲನ ಮೇಲೆಬಿದ್ದರೆ ಸೂರ್ಯನು ಮೈಲಿಗೆಯಾಗುವನೆ? ಇಲ್ಲ. ಅದರಂತೆ ಒಬ್ಬ ಅಸ್ಪೃಶ್ಯನು ಅಥವಾ ಶೂದ್ರನು ದೇವಾಲಯವನ್ನು ಪ್ರವೇಶಿಸಿದರೆ ಆ ದೇವಾಲಯವು ಮೈಲಿಗೆಯಾಗುವುದಿಲ್ಲ, ಅದಕ್ಕೆ ಬದಲಾಗಿ ಅಲ್ಲಿಗೆ ಬಂದ ಆ ಭಕ್ತನು ಉದ್ಧಾರವಾಗುತ್ತಾನೆ ಎಂದು ಮಗ್ಗೆಯ ಮಾಯಿದೇವನು ಹೇಳಿರುವನು.

**ಹಿಂದೂಧರ್ಮದಲ್ಲಿ ವೀರಶೈವರಸ್ಥಾನ:** ವೀರಶೈವ ಮತವು ಸನಾತನವಾಗಿದ್ದು ಹಿಂದೂಧರ್ಮದ ಒಂದು ಅಂಗವಾಗಿದೆ. ವೇದಾಗಮಗಳನ್ನು ಒಪ್ಪಿಕೊಳ್ಳುವುದರಿಂದ, ದೇವರನ್ನು ಅಂಗೀಕರಿಸುವುದರಿಂದ ಇದು ಆಸ್ತಿಕ ಧರ್ಮವೆನಿಸಿದೆ. ಪರಮೇಶ್ವರನ ಉಸಿರಿನಂತಿರುವ ವೇದಗಳು, ಮಾತಿನಂತಿರುವ ಆಗಮಗಳು ಎರಡನ್ನೂ ವೀರಶೈವರು ಒಪ್ಪಿಕೊಂಡಿರುತ್ತಾರೆ. ಅಹಿಂಸಾತ್ಮಕವಾದ ಧರ್ಮವಾದುದರಿಂದ ವೀರಶೈವರಲ್ಲಿ ಯಜ್ಞಯಾಗಾದಿಗಳಿಗೂ, ಮಾಂಸ-ಮದ್ಯಗಳಿಗೂ ಸ್ಥಳವಿಲ್ಲ. ಜೈನರ ಅಹಿಂಸೆ, ಬೌದ್ಧರ ಸಮತೆ, ದ್ರಾವಿಡರ ಭಕ್ತಿ, ಆರ್ಯರ ಜ್ಞಾನ ಇವೆಲ್ಲವುಗಳನ್ನೂ ವೀರಶೈವರಲ್ಲಿ ಕಾಣಬಹುದು. ಈ ದೃಷ್ಟಿಯಿಂದ ವೀರಶೈವವು ಒಂದು ಪರಿಪೂರ್ಣ ಧರ್ಮವೆನಿಸಿದೆ. 'ವೀರಶೈವದಲ್ಲಿ ವಿಶ್ವಧರ್ಮದ ಕುರುಹುಗಳಿವೆ' ಎಂದು ಪ್ರಾಜ್ಞರು ಹೇಳಿದ್ದಾರೆ. 'ಆಸಿಂಧು ಸಿಂಧು ಪರ್ಯಂತಯಸ್ಯಭಾರತ ಭೂಮಿಕಾ। ಪಿತೃಭೂಃ ಪುಣ್ಯಭೂಶ್ಚೈವ ಸವೈ ಹಿಂದುರಿತಿ ಸ್ಮೃತಃ' ಎಂಬ ಸಾವರ್ಕರರ ಸಿದ್ಧಾಂತದಂತೆ ಹಿಂದೂ ಸ್ಥಾನವನ್ನು ಪಿತೃಭೂಮಿ ಹಾಗೂ ಪುಣ್ಯಭೂಮಿ ಎಂದು ನಂಬಿರುವ ವೀರಶೈವರು ಹಿಂದೂ ಧರ್ಮೀಯರೇ ಆಗಿದ್ದಾರೆ. ಸಿಂಹಳದಲ್ಲಿರುವ ವೀರಶೈವರಿಗೆ ಲಂಕೆಯು ಪಿತೃಭೂಮಿಯಾಗಿಯೂ ಭಾರತವು ಪುಣ್ಯಭೂಮಿಯಾಗಿಯೂ ಇದೆ.

## ವೀರಶೈವ ಮತದ ಸ್ಥಾಪಕರಾರು ?

ವೀರಶೈವ ಮತವು ಪಂಚಾಚಾರ್ಯರಿಂದ ಸ್ಥಾಪನೆಯಾಯಿತೆಂದು ಕೆಲವರೂ, ಬಸವೇಶ್ವರನ ಕಾಲದಲ್ಲಿ ರೂಪಿತವಾಯಿತೆಂದು ಮತ್ತೆ ಕೆಲವರೂ ಹೇಳುತ್ತಾರೆ.

ಆದರೆ ಇದು ಇತಿಹಾಸಕ್ಕೆ ವಿರೋಧವಾದ ಮಾತು. ಶೈವ ಸಂಸ್ಕೃತಿಯ ಮೂಲ ಪುರುಷರಾದ, ವೀರ, ನಂದಿ, ಭೃಂಗಿ, ವೃಷಭ, ಸ್ಕಂದ ಮೊದಲಾದ ಪ್ರಮಥರು, ಬಾಣನ, ಕುಂಭೋದ್ಭವ, ದಧೀಚಿ ಮೊದಲಾದ ಋಷಿಗಳು ವೀರಶೈವರೆಂದು ಪುರಾಣಗಳಲ್ಲಿ ಹೇಳಲಾಗಿದೆ. ತಮಿಳ್ನಾಡಿನಲ್ಲಿ ಪ್ರಸಿದ್ಧ ಕವಿಯಾದ ತಿರುವಳ್ಳುವರ್ (ಕ್ರಿ.ಪೂ. ೫೦೦) ವೀರಶೈವನಾಗಿದ್ದಾನೆ. ಮದರಾಸ್ ಮೈಲಾಪುರದಲ್ಲಿರುವ ಇವನ ದೇವಾಲಯದಲ್ಲಿ ಇಂದಿಗೂ ವೀರಶೈವರೇ ಅಲ್ಲಿ ಅರ್ಚಕರಾಗಿದ್ದಾರೆ. ತಿರುವಳ್ಳುವರನ ಪತ್ನಿ ವಾಸುಕಿಯ ತಲೆಯಲ್ಲಿ ಇಂದಿಗೂ ಶಿವಲಿಂಗವಿರುವುದನ್ನು ಕಾಣಬಹುದು. ಶಿವ ರಹಿತವಾದ ದಕ್ಷ ಯಾಗವನ್ನು ವೀರಭದ್ರನು ನಾಶಮಾಡಿದ ಕಥೆ ಪ್ರಸಿದ್ಧವಾಗಿದೆ. ಅದರ ಹಿಂದೆ ದೊಡ್ಡ ತತ್ತ್ವವಿದೆ. ಹಿಂಸಾತ್ಮಕವಾದ ಹಾಗೂ ಶಿವರಹಿತವಾದ ಯಜ್ಞ ಯಾಗಗಳು ಸಮಾಜಕ್ಕೆ ಹಿತಕರವಲ್ಲವೆಂದು ಅದರ ತಾತ್ಪರ್ಯ. ಅಂತಹ ಯಜ್ಞ ಯಾಗಗಳನ್ನು ನಿಗ್ರಹಿಸುವುದಕ್ಕಾಗಿಯೇ ವೀರಭದ್ರನ ಅವತಾರವಾಯಿತು. ಹೀಗೆ ವೀರಭದ್ರನು ವೀರಶೈವರ ಪರಮಾರಾಧ್ಯ ದೇವತೆಯಾದನು. ವೀರಶೈವಮತವು ಭಾರತೀಯ ದರ್ಶನಶಾಸ್ತ್ರದಲ್ಲಿ ಸುಪ್ರೌಢವೂ ಪ್ರಾಚೀನವೂ ಎನಿಸಿಕೊಂಡಿದೆ. ಶೈವ ಧರ್ಮದ ಅಂಗವಾಗಿ ಕ್ರಮ ಕ್ರಮದಿಂದ ಬೆಳೆದುಬಂದಿದೆ. ವೀರಶೈವವು-ಸನಾತನವಾದ ಹಿಂದೂಧರ್ಮದ ಸಾರ ಸರ್ವಸ್ವವೆನಿಸಿದೆ.

**ಮೂವತ್ತಾರು ತತ್ತ್ವಗಳು**: ವೀರಶೈವ ಸಿದ್ಧಾಂತದಲ್ಲಿ ೩೬ ಮೂಲ ಭೂತವಾದ ತತ್ತ್ವಗಳಿವೆ. ಇವು ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧವಿದ್ಯೆ ಮಾಯಾ, ಕಲಾ, ವಿದ್ಯಾ, ಕಾಲ, ರಾಗ, ನಿಯತಿ, ಪುರುಷ, ಪ್ರಕೃತಿ, ಅಹಂಕಾರ, ಬುದ್ಧಿ, ಮನ, ಶ್ರೋತ್ರ, ತ್ವಕ್, ಚಕ್ಷು, ಜಿಹ್ವಾ, ಘ್ರಾಣ, ವಾಕ್, ಪಾಣಿ, ಪಾದ, ಪಾಯು, ಉಪಸ್ಥ, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಆಕಾಶ, ವಾಯು, ವಹ್ನಿ, ಸಲಿಲ ಮತ್ತು ಭೂಮಿ. ಈ ಸಂದರ್ಭದಲ್ಲಿ ವೇದಾಂತಿಗಳು ೨೫ ಮೂಲಭೂತವಾದ ತತ್ತ್ವಗಳನ್ನು ಅಂಗೀಕರಿಸಿರುವುದನ್ನು ನಾವು ಕಾಣಬಹುದು. ಕಾಶ್ಮೀರ ಶೈವದಲ್ಲಿಯೂ ೩೬ ತತ್ತ್ವಗಳಿವೆ ಎಂಬುದು ಇಲ್ಲಿ ಗಮನಾರ್ಹ.

**ಸಾಧನೋಪಾಯಗಳು** :- ವೀರಶೈವ ಧರ್ಮದಲ್ಲಿ ಪ್ರತಿಯೊಬ್ಬರೂ ಚಿರ ಧ್ಯೇಯವಾದ ಮೋಕ್ಷವನ್ನು ಪಡೆಯಬೇಕೆಂದು ಹೇಳಿದ್ದಾರೆ. ಆ ಮೋಕ್ಷವನ್ನು ಪಡೆಯಬೇಕೆಂಬ ಜೀವನು, ಮೊದಲು ಶಿವದೀಕ್ಷೆಯಿಂದ ಪುನೀತನಾಗಬೇಕು. ಕ್ರಿಯಾ ಪ್ರಧಾನವಾದ ಅಷ್ಟಾವರಣ, ಜ್ಞಾನಪ್ರಧಾನವಾದ ಷಟ್ಸ್ಥಲ, ನೀತಿ ಪ್ರಧಾನವಾದ ಪಂಚಾಚಾರಗಳಿಂದ ಕೂಡಿರಬೇಕು. ವೀರಶೈವ ಶಾಸ್ತ್ರಾನುಸಾರವಾಗಿ ಈ ಸಾಧನೋಪಾಯಗಳನ್ನು ಆಚರಿಸುವವನೇ ನಿಜವಾದ ವೀರಶೈವನೆನಿಸುವನು. ಹಾಗೂ ಪುನರ್ಜನ್ಮರಹಿತವಾದ ಅನಂತಮಯವಾದ ಮೋಕ್ಷವನ್ನು ಪಡೆಯುವನು ಎಂದು ಹೇಳಲಾಗಿದೆ. ಮುಕ್ತಿಯನ್ನು ಪಡೆಯಲು ಮೆಟ್ಟಿಲಂತಿವೆ ಈ ಸಾಧನೋಪಾಯಗಳು.

**ಅಷ್ಟಾವರಣ** :–ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಭಸ್ಮ, ರುದ್ರಾಕ್ಷಿ, ಮಂತ್ರ ಎಂಬಿವು ಅಷ್ಟಾವರಣಗಳು. ವೀರಶೈವ ಭಕ್ತ ತನ್ನಲ್ಲಿರುವ ಭಕ್ತಿ, ಜ್ಞಾನ, ವೈರಾಗ್ಯ ಎಂಬ ಸಂಪತ್ತನ್ನು ಉಳಿಸಿಕೊಳ್ಳಬೇಕಾದರೆ, ಕಾಮ, ಕ್ರೋಧ, ಲೋಭ ಮೊದಲಾದ ಶತ್ರುಗಳಿಂದ ಪಾರಾಗಬೇಕಾದರೆ, ಈ ಅಷ್ಟಾವರಣವೆಂಬ ಎಂಟುಸುತ್ತಿನ ಕೋಟೆಯಲ್ಲಿರಬೇಕು. "ನಗುರೋಃ ಅಧಿಕಂ, ನಾಸ್ತಿತತ್ತ್ವಂ ಗುರೋಃ ಪರಂ" ಮೊದಲಾದ ಆಗಮವಾಕ್ಯಗಳು ಗುರುವಿನ ಹಿರಿಮೆಗೆ ನಿದರ್ಶನ. ಶಿವದೀಕ್ಷಾಧಿಕಾರವು ಗುರುವಿಗೆ ಮಾತ್ರವಿದೆ. ವೀರಶೈವರಲ್ಲಿ ಗುರು ಅತ್ಯಧಿಕನಾಗಿದ್ದಾನೆ. ಆದುದರಿಂದ ಅಷ್ಟಾವರಣದಲ್ಲಿ ಗುರು ಪ್ರಥಮನಾಗಿ ಮತ್ತು ಪ್ರಧಾನನಾಗಿದ್ದಾನೆ. ಅಷ್ಟಾವರಣದಲ್ಲಿ ಗುರುವು ಕೋಟೆಯಲ್ಲಿ ಹೆಬ್ಬಾಗಿಲಿನಂತೆ ಇದ್ದಾನೆ. ಪಂಚಪೀಠಗಳ ಪರಂಪರೆಯವರೇ ಗುರುಗಳು.

**ಲಿಂಗ** :–ಲಿಂಗವು ಪರಬ್ರಹ್ಮ ಸೂಚಕವಾದುದು. ಸ್ಥಲ, ಶೂನ್ಯ, ಬಯಲು ಮೊದಲಾದುವುಗಳು ಇದಕ್ಕೆ ಪರ್ಯಾಯ ಶಬ್ದಗಳು. ಶಿವಾಗಮಗಳಲ್ಲಿ

ಲೀಯತೇ ಗಮ್ಯತೇ ಯತ್ರ ತ್ರೈಲೋಕ್ಯಂ ಸಚರಾಚರಂ ।

ತದೇತಲ್ಲಿಂಗ ಮಿತ್ಯುಕ್ತಂ ಲಿಂಗತತ್ತ್ವ ವಿಶಾರದೈಃ॥ ಎಂದು ಹೇಳಿದೆ.

ವೀರಶೈವನಾದವನು ಇಷ್ಟ, ಪ್ರಾಣ, ಭಾವ ಎಂಬ ಮೂರು ಲಿಂಗಗಳನ್ನು ಸ್ಥೂಲ, ಸೂಕ್ಷ್ಮ, ಕಾರಣ (ತ್ಯಾಗಾಂಗ, ಭೋಗಾಂಗ, ಯೋಗಾಂಗ) ಶರೀರಗಳಲ್ಲಿ ಧರಿಸಿ ಪೂಜಿಸಬೇಕೆಂದು ಹೇಳಿದೆ. ಶಾಸ್ತ್ರಕಾರರು ಇಷ್ಟಲಿಂಗವು ಸದ್‌ರೂಪವೆಂದೂ, ಪ್ರಾಣಲಿಂಗವು ಚಿದ್ ರೂಪವೆಂದೂ. ಭಾವಲಿಂಗವು ಆನಂದ ರೂಪವೆಂದೂ ಹೇಳಿರುತ್ತಾರೆ. ಮತ್ತೆ ಈ ಮೂರು ಲಿಂಗಗಳು ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ, ಎಂದು ಆರು ಪ್ರಕಾರವಾಗಿ. ಲಿಂಗರೂಪನಾದ ಶಿವನು ಆರು ವಿಧವಾದಂತೆ, ಶಿವನಂತೆ ಮೂರಾದ ಶಕ್ತಿಯೂ ಆರು ಪ್ರಕಾರವಾಗಿದೆ. ವಿದ್ಯಾಕಲಾ, ಪ್ರತಿಷ್ಠಾಕಲಾ, ನಿವೃತ್ತಿಕಲಾ, ಶಾಂತಿಕಲಾ, ಶಾಂತ್ಯತೀತಕಲಾ, ಶಾಂತ್ಯತೀತೋತ್ತರಕಲಾ ಎಂಬಿವು ಆರು ಶಕ್ತಿಭೇದಗಳು. ಈ ಆರು ಶಕ್ತಿಗಳೂ ಆರು ಲಿಂಗಗಳ ಅನುಸಂಧಾನದಲ್ಲಿ ಪರ್ಯವಸಾನವಾಗುತ್ತವೆ.

**ಜಂಗಮ**:– ಅಷ್ಟಾವರಣದಲ್ಲಿ ಮೂರನೆಯ ಸ್ಥಲವು ಜಂಗಮವಾಗಿದೆ. ಜನನ ಮರಣಾತೀತನಾದವನನ್ನು ಜಂಗಮನೆಂದು ಕರೆಯುತ್ತಾರೆ ವೀರಶೈವರಲ್ಲಿ ಅನುಭವ ಮಂಟಪದ ಅಧ್ಯಕ್ಷ ಪೀಠವಾದ ಶೂನ್ಯ ಸಿಂಹಾಸನ ಪರಂಪರೆಯವರನ್ನು ಜಂಗಮರೆಂದು ಕರೆಯುವ ವಾಡಿಕೆಯಿದೆ. ವೀರಶೈವ ಸಾಹಿತ್ಯದಲ್ಲಿ ಅತಿಥಿಗಳನ್ನು ಜಂಗಮ ಎಂದು ಕರೆಯುತ್ತಾರೆ. ಅಷ್ಟಾವರಣವಲ್ಲಿ ಗುರು ಲಿಂಗ ಜಂಗಮ ಇವು ಮೂರು ಪವಿತ್ರ ವಸ್ತುಗಳಾಗಿವೆ. ಪ್ರಭುವಿನ ಪರಂಪರೆಯವರು ಜಂಗಮರಾಗಿದ್ದಾರೆ.

**ತೀರ್ಥ ಮತ್ತು ಪ್ರಸಾದ**:– ವೀರಶೈವರಲ್ಲಿ ಜ್ಞಾನಿಗಳಾದ ಗುರು ಜಂಗಮರನ್ನು ಮನೆಗೆ ಆಹ್ವಾನಿಸಿ ಅವರ ಪಾದಗಳನ್ನು ಪೂಜಿಸಿ ಗುರೂಕ್ತ ರೀತಿಯಲ್ಲಿ ಅವರ ಪಾದತೀರ್ಥವನ್ನು ಸೇವಿಸುವ ಪರಿಪಾಠವಿದೆ. ಇದರಿಂದ ಭಕ್ತರು ಕೃತಾರ್ಥರಾಗುವರು. ಲಿಂಗವಂತರು ಪ್ರತಿಯೊಂದು ವಸ್ತುವನ್ನೂ ಲಿಂಗಕ್ಕೆ ಸಮರ್ಪಿಸಿ ಪ್ರಸಾದ ರೂಪವಾಗಿ ಭುಂಜಿಸುವರು.ಲಿಂಗವಂತ ಧರ್ಮದಲ್ಲಿ ಈ ತೀರ್ಥ ಪ್ರಸಾದಗಳು ಪೂಜೆಯ ಪರಿಣಾಮ ವಸ್ತುಗಳಾಗಿವೆ. ಆದ್ದರಿಂದಲೇ ಲಿಂಗವಂತರು, ಲಿಂಗಭೋಗೋಪಭೋಗಿಗಳು, ತೀರ್ಥ ಪ್ರಸಾದಗಳು ಪೂಜೆಯ ಪರಿಣಾಮಗಳು.

**ವಿಭೂತಿ**:– ಇದನ್ನು 'ಭಸ್ಮ' ಎಂದು ಕರೆಯುತ್ತಾರೆ. ಶಿವಪೂಜೆಯ ಮೊದಲು ಭಕ್ತನು ದೇಹವನ್ನು ವಿಭೂತಿಯಿಂದ ಅಲಂಕರಿಸಿ ಶಿವಪೂಜೆಯನ್ನು ಮಾಡಬೇಕೆಂದು ನಿಯಮವಿದೆ. 'ಕೂಡಲ ಸಂಗನ ಶರಣರ ನೊಸಲಿಗೆ ವಿಭೂತಿಯೇ ಶೃಂಗಾರ' ಎಂದು ಬಸವೇಶ್ವರನು ಹೇಳಿದ್ದಾನೆ. ಭಸ್ಮವು ಪಾಪಗಳನ್ನು ವಿಮೋಚನೆ ಮಾಡತಕ್ಕದು. ಭಸ್ಮವು ಪಾಪಗಳನ್ನು ಸುಡತಕ್ಕದು. ಇದು ಶಿವಪ್ರಕಾಶ ಸ್ವರೂಪವಾದುದು.

**ರುದ್ರಾಕ್ಷಿ**:– ವೀರಶೈವರಲ್ಲಿ ರುದ್ರಾಕ್ಷಿಯು ಪರಮ ಪೂಜ್ಯವೆನಿಸಿದೆ. ಇದು ಶಿವಜ್ಞಾನದ್ಯೋತಕವೆಂದು ಭಕ್ತರು ಭಾವಿಸಿದ್ದಾರೆ. ಜಪಕ್ಕೂ ರುದ್ರಾಕ್ಷಿಯು ಅವಶ್ಯವಿದೆ. ಇದು ರುದ್ರನ ಕಣ್ಣಿನಿಂದ ಹುಟ್ಟಿದ ಕಾರಣ ರುದ್ರಾಕ್ಷಿ ಎಂದಾಗಿದೆ. ಇದರ ಸಂಪರ್ಕದಿಂದ ಹಲವುರೋಗಗಳು ಹೋಗುತ್ತವೆ.

**ಮಂತ್ರ**:– 'ಓಂ ನಮಃ ಶಿವಾಯ' ಎಂಬ ಷಡಕ್ಷರ ಮಂತ್ರವನ್ನು ವೀರಶೈವರು ಭಕ್ತಿಯಿಂದ ಪಠಿಸುತ್ತಾರೆ. ಇದು ಮುಕ್ತಿದಾಯಕವು. 'ಮನನಾತ್ ತ್ರಾಯತೆ ಇತಿ ಮಂತ್ರಃ' ಎಂಬ ಅರ್ಥದಂತೆ ಈ ಪ್ರಣವಯುಕ್ತ ಪಂಚಾಕ್ಷರೀ ಮಂತ್ರವು ಸಮಸ್ತಪಾಪ ಪರಿಹಾರಕವೆಂದೂ ವೀರಶೈವರು ನಂಬಿದ್ದಾರೆ. ಭಸ್ಮ ರುದ್ರಾಕ್ಷಿ ಮಂತ್ರ ಇವು ಪೂಜೆಗೆ ಸಾಧನಗಳು.

**ಪಂಚಾಚಾರಗಳು**:– ವೀರಶೈವರಲ್ಲಿ ನೀತಿಪ್ರಧಾನವಾದ ಐದು ಆಚಾರಗಳನ್ನು 'ಪಂಚಾಚಾರ' ಎಂದು ಕರೆಯುತ್ತಾರೆ. ಬಸವೇಶ್ವರನು ತನ್ನ ಒಂದು ವಚನದಲ್ಲಿ "ಕಳಬೇಡ ಕೊಲಬೇಡ, ಹುಸಿಯ ನುಡಿಯಲುಬೇಡ, ಪರರ ನಿಂದಿಸಬೇಡ. ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ, ಇದೇ ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ ಇದೇ ನಮ್ಮ ಕೂಡಲ ಸಂಗಮ ದೇವನನೊಲಿಸುವ ಪರಿ" ಎಂದು ಹೇಳಿರುತ್ತಾನೆ. ಈ ವಚನದಲ್ಲಿ ಪಂಚಾಚಾರಗಳ ತಾತ್ಪರ್ಯವೂ ಅಡಗಿದೆ. ಸದಾಚಾರ ಅಂದರೆ

ಪರದ್ರವ್ಯ, ಪರಸ್ತ್ರೀ.ಪರವಸ್ತುಗಳನ್ನು ಬಯಸದೇ ಕಾಯಕ ನಿರತನಾಗಿ ಇರುವುದು. 'ಶಿವಾಚಾರ' ಎಂದರೆ ಶಿವಭಕ್ತರಲ್ಲಿ ತಾರತಮ್ಯವನ್ನೆಣಿಸದೆ ಶಿವಶರಣರ ಧರ್ಮತತ್ತ್ವಗಳಂತೆ ನಡೆಯುವುದು. 'ಲಿಂಗಾಚಾರ' ಎಂದರೆ ಲಿಂಗಪೂಜಾನಿಷ್ಠನಾಗಿರುವುದು. ಭೃತ್ಯಾಚಾರ ಎಂದರೆ ಎನಗಿಂತ ಕಿರಿಯರಿಲ್ಲ, ಶಿವಭಕ್ತನಿಗಿಂತ ಹಿರಿಯರಿಲ್ಲವೆಂದು, ಗುಣ ವಿನಯದಿಂದ ವರ್ತಿಸುವುದು. ಗಣಾಚಾರ ಎಂದರೆ ಶಿವಧರ್ಮ. ಶಿವ ತತ್ತ್ವಗಳ ರಕ್ಷಣೆಗೆ ಕಂಕಣ ಕಟ್ಟುವುದು. ಈ ಪಂಚಾಚಾರಗಳು ಸಮಾಜದಲ್ಲಿ ಜನರು ಉತ್ತಮ ರೀತಿಯಿಂದ ನಡೆಯಲು ಬೋಧಿಸುತ್ತವೆ. ಹಾಗೂ ಸಮಾಜವನ್ನು ನೀತಿಯಿಂದ ಸುಭದ್ರಗೊಳಿಸುತ್ತವೆ.

ಷಟ್‌ಸ್ಥಲಗಳು:– ವೀರಶೈವ ಧರ್ಮದಲ್ಲಿ ಈ ಷಟ್ಸ್ಥಲಗಳಿಗೆ ಅತ್ಯಂತ ಮಹತ್ವವಿದೆ. ಒಂದು ರೀತಿಯಿಂದ ವೀರಶೈವವನ್ನು 'ಷಟ್ಸ್ಥಲಧರ್ಮ' ಎಂದು ಕೂಡಾ ಕರೆಯುತ್ತಾರೆ. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ, ಎಂಬಿವೇ ಆ ಆರು ಸ್ಥಲಗಳು. ಷಟ್ಸ್ಥಲವು ವೀರಶೈವರ ಲಿಂಗೋಪಾಸನಾ ಸಾಧನದ ಮಾರ್ಗ. ಶಿವಶರಣರು ಈ ಷಟ್ಸ್ಥಲ ಪ್ರಕಾರವನ್ನು ತಮ್ಮ ವಚನ ಶಾಸ್ತ್ರದಲ್ಲಿ ಬಹಳವಾಗಿ ಹೇಳಿರುವರು. ಈ ಷಟ್ಸ್ಥಲ ತತ್ತ್ವಗಳು ಮೊಟ್ಟಮೊದಲು, ವಾತುಲ, ಪಾರಮೇಶ್ವರ ಮತ್ತು ಸೂಕ್ಷ್ಮಾಗಮಗಳಲ್ಲಿ ನಿರೂಪಿತವಾದುವು. ಅನಂತರ ಶಿವಶರಣರ ವಚನ ಶಾಸ್ತ್ರದಲ್ಲಿ ವಿಸ್ತಾರವಾದುವು. ಭಕ್ತ ಮತ್ತು ಮಹೇಶ ಸ್ಥಲಗಳಿಗೆ ಇಷ್ಟಲಿಂಗಪೂಜೆ ಮುಖ್ಯ. ಪ್ರಸಾದಿ ಪ್ರಾಣಲಿಂಗಸ್ಥಲಗಳಿಗೆ ಪ್ರಾಣಲಿಂಗಾನುಸಂಧಾನವೇ ಪ್ರಾಧಾನ್ಯ. ಶರಣ, ಐಕ್ಯಸ್ಥಲಗಳಿಗೆ ಭಾವಲಿಂಗದಲ್ಲಿ ಬೆರೆದು ತಲ್ಲೀನವಾಗುವುದೇ ಮುಖ್ಯ. ಕರಸ್ಥಲದಲ್ಲಿ ಇಷ್ಟಲಿಂಗ. ಉರಸ್ಥಲದಲ್ಲಿ ಪ್ರಾಣಲಿಂಗ, ಶಿರಸ್ಥಲದಲ್ಲಿ ಭಾವಲಿಂಗವನ್ನು ಅಳವಡಿಸಿ ಅರ್ಚಿಸಬೇಕೆಂದು ಶರಣರು ಹೇಳಿದ್ದಾರೆ. ಈ ಷಟ್‌ಸ್ಥಲ ಸಾಧನೆಯನ್ನು ಕುರಿತು ಶರಣರು ಸುಂದರವಾಗಿ ಹೇಳಿರುತ್ತಾರೆ. ಭಕ್ತನಾದವನು ತನ್ನ ತನು, ಮನ, ಧನದ ಆಸೆ ಅಳಿದಿರಬೇಕು. ಮಹೇಶ್ವರನಾದರೆ ಪರಧನ, ಪರಚಿಂತೆ ಪರಾಂಗನೆಯರ ಸಂಬಂಧವಿಲ್ಲದಿರಬೇಕು. ಪ್ರಸಾದಿಯಾದೊಡೆ. ಸುಖ, ರುಚಿ, ಮೊದಲಾದವನ್ನು ಮರೆತು ಎಲ್ಲವನ್ನೂ ಪ್ರಸಾದ ರೂಪದಿಂದ ಸೇವಿಸಬೇಕು ಪ್ರಾಣಲಿಂಗಿಯಾದೊಡೆ ಪ್ರಾಣವನ್ನು ಲಿಂಗದೊಳಗೆ ಬೆರಸಿ ಬೇರಿಲ್ಲದೆ ಇರಬೇಕು. ಐಕ್ಯನಾದೊಡೆ ಅಭ್ಯಾಸದಿಂದ ಸುಖದುಃಖಮಂ ತಾಳದೆ ನಿಭ್ರಾಂತನಾಗಿರಬೇಕು. ಮತ್ತೊಬ್ಬ ವಚನಕಾರನು "ಭಕ್ತಂಗೆ ಕ್ರಿಯೆ, ಮಹೇಶಂಗೆ ನಿಶ್ಚಯ, ಪ್ರಸಾದಿಗೆ ಅರ್ಪಣ, ಪ್ರಾಣಲಿಂಗಿಗೆ ಯೋಗ, ಶರಣಂಗೆ ನಿಬ್ಬೆರಗು, ಐಕ್ಯಂಗೆ ನಿರ್ಲೇಪ" ಇವು ಮುಖ್ಯ ಲಕ್ಷಣಗಳೆಂದು ಹೇಳಿರುತ್ತಾನೆ. ಭಕ್ತನಿಗೆ ವಿಶ್ವಾಸವು, ಮಹೇಶ್ವರನಿಗೆ ನಿಷ್ಠೆಯು, ಪ್ರಸಾದಿಗೆ ಸಾವಧಾನವು, ಪ್ರಾಣಲಿಂಗಿಗೆ ಸ್ವಾನುಭವವು ಶರಣನಿಗೆಅರಿವು ಐಕ್ಯನಿಗೆ ಸಮರಸಭಾವವು ಇರಬೇಕೆಂದು ಅಲ್ಲಮಪ್ರಭು ಹೇಳುತ್ತಾನೆ. (ಅ. ಪ್ರ. ವ.) "ಕೀಟಭೃಂಗ ನ್ಯಾಯ"ದಂತೆ "ದುಂಬಿ ಪಿಡಿದಿಹ ಪುಳುವು ದುಂಬಿಯುನೆ. ನೆನೆನೆನೆದು

ದುಂಬಿಯೇ ತಾನಾದ ರೀತಿಯಂತೆ” ಸಾಧಕನು ಈ ಷಟ್‌ಸ್ಥಲ ಮಾರ್ಗದಿಂದ ಶಿವ ಯೋಗದಲ್ಲಿ ನಡೆದು ಕಡೆಗೆ ತಾನೇ, ಶಿವನೇ ಆಗುತ್ತಾನೆ (ಶಿವೋಹಂ) ಎಂದು ಆಗಮಗಳು ಹೇಳಿವೆ. ಮತ್ತು ಅನುಭವಿಗಳು ಕೂಡ ಹೇಳಿದ್ದಾರೆ.

ಈ ಮೇಲೆ ಹೇಳಿದ ರೀತಿಯಿಂದ ಕ್ರಿಯಾಪ್ರಧಾನವಾದ ಅಷ್ಟಾವರಣ, ನೀತಿ ಪ್ರಧಾನವಾದ ಪಂಚಾಚಾರ, ಜ್ಞಾನಪ್ರಧಾನವಾದ ಷಟ್‌ಸ್ಥಲ ಮಾರ್ಗಗಳನ್ನು ಅರಿತು ಆಚರಿಸಿದವನು ವೀರಶೈವ ಮಾರ್ಗದಿಂದ ಸುವರ್ಣಾಲಂಕಾರ ನ್ಯಾಯದಂತೆ ಮೋಕ್ಷ ವನ್ನು ಪಡೆಯುತ್ತಾನೆ. ಏಕೇನಜನ್ಮನಾಮುಕ್ತಿಃ ವೀರಣಾಂತು ಮಹೇಶ್ವರೀ ಎಂಬ ಆಗಮದ ಮಾತು ಇಂತಹವರಿಗೆ ಮಾತ್ರ ಅನ್ವಯಿಸುತ್ತದೆ.

**ನೂರೊಂದು ಸ್ಥಲಗಳು:–** ಸಾಧಕನ ಸೌಕರ್ಯಕ್ಕಾಗಿ ಈ ಆರು ನೂರೊಂದು ಸ್ಥಲ ಎನಿಸಿವೆ. ಅಂಗಸ್ಥಲ ೪೪, ಲಿಂಗಸ್ಥಲ ೫೭. ವೀರಶೈವದಲ್ಲಿ ಜೀವನು ಅಂಗನೆಂದೂ ಬ್ರಹ್ಮನು ಲಿಂಗನೆಂದೂ ವ್ಯವಹರಿಸಲ್ಪಟ್ಟಿದ್ದಾನೆ. ಈ ನೂರೊಂದು ಸ್ಥಲದ ವಿವರವು, ಸಿದ್ಧಾಂತ ಶಿಖಾಮಣಿ, ಗಣಭಾಷಿತ ರತ್ನಮಾಲೆ, ಏಕೋತ್ತರ ಶತಸ್ಥಲ ಮೊದಲಾದ ಗ್ರಂಥಗಳಲ್ಲಿ ನಿರೂಪಿತವಾಗಿದೆ. ಅಗಸ್ತ್ಯಮುನಿ ಬರೆದಂತೆ ತಿಳಿದುಬಂದಿರುವ “ಅಗಸ್ತ್ಯ ಸೂತ್ರ ವೃತ್ತಿ”ಯಲ್ಲಿಯೂ ಏಕೋರಾಮನು ಬರೆದಿರುವ ಅಧಿಕರಣ ಭಾಷ್ಯದಲ್ಲಿಯೂ ಪಾಲ್ಕುರಿಕೆ ಸೋಮನಾಥನು ಬರೆದಿರುವ ಬಸವರಾಜೀಯದಲ್ಲಿಯೂ ಈ ಏಕೋತ್ತರಶತಸ್ಥಲದ ವಿಷಯವು ನಿರೂಪಿತವಾಗಿದೆ. ಭರತ ಖಂಡದ ಯಾವ ದರ್ಶನದಲ್ಲಿಯೂ ಈ ತರದ ಸ್ಥಲಗಳ ವ್ಯವಸ್ಥೆ ಇಲ್ಲವೆಂದು ಹೇಳಬಹುದು. ವೀರಶೈವಧರ್ಮದಲ್ಲಿ ಬ್ರಹ್ಮಸ್ಥಲ, ಲಿಂಗ, ಶೂನ್ಯ, ಬಯಲು, ನಿರ್ಬಯಲು, ನಿಃಶೂನ್ಯ ಇವು ಪರಬ್ರಹ್ಮವಾಚಕ ಶಬ್ದಗಳು.

“ಈ ವೀರಶೈವಕ್ಕೆ ಭಕ್ತನು ಅಧಿಕಾರಿ, ಮುಕ್ತಿಯೇ ಪ್ರಯೋಜನ, ಶಿವ ಜ್ಞಾನವೇ ವಿಷಯ, ಪ್ರಕಾಶ್ಯ ಪ್ರಕಾಶ ಭಾವವೇ ಸಂಬಂಧ” ಎಂದು ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಿದೆ.

ವೇದಾಂತ ಶಾಸ್ತ್ರವನ್ನು ಅಧ್ಯಯನ ಮಾಡುವವನು ಬ್ರಹ್ಮಾದ್ವೈತ ಮತ್ತು ಶಿವಾದ್ವೈತಗಳಿಗೆ ಇರುವ ವ್ಯತ್ಯಾಸವನ್ನು ತಿಳಿಯುವುದು ಆವಶ್ಯಕ. ಇಲ್ಲಿ ಅವು ಗಳ ಸಾಮ್ಯ ವೈಷಮ್ಯಗಳನ್ನು ಸಂಗ್ರಹವಾಗಿ ನಿರೂಪಿಸಿದೆ.

## ಬ್ರಹ್ಮಾದ್ವೈತ

೧. ಬ್ರಹ್ಮಸತ್ಯಾ ಜಗತ್ ಮಿಥ್ಯಾ

೨. ಜ್ಞಾನದಿಂದ ಮಾತ್ರ ಮೋಕ್ಷ ಪ್ರಾಪ್ತಿ.

೩. ಸೂರ್ಯ, ಅಂಬಿಕೆ, ವಿಷ್ಣು, ಗಣಪತಿ, ಮಹೇಶ್ವರ ಎಂಬ ಐವರನ್ನು ಅರ್ಚಿಸುವರು.

೪. ಯೋಗದಿಂದ ಮುಕ್ತಿ ಇಲ್ಲ.
೫. ಜಿಜ್ಞಾಸ್ಯ ವಸ್ತುವು ನಿರ್ವಿಶೇಷ ಬ್ರಹ್ಮ.
೬. ಅಂತಃಕರಣ ವೃತ್ತಿಗಳು ಅನಿತ್ಯ.
೭. ಅವಿದ್ಯೆಯು ಬ್ರಹ್ಮಕ್ಕೆ ಭಿನ್ನವಾದುದು.
೮. ಸಾಧನ ಚತುಷ್ಟಯವುಳ್ಳವರು ಮಾತ್ರ ಮೋಕ್ಷಕ್ಕೆ ಅಧಿಕಾರಿಗಳು.
೯. ಬ್ರಹ್ಮನ ವಿವರ್ತವೇ ಜಗತ್ತು.
೧೦. ಅಂತಃಕರಣದಲ್ಲಿ ಬ್ರಹ್ಮನ ಪ್ರತಿಬಿಂಬವೇ ಜೀವ.
೧೧. ಚಿಚ್ಛಕ್ತಿಯೇ ಬ್ರಹ್ಮ.
೧೨. ಬ್ರಹ್ಮವು ಅಹಂ ಪದಾರ್ಥವಲ್ಲ.
೧೩. ಅನರ್ಥ ಭೂತಗಳಾದ ಚಿತ್ತಾದಿಗಳು ನಾಶವಾಗಿ ಪರಮಾನಂದ ಪ್ರಾಪ್ತಿಯೇ ಮೋಕ್ಷ.
೧೪. ಅದ್ವೈತವಾದ ಮಾತ್ರ ಮೋಕ್ಷಕ್ಕೆ ಸಾಧನ.
೧೫. ವೇದಗಳು ಮಾತ್ರ ಪ್ರಮಾಣ.
೧೬. ವರ್ಣಾಶ್ರಮವುಂಟು.
೧೭. ಪ್ರಾಕೃತಸೃಷ್ಟಿ.
೧೮. ಸ್ತ್ರೀಯರಿಗೆ ಮೋಕ್ಷಾಧಿಕಾರವಿಲ್ಲ.
೧೯. ಯಜ್ಞಯಾಗಗಳಲ್ಲಿ ಪಶು ಹಿಂಸೆ ಉಂಟು.
೨೦. ಶಬ್ದ ಪ್ರಮಾಣ ಪ್ರಧಾನ.

## ಶಿವಾದ್ವೈತ

೧. ಬ್ರಹ್ಮವೂ ಸತ್ಯ, ಜಗತ್ತೂ ಸತ್ಯ.
೨. ಕರ್ಮ ಮತ್ತು ಜ್ಞಾನ ಎರಡೂ ಮೋಕ್ಷಕ್ಕೆ ಸಾಧನಗಳು.
೩. ಮಹೇಶ್ವರನನ್ನು ಮಾತ್ರ ಪೂಜಿಸುವರು. ಶಿವಸರ್ವೋತ್ತಮತ್ವವನ್ನು ಹೇಳುವರು.
೪. ಶಿವಯೋಗದಿಂದ ಮಾತ್ರ ಮುಕ್ತಿ.
೫. ಸ ವಿಶೇಷ ಬ್ರಹ್ಮವೇ ಜಿಜ್ಞಾಸ್ಯ ವಸ್ತುವು.
೬. ಅಂತಃಕರಣ ಪ್ರವೃತ್ತಿಗಳು ನಿತ್ಯ.
೭. ಅವಿದ್ಯೆಯು ಬ್ರಹ್ಮಕ್ಕೆ ಭಿನ್ನವಲ್ಲ.
೮. ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಸಂಪನ್ನರು ಮಾತ್ರ ಮೋಕ್ಷಾಧಿಕಾರಿಗಳು.
೯. ಜಗತ್ತು ಬ್ರಹ್ಮದ ಪರಿಣಾಮ ರೂಪ.
೧೦. ಚಿಚ್ಛಕ್ತಿಯು ಸಂಕೋಚ ರೂಪ ವಿಶಿಷ್ಟವೇ ಜೀವ.

೧೧. ಅಹಂ ಪದಾರ್ಥವೇ ಬ್ರಹ್ಮ.

೧೨. ಚಿತ್ತಾದಿಗಳ ನಾಶವಾಗದೆ ವಿಕಾಸವಾಗಿ ಶಿವಪ್ರಾಪ್ತಿಯೇ ಮೋಕ್ಷ.

೧೩. ದ್ವೈತಾದ್ವೈತ ಎರಡೂ ಮೋಕ್ಷಕ್ಕೆ ಸಾಧನ.

೧೪. ಸಾಧಕಾವಸ್ಥೆಯಲ್ಲಿ ದ್ವೈತ, ಸಿದ್ಧಾವಸ್ಥೆಯಲ್ಲಿ ಅದ್ವೈತ.

೧೫. ವೇದಾಗಮಗಳೆರಡೂ ಪ್ರಮಾಣ.

೧೬. ವರ್ಣಾಶ್ರಮಗಳಿಲ್ಲ.

೧೭. ಅಪ್ರಾಕೃತ ಸೃಷ್ಟಿ.

೧೮. ಸ್ತ್ರೀಯರಿಗೂ ಮೋಕ್ಷಾಧಿಕಾರವಿದೆ.

೧೯. ಯಜ್ಞಗಳೂ ಯಾಗಗಳೂ ಇಲ್ಲ.

೨೦. ಅನುಭಾವ ಪ್ರಧಾನ.

## ವೀರಶೈವ ಮತ ಚರಿತ್ರೆ

ವೀರಶೈವ ಧರ್ಮವು ವೇದಕ್ಕಿಂತಲೂ ಪೂರ್ವವಾದ ಶೈವಧರ್ಮದ ಪರಂಪರೆಗೆ ಸೇರಿದುದು. ಶೈವದ ಉತ್ಕ್ರಾಂತಿಯ ಫಲವೇ ವೀರಶೈವ. ವೇದಗಳು ಜನ್ಮ ಪ್ರಧಾನವಾದ ವರ್ಣಾಶ್ರಮ ಪ್ರಧಾನವಾದುವು. ಆಗಮಗಳು ದೀಕ್ಷಾಪ್ರಧಾನವಾದ ಅತಿವರ್ಣಾಶ್ರಮ ಪ್ರಧಾನವಾದುವು.

ಸಪ್ತಧಾತು ಸಮಂ ಪಿಂಡಂ ಸಮಯೋನಿ ಸಮುದ್ಭವಂ ।
ಆತ್ಮ ಜೀವ ಸಮುತ್ಪನ್ನಂ ವರ್ಣಾನಾಂ ಕಿಂ ಪ್ರಯೋಜನಂ ॥
(ಬಸವನಾಳ್ ಸಂಪಾದಿತ ಬಸವೇಶ್ವರ ವಚನ, ಪುಟ-೧೫೭)

ಎಂಬುದು ಆಗಮದ ಸಂದೇಶ. ಬಸವಾದಿಗಳು ಆಗಮದ ಅನುಯಾಯಿಗಳು. ವೀರ, ನಂದಿ, ಭೃಂಗಿ, ಸ್ಕಂದ, ವೃಷಭ ಎಂಬುವರು ವೀರಶೈವರ ಪಂಚಗೋತ್ರ ಪುರುಷರು. ವೈದಿಕರು ಸಪ್ತಋಷಿಗಳ ಗೋತ್ರವನ್ನು ಹೇಳುತ್ತಾರೆ. ಕಶ್ಯಪ, ಅತ್ರಿ, ಭಾರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಶಿಷ್ಠ ಇವರು ಆ ಸಪ್ತರ್ಷಿಗಳು. ವೀರಶೈವರು ಪಂಚ ಪ್ರಮಥರ ಗೋತ್ರಗಳನ್ನು ಅಂಗೀಕರಿಸಿದ್ದಾರೆ. ಲಿಂಗವಂತರು ಅಪ್ರಾಕೃತ ಸೃಷ್ಟಿಗೆ ಸೇರಿದವರು. ಆದ್ದರಿಂದಲೇ ಅವರು ಅತಿ ವರ್ಣಾಶ್ರಮಿಗಳು. ವೀರಶೈವರು ಹಿಂದುಗಳಾದರೂ, ಜೈನಧರ್ಮದಂತೆ, ಬೌದ್ಧ ಸಿಕ್ಕರಂತೆ ಸ್ವತಂತ್ರ ದರ್ಶನವುಳ್ಳವರು. ತಮ್ಮದೇ ಆದ ದರ್ಶನದಿಂದ, ಶಾಸ್ತ್ರ ಸಂಪತ್ತಿನಿಂದ ವೀರಶೈವರು ಭಾರತೀಯ ವೇದಾಂತ ಪ್ರಪಂಚಕ್ಕೆ ಮಿಗಿಲಾದ ಕಾಣಿಕೆಯನ್ನು ಕೊಟ್ಟಿರುತ್ತಾರೆ. ಭಾರತೀಯ ದರ್ಶನ ಸಂಪತ್ತನ್ನು ಪರಿಪೂರ್ಣಗೊಳಿಸಿದ್ದಾರೆ.

ವೀರಶೈವರು ಸ್ಥಾವರಕ್ಕಿಂತ ಜಂಗಮ ಅಧಿಕವೆಂದು ನಂಬಿರುತ್ತಾರೆ. 'ಸ್ಥಾವರಕ್ಕೆ ಅಳಿವುಂಟು, ಜಂಗಮಕ್ಕೆ ಅಳಿವಿಲ್ಲ' ಎಂಬುದು ಅವರ ಸಿದ್ಧಾಂತ. 'ಲಿಂಗಮುಖ ಜಂಗಮ' ಎಂದು ಬಸವೇಶ್ವರನು ಹೇಳಿದ್ದಾನೆ. ಗುರು ಲಿಂಗ ಜಂಗಮ ಸೇವೆಯನ್ನು ತ್ರಿವಿಧ ದಾಸೋಹ ಎಂದು ಕರೆಯಲಾಗಿದೆ. ವೀರಶೈವ ಧರ್ಮ ಸ್ವರೂಪನಾದ ಬಸವೇಶ್ವರನು 'ಅನಾದಿ ಭಕ್ತ' ವೀರಶೈವ ನಿರ್ಣಯ ಪರಮಾವತಾರ, Basava is the heart of Veerasaivism ಎನಿಸಿಕೊಂಡಿದ್ದಾನೆ. ಶ್ರೀ ಬಸವಾದಿ ಪ್ರಮಥರು ಈ ಮಾರ್ಗದಲ್ಲಿ ನಡೆದು ಧನ್ಯರಾಗಿದ್ದಾರೆ. "ಕಲ್ಲ ನಾಗರ ಕಂಡರೆ ಹಾಲನೆರೆ ಎಂಬರು, ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ, ಉಣ್ಣುವ ಜಂಗಮ ಬರಲು ಉಣಬಡಿಸಲೊಲ್ಲದೆ ಉಣದಿರ್ಪ ಲಿಂಗಕ್ಕೆ ಎಡೆಮಾಡಿ ನಮಿಸುವ ಬಣಗುಗಳ ನೋಡಾ" ಎಂಬ ಶರಣರ ವಚನಗಳಲ್ಲಿ ಜಂಗಮಪೂಜೆಯ ಮಹತ್ವವು ತಿಳಿದು ಬಂದಿದೆ. ಸ್ಥಾವರಕ್ಕಿಂತ ಜಂಗಮವಸ್ತುಗಳಲ್ಲಿ ಬ್ರಹ್ಮಚೈತನ್ಯವು ಅಧಿಕವಾಗಿದೆ ಎಂಬುದು ಉಪನಿಷತ್ತುಗಳ ಅಭಿಪ್ರಾಯ. ಉತ್ತರ ಭಾರತದಲ್ಲಿ ವೀರಶೈವರನ್ನು 'ಜಂಗಮರು' ಎಂದು ಕರೆಯುತ್ತಾರೆ. ಕಾಶಿ, ಕೇದಾರ, ಪ್ರಯಾಗ, ರಾಮೇಶ್ವರಗಳಲ್ಲಿರುವ ಲಿಂಗವಂತರ ಮಠಗಳಿಗೆ 'ಜಂಗಮವಾಡಿ' ಮಠಗಳೆಂದು ಹೆಸರು. ಮಂಗಳೂರು ಜಿಲ್ಲೆಯಲ್ಲಿ ಇರುವ ಲಿಂಗವಂತರ ಮಠಗಳನ್ನು ಈಗಲೂ ಜಂಗಮರ ಮಠಗಳನ್ನುತ್ತಾರೆ. ಉಡುಪಿ, ಗುರುಪುರಗಳಲ್ಲಿರುವ ಜಂಗಮರ ಮಠಗಳು ಸುಪ್ರಸಿದ್ಧವಾಗಿವೆ.

ವೀರಶೈವರು ೬೩ ಮಂದಿ ಪುರಾತನರು, ೭೭೦ ಅಮರ ಗಣಂಗಳು, ಪಂಚ ಆಚಾರ್ಯರು, ಬಸವಾದಿ ಪ್ರಮಥರು ಇವರನ್ನೆಲ್ಲ ಪೂಜ್ಯರೆಂದು ತಿಳಿದಿದ್ದಾರೆ. ಇವರ ಸ್ತೋತ್ರ ಮತ್ತು ಪೂಜೆ ಪುಣ್ಯಪ್ರದವೆಂದು ನಂಬಿದ್ದಾರೆ. ಗಣಸಹಸ್ರನಾಮಾವಳಿಯಲ್ಲಿ ಈ ಶರಣರ ಮಹಿಮೆಯನ್ನು ಬಿತ್ತರಿಸಿದೆ. ಅರವತ್ತುಮೂವರು, ಏಳುನೂರೆಪ್ಪತ್ತು ಗಣಂಗಳು, ಸಹಸ್ರ ಗಣಂಗಳು ಇವರ ಮಂಟಪ-ಪೂಜೆಗಳು ಈಗಲೂ ಸಮಾಜದಲ್ಲಿ ನಡೆಸುತ್ತಿದ್ದು ಇದರ ಪ್ರತ್ಯಕ್ಷ ನಿದರ್ಶನವಾಗಿವೆ.

**ಮೋಕ್ಷಸ್ವರೂಪ** :-ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಮತ್ತು ಸಾಯುಜ್ಯ ಎಂಬ ನಾಲ್ಕು ಬಗೆಯ ಮೋಕ್ಷ ವಿಧಾನಗಳಲ್ಲಿ 'ಸಾಯುಜ್ಯ'ವನ್ನು ಲಿಂಗವಂತರು ಅಂಗೀಕರಿಸಿದ್ದಾರೆ. ಫಲ-ಪದವಿ ದೃಷ್ಟಿಯಿಂದಲ್ಲ, ಲಿಂಗಾಂಗಯೋಗ ದೃಷ್ಟಿಯಿಂದ ಮೋಕ್ಷವನ್ನು ಕೈವಲ್ಯ, ನಿರ್ವಯಲು, ಲಿಂಗೈಕ್ಯ ಎಂದು ಮೊದಲಾಗಿ ಕರೆದಿದ್ದಾರೆ. ಇದನ್ನು ಸಾಧಿಸುವ ಮಾರ್ಗವನ್ನು ಶಿವಾರ್ಪಣಯೋಗ, ಪೂರ್ಣಯೋಗ ಅಥವಾ ಶಿವಯೋಗ ಎಂದು ಲಿಂಗವಂತ ಅನುಭವಿಗಳು ಕರೆದಿದ್ದಾರೆ.

**ಮತಸ್ಥಾಪಕರು ಯಾರು ?** :-ವೀರಶೈವ ಮತವು ಯಾವನೊಬ್ಬನಿಂದ ಒಂದು ಕಾಲದಲ್ಲಿ ಆದಂತೆ ತೋರುವುದಿಲ್ಲ. ಪಂಚಾಚಾರ್ಯರಿಗಿಂತ, ಬಸವೇಶ್ವರನಿಗಿಂತ

ಈ ಮತವು ಪ್ರಾಚೀನವೆಂದು ತೋರುತ್ತದೆ. ಈಗ ಪ್ರಸಿದ್ಧರಾಗಿರುವ ರೇವಣ್ಣಸಿದ್ಧ, ಮರುಳಸಿದ್ಧ, ಪಂಡಿತಾರಾಧ್ಯ, ಏಕೋರಾಮರು ೧೨ನೆಯ ಶತಮಾನದವರು. ವಿಶ್ವಾರಾಧ್ಯರ ಚರಿತ್ರೆ ಆಧುನಿಕವಾಗಿದೆ. ಶರಣದೇವರದಾಸಿಮಯ್ಯನು ಚಾಲುಕ್ಯರಾಜ ಇಮ್ಮಡಿ ಜಯಸಿಂಹನ ಕಾಲದಲ್ಲಿದ್ದುದು ಇತಿಹಾಸ ಪ್ರಸಿದ್ಧವಾಗಿದೆ. (ಕ್ರಿ. ಶ. ೧೦೧೫–೧೦೪೨) ದಾಸಿಮಯ್ಯನು ಚಾಲುಕ್ಯ ರಾಜಧಾನಿ ಪೊಟ್ಟಲಕೆರೆಗೆ ಹೋಗಿ ಮಹಾರಾಣಿ ಸುಗ್ಗಲದೇವಿ (ಈ ರಾಣಿ ಲಿಂಗವಂತಳು) ಯನ್ನು ಅನುಗ್ರಹಿಸಿದ ವಿಚಾರ ಬಸವಪುರಾಣಾದಿಗಳಲ್ಲಿ ಪ್ರಸಿದ್ಧವಾಗಿದೆ. ಶರಣ ಶಂಕರ ದಾಸಿಮಯ್ಯನು ದೇವರದಾಸಿಮಯ್ಯನ ಸಮಕಾಲೀನನು. ವಚನಕಾರರಾದ ಇವರೀರ್ವರೂ ವೀರಶೈವ ಮತೋದ್ಧಾರಕರೆಂಬುದು ಪ್ರಸಿದ್ಧವಾಗಿದೆ. ದೇವರ ದಾಸಿಮಯ್ಯ, ಶಂಕರ ದಾಸಿಮಯ್ಯಗಳು ಮೊಟ್ಟಮೊದಲ ವಚನಕಾರರಾಗಿದ್ದಾರೆ. ಇವರಿಬ್ಬರ ಬಗೆಗೂ ಪುರಾಣಗಳು ರಚನೆಯಾಗಿ ಪ್ರಸಿದ್ಧವಾಗಿವೆ. ಚಾಲುಕ್ಯ ವಿಕ್ರಮನ ದಂಡನಾಯಕನಾಗಿದ್ದ ಕೊಂಡಗುಳಿ ಕೇಶಿರಾಜನು ಸುಮಾರು ಕ್ರಿ. ಶ. ೧೧೦೦ ರಲ್ಲಿದ್ದನು. ಇಲ್ಲಿ ಸ್ಮರಣಾರ್ಹನು. ಈತನು ಲಿಂಗವಂತರ ಮೊದಲ ಕವಿ ಷಡಕ್ಷರಕಂದ ಮತ್ತು ಲಿಂಗಸ್ತೋತ್ರಕಂದ ಮೊದಲಾದುವನ್ನು ಬರೆದಿದ್ದಾನೆ. ಹರಿಹರ–ರಾಘವಾಂಕರು ಈ ಕವಿಯನ್ನು ತಮ್ಮ ಗ್ರಂಥಗಳಲ್ಲಿ ಸ್ಮರಿಸಿದ್ದಾರೆ ಹರೀಶ್ವರನು ಕೊಂಡಗುಳಿ ಕೇಶಿರಾಜನನ್ನು ಕುರಿತು ಒಂದು ರಗಳೆ ಬರೆದಿದ್ದಾನೆ. ಇತ್ತೀಚೆಗೆ ಕೊಂಡಗುಳಿಯಲ್ಲಿದ್ದ ಕೇಶಿರಾಜನ ಒಂದು ಶಾಸನ ಪ್ರಕಟವಾಗಿ ಈತನ ಕಾಲ ನಿಚ್ಚಳವಾಗಿದೆ. ಕಾಲಕ್ರಮದಲ್ಲಿ ಪಾಶುಪತ, ಲಕುಲೀಶ; ಕಾಶ್ಮೀರ ಶೈವ ಮೊದಲಾದವರೆಲ್ಲರೂ ವೀರಶೈವದೀಕ್ಷೆಯನ್ನು ಪಡೆವಂತೆ ತೋರುತ್ತದೆ. ಲಿಂಗಧಾರಣವು ಅತಿಪ್ರಾಚೀನವಾದರೂ ವೇದೋಕ್ತವೆಂದು ಸಿದ್ಧಾಂತವಾಗಿದ್ದರೂಅದು ಎಲ್ಲಿ ಯಾರಿಂದ ಪ್ರಾರಂಭವಾಯಿತೆಂಬುದನ್ನು ವಿದ್ವಾಂಸರು ಸಂಶೋಧಿಸಿ ಹೇಳಬೇಕಾಗಿದೆ. ಶಿವಾಗಮಗಳ ಪರಿಶೀಲನೆಯಿಂದ. ಕನ್ನಡ, ಸಂಸ್ಕೃತ, ತಮಿಳು, ಮತ್ತು ತೆಲುಗು ಮೊದಲಾದ ಭಾಷೆಗಳಲ್ಲಿರುವ ವೀರಶೈವ ಸಾಹಿತ್ಯದ ಅಧ್ಯಯನದಿಂದ ವೀರಶೈವ ಮತಸ್ಥಾಪಕರಾರು ಎಂಬುದನ್ನು ವಿದ್ವಾಂಸರು ವಿಮರ್ಶಿಸಿ ಹೇಳಬೇಕಾಗಿದೆ. ಮೂಢನಂಬಿಕೆಯ ಮಾತುಗಳಿಂದ ಫಲವಿಲ್ಲ. ದೇವಜೀವರ ಸಂಬಂಧರೂಪಿ ಲಿಂಗಧಾರಣದಿಂದ ಕೂಡಿ, ಜೀವಮಾನವನ್ನೇ ಲಿಂಗಮಯವನ್ನಾಗಿ ಮಾಡುವ ಲಿಂಗಭೋಗೋಪಭೋಗಿಯಾದ-ಲಿಂಗವಂತನು ಶ್ರೀ ನಿಜಗುಣರು ಹೇಳಿರುವಂತೆ ಮಾನವವರ್ಗದಲ್ಲಿ ಸರ್ವೋತ್ಕೃಷ್ಟನಾಗುವುದರಲ್ಲಿ ಸಂಶಯವೇನು ?

# "ಶಕ್ತಿ ವಿಶಿಷ್ಟಾದ್ವೈತ ದರ್ಶನ"

● ಶ್ರೀ. ನಿ. ಪ್ರ. ಚರಮೂರ್ತಿ ಶ್ರೀ ಎಂ. ಕಾಲಾಗ್ನಿರುದ್ರಮುನಿಸ್ವಾಮಿಗಳು
ಶಕ್ತಿ ವಿಶಿಷ್ಟಾದ್ವೈತ ವಿದ್ವಾಂಸರು
ಶ್ರೀ ಮರಳೇ ಗವಿಮಠ
ಕನಕಪುರ ತಾಲ್ಲೂಕು.

ದರ್ಶನವೆಂದರೆ ತನ್ನನ್ನು ತಾನು ಕಾಣುವುದೆಂಪರ್ಥ. ಮನುಷ್ಯನು ಹೊರಗಿನ ದೆಲ್ಲವನ್ನು ಹೇಗಾದರೂ ತಿಳಿಯಬಲ್ಲನು. ಆದರೆ ತನ್ನನ್ನು ತಾನು ತಿಳಿಯಲಾರನು ಮತ್ತು ಕಂಡು ಅನುಭವಿಸಲಾರನು. ಇದು ಬಹಳ ಕಷ್ಟವಾದ ಕೆಲಸ. ಆದರೂ ಇದನ್ನು ಸಾಧಿಸಿ ಅನುಭವಿಸಿದ ಮಹನೀಯರು ಹಿಂದೆ ಬಹಳವಾಗಿ ಇದ್ದರು; ಈಗಲೂ ವಿರಳವಾಗಿ ಇದ್ದೇ ಇರುವರು. ಇಂಥಾ ಮಹಾತ್ಮರು ಕಂಡು ಅನುಭವಿಸಿದ ದಿವ್ಯ ಜ್ಞಾನವೇ ದರ್ಶನವೆನಿಸಿದೆ. ತನ್ನನ್ನು ತಾನು ತಿಳಿಯಲು ಹೊರಟರೆ ತನಗೆ ಆಶ್ರಯವಾಗಿರುವ ಬೇರೊಂದು ವಸ್ತುವನ್ನೂ ಅವಶ್ಯವಾಗಿ ತಿಳಿಯಬೇಕಾಗುತ್ತದೆ. ಆ ವಸ್ತುವನ್ನು ತನಗೂ ಮತ್ತು ಇತರರಿಗೂ ಬೇರೆ ಎಲ್ಲಾ ವಸ್ತುಗಳಿಗೂ ವಿಶ್ರಾಂತಿ ಸ್ಥಳವೆನಿಸಿದ್ದರಿಂದ ಬ್ರಹ್ಮ-ಲಿಂಗ, ಪರಮಾತ್ಮ, ವಿಷ್ಣು, ರುದ್ರ, ಈಶ್ವರ ಎಂಬ ಅನೇಕ ಹೆಸರುಗಳಿಂದ ಅನುಭವಿಗಳು ಕರೆಯುತ್ತಾರೆ. ಈ ಪರಮಾತ್ಮನಿಗೂ ದೇಹದಲ್ಲಿ ನೆಲೆಸಿರುವ ಜೀವಾತ್ಮನಿಗೂ ಎಂತಹ ಸಂಬಂಧವಿದೆ? ಇವರಿಬ್ಬರೂ ಒಂದೇ ಗುಂಪಿನವರೇ ಅಥವಾ ಬೇರೆ ಬೇರೆಯಾಗಿ ಇರುವಂತಹವರೇ? ಇವರ ಸ್ವಭಾವ ಎಂತಹುದು? ಇವರಿಬ್ಬರೂ ಒಬ್ಬರೆ ಆಗಿರುವಂತಹವರೆ? ಅಥವಾ ಕೊನೆಯವರೆಗೂ ಬೇರೆಯಾಗಿಯೇ ಇರುವಂತಹವರೇ? ಇವರಿಗೆ ಸಮರಸವಾಗಿ ಬೆರೆಯಲು ಸಾಧ್ಯವಿದೆಯೆ? ಈ ಬಗೆಯ ಹಲವಾರು ಸಮಸ್ಯೆಗಳು ಹಿಂದೆ ಅನುಭವಿಗಳಿಗೆ ಒದಗಿದುವು. ಈ ಸಮಸ್ಯೆಗಳನ್ನು ಬಿಡಿಸುವಾಗ ಹಲವಾರು ಅಭಿಪ್ರಾಯಗಳು ಹೊರಬಿದ್ದುವು. ಈ ಅಭಿಪ್ರಾಯಗಳೇ ವಿವಿಧ ಮತಗಳೆನಿಸಿದುವು. ಇವುಗಳಲ್ಲಿ ಮುಖ್ಯವಾದುದು ಅದ್ವೈತ, ದ್ವೈತ, ವಿಶಿಷ್ಟಾದ್ವೈತ, ಶಕ್ತಿ ವಿಶಿಷ್ಟಾದ್ವೈತವೆನಿಸಿದುವು. ಅದ್ವೈತ ದರ್ಶನವು ಜೀವಬ್ರಹ್ಮರಿಬ್ಬರನ್ನೂ ಸಹಜವಾಗಿ ಒಬ್ಬರೆಂದೇ ಭಾವಿಸಿದೆ. "ಜೀವೋಬ್ರಹ್ಮೈವನಾಪರಃ" ಎಂಬುವೇ ಅದ್ವೈತ ದರ್ಶನದ ತಿರುಳು. ಜೀವ ಬ್ರಹ್ಮರಿಬ್ಬರೂ ಯಾವಾಗಲೂ ಬೇರೆಯಾಗಿಯೇ ಇರುವರೆಂದು ದ್ವೈತ ದರ್ಶನವು ತಿಳಿಸುತ್ತದೆ.

ಇಬ್ಬರೂ ಚೇತನರೇ ಆದರೂ ಒಬ್ಬನು ಅಲ್ಪಜ್ಞನೂ, ಅಲ್ಪಶಕ್ತನೂ ಆಗಿದ್ದು ಮತ್ತೊಬ್ಬನು ಸರ್ವಜ್ಞನೂ ಸರ್ವಶಕ್ತನೂ ಆಗಿಯೇ ಇರುವರೆಂಬುದೇ ದ್ವೈತ ದರ್ಶನ. ಜೀವಬ್ರಹ್ಮರನ್ನು ಒಂದೇ ಪರವಸ್ತುವೆಂದು ,ಕಾಣುವುದು ದರ್ಶನವೆನಿಸಿ ದರೆ, ಅವರನ್ನು ಬೇರೆ ಬೇರೆಯಾಗಿಯೇ ಇಲ್ಲಿಯೂ ಮುಂದೆಯೂ ಇರುವಂತಹವ ರೆಂದು ಕಾಣುವುದೇ ದ್ವೈತ ದರ್ಶನವೆನಿಸಿತು. ಅಭೇದವಾದವೇ ಅದ್ವೈತ ದರ್ಶನದ ಮೂಲವೆನಿಸಿದರೆ ಭೇದವಾದವೇ ದ್ವೈತದರ್ಶನದ ಮೂಲವೆನಿಸಿತು. ಈಭೇದವಾದವು ಜನಸಾಮಾನ್ಯರಿಗೆ ಪ್ರಿಯವೂ ಹಿತವೂ ನಂಬಿಕೆಗೆ ಅರ್ಹವೂ ಆಯಿತು. ಅದ್ವೈತದ ಅನುಭವ ಎಲ್ಲರಿಗೂ ಬರಲು ಬಹಳ ಕಷ್ಟವಾಯಿತು. ಮಾನವ ಸಾಮಾನ್ಯನು ಅಪರಿಪೂರ್ಣನೂ ಅಶಕ್ತನೂ ಆಗಿದ್ದು ರೋಗ, ಶೋಕ, ಮೋಹ ಭಯಗಳಿಂದ ನರ ಳುತ್ತಿರುವಾಗ ಅವನನ್ನು ನಿರೋಗಿಯೆಂದೂ ಅಶೋಕನೆಂದೂ, ನಿರ್ಮೋಹಿ ಎಂದೂ, ಅಭಯಂಕರನೆಂದೂ ಭಾವಿಸುವುದು ಕಷ್ಟವಾದ ಕೆಲಸ.

ಈ ಬಗೆಯ ವಿಷಮ ಪರಿಸ್ಥಿತಿಯಲ್ಲಿ ಜ್ಞಾನಿಗಳು ಸಾಮಾನ್ಯ ಮಾನವನ ನಿಜ ಸ್ಥಿತಿಯನ್ನು ತಿಳಿಸುವ ಸದುದ್ದೇಶದಿಂದ ಭೇದಾಭೇದವಾದವನ್ನು ಎತ್ತಿ ಹಿಡಿದರು. ಜೀವಬ್ರಹ್ಮರಿಗೆ ಸಂಸಾರ ದೆಶೆಯಲ್ಲಿ ಭೇದವಿದ್ದರೂ ಮೋಕ್ಷದೆಶೆಯಲ್ಲಿ ಅಭೇದದ ಅನುಭವವಾಗಬಲ್ಲದೆಂದು ಭೇದಾಭೇದ ವಾದವು ತಿಳಿಸುತ್ತದೆ. ಈ ವಾದವನ್ನು ಅವಲಂಬಿಸಿ ವಿಶಿಷ್ಟಾದ್ವೈತ, ಶಕ್ತಿ ವಿಶಿಷ್ಟಾದ್ವೈತ ದರ್ಶನಗಳು ಉದಯಿಸಿದವು. ಪರಮಾತ್ಮನು ಈ ದೇಹದಲ್ಲಿ ಜೀವಾತ್ಮನೊಡಗೂಡಿಯೇ ಇದ್ದು ಬೇರೆಯಾಗಿ ತೋರದೆ ಕೂಡಿಕೊಂಡಿರುವಂತೆಯೇ ಕಾಣುವನೆಂಬುದೇ ವಿಶಿಷ್ಟಾದ್ವೈತದರ್ಶನ ವೆನಿಸಿತು. ಜೀವಾತ್ಮ ವಿಶಿಷ್ಟನಾಗಿ ಪರಮಾತ್ಮನು ಅದ್ವೈತರೂಪದಿಂದಲೇ ಇರುವ ನೆಂಬುದೇ ಇದರ ತಿರುಳು. ಈ ದೇಹದಲ್ಲಿ ಇಬ್ಬರು ಆತ್ಮಗಳಿರುವರೆಂಬುದನ್ನು ಶ್ರುತಿ, ಬ್ರಹ್ಮಸೂತ್ರಗಳು ಸ್ಪಷ್ಟವಾಗಿ ತಿಳಿಸಿವೆ. "ಗುಹಾಂಪ್ರವಿಷ್ಟಾವಾತ್ಮಾನೌ ಹಿತದ್ದರ್ಶನಾತ್" ಎಂದು ಬ್ರಹ್ಮಸೂತ್ರದಲ್ಲೂ "ದ್ವಾಸುಪರ್ಣ ಸಯುಜಾಸಖಾಯು ಸಮಾನಂ ವೃಷಂ ಪರಿಷ ಸ್ವಜಾತೇ." ಎಂದು ಶ್ರುತಿಯಲ್ಲೂ ಈ ದೇಹವೆಂಬ ಒಂದೇ ವೃಕ್ಷದಲ್ಲಿ ಸಮಾನಾಕಾರದ ಒಂದೇ ಬಗೆಯ ಎರಡು ಆತ್ಮ ಪಕ್ಷಿಗಳಿವೆ ಎಂದು ಸ್ಪಷ್ಟ ವಾಗಿ ತಿಳಿಸಲಾಗಿದೆ. ಹೀಗೆ ಇವರಿಬ್ಬರೂ ಬೇರೆಬೇರೆಯಾಗಿದ್ದರೂ ಹಾಗೆ ಬೇರೆಯಾಗಿ ಕಾಣುವುದಿಲ್ಲ; ಆದರೆ ಕೂಡಿಯೇಕಾಣಿಸಿಕೊಳ್ಳುವರೆಂದು ವಿಶಿಷ್ಟಾದ್ವೈತ ಮತವು ತಿಳಿ ಸುತ್ತದೆ ಜೀವನು ಶರೀರವೆನಿಸಿ ಪರಮಾತ್ಮನು ಶರೀರಿ ಎನಿಸಿರುವುದರಿಂದ ಇಬ್ಬರಿಗೂ ಭೇದ ಸಹಜವಾಗಿಯೇ ಇರುತ್ತದೆ. ಆದರೂ ಒಬ್ಬರನ್ನೊಬ್ಬರು ಅಗಲಲಾರರು. ಕೂಡಿಬಾಳುತ್ತಲೇ ಜೀವನು ಪರಮಾತ್ಮನಿಗೆ ಕೈಂಕರ್ಯವನ್ನು ಸಲ್ಲಿಸುತ್ತಿರುವನು. ಇಬ್ಬರಿಗೂ ಸಮರಸವಾಗಿಯೇ ಬೆರೆಯಲು ಸಾಧ್ಯವಿಲ್ಲದ್ದರಿಂದ ಮಹಾಶಕ್ತನಾದ ಪರಮಾತ್ಮನಿಗೆ ಅಲ್ಪಶಕ್ತನಾದ ಜೀವನು ಕೊನೆಯವರೆಗೂ ಸೇವೆಯನ್ನು ಸಲ್ಲಿಸು

ತ್ತಲೇ ಇರಬೇಕು. ಆದರೂ ಜೀವಾತ್ಮನಿಗೆ ಮುಕ್ತಿ ದೆಶೆಯಲ್ಲಿ ಪರಮಾತ್ಮನ ಸಚ್ಚಿದಾನಂದದ ಅನುಭವ ಉಂಟಾಗಿರುವುದೆಂದು "ಭೋಗ ಮಾತ್ರ ಸಾಮ್ಯ ಲಿಂಗಾಚ್ಚ" ಎಂಬ ಬ್ರಹ್ಮಸೂತ್ರವು ತಿಳಿಸುತ್ತದೆ. ಮುಕ್ತಿದೆಸೆಯಲ್ಲೂ ಜೀವ ಬ್ರಹ್ಮರಿಗೆ ಶರೀರ ಶರೀರಿ ಭಾವವೇ ಇದ್ದು ಆನಂದದ ಅನುಭವವಿದ್ದರೂ ಉಪಾಸ್ಯೋಪಾಸಕ ಸ್ಥಿತಿಯು ಭೇದವೇ ಇರುತ್ತದೆ. ಲಕ್ಷ್ಮೀಪತಿತ್ವ, ಜಗದ್ವ್ಯಾಪಾರ ನಿರ್ವಾಹ ಇವೆರಡು ಅಂಶಗಳಲ್ಲಿ ಮುಕ್ತ ಜೀವರಿಗೆ ಸಂಬಂಧವಿರುವುದಿಲ್ಲ. ಇವೆರಡು ದೃಷ್ಟಿಗಳಲ್ಲಿ ಭೇದವಿರುವ ಪ್ರಯುಕ್ತ ಮುಕ್ತ ಜೀವನೂ ಪರಮಾತ್ಮನ ಶರೀರದೊಳಗೆ ಶಿವನ ಚಿಂತನೆಯಲ್ಲಿಯೇ ನಿರತನಾಗಿರುವನು. ಅಲ್ಲಿಗೆ ಜೀವಾತ್ಮನು ಪರಮಾತ್ಮನ ಅಂಶನೇ ಆಗಿದ್ದರೂ ಅವನಿಗೆ ಶರೀರವೆನಿಸಿದ್ದರಿಂದ ಬದ್ಧಾವಸ್ಥೆಯಲ್ಲಿ ಬೇರೆಯಾಗಿಯೇ ಇರುವನೆಂದೂ, ಅಬದ್ಧಾವಸ್ಥೆಯಲ್ಲಿ ಪರಮಾತ್ಮನ ಶರೀರದಲ್ಲಿ ಅವ್ಯಕ್ತನಾಗಿ ನೆಲೆಸಿ ಅವನ ಆನಂದವನ್ನು ಅನುಭವಿಸುತ್ತಲೇ ಅವನಿಗೆ ಕೈಂಕರ್ಯವನ್ನು ಸಲ್ಲಿಸುತ್ತಿರುವನೆಂದೂ ವಿಶಿಷ್ಟಾದ್ವೈತ ದರ್ಶನವುಜೀವಾತ್ಮನ ಮತ್ತು ಪರಮಾತ್ಮನ ಸ್ವರೂಪಗಳನ್ನು ಸ್ಪಷ್ಟಪಡಿಸಿದೆ.

ಹೀಗೆ ಜೀವನು ಬದ್ಧಾವಸ್ಥೆಯಂತೆಯೇ ಅಬದ್ಧಾವಸ್ಥೆಯಲ್ಲೂ ಪರಮಾತ್ಮನಿಗೆ ಸೇವೆಯನ್ನು ಸಲ್ಲಿಸುತ್ತಿರುವುದನ್ನು ಸಹಿಸದೆ ಕಾಶಕೃತ್ಸ್ನಾಚಾರ್ಯರು ವ್ಯಾಸಮಹರ್ಷಿಗಳಿಗಿಂತ ಹಿಂದೆಯೇ ಶಕ್ತಿವಿಶಿಷ್ಟಾದ್ವೈತ ದರ್ಶನವನ್ನು ಮನಗಂಡರು. ಅವರ ಅಭಿಪ್ರಾಯವನ್ನು ವ್ಯಾಸಮಹರ್ಷಿಗಳು "ಅವಸ್ಥಿತೇರಿತಿಕಾಶಕೃತ್ಸ್ನಃ" ಎಂಬ ಬ್ರಹ್ಮಸೂತ್ರದಲ್ಲಿ ಸ್ಪಷ್ಟಪಡಿಸಿರುವರು. ಭೇದವಾದದಲ್ಲೂ ಅಭೇದವಾದದಲ್ಲೂ ಎಲ್ಲಾ ಬಗೆಯ ಶ್ರುತಿಗಳಿಗೂ ಸಮನ್ವಯವಾಗದೆ ಇರುವ ಪ್ರಯುಕ್ತ ಭೇದಾಭೇದ ವಾದದಲ್ಲಿಯೇ ಸರ್ವಶ್ರುತಿ ಸಮನ್ವಯವನ್ನು ಅವರು ವ್ಯಾಸರ ಕಾಲದಲ್ಲಿಯೇ ಮನಗಂಡಿದ್ದರು. ಜೀವಬ್ರಹ್ಮರಿಗೆ ಭೇದವನ್ನು ತಿಳಿಸುವ ಶ್ರುತಿಗಳು ಭೇದವಾದಕ್ಕೆ ಅನ್ವಯಿಸುವಂತೆ ಅಭೇದ ವಾದಕ್ಕೆ ಅನ್ವಯಿಸಲಾರವು. ಹಾಗೆಯೇ ಜೀವ ಬ್ರಹ್ಮರನ್ನು ಒಂದೇ ವಿಧವೆಂದು ಭಾವಿಸುವ ಅದ್ವೈತ ವಾದದಲ್ಲಿ ಭೇದ ಶ್ರುತಿಗಳಿಗೆ ಅನ್ವಯವಾಗುವಂತಿಲ್ಲ. ಸರ್ವಪ್ರಮಾಣಗಳಿಗೆ ಶಿರೋಮಣಿ ಎನಿಸಿದ ಶ್ರುತಿಯು ಭೇದವಾದವನ್ನು ಒಮ್ಮೆ ಪ್ರತಿಪಾದಿಸಿ ಮತ್ತೊಮ್ಮೆ ಅಭೇದ ವಾದವನ್ನು ಖಂಡಿಸಿರುವುದರಿಂದ ಆ ಶ್ರುತಿಯಲ್ಲಿ ಪರಸ್ಪರ ವಿರೋಧವು ತೋರುತ್ತದೆಯಾದರೂ ಅದನ್ನು ದೊಡ್ಡದೆಂದು ಭಾವಿಸುವುದು ಯುಕ್ತವಲ್ಲವೆಂಬ ಅಂಶವನ್ನುಕಾಶಿ ಕೃತ್ಸ್ನರು ಬಹಳ ಸುಗಮವಾಗಿ ತಿಳಿಸಿರುವರು ಇದನ್ನು ವ್ಯಾಸರು ಸಂಶಯಕ್ಕೆ ಎಡೆ ಇಲ್ಲದಂತೆ ಸ್ಪಷ್ಟಪಡಿಸಿದ್ದಾರೆ. ಪರಮಾತ್ಮನ ಅಂಶನಾದ ಜೀವಾತ್ಮನು ತನ್ನೊಳಗೆ ಅಂತರ್ಯಾಮಿಯಾಗಿ ನೆಲೆಸಿರುವ ಪರಮಾತ್ಮನನ್ನು ನಿರಂತರ ಚಿಂತನೆಯಿಂದ ಪೂಜಿಸಿ ಅವನೊಳಗೆ ಸಮರಸವಾಗಿ ಬೆರೆಯಲು ಸಾಧ್ಯವಿರುವ ಪ್ರಯುಕ್ತ ಇವರಿಬ್ಬರಿಗೆ ಕೇವಲ ಭೇದವನ್ನು ಹೇಳಲಿಕ್ಕೆ ಸಾಧ್ಯವಿಲ್ಲ; ಇದು ಹಾಗೆಯೇ ಕೇವಲ ಅಭೇದವನ್ನು ಹೇಳಲಿಕ್ಕೂ

ಸಾಧ್ಯವಿಲ್ಲವೆಂದು ಅವರು ತಿಳಿಸಿ ಇಬ್ಬರಿಗೂ ಸಂಸಾರ ದೆಶೆಯಲ್ಲಿ ಭೇದವನ್ನೂ, ಮೋಕ್ಷ ದೆಶೆಯಲ್ಲಿ ಅಭೇದವನ್ನೂ ಹೇಳುವುದೇ ಸಮಂಜಸವೆಂದು ಅವರೇ ಘಂಟಾ ಘೋಷವಾಗಿ ತಿಳಿಸಿದ್ದಾರೆ. ಇದು ಸರ್ವವೇದಗಳಿಗೂ ಹಾಗೂ ಸರ್ವವೇದಾಂತ ಗಳಿಗೂ ಸರ್ವದರ್ಶನಗಳಿಗೂ ಸಮ್ಮತವಾದ್ದರಿಂದ ಇದನ್ನು ಸರ್ವಶ್ರುತಿಸಮನ್ವಯ ಮತವೆಂದು ಅವರೇ ಕರೆದಿದ್ದಾರೆ. ವ್ಯಾಸರು ಇದನ್ನು ಎತ್ತಿ ಹಿಡಿದಿದ್ದಾರೆ. ಶ್ರೀಪತಿ ಪಂಡಿತಾರಾಧ್ಯರು ಬ್ರಹ್ಮ ಸೂತ್ರಗಳಿಗೆ ವ್ಯಾಖ್ಯಾನ ಮಾಡುವಾಗ ಶಕ್ತಿ ವಿಶಿಷ್ಟಾ ದ್ವೈತ ದರ್ಶನವೇ ನೇರವಾಗಿ ಭೇದ ಶ್ರುತಿಗಳಿಗೂ ಅಭೇದ ಶ್ರುತಿಗಳಿಗೂ ಸಮ್ಮತ ವಾಗುವ ಪ್ರಯುಕ್ತ ಸರ್ವಸಮನ್ವಯ ದರ್ಶನವೆನಿಸಿರುವುದಾಗಿ ತಿಳಿಸಿದ್ದಾರೆ.

ಶಕ್ತಿ ವಿಶಿಷ್ಟ ಜೀವನಿಗೆ ಶಕ್ತಿವಿಶಿಷ್ಟ ಪರಮಾತ್ಮನೊಡನೆ ಅದ್ವೈತ ಅಂದರೆ ಸಾಮರಸ್ಯವನ್ನು ಬೋಧಿಸುವುದೇ ಶಕ್ತಿವಿಶಿಷ್ಟಾದ್ವೈತ ದರ್ಶನವೆನಿಸಿದೆ. ಜೀವನು ಚಿತ್ತಶಕ್ತಿ ವಿಶಿಷ್ಟನಾಗಿದ್ದರೆ ಪರಮಾತ್ಮನು ಚಿತ್‌ಶಕ್ತಿವಿಶಿಷ್ಟನಾಗಿರುವನು. ಚಿತ್ತ ಶಕ್ತಿ ಸತ್ವ ರಜಸ್ತಮೋಗುಣ ರೂಪದಲ್ಲಿ ಇರುವುದು ; ಆದರೆ ಚಿತ್‌ಶಕ್ತಿ ಸತ್‌ಚಿತ್ ಆನಂದಮಯವಾಗಿರುವುದು. ಜೀವನು ಪರಮಾತ್ಮನಂತೆ ಚೇತನನೇ ಆದರೆ ಇವರಿಬ್ಬರ ಶಕ್ತಿಗಳಲ್ಲಿ ಬಹಳ ಭೇದವಿದೆ. ಅಜಗಜಗಳಿಗೆ ಭೇದವಿರುವಂತೆ ಇವರಿಬ್ಬರಿಗೂ ಭೇದ ಬಹಳವಾಗಿ ನೆಲೆಸಿದೆ. ಅಲ್ಪಪ್ರಮಾಣದ ಅಜಕ್ಕೂ ಮಹಾ ಪ್ರಮಾಣದ ಗಜಕ್ಕೂ ಅಂತರವಿರುವುದು ಎಲ್ಲರಿಗೂ ತಿಳಿದವಿಷಯ. ಹಾಗೆಯೇ ಸತ್ವ, ರಜಸ್ಸು ತಮಸ್ಸು ಎನಿಸಿದ ಚಿತ್ತಶಕ್ತಿಗೂ ಸತ್‌ಚಿತ್ ಆನಂದ ಎನಿಸಿದ ಚಿತ್‌ಶಕ್ತಿಗೂ ಬಹಳ ಭೇದವಿದೆ. ಹೀಗೆ ಶಕ್ತಿಗಳಲ್ಲಿ ಭೇದವಿರುವಾಗ ಜೀವಪರಮಾತ್ಮರಿಗೆ ಅಭೇದಹೇಗೆ ಬಂದೀತು ? ಎಂಬ ಪ್ರಶ್ನೆ ಇಲ್ಲಿ ಉದ್ಭವಿಸುತ್ತದೆ. ಶ್ರುತಿಯಂತೂ "ತತ್ವಮಸಿ" ಎಂಬ ಮಹಾ ವಾಕ್ಯದಲ್ಲಿ ಇಬ್ಬರಿಗೂ ಅಭೇದವನ್ನು ತಿಳಿಸಿದೆ. ಹೀಗೆ ಅಭೇದವನ್ನು ಸ್ಪಷ್ಟವಾಗಿ ಶ್ರುತಿ ತಿಳಿಸಿರುವಾಗ ಜೀವಾತ್ಮನು ಅದನ್ನು ಅನುಭವಿಸದೆ ಬೇರೆಯಾಗಿಯೇ ಉಳಿಯಲು ಸಾಧ್ಯವಿಲ್ಲ. ಅದಕ್ಕಾಗಿಯೇ ಶಕ್ತಿಯ ಅಂತರ ವನ್ನು ಪರಿಹರಿಸಿ ಇಬ್ಬರಿಗೂ ಅದ್ವೈತವನ್ನು ನೆಲೆಗೊಳಿಸಬೇಕೆಂದು ಶಕ್ತಿ ವಿಶಿಷ್ಟಾ ದ್ವೈತ ದರ್ಶನವು ಹೊರಟಿತು. ಈ ಬಗೆಯ ಅದ್ವೈತ ಸ್ಥಿತಿಯು ಜೀವಾತ್ಮನಿಗೆ ಪರಮಾತ್ಮನ ನಿರಂತರ ಉಪಾಸನದಿಂದ ಸಹಜವಾಗಿ ಲಭಿಸುವುದೆಂಬೇ ದರ್ಶನವು ತಿಳಿಸುತ್ತಲಿದೆ. ಚಿತ್ತಶಕ್ತಿ ಎಂದರೆ ಪ್ರಕೃತಿಶಕ್ತಿ. ಅದೇ ಮಾನವೀ ಪ್ರಕೃತಿ : ತ್ರಿಗುಣಾ ತ್ಮಕವಾದುದು. ಇದನ್ನು ಮಾಯಾಶಕ್ತಿ ಎಂದು ಕರೆಯುತ್ತಾರೆ. "ದೈವೀಹ್ಯೇಷಾ ಗುಣಮಯಿ" ಎಂದು ಭಗವದ್ಗೀತೆ ಇದನ್ನು ಸ್ಪಷ್ಟ ಪಡಿಸಿದೆ. ಗುಣವೆಂದರೆ ಬಂಧಕ ಹಗ್ಗ. ಮೋಹವನ್ನು ಹುಟ್ಟಿಸಿ ಬೆಳೆಸುವ ಸಂಕೋಲೆ. ಸತ್ವರಜಸ್ತಮೋಗುಣಗಳು ಜೀವಾತ್ಮನನ್ನು ಪರಮಾತ್ಮನಿಂದ ಬೇರ್ಪಡಿಸಿ ಪ್ರಪಂಚದ ಕಡೆಗೆ ಅಂಟಿಸಿರುವು ದರಿಂದ ಅವನಿಗೆ ಬಂಧಕವೂ ಮಾರಕವೂ ಆಗಿವೆ. ಇವು ಸತ್‌ಚಿತ್ ಆನಂದರೂಪ

ವಲ್ಲಿ ಬದಲಾವಣೆಯಾಗದ ಹೊರತು ಪರಮಾತ್ಮನ ಅಂಶನಾದ ಜೀವಾತ್ಮನು ಮೂಲವಸ್ತುವಿನಲ್ಲಿ ಬೆರೆಯುವಂತಿಲ್ಲ ಈ ಬಗೆಯ ಬದಲಾವಣೆ ಜೀವನಿಗೆ ಪರಮಾತ್ಮನ ನಿತ್ಯಸ್ಮರಣದಿಂದಲೂ ಉಪಾಸನದಿಂದಲೂ ಸಾಧ್ಯವಾಗುತ್ತದೆ ಎಂದು ಶಕ್ತಿವಿಶಿಷ್ಟಾದ್ವೈತ ದರ್ಶನವು ಸ್ಪಷ್ಟಪಡಿಸಿದೆ. ಈ ಬಗೆಯ ಶಕ್ತಿಯ ಬದಲಾವಣೆ ಕ್ರಮವಾಗಿ ಆರು ಹಂತಗಳಲ್ಲಿ ಆಗಬೇಕಾಗಿದೆ. ಇದನ್ನು ಷಟ್‌ಸ್ಥಲೋಪಾಸನವೆಂದು ಈ ದರ್ಶನದ ಸಂಪ್ರದಾಯವು ತಿಳಿಸುತ್ತದೆ. ಜೀವಾತ್ಮನು ಪರಮಾತ್ಮನ ಅಂಶವೇ ಆಗಿದ್ದರೂ ಚಿತ್ತಶಕ್ತಿಯ ಸಂಪರ್ಕದಿಂದ ಸಹಜವಾಗಿ ಭಿನ್ನವಾಗಿದ್ದು ಪರಮಾತ್ಮನ ಉಪಾಸನದಲ್ಲಿ ತೊಡಗುವನು. ಹಾಗೆ ಉಪಾಸನೆ ಮಾಡುವ ಅಧಿಕಾರ ಅವನಿಗೆ ಗುರುವಿನ ದಿವ್ಯೋಪದೇಶದಿಂದಲೂ ದೀಕ್ಷೆಯಿಂದಲೂ ದೊರೆಯಲಿದೆ. ದೀಕ್ಷೆ ಎಂದರೆ ಭಯ, ಶೋಕ ಮೋಹಗಳ ಗೊಂದಲದಲ್ಲಿ ಸಿಲುಕಿ ನರಳುತ್ತಿರುವ ಜೀವನಿಗೆ ಅದನ್ನು ತಪ್ಪಿಸಿ ಶಿವಜ್ಞಾನವನ್ನು ಹುಟ್ಟಿಸುವ ವಿಧಿ. ಸತ್ವ, ರಜಸ್ತಮೋ ಗುಣಗಳ ಆವರಣದಿಂದ ಅವನು ತನ್ನನ್ನು ಪರಮಾತ್ಮನಿಂದಲೂ ಬೇರೆ ಜೀವರಿಂದಲೂ ಪ್ರತ್ಯೇಕಿಸಿಕೊಂಡು ತನ್ನ ಸ್ವಾರ್ಥ ಸಾಧನೆಗಾಗಿ ಹೋರಾಡುತ್ತಿರುವನು. ಇವನು ನಶ್ವರವಾದ ದೇಹದಲ್ಲಿ ಇದ್ದರೂ ಹುಟ್ಟು ಸಾವುಗಳಿಲ್ಲದೆ ಸದ್ರೂಪದಿಂದ ಇರುವನೆಂಬುದನ್ನು ಸತ್ವಗುಣವು ಮರೆಯಿಸಿ ಇವನಲ್ಲಿ ನೈಚ್ಯಾನುಸಂಧಾನವನ್ನು ಹುಟ್ಟಿಸಿದೆ. ಇದು ತೊಲಗಬೇಕಾದರೆ ಇವನ ಶಕ್ತಿ ಸದ್ರೂಪವಾಗಿ ಪರಿಣಮಿಸಬೇಕು. ಶಿವೋಹಂ ಭಾವದಿಂದ ಶಿವನನ್ನು ಉಪಾಸನೆ ಮಾಡಿದರೆ ಇವನಲ್ಲಿ ಸದ್ರೂಪವು ನೆಲೆಗೊಳ್ಳುವುದು. ಪರಮಾತ್ಮನು ಸರ್ವದೇವರಿಗೂ ಮಂಗಳಕರನಾದ್ದರಿಂದ ಈ ದರ್ಶನದಲ್ಲಿ ಅವನನ್ನು ಶಿವನೆಂದು ಕರೆಯಲಾಗಿದೆ. ಶಿವನಂತೆ ಜೀವನೂ ಸದ್ರೂಪನಾಗಿಯೇ ಇರುವನಾದರೂ ಶಕ್ತಿಯಿಂದ ಇವರಿಬ್ಬರಿಗೂ ಸಹಜವಾಗಿ ಭೇದವು ಬಂದಿರುತ್ತದೆ. "ನೀನು ದೇಹದಲ್ಲಿದ್ದರೂ ಶಿವಸ್ವರೂಪನೂ ಶಿವಾಂಶನೂ ಇರುವೆ. ಸರ್ವರಲ್ಲೂ ಆ ಶಿವಾಂಶವನ್ನೇ ನೋಡುತ್ತ ನೀನೂ ಶಿವಸ್ವರೂಪದಲ್ಲಿಯೇ ನಿಲ್ಲಬೇಕು" ಎಂದು ಗುರು ಜೀವನಿಗೆ ಶಿವಸ್ವರೂಪದ ಪರಿಚಯವನ್ನು ಮಾಡಿಸಿಕೊಡುವನು. ಇದರಿಂದ ಜೀವನದಲ್ಲಿ ಸತ್ವಗುಣವು ಸದ್ರೂಪವಾಗಿ ಮಾರ್ಪಡಲಾರಂಭಿಸುವುದು. ಹಾಗೆಯೇ ಜೀವನಿಗೆ ಬೇರೆ ಜೀವರನ್ನು ತೊಲಗಿಸಿ ತನ್ನ ಹೆಂಡತಿಮಕ್ಕಳಲ್ಲಿ ವ್ಯಾಮೋಹ ಅಭಿಮಾನಗಳನ್ನು ಹುಟ್ಟಿಸಿದ್ದ ರಜೋಗುಣ ಬದಲಾವಣೆ ಹೊಂದಿ ಚಿದ್ರೂಪದಿಂದ ಪ್ರಕಾಶಿಸತೊಡಗುವುದು. ಎಲ್ಲರನ್ನೂ ಸಮದೃಷ್ಟಿಯಿಂದ ಪ್ರೀತಿಸಿ ಗೌರವಿಸಬೇಕಾದ್ದು ಜೀವಧರ್ಮ. ಆದರೆ ಇವನು ರಜೋಗುಣದ ದುಷ್ಪ್ರಭಾವಕ್ಕೆ ವಶನಾಗಿ ಎಲ್ಲರನ್ನೂ ತೊರೆದು ದೇಹದ ಬಂಧುಗಳನ್ನು ಮಾತ್ರವೇ ತನ್ನವರೆಂದು ತಿಳಿಯುವನು. ಈ ಬಗೆಯ ವ್ಯಾಮೋಹವನ್ನು ತೊಲಗಿಸಿ ವಿಶ್ವದ ಮಾನವರೆಲ್ಲರನ್ನೂ ತನ್ನವರೆಂದು ಪ್ರೀತಿಸಿ ಗೌರವಿಸಬೇಕೆಂದು ತಿಳಿಯುವುದೇ ಚಿತ್ ಅಥವಾ ಜ್ಞಾನಶಕ್ತಿ ಎನಿಸುವುದು.

ಅಲ್ಲಿಗೆ ವ್ಯಾಮೋಹವೆಂಬ ವಿಪರೀತಜ್ಞಾನವು ಚಿದ್ರೂಪವಾದ ಜ್ಞಾನಶಕ್ತಿಯಾಗಿ ಪರಿಣಮಿಸಬೇಕು. ಇಂತಹ ಪರಿಣಾಮಕ್ಕೆ ಸರ್ವಾತ್ಮ ಭಾವದ ದಿವ್ಯಜ್ಞಾನವೇ ಪರಮೌಷಧ. ಹಾಗೆಯೇ ತನ್ನನ್ನು ಅಹಂಕಾರದ ದುಷ್ಟ ಭಾವದಲ್ಲಿ ನೆಲೆಗೊಳಿಸಿರುವ ತಮೋಗುಣವು ಪರಮಾತ್ಮನ ನಿರಂತರ ಚಿಂತನದಿಂದ ತೊಲಗಿ, ಪರಮಾತ್ಮನೇ ಸರ್ವ ವ್ಯವಹಾರಗಳಿಗೂ ಕರ್ತನೆಂದೂ ತಾನು ನಿಮಿತ್ತಮಾತ್ರನೆಂದೂ ಅರಿವು ಲಭಿಸುವ ಪ್ರಯುಕ್ತ ಜೀವನು ಆನಂದವನ್ನು ಅನುಭವಿಸತೊಡಗುವನು. ಆಗ ಜೀವನ ತಮಃಶಕ್ತಿಯು ಆನಂದರೂಪವಾಗಿ ಪರಿಣಮಿಸುವುದು. ಹೀಗೆ ಶಕ್ತಿಯ ಪರಿಣಾಮದಿಂದ ಜೀವನು ಸಾಕ್ಷಾತ್ ಶಿವನೇ ಆಗಿ ಪರಿಣಮಿಸಲು ಸಾಧ್ಯವಾಗುವುದು. ಹೀಗೆ ಶಕ್ತಿವಿಶಿಷ್ಟಾದ್ವೈತ ದರ್ಶನವು ಜೀವನನ್ನು ಶಿವನೊಡನೆ ಸಮರಸವಾಗಿ ಬೆರೆಸುವ ಪ್ರಯುಕ್ತ ಸಂಸಾರ ದೆಶೆಯಲ್ಲಿ ಜೀವ ಶಿವರಿಗೆ ಪೂರ್ಣಭೇದವನ್ನೂ ಮೋಕ್ಷದ ದೆಶೆಯಲ್ಲಿ ಪೂರ್ಣ ಅಭೇದವನ್ನೂ ತಿಳಿಸುತ್ತದೆ. ಇದರಿಂದ ಈ ದರ್ಶನವು ಸರ್ವ ಶ್ರುತಿಗಳಿಗೂ ಸಮ್ಮತವೆನಿಸಿ ಸರ್ವ ಸಮನ್ವಯ ದರ್ಶನವೆಂದು ಪ್ರಸಿದ್ಧವಾಗಿದೆ.

ಶಕ್ತಿವಿಶಿಷ್ಟಾದ್ವೈತ ದರ್ಶನದಂತೆ, ವಿಶಿಷ್ಟಾದ್ವೈತದರ್ಶನದಲ್ಲೂ, ಭಾಸ್ಕರ ದರ್ಶನದಲ್ಲೂ ಯಾದವ ಪ್ರಕಾಶ ದರ್ಶನದಲ್ಲೂ, ಕಾಶ್ಮೀರ ಶೈವದಲ್ಲೂ, ಶ್ರೀಕಂಠ ಶಿವಾಚಾರ್ಯ ದರ್ಶನದಲ್ಲೂ ಭೇದಾಭೇದ ಸಮನ್ವಯವನ್ನು ನಾವು ಕಾಣಬಹುದಾಗಿದೆ. ವಸ್ತುಸ್ಥಿತಿ ಹೀಗೆ ಇರುವಾಗ ಈ ದರ್ಶನವನ್ನು ಅವುಗಳಲ್ಲೊಂದರಲ್ಲಿ ಸೇರಿಸಬಹುದೆಂಬ ಪ್ರಶ್ನೆ ಉದ್ಭವಿಸುತ್ತದೆ. ಆದರೆ ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದರೆ ಇದು ಸಾಧ್ಯವಾಗದೆಂಬ ಅಂಶ ಮನವರಿಕೆಯಾಗಲಿದೆ. ವಿಶಿಷ್ಟಾದ್ವೈತದಲ್ಲಿ ಜೀವ ಬ್ರಹ್ಮರಿಗೆ ಮುಕ್ತಿಯಲ್ಲಿ ವಿಶಿಷ್ಟ ರೂಪದಿಂದ ಅದ್ವೈತವನ್ನು ಹೇಳಿದೆಯೇ ಹೊರತು, ಸಹಜವಾದ ಅದ್ವೈತವು ದೊರೆಯುವಂತಿಲ್ಲ. ಸಂಸಾರ ದೆಶೆಯಲ್ಲಿ ಬದ್ಧಜೀವರು ಪರಮಾತ್ಮನೊಡನೆ ಸೇರಿರುವಂತೆ ಮುಕ್ತಿದೆಶೆಯಲ್ಲಿ ಬದ್ಧ ಜೀವರು ಅಂದರೆ ಮುಕ್ತರು ಪರಮಾತ್ಮನೊಡನೆ ಸೇರಿರುವರೇ ಹೊರತು ಸಮರಸವಾಗಿ ಬೆರೆಯುವಂತಿಲ್ಲ. ಆದ್ದರಿಂದ ಅಲ್ಲಿ ಅದ್ವೈತವಾದಕ್ಕೆ ಸಹಜವಾದ ಪ್ರವೃತ್ತಿ ಇಲ್ಲ. ವಿಶಿಷ್ಟ ರೂಪವಾದ ಅದ್ವೈತವು ಸಹಜವಾದ ಅದ್ವೈತವೆನಿಸಲಾರದು. ಶಕ್ತಿ ವಿಶಿಷ್ಟಾದ್ವೈತದಲ್ಲಿ ಜೀವ ಶಿವರಿಗೆ ಶಕ್ತಿ ಸಂಕೋಚ ವಿಕಾಸಗಳಿಂದ ಸಹಜವಾಗಿ ಭೇದವಿದ್ದು, ಆ ಶಕ್ತಿ ಸಂಕೋಚವೇ ವಿಕಾಸವಾಗಿ ಪರಿಣಮಿಸುವುದರಿಂದ ಶಿವಜೀವರ ವಾಸ್ತವವಾದ ಅಭೇದವು ಮುಕ್ತಿದೆಶೆಯಲ್ಲಿ ಪ್ರಕಾಶಕ್ಕೆ ಬರುತ್ತದೆ. ಅಲ್ಲಿಗೆ ಸಂಸಾರ ದೆಶೆಯಲ್ಲಿ ಸಹಜವಾದ ಭೇದ ಭಾವವಿದ್ದು ಮುಕ್ತಿ ದೆಶೆಯಲ್ಲಿ ಸಹಜವಾಗಿ ಅಭೇದ ಭಾವವು ಅನ್ವಯಿಸುತ್ತದೆ. ಹೀಗೆ ಭೇದಾಭೇದಗಳೆರಡಕ್ಕೂ ಕಾಲಭೇದದಿಂದಲೂ ಅವಸ್ಥಾ ಭೇದದಿಂದಲೂ ಸಹಜವಾಗಿ ಅನ್ವಯವಾಗುವ ಶಕ್ತಿ ವಿಶಿಷ್ಟಾದ್ವೈತ ಮತವನ್ನು ವಿಶಿಷ್ಟಾದ್ವೈತ ಮತದಲ್ಲಿ ಹೇಗೆ ಸೇರಿಸಲಿಕ್ಕೆ

ಆದೀತೆಂಬ ಅಂಶವನ್ನು ವಿಮರ್ಶಕರು ಪರಿಶೀಲಿಸಿ ನೋಡಬೇಕು. ಹಾಗಾದರೆ ಈ ದರ್ಶನವನ್ನು ಭಾಸ್ಕರ ಮತದಲ್ಲಿ ಸೇರಿಸೋಣವೆ? ಇದೂಕೂಡಾ ಸಾಧ್ಯವಾಗದ ಮಾತು. ಭಾಸ್ಕರ ಮತದಲ್ಲಿ ಜೀವ ಬ್ರಹ್ಮರಿಗೆ ಸಹಜವಾದ ಭೇದವಿಲ್ಲ. ಆದರೆ ಔಪಾಧಿಕವಾದ ಭೇದವಿರುತ್ತದೆ. ಜೀವ ಬ್ರಹ್ಮರಿಗೆ ಸಂಸಾರ ದಶೆಯಲ್ಲಿ ಭೇದ ಸಹಜವಾಗಿರುವುದಾದರೆ ಅದು ಮೋಕ್ಷದಲ್ಲಿ ತೊಲಗಲಾರದೆಂದು ಭಾಸ್ಕರಾಚಾರ್ಯರು ವಾದಿಸುತ್ತಾರೆ. ಇವರಿಗೆ ಜೀವಬ್ರಹ್ಮರ ಭೇದವು ಶರೀರವೆಂಬ ಉಪಾಧಿಯ ಮೂಲಕ ಕಲ್ಪಿತವಾಗಿರುತ್ತದೆ. ಆದರೆ ಆ ಭೇದವು ಸ್ವಾಭಾವಿಕವೆನಿಸುತ್ತದೆ. ಭಾಸ್ಕರ ಭಾಷ್ಯದಲ್ಲಿ ಜ್ಞಾನಾಧಿಕರಣ, ಅಂಶಾಧಿಕರಣ, ಅವಿಭಾಗೇನದೃಷ್ಟತ್ವಾಧಿಕರಣಗಳಲ್ಲಿ ಈ ಅಂಶವು ಸ್ಪಷ್ಟಪಡುತ್ತದೆ. ಇವರ ಮತದಲ್ಲಿ ಅಭೇದ ಶ್ರುತಿಗಳಿಗೆ ಸಮನ್ವಯವಾದರೂ ಭೇದ ಶ್ರುತಿಗಳಿಗೆ ಸಮನ್ವಯವಾಗುವುದಿಲ್ಲ. ಜೀವ ಬ್ರಹ್ಮರಿಗೆ ಶ್ರುತಿ ಸಹಜವಾದ ಭೇದವನ್ನು ಹೇಳಿದೆಯೇ ಹೊರತು ಔಪಾಧಿಕ ಅಥವಾ ಕಾಲ್ಪನಿಕ ಭೇದವನ್ನು ಹೇಳಿಲ್ಲ. ಸರ್ವ ಶ್ರುತಿಗಳಿಗೂ ಸಮನ್ವಯವನ್ನು ಭಾಸ್ಕರ ಮತದಲ್ಲಿ ನಾವು ಕಾಣಲಾರೆವಾದ್ದರಿಂದ ಸರ್ವ ಶ್ರುತಿಸಮನ್ವಯಕ್ಕಾಗಿ ಹೊರಟಿರುವ ಶಕ್ತಿ ವಿಶಿಷ್ಟಾದ್ವೈತ ದರ್ಶನವನ್ನು ಪ್ರತ್ಯೇಕವೂ ಸ್ವತಂತ್ರವೂ ಆದ ಮತವೆಂದು ನಾವು ಒಪ್ಪಲೇಬೇಕು. ಹಾಗಾದರೆ ಯಾದವ ಪ್ರಕಾಶಮತದಲ್ಲಿ ಶಕ್ತಿವಿಶಿಷ್ಟಾದ್ವೈತ ದರ್ಶನವನ್ನು ಸೇರಿಸೋಣವೆ ? ಇದನ್ನು ಸಾವಧಾನವಾಗಿ ಪರಿಶೀಲಿಸಿದರೆ ಇದೂ ಸಹ ಸಾಧ್ಯವಾಗದೆಂಬ ಅರಿವು ಉಂಟಾಗುತ್ತದೆ. ಆದರೆ ಯಾದವ ಪ್ರಕಾಶ ಮತವು ಶಕ್ತಿವಿಶಿಷ್ಟಾದ್ವೈತ ಮತಕ್ಕೆ ಹೆಚ್ಚು ಹೋಲುವುದೆಂದು ತೋರಿದರೂ ಅವರು ಮುಕ್ತಿದಶೆಯಲ್ಲಿ ಜೀವ ಬ್ರಹ್ಮರಿಗೆ ಭೇದಾಭೇದಗಳೆರಡನ್ನು ತಿಳಿಸಿರುವ ಪ್ರಯುಕ್ತ ಆ ಮತಕ್ಕಿಂತಲೂ ಶಕ್ತಿ ವಿಶಿಷ್ಟಾದ್ವೈತ ದರ್ಶನವು ಪ್ರತ್ಯೇಕವಾಗಿರತಕ್ಕದೆಂಬ ಅಂಶ ಸ್ಪಷ್ಟಪಡುತ್ತದೆ. ಮುಕ್ತನಿಗೂ, ಪರಮಾತ್ಮನಿಗೂ ಅತ್ಯಂತ ಅಭೇದವು ಯುಕ್ತವೇ ಹೊರತು ಭೇದಾಭೇದವು ಯುಕ್ತವೆನಿಸುವುದಿಲ್ಲ. ಇದು ಶ್ರುತಿಗೂ ಸಮ್ಮತವಲ್ಲ. ಶ್ರುತಿ ಇವರಿಬ್ಬರಿಗೂ ಅತ್ಯಂತ ಅಭೇದವನ್ನು ತಿಳಿಸಿರುವಾಗ ಭೇದ ಮತ್ತು ಅಭೇದ ಇವೆರಡನ್ನೂ ಮುಕ್ತಿಯಲ್ಲಿ ಒಪ್ಪುವುದು ಯುಕ್ತವಲ್ಲ. ಆದ್ದರಿಂದ ಶಕ್ತಿವಿಶಿಷ್ಟಾದ್ವೈತ ದರ್ಶನವು ಯಾದವ ಪ್ರಕಾಶಮತದಲ್ಲೂ ಸೇರಿಸಲು ಸಾಧ್ಯವಿಲ್ಲ. ಹಾಗಾದರೆ ಕಾಶ್ಮೀರ ಶೈವದಲ್ಲಿ ಈ ಮತವನ್ನು ಸೇರಿಸೋಣವೆ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಇದನ್ನು ಪರಿಶೀಲಿಸಿ ನೋಡಿದರೆ ಇದೂ ಸಹ ಹೊಂದಿಕೆಯಾಗದೆಂಬ ಅಂಶ ತಿಳಿದು ಬರುತ್ತದೆ. ಕಾಶ್ಮೀರ ಶೈವದಲ್ಲಿ ಜೀವ ಬ್ರಹ್ಮರಿಗೆ ಸಂಸಾರ ದಶೆಯಲ್ಲಿ ಭೇದವನ್ನೂ ಮುಕ್ತಿದಶೆಯಲ್ಲಿ ಅಭೇದವನ್ನೂ ಹೇಳಿದ್ದರೂ ಸಹ ಅದು ಶಾಕ್ತ ಮತದ ಪ್ರಭಾವಕ್ಕೆ ಒಳಪಟ್ಟು ಶಕ್ತಿಗೆ ಪ್ರಾಧಾನ್ಯವನ್ನಿತ್ತಿದೆ. ಆದ್ದರಿಂದ ಶಿವಶಕ್ತಿಯರಿಗೆ ಸಮ ಪ್ರಾಧಾನ್ಯವನ್ನಿತ್ತು ಶಕ್ತಿ ವಿಶಿಷ್ಟ ಶಿವನಿಂದಲೇ ಜಗದ್ವ್ಯಾಪಾರ ನಿರ್ವಾಹವನ್ನು ಒಪ್ಪಿಕೊಂಡಿರುವ ಶಕ್ತಿ ವಿಶಿಷ್ಟಾದ್ವೈತ ಮತವನ್ನು ಕಾಶ್ಮೀರ ಶೈವದಲ್ಲಿ ಸೇರಿಸಲಾಗುವುದಿಲ್ಲ. ಶಿವನು ಶಕ್ತಿಯೊಡೆ

ಗೊಂಡಿದ್ದರೆಯೇ ಜಗದ್ವ್ಯಾಪಾರಗಳನ್ನು ನಿರ್ವಹಿಸಲು ಶಕ್ತನಾಗುವನೆಂದೂ, ಶಕ್ತಿಯಿಲ್ಲದಶಿವನು ಶವನಾಗುವನೆಂದೂ ಶಂಕರಭಗವತ್ಪಾದರೂ ಸಹ ಹೇಳಿದ್ದಾರೆ.ಆದರೂ ಶಿವನೊಬ್ಬನಿಂದಾಗಲೀ ಶಕ್ತಿಯೊಂದರಿಂದಾಗಲೀ ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರ, ತಿರೋಧಾನ ಅನುಗ್ರಹವೆಂಬ ಜಗದ್ವ್ಯಾಪಾರಗಳು ನಿರ್ವಾಹವಾಗುವಂತಿಲ್ಲ. ಇದಕ್ಕಾಗಿಯೇ ಶಿವನಿಗೂ ಶಕ್ತಿಗೂ ಸಾಮರಸ್ಯವನ್ನು ಪ್ರತಿಪಾದಿಸಿ ಆ ಮೂಲಕವೇ ಭಕ್ತಾನುಗ್ರಹಲೀಲೆಯೂ ಜಗದ್ವ್ಯಾಪಾರ ಲೀಲೆಯೂ ನಡೆಯಬೇಕೆಂದು ಶಿವಶಕ್ತಿಯರ ವೈಶಿಷ್ಟ್ಯವನ್ನು ಶಕ್ತಿವಿಶಿಷ್ಟಾದ್ವೈತ ದರ್ಶನವು ಎತ್ತಿಹಿಡಿದಿದೆ. ಇದರಿಂದ ಈ ಮತವನ್ನು ಕಾಶ್ಮೀರಾದ್ವೈತ ದರ್ಶನದಲ್ಲೂ ಸೇರಿಸಲಾಗುವುದಿಲ್ಲ. ಹಾಗಾದರೆ ಶ್ರೀಕಂಠಶಿವಾಚಾರ್ಯರು ತಮ್ಮ ಭಾಷ್ಯದಲ್ಲಿ ತಮ್ಮದೆಂದು ತಿಳಿಸಿರುವ ಶಕ್ತಿವಿಶಿಷ್ಟಾದ್ವೈತ ಮತದಲ್ಲಿ ಈ ದರ್ಶನವನ್ನು ಸೇರಿಸೋಣವೆ? ಎಂಬ ಪ್ರಶ್ನೆ ಏಳುತ್ತದೆ. ಇದನ್ನು ಪರಿಶೀಲಿಸಿ ನೋಡಿದರೆ ಇದೂ ಸಹ ಸಾಧ್ಯವಾಗದೆಂಬ ಅಂಶ ಮನವರಿಕೆಯಾಗುತ್ತದೆ. ಶ್ರೀಕಂಠಶಿವಾಚಾರ್ಯರು ಚಿತ್‌ಅಚಿತ್‌ಗಳ ಸ್ಥಾನದಲ್ಲಿ ಶಕ್ತಿಪದವನ್ನು ಉಪಯೋಗಿಸಿ ತಮ್ಮ ದರ್ಶನವನ್ನು ರಾಮಾನುಜರಂತೆ ಚಿದಚಿದ್ವಿಶಿಷ್ಟಾದ್ವೈತ ದರ್ಶನವೆಂದು ಕರೆಯದೆ ಶಕ್ತಿವಿಶಿಷ್ಟಾದ್ವೈತ ದರ್ಶನವೆಂದು ಕರೆದಿರುವುದೇನೋ ಸರಿ. ಆದರೆ ಅವರು ತಮ್ಮನ್ನು ಭೇದಾಭೇದವಾದಿಗಳಲ್ಲವೆಂದು ಶರೀರಾಶರೀರ ಭಾವವನ್ನು ಆಶ್ರಯಿಸಿರುವ ರಾಮಾನುಜ ಮತದಂತೆ ತಮ್ಮನ್ನು ವಿಶಿಷ್ಟಾದ್ವೈತಿಗಳೆಂದೂ "ಅಧಿಕಂತು ಭೇದ ನಿರ್ದೇಶಾತ್" ಎಂಬ ಸೂತ್ರದ ಭಾಷ್ಯದಲ್ಲಿ ಸ್ಪಷ್ಟವಾಗಿ ತಿಳಿಸಿರುವರು. ಅವರ ಮತದಲ್ಲಿ ಮುಕ್ತಿಯಲ್ಲೂ ಜೀವ ಬ್ರಹ್ಮರಿಗೆ ಅತ್ಯಂತ ಭೇದವು ಅಂಗೀಕೃತವಾಗಿದೆ. ಸಂಕಲ್ಪಾಧಿಕರಣದಲ್ಲಿ ಮುಕ್ತನಿಗೆ ಅವರು ಪಶುತ್ವವು ತೊಲಗಿ ಶಿವತ್ವ ಬರುವುದೆಂದು ಹೇಳಿದ್ದರೂ ಶಕ್ತಿವಿಶಿಷ್ಟಾದ್ವೈತದರ್ಶನದಂತೆ ಅವರ ಮತದಲ್ಲಿ ಮುಕ್ತನಿಗೆ ಶಿವನೊಡನೆ ಐಕ್ಯವನ್ನು ಹೇಳಿಲ್ಲ. ಮುಕ್ತನ ಶಿವತ್ವವೆಂಬುದು ಶಿವಸಾಮ್ಯ ರೂಪವೆಂದು ಶ್ರೀಕಂಠಶಿವಾಚಾರ್ಯರೇ ಹೇಳಿದ್ದಾರೆ. ಶಕ್ತಿವಿಶಿಷ್ಟಾದ್ವೈತ ದರ್ಶನದಲ್ಲಾದರೊ ಶಿವಜೀವ ಸಾಮರಸ್ಯರೂಪವಾದ ಐಕ್ಯವೇ ಮುಕ್ತಿ. ಶ್ರೀಕಂಠ ಮತದಲ್ಲಿ "ಬ್ರಹ್ಮಣಾಸಾದೃಶ್ಯಂ ಸಾಯುಜ್ಯಂ ಮುಕ್ತಾನಾಂ" ಎಂದು ಅನಾವೃತ್ತ್ಯಧಿಕರಣದಲ್ಲಿ ಬ್ರಹ್ಮಸಾದೃಶ್ಯವೇ ಸಾಯುಜ್ಯ ಮುಕ್ತಿ ಎಂದು ಅವರೇ ಸ್ಪಷ್ಟವಾಗಿ ಬಾಯಿಬಿಟ್ಟು ಹೇಳಿದ್ದಾರೆ. ಶಕ್ತಿವಿಶಿಷ್ಟಾದ್ವೈತದ ಸಾಮರಸ್ಯಕ್ಕೂ ಶ್ರೀಕಂಠ ಮತದ ಸಾದೃಶ್ಯಕ್ಕೂ ಹೇಗೆ ಹೊಂದಿಕೆಯಾದೀತು? ಇದು ಅಲ್ಲದೆ ಶ್ರೀಕಂಠರು ಚಿತ್ ಅಚಿತ್‌ಗಳ ಸ್ಥಾನದಲ್ಲಿ ಶಕ್ತಿಪದಗಳನ್ನು ಉಪಯೋಗಿಸಿದ್ದರೂ ಆ ಶಕ್ತಿ ಶಕ್ತಿವಿಶಿಷ್ಟಾದ್ವೈತ ಮತದಂತೆ ಶಿವನ ಪ್ರಾಣ ಸ್ವರೂಪವೆನಿಸಿ ಅವನಿಂದ ಬೇರ್ಪಡಿಸಲಾಗದ ಶಕ್ತಿ. ಇಂಗಡಲೊಳಿಂಪು, ಬೆಳದಿಂಗಳೊಳು ತಂಪು, ಕುಸುಮಂಗಳೊಳು ಕಂಪು ಬೆರೆತು ಬೇರ್ಪಡಿಸಲಾಗದಿರುವಂತೆ ಶಿವನಲ್ಲಿ 'ಪ್ರಾಣಾರಾಮಂ' ಎಂಬ ಶ್ರುತಿಯ ಪ್ರಕಾರ ಪ್ರಾಣಶಕ್ತಿ ಬೆರೆತು ಬೇರಾಗದಂತೆ ನೆಲೆಸಿದೆ. ಶಬ್ದ

ವನ್ನು ಬಿಟ್ಟು ಅರ್ಥವೂ ಅರ್ಥವನ್ನು ಬಿಟ್ಟು ಶಬ್ದವೂ ಬೇರಾಗದಿರುವಂತೆ ಶಿವನ ಪ್ರಾಣ ಶಕ್ತಿ ಅವನಿಂದ ಬೇರಾಗದಂತೆ ಅವನಹಾಗೆಯೇ ಸಚ್ಚಿದಾನಂದ ರೂಪವಾಗಿರುವುದು. ಇಂತಹ ಶಿವಶಕ್ತಿಯರ ಸಾಮರಸ್ಯವನ್ನು ಶ್ರೀಕಂಠಮತದಲ್ಲಿ ಕಾಣಲಾರೆವು. ಆದ್ದರಿಂದ ಶಕ್ತಿವಿಶಿಷ್ಟಾದ್ವೈತವು ಸ್ವತಂತ್ರ ವಾತಾವರಣದಲ್ಲಿ ತನ್ನದೇ ಆದ ವೈಶಿಷ್ಟ್ಯದಿಂದ ಶೋಭಿಸುತ್ತಲಿದೆ. ಕಾಶ್ಮೀರ ಶೈವದಲ್ಲಿ ಜೀವನಿಗೆ ತಾನು ಶಿವನೆಂಬ ಪ್ರತ್ಯಭಿಜ್ಞೆ ಅಥವಾ ಸ್ಮರಣಕ್ಕೆ ಪ್ರಾಧಾನ್ಯವನ್ನಿತ್ತಿದೆ. ಹಾಗೆಯೇ ಶಕ್ತಿ ವಿಶಿಷ್ಟಾದ್ವೈತ ಮತದಲ್ಲಿ ಜೀವನಿಗೆ ದೀಕ್ಷಾಸಂಸ್ಕಾರದಿಂದ ಶಿವಭಾವದ ಅರಿವುಂಟಾಗಿ ಶಿವೋಹಂ ಭಾವದ ಆವಶ್ಯಕತೆಯೇನೋ ಇದೆ. ಆದರೆ ಕಾಶ್ಮೀರಶೈವದ ಪ್ರತ್ಯಭಿಜ್ಞೆಗೆ ಜೀವನಲ್ಲಿ ಶಿವಭಾವವನ್ನು ಭದ್ರಪಡಿಸಿ ಅನುಭವಿಸಲು ಅಳವಡಿಸಲಿಕ್ಕೆ ಬಹಳ ಕ್ಲೇಶವಿದೆ. ಶಕ್ತಿವಿಶಿಷ್ಟಾದ್ವೈತದಲ್ಲಾದರೂ ಶಿವೋಹಂಭಾವದ ಅಸ್ತಿಭಾರಕ್ಕೆ ಅಡಚಣೆಯುಂಟಾಗದಂತೆ ನಿರಂತರಕ್ರಿಯೆ ನಡೆದು ಶಿವೋಹಂಭಾವವು ಭದ್ರವಾಗುವುದೇ ಹೊರತು ಕಡಿಮೆಯಾಗುವಂತೆಯೇ ಇಲ್ಲ. ಇದು ಶಿವೋಹಂಭಾವದ ಅಹಂಗ್ರಹೋಪಾಸನದ ಮೂಲಕ ಭಕ್ತನಿಗೆ ದೇಹೇಂದ್ರಿಯಗಳಲ್ಲೂ, ಮನ, ಬುದ್ಧಿ, ಚಿತ್ತ, ಅಹಂಕಾರಗಳಲ್ಲೂ ಶಿವಭಾವವನ್ನು ಭದ್ರಪಡಿಸಿ ಹೊರಗಿನ ಸನ್ನಿವೇಶದಲ್ಲೂ ಶಿವಭಾವವನ್ನು ನೆಲೆಗೊಳಿಸಿ ಸುತ್ತಲೂ ನೆಲೆಸಿರುವ ರೂಪ ರಸ ಗಂಧ ಸ್ಪರ್ಶ ಶಬ್ದಗಳನ್ನು ಶಿವಸ್ವರೂಪವಾಗಿ ಮಾರ್ಪಡಿಸುತ್ತದೆ. ಇದರಿಂದ ಜೀವನಿಗೆ ತಾನು ಶಿವಾಂಶನೆಂಬ ಅರಿವು ತಲೆದೋರಿ ನೆಲೆಯಾಗಿ ನಿಂತು ಅನುಭವಕ್ಕೆ ಬರಲು ಸಾಧ್ಯವಿರುವ ಪ್ರಯುಕ್ತ ಇದೇ ಸ್ವತಂತ್ರ ದರ್ಶನವಾಗಿ ಶೋಭಿಸುತ್ತಲಿದೆ. ಮಾನವನು ಮಾಯಾಶಕ್ತಿಯ ಪ್ರಭಾವದಿಂದ ತನ್ನ ವಿಸ್ತಾರವಾದ ಶಿವ ಸ್ವರೂಪವನ್ನು ಕಳೆದುಕೊಂಡು ದುಃಖಿಯೂ, ಅಲ್ಪನೂ,ಸ್ವಾರ್ಥಿಯೂ ಆಗಿರುವಾಗ ಅವನನ್ನು ವ್ಯವಸ್ಥಿತವಾದ ರೀತಿಯಲ್ಲಿ ನೆಲೆಗೊಳಿಸಿ ಅವನ ಶಕ್ತಿಪ್ರಕಾಶಗಳನ್ನು ವಿಕಾಸಗೊಳಿಸುವುದೇ ಶಕ್ತಿವಿಶಿಷ್ಟಾದ್ವೈತದರ್ಶನದ ಸಾರಸಂದೇಶ. ಪರಮಾತ್ಮನು ಸ್ವತಂತ್ರನೂ, ಪರಿಪೂರ್ಣನೂ, ಜ್ಞಾನಾನಂದ ಪ್ರಕಾಶನೂ ಆಗಿರುವಂತೆಯೇ ನಾವೂ ಸಹ ಅವನ ಅಂಶವೇ-ಆದ್ದರಿಂದ ಅವನಂತೆಯೇ ಅಲ್ಪಜ್ಞಾನ ಪ್ರಕಾಶ ಉಳ್ಳವರಾಗಿ ಅದನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಅವನನ್ನು ನಿತ್ಯವೂ ಸ್ಮರಿಸುತ್ತಿರುವೆವು. ಕಡಿಮೆಯಾಗಿರುವ ಶಕ್ತಿಯನ್ನು ಹೆಚ್ಚು ಮಾಡಿಕೊಳ್ಳುವುದೇ ಈಗ ನಾವು ಮಾಡಬೇಕಾಗಿರುವ ಕಾರ್ಯ. "ನಾವು ಪರಮಾತ್ಮನ ಬಂಧುಗಳೆಂದೂ, ಅವನು ನಮ್ಮ ಉದ್ಧಾರಕ್ಕಾಗಿ ನಮ್ಮೊಡನೆಯೇ ಇರುವನೆಂದೂ" ಭಾವಿಸುವುದೇ ನಮ್ಮ ಸಕಲ ದುಃಖ ರೋಗಗಳ ನಿವಾರಣೋಪಾಯ. ಹೀಗೆ ನಾವು ಪರಮಾತ್ಮನಿಗೆ ಸಂಬಂಧಿಸಿರುವವೆಂಬ ಭಾವನೆ ನಮ್ಮಲ್ಲಿ ಯಾವತ್ತೂ ಇರಬೇಕು. ಇದರಿಂದ ನಮ್ಮ ಶಕ್ತಿ ಜ್ಞಾನಗಳು ವಿಕಾಸವಾಗಲು ಅವಕಾಶವಾಗುತ್ತದೆ. ಹಾಗೆಯೇ ನಮ್ಮ ವಾಸ್ತವ ಶಿವಭಾವದ ಅರಿವು ಉಂಟಾಗಿ ನಮ್ಮಲ್ಲಿ ಶೈವಾನುಸಂಧಾನಕ್ಕೆ ಅವಕಾಶವಾಗುವುದಿಲ್ಲ. ಹೀಗೆ ನಮ್ಮ ಶಕ್ತಿಯನ್ನು ಹೆಚ್ಚಿಸಿಕೊಂಡು ಸುಖ, ಶಾಂತಿ

ಗಳನ್ನು ನಾವು ಅನುಭವಿಸಬೇಕಾಗಿದೆ. ನಾವೆಲ್ಲರೂ ಜಾತಿ, ಮತಗಳ ಗೊಂದಲದಿಂದ ಪಾರಾಗಿ ಒಂದೇ ಸ್ಥಲದವರೆಂಬ ಸದ್ಭಾವನೆ ನಮ್ಮಲ್ಲಿ ಬೆಳೆದರೆ ದ್ವೇಷ, ಮಾತ್ಸರ್ಯ, ಅಸೂಯೆಗಳು ನಮ್ಮಿಂದ ದೂರಕ್ಕೆ ಸರಿಯುವುವು. ಹಾಗೆಯೇ ಎಲ್ಲರನ್ನು ಭಗವದಂಶರೆಂದು ಗೌರವಿಸುತ್ತ ರಾಗ ದ್ವೇಷಗಳ ಬಲೆಗೆ ಬೀಳದಂತೆ ತೃಪ್ತಿಯಿಂದ ನಮ್ಮ ಕರ್ತವ್ಯಗಳನ್ನು ನಡೆಸಲು ನಾವು ತಯಾರಾಗಬಹುದು. ಮಾನವನು ಸರ್ವರನ್ನು ತನ್ನ ಸಹೋದರರೆಂದು ಇತರ ಭೋಜ್ಯವಸ್ತುಗಳನ್ನು ಪರಮಾತ್ಮನ ಭೋಗಕ್ಕಾಗಿಯೇ ನಿರ್ಮಿತವಾಗಿವೆ ಎಂದು ಭಾವಿಸಿ ಭಕ್ತಿಯಿಂದ ಅವನಿಗೆ ಅರ್ಪಣಮಾಡಿ ಪ್ರಸಾದ ಭಾವನೆಯಿಂದ ಅದನ್ನು ಉಪಯೋಗಿಸುವ ಮನೋಭಾವವನ್ನು ಕಲಿತಲ್ಲದೆ ಸುಖ, ಶಾಂತಿಗಳನ್ನು ಬಾಳಿನಲ್ಲಿ ಪಡೆಯಲಾರನು. ಈ ಪದ್ಧತಿಯನ್ನು ಅವನು ಎಂದು ಕಲಿತು ಅನುಸರಿಸುವನೋ ಅಂದೇ ಅವನಿಗೆ ಕಲ್ಯಾಣವಿರುವುದು. ಈ ಬಗೆಯ ಹೊಸ ಜೀವನವನ್ನೂ ದಿವ್ಯ ಸ್ಫೂರ್ತ್ಯೋತ್ಸಾಹಗಳನ್ನೂ ಶಕ್ತಿ ವಿಶಿಷ್ಟಾದ್ವೈತ ದರ್ಶನವು ಮಾನವನಿಗೆ ಕಾಣಿಕೆಯಾಗಿ ಕೊಡಬಿದೆ. ಜಗತ್ತನ್ನು ಬ್ರಹ್ಮದ ಪರಿಣಾಮವಾದ್ದರಿಂದ ಸತ್ಯವೆಂದೂ ವಿಶಿಷ್ಟಾದ್ವೈತ ದರ್ಶನವು ಭಾವಿಸಿದೆ. ಇಂತಹ ಸತ್ಯ ಪ್ರಪಂಚದಲ್ಲಿ ಸತ್ಯನಾದ ಜೀವನು ಸತ್ಯನಾದ ಶಿವನ ಅಂಶನಾಗಿದ್ದರೂ ಮಾಯಾಶಕ್ತಿಯ ಸಂಬಂಧದಿಂದ ಸಹಜವಾಗಿ ಭಿನ್ನವಾಗಿದ್ದು ಶಿವೋಹಂಭಾವದಿಂದ ಶಿವನನ್ನು ನಿರಂತರವೂ ಚಿಂತಿಸಿ, ಸ್ಮರಿಸಿ, ಧ್ಯಾನಿಸಿ, ತದೇಕಚಿತ್ತನಾಗಿ ಅವನನ್ನು ದೇಹದ ಎಲ್ಲಾ ಅಂಗಗಳಲ್ಲಿಯೂ ನೆಲೆಗೊಳಿಸಿಕೊಂಡು ಅನುಭವಿಸಿ ಅವನನ್ನೇ ಎಲ್ಲರಲ್ಲೂ ಲೀನಗಂಡು ಎಲ್ಲರನ್ನು ತನ್ನಂತೆ ಗೌರವಿಸಿ ಪುರಸ್ಕರಿಸುವ ವಿಶಾಲದೃಷ್ಟಿ ಉದಾತ್ತ ವರ್ತನೆಗಳನ್ನು ಮಾನವರು ಕಲಿತು ನೆಮ್ಮದಿಯಿಂದಲೇ ಜೀವನವನ್ನು ನಡೆಸಲೆಂದು ಶಕ್ತಿವಿಶಿಷ್ಟಾದ್ವೈತ ದರ್ಶನವು ನಿರೀಕ್ಷಿಸುತ್ತಲಿದೆ. ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವನ್ನು ಶಿವಾಗಮಗಳು ಹೀಗೆ ಸ್ಪಷ್ಟಪಡಿಸಿವೆ :

ಜೀವಃ ಸತ್ಯಂ ಜಗತ್ಸತ್ಯಂ ಶಿವಃ ಸತ್ಯಂ ಸ್ವಭಾವತಃ ।
ತಯೋರ್ಭೇದಃ ಸತ್ಯಂ ವಾ ಕ್ರಿಮಿಭ್ರಮರಯೋರಿವ ॥
ಮಾನವಃ ಶಿವಯೋಗೇನ ಶಿವೋಭವತಿನಾನ್ಯಥಾ ।
ಭ್ರಮದ್ಭ್ರಮರ ಚಿಂತಾಯಾಂ ಕೀಟೋಽಪಿ ಭ್ರಮರಾಯತೇ

ಜೀವನ ಸತ್ಯತ್ವವನ್ನು ತಿಳಿಸುತ್ತಲೆ ಅವನಿಗೆ ಜೀವ ಭಾವ ಸತ್ಯವಾಗಿಯೂ ತೋರುವುದೆಂದು ವಾಸ್ತವಿಕವಾದ ಶಿವಭಾವ ಅವನಿಗೆ ಆಗ ಅನುಭವ ಗೋಚರವಾಗುವುದೆಂದು ಶಿವಾಗಮಗಳು ತಿಳಿಸಿವೆ. ಇದರಿಂದ ಜೀವ, ಜಗತ್ತುಗಳು ಸತ್ಯವೆಂದೂ ಇವು ಶಿವನಿಂದಲೇ ಬಂದು ಶಿವನಲ್ಲಿಯೇ ಸೇರುವುವೆಂದು ಸಹಜವಾಗಿ ನಮಗೆ ತಿಳಿದು ಬರುತ್ತದೆ. ಕ್ರಿಮಿಯು ಭ್ರಮರದ ಸಂಪರ್ಕದಿಂದ ಹೇಗೆ ಭ್ರಮರವೇ ಆಗುವುದೋ ಹಾಗೆ ಜೀವನು ಶಿವನ ಧ್ಯಾನ, ಧಾರಣ ಮೊದಲಾದ ನಿತ್ಯ

ಸಂಪರ್ಕದಿಂದ ಶಿವನೇ ಆಗುವನು. ಶಿವನ ಚಿಂತನ, ಸ್ಮರಣ, ಧಾರಣ ಮೊದಲಾದ ನಿತ್ಯಾಭಿಯೋಗದಿಂದ ಜೀವನು ಶಿವನಲ್ಲದೆ ಬೇರೆ ಏನೂ ಆಗಲು ಸಾಧ್ಯವೇ ಇಲ್ಲ; ಯಾಕೆಂದರೆ ಮನಸ್ಸು ಯಾವ ವಸ್ತುವಿನಲ್ಲಿ ತನ್ನ ವಿಶಿಷ್ಟ ಶಕ್ತಿಯನ್ನು ಕೇಂದ್ರೀಕರಿಸುವುದೋ ಅದು ಅದರ ಆಕಾರ ವರ್ತನೆಗಳನ್ನು ಹೊಂದುವುದು ಸಹಜ. ಜೀವನು ನಿತ್ಯಾರ್ಚನೆಯಲ್ಲಿ ನಿರತನಾಗಿ ಸಕಲ ವ್ಯವಹಾರಗಳನ್ನು ಶಿವನ ಸೇವೆಗೋಸ್ಕರ ಮಾಡ ತೊಡಗಿದರೆ ಮನಸ್ಸು ನಿಯತವಾಗಿ ಅವನ ಸ್ಮರಣದಲ್ಲಿಯೇ ವಿಲೀನವಾಗುವುದು. ಈ ಬಗೆಯ ನಿತ್ಯಯಜ್ಞದಿಂದ ಮಾನವನು ಶಿವನಾಗುವುದರಲ್ಲಿ ಯಾವ ಸಂಶಯವೂ ಇಲ್ಲ. ಈ ವಿಷಯವನ್ನು ಡಾ॥ ಸಿದ್ದಪ್ಪಾರಾಧ್ಯರು ತಮ್ಮ ಶಕ್ತಿ ವಿಶಿಷ್ಟಾದ್ವೈತ ದರ್ಶನದ ಮುಕ್ತಿ ಸ್ವರೂಪದಲ್ಲಿ ಸ್ಪಷ್ಟಗೊಳಿಸಿರುವರು. ಮಾನವನು ಶಿವನಾಗುವ ಬಗೆಯನ್ನು ಸಿದ್ಧಾಂತ ಶಿಖಾಮಣಿಯು ಹೃದಯಂಗಮವಾಗಿ ತಿಳಿಸಿದೆ:

ಜೀವತ್ವಂ ದುಃಖಸರ್ವಸ್ವಂ ತದಿದಂ ಮಲ ಕಲ್ಪಿತಂ ।
ನಿರಸ್ಯತೇ ಗುರೋರ್ಬೋಧಾತ್ ಜ್ಞಾನಶಕ್ತಿ ಪ್ರಕಾಶತೇ ॥

ಜೀವ ಭಾವವು ದುಃಖಗಳ ಮೂಲವೆನಿಸಿದೆ. ಜೀವನು ಪರಮಾತ್ಮನ ಅಂಶನಾದರೂ ದೇಹಕ್ಕೆ ಬಂದು ಅದನ್ನು ಅಭಿಮಾನಿಸಿಕೊಂಡು ಅನೇಕ ದುಃಖಗಳಿಗೀಡಾಗಿರುವನು. ಅವನು ಗರ್ಭದಿಂದ ದೇಹದೊಡನೆ ಹೊರಗೆ ಬರುವುದೇ ದುಃಖ. ಬಂದ ಮೇಲೆ ಹೊಟ್ಟೆ ಬಟ್ಟೆಗಳ ಸಮಸ್ಯೆಯನ್ನು ಬಗೆಹರಿಸುವ ದುಃಖ. ಹೆಂಡಿರು ಮಕ್ಕಳ ಯೋಗಕ್ಷೇಮಗಳನ್ನು ನಡೆಸುವ ದುಃಖ. ರೋಗರುಜಿನಗಳನ್ನು ಅನುಭವಿಸುವ ದುಃಖ. ಕೊನೆಗೆ ಮರಣದ ದುಃಖ. ಇಷ್ಟೆಲ್ಲಾ ಅನುಭವವಿರುವಾಗ ಜೀವನು ಹೊರ ಒಳ ಭಯಗಳಿಂದ ಪಾರುಗಾಣದೆ ಅಶಕ್ತತೆಯಿಂದ ನರಳುತ್ತಲಿರುವನು. ಹೀಗೆ ಭಯ, ಶೋಕ, ಮೋಹಗಳಿಂದ ನರಳುವುದೇ ಜೀವಭಾವವೆನಿಸಿದೆ. "ಅನೀಶಯಾ ಶೋಚತಿಮುಹ್ಯಮಾನಃ" ಎಂದು ಶ್ವೇತಾಶ್ವತರ ಶ್ರುತಿಯು ಜೀವನ ದೌರ್ಬಲ್ಯ ಶೋಕ, ಮೋಹಗಳ ದುರವಸ್ಥೆಯನ್ನು ವರ್ಣಿಸಿದೆ. ಹೀಗೆ ಪ್ರಪಂಚದ ಮಾನವರೆಲ್ಲರು ಆಗರ್ಭ ಶ್ರೀಮಂತರಾಗಿದ್ದರೂ ದುಃಖಕ್ಕೆ ಈಡಾಗಿರುವರು. ಜೀವನು ವಾಸ್ತವವಾಗಿ ಶಿವನ ಸಾಕ್ಷಾದಂಶನಾಗಿದ್ದರೂ, ಆನಂದದ ಕಿಡಿಯಾಗಿದ್ದರೂ ಅವನಿಗೆ ಈ ದುಃಖ ಹೇಗೆ ಅಂಟಿಕೊಂಡಿತೆಂದರೆ ಅದರ ನಿಜಾಂಶವನ್ನು ಅಲ್ಲಿಯೇ ತಿಳಿಸಲಾಗಿದೆ. ಅವನಿಗೆ ಈ ದುಃಖ ಸಹಜವಾದುದುಲ್ಲ. ಆದರೆ ಅವನ ಮಲದೋಷಗಳಿಂದ ಸಂಭವಿಸಿದೆ. ಮಲವೆಂದರೆ ಅವನಿಗೆ ದೇಹದ ಸಂಪರ್ಕದಿಂದ ಬಂದಿರುವ ದುರ್ವರ್ತನೆ, ಅಲ್ಪತನ, ದುರಹಂಕಾರ, ದುರಭಿಮಾನ, ವ್ಯಾಮೋಹ ಮೊದಲಾದ ಲೋಪದೋಷಗಳು. ಒಮ್ಮೆ ಅವನು ತನ್ನ ಮೂಲ ಸ್ವರೂಪವನ್ನು ಮರೆತಿದ್ದರಿಂದ ಈ ಮಲದೋಷಗಳೇ ಅವನಿಗೆ ಅಂಟಿಕೊಂಡವು. ಆದರೆ ಇವು ಅವನಿಗೆ

ಅಂಟಿಕೊಂಡಿದ್ದರೂ ಶಾಶ್ವತವಾಗಿ ಇರುವಂಥವಲ್ಲ. ಇವನಿಗೆ ಗುರುವಿನ ಕೃಪಾ ಪ್ರಸಾದದಿಂದ ತಾನು ಶಿವಾಂಶನೆಂಬ ಅರಿವು ದೊರೆತೊಡನೆ ಇವನಲ್ಲಿ ಸ್ವಾರ್ಥತೆ, ವ್ಯಾಮೋಹ, ಅಹಂಕಾರಗಳ ದಾಂಧಲೆ ಕಡಿಮೆಯಾಗುತ್ತ ಬರುವುದು. ಕತ್ತಲೆಯ ವ್ಯವಹಾರವನ್ನು ತೊರೆದು ಬೆಳಕಿನಲ್ಲಿ ಮಿತಾಹಾರ ವಿಹಾರಿಯಾಗಿ ದೇಹದ ಭೋಗವನ್ನು ಅಭಿಮಾನವಿಲ್ಲದಂತೆ ಪ್ರಸಾದರೂಪದಿಂದ ಉಪಯೋಗಿಸುತ್ತಾ ಜೀವನು ಶಿವಯೋಗದ ನಿತ್ಯ ಸುಖವನ್ನು ನಿರಭಿಮಾನದಿಂದ ಅನುಭವಿಸತೊಡಗುವನು. ಆಗ ಅವನು ಜ್ಞಾನಸ್ವರೂಪನಾಗಿ ಪ್ರಕಾಶಿಸತೊಡಗುವನು. ಈ ಬಗೆಯ ಜ್ಞಾನ ಕ್ರಿಯಾ ಶಕ್ತಿಗಳ ವಿಕಾಸ ಜೀವನವನ್ನು ಮಾನವರೆಲ್ಲರು ಈ ಪವಿತ್ರವಾದ ದೇಹದಲ್ಲಿ ನಡೆಸಲೆಂಬ ಸದಾಶಯದಿಂದ ಶಕ್ತಿ ವಿಶಿಷ್ಟಾದ್ವೈತ ದರ್ಶನವು ಹೊರಟಿದೆ. ಶಿವ ಶಕ್ತಿಗಳ ಸಾಮರಸ್ಯವನ್ನು ತಿಳಿಸುತ್ತಲೇ ಜೀವೇಶ್ವರರ ಯೋಗವನ್ನು ಒತ್ತಿ ಹೇಳುತ್ತಲೇ ಜಗತ್ತನ್ನು ಶಿವಮಯವೆಂದು ಭಾವಿಸುವ ದಿವ್ಯ ಸಂಜೀವಿನಿಯನ್ನು ಶಕ್ತಿ ವಿಶಿಷ್ಟಾದ್ವೈತ ದರ್ಶನವು ಜಗತ್ತಿಗೆ ಧಾರೆ ಎರೆದು ಮಹೋಪಕಾರವನ್ನೆಸಗಿದೆ. ಜಗತ್ತಿನ ಪ್ರತಿಯೊಂದು ವಸ್ತುವಿನಲ್ಲೂ ಪರಮಾತ್ಮನ ಮಾಯಾಶಕ್ತಿ ಒಂದೊಂದು ಬಗೆಯಲ್ಲಿ ನೆಲೆಸಿರುವುದರಿಂದ ಯಾವುದೂ ತುಚ್ಛವಾದುದಲ್ಲವೆಂಬ ಸಿದ್ಧಾಂತವನ್ನು ಈ ದರ್ಶನವು ಸುಲಭವಾಗಿ ತಿಳಿಸುತ್ತದೆ. ಯಾವ್ಯಾವ ವಸ್ತುವಿನಲ್ಲಿ ಯಾವ್ಯಾವ ವಿಶೇಷವಿದೆಯೋ ಅದೆಲ್ಲವು ಪರಮಾತ್ಮನ ಶಕ್ತ್ಯಂಶವೇ ಆಗಿದೆ. "ಯಸ್ಯೈಕ ಶಕ್ತಿಶಕಲೇ ಸಕಲಂ ಸಮಾಪ್ತಂ" ಎಂದು ಅನುಭವಿಗಳು ಹೇಳಿರುವುದು ಸತ್ಯವೇ ಆಗಿದೆ. ಜಗತ್ತೆಲ್ಲವು ಪರಮಾತ್ಮನ ಶಕ್ತಿಯ ಅತ್ಯಲ್ಪಾಂಶದಲ್ಲಿಯೇ ಅಡಗಿ ಹೋಗಿದೆ. ಇಷ್ಟೆಲ್ಲವನ್ನು ನನ್ನ ಒಂದೇ ಅಂಶದಲ್ಲಿಯೇ ಅಡಗಿಸಿಕೊಂಡಿರುವೆನೆಂದು ಶ್ರೀಕೃಷ್ಣನು ಹೇಳಿರುವಂತೆ ಈ ಜಗತ್ತನ್ನು ಶಿವಾಂಶವೆಂದು ತಿಳಿದು ಪ್ರೀತಿಸಿ ಗೌರವಿಸಬೇಕಾದ್ದು ನಮ್ಮ ಕರ್ತವ್ಯವಾಗಿದೆ. ಆದ್ದರಿಂದ ಈ ಜಗತ್ತಿನಲ್ಲಿ ಆತ್ಮವಿಕಾಸಕ್ಕೆ ಎಲ್ಲರೂ ಅರ್ಹರೇ ಇರುವರು. ಇಲ್ಲಿ ಅಯೋಗ್ಯರೆಂಬುವವರೇ ಯಾರೂ ಇಲ್ಲ. ಹೀಗೆ ಸರ್ವಸಮಭಾವವನ್ನು ಎತ್ತಿ ಹಿಡಿದಿರುವುದರಿಂದ ಶಕ್ತಿ ವಿಶಿಷ್ಟಾದ್ವೈತ ದರ್ಶನವು ಸರ್ವಮಾನ್ಯವೆನಿಸಿದೆ. ಇದರ ಪರಿಚಯದಿಂದ ಜಗತ್ತು ನಿರಾಮಯವೂ ಶಾಂತವೂ ಆಗಲಿ.

ಇತಿ ಶಿವಂ

# ಶಿ ವಾ ನು ಭ ವ

---

● ಸಾಹಿತ್ಯರತ್ನ ಷ. ಬ್ರ. ಶ್ರೀ ಗುರುಸಿದ್ಧ ಶಿವಾಚಾರ್ಯ ಸ್ವಾಮಿಗಳು
ಗುರುವಿನಪುರ. ಬೃಹನ್ಮಠ

ಯೇ ಪಶ್ಯಂತಿ ಜಗಜ್ಜಾಲಂ ಚಿದ್ರೂಪಂ ಶಿವಯೋಗತಃ।
ನಿರ್ಧೂತ ಮಲ ಸಂಸ್ಪರ್ಶಾಸ್ತೇ ಸ್ಮೃತಾ ಶಿವಯೋಗಿನಃ॥
ಜ. ರೇಣುಕಾಚಾರ್ಯರು

ಭಕ್ತಿಗೆ ಅನುಭಾವವೇ ಬೀಜಕಾಣಿರೋ
ಭಕ್ತಿಗೆ ಅನುಭಾವವೇ ಆಚರಣೆ ಕಾಣಿರೋ
ಭಕ್ತಿಗೆ ಅನುಭಾವವೇ ಸಕಲೈಶ್ವರ್ಯದ ಶೃಂಗಾರ ಕಾಣಿರೋ!
ಆಚಾರ ಸಂಪನ್ನರೆನಿಸುವ ಪರಮ ಸದ್ಭಕ್ತರಿಗೆ
ಅನುಭಾವವೇ ಅರಿವಿನ ಗೊತ್ತು ಕಾಣಿರೋ !!
ಚನ್ನಬಸವಣ್ಣನವರು

ತ್ರಿವಿಧದ ಅನಿತ್ಯ, ತ್ರಿವಿಧದ ನಿತ್ಯದ ಬಲ್ಲವರಾರೂ?
ತ್ರಿವಿಧಕ್ಕೆ ತ್ರಿವಿಧವನಿತ್ತು ತ್ರಿವಿಧ ಪ್ರಸಾದವ ಕೊಳಬಲ್ಲಡೆ
ಆತನ ತ್ರಿವಿಧನೆಂಬೆ, ಆತನ ವೀರನೆಂಬೆ, ಆತನ ಗುರುಪುತ್ರನೆಂಬೆ
ಗುಹೇಶ್ವರ ಲಿಂಗದಲ್ಲಿ ಆತನ ಅಚ್ಚ ಪ್ರಸಾದಿ ಎಂಬೆ, ಆತನೇ
ಪರಮ ಶಿವಾನುಭಾವಿ ಎಂಬೆ——ಅಲ್ಲಮ ಪ್ರಭುಗಳು

ಚೇತನ ಪ್ರಪಂಚದ ಒಂದು ವಿಶಿಷ್ಟ ಘಟಕವಾಗಿ ಮಾನವನು ಬಂದಿರುವನೆಂದು ಹೇಳಲಾಗುತ್ತದೆ. ಅದೂ ಒಂದು ದೃಷ್ಟಿಯಿರಬಹುದು. ಆದರೆ ಹುಟ್ಟಿದ ಹಿರಿಮೆಯನ್ನು ಹೇಳುವ ಮಾನವರೆಲ್ಲರೂ ಹುಟ್ಟಿ ಹಿರಿಯರಾಗುವುದು ಹಾಗಿರಲಿ, ಮಾನವರೂ ಆಗಿಲ್ಲವೆಂಬ ಸತ್ಯವನ್ನು ನಾವು ಅವಶ್ಯವಾಗಿ ಸ್ವೀಕರಿಸಬೇಕು. ಅಲ್ಲದೆ ಮಾನವನ ಮಹತಿಯನ್ನು ಅವನ ಜನ್ಮಕ್ಕೋ, ಜಾತಿಗೋ, ಜೋಡಿಸುವ ಚಟವನ್ನು, ಹಠವನ್ನು ಬಿಟ್ಟು, ಅವನ ಜೀವನಕ್ಕೆ ಜೋಡಿಸುವ ಜಾಣ್ಮೆಯನ್ನು ನಾವು ವ್ಯಕ್ತಗೊಳಿಸಬೇಕು. ಮಾನವನ ಹಿರಿಮೆ, ಅವನ ಕ್ರಿಯಾಶೀಲ ಜೀವನದ ಫಲವಾಗಿ ತೋರಿ ಬರುವ ಅಂತರಂಗದ ಪರಿಪಾಕದಲ್ಲಿದೆ ಎಂಬ ವಿಚಾರ ನಮಗೆ ಮನವರಿಕೆಯಾಗಬೇಕು.

ಕ್ರಿಯಾಶೀಲ ಜೀವನವೆಂದರೆ, ಅನುಭವದ ಜೀವನವೆಂದು ಸಾಮಾನ್ಯವಾಗಿ ಹೇಳಬಹುದು. ಏಕೆಂದರೆ, ಅರಿವಿಗೆ ಆಪ್ಯಾಯನವಾಗುವಂತಹ ಆಚರಣೆಯನ್ನು ಪ್ರಚೋದಿಸುವ ಚೈತನ್ಯವಾಗಿದೆ ಅನುಭವ. ಅಂತಹ ಅನುಭವವೇ ಮಾನವ ಜೀವನದ ಆಧಾರಸ್ತಂಭವಾಗಿದೆ. ಮಾನವನು ಬಹುಮುಖವಾಗಿ ಸಂಪಾದಿಸಿ, ಸ್ವಾನುಭವವಾಗಿ ಮಾರ್ಪಡಿಸಿಕೊಂಡಿರುವ ವಿಶುದ್ಧ ಅನುಭವದ ಸಹಾಯದಿಂದಲೇ ಅಂತಃಶುದ್ಧಿಯನ್ನು, ಕ್ರಿಯಾಸಿದ್ಧಿಯನ್ನು ಸಾಧಿಸುವನು. ಅವನು ಸೇವಿಸುವ ಅನುಭವದ ಆಹಾರ, ಸತ್ಯ ಶುದ್ಧ ಸಾತ್ವಿಕವಾಗಿರದಿದ್ದರೆ ಕತ್ತಲೆಯನ್ನು ತಿಂದು ಕಾಡಿಗೆಯನ್ನು ಕೊಡುವ ದೀಪದಂತೆ. ಅವನ ಕೃತಿಗಳೆಲ್ಲವೂ ಕಲಂಕವಾಗಿ ಪರಿಣಮಿಸುವುವು.

ಅನುಭವದ ಪ್ರಮಾಣ, ಪರಿಮಿತಿ ಪ್ರಕಾರಗಳಿಗೆ ಅನುಗುಣವಾಗಿ ಮಾನವನು ತನ್ನ ಜೀವನದಲ್ಲಿ, ಫಲಿತಗಳನ್ನು ಕಂಡುಕೊಳ್ಳುವನು. ಮಾನವೀಯ ಸಂಸ್ಕಾರಗಳನ್ನು ಎಚ್ಚರಗೊಳಿಸಿ, ಜಾಗೃತಮಾಡಿ ಮಾನವನ ಜೀವಿತದಲ್ಲಿ ಸಂಸ್ಕೃತಿಯಾಗಿ ಹರಿದು ಬರುವ ಅ ನು ಭ ವ ದ ಶ ಕ್ತಿ ಅಸದೃಶವಾದುದು; ಅಸಮಾನವಾದುದು. ಅಂತಹ ಶಕ್ತಿ ಸಮೃದ್ಧವಾಗಿ ಪರಿಪೂರ್ಣವಾಗಿ ಬೆಳಗಬೇಕು, ಬೆಳೆಯಬೇಕು. ಬಾಳಬೇಕು.

ಮಾನವನಿಗೆ ಅನಿವಾರ್ಯವಾದ ಅನುಭವದ ಶಕ್ತಿಸಂವರ್ಧನೆಯಲ್ಲಿ ಶಿವಾನುಭವದ ಅದ್ವಿತೀಯ ಸಿದ್ಧಾಂತವು ಒಂದು ಅಮೂಲ್ಯ ರಸಾಯನವಾಗಿದೆ. ಶಿವ, ಶಿವಾಂಶನಾದ ಜೀವ, ಶಿವಾತ್ಮಕವಾದ ವಿಶ್ವ, ಸಮಸ್ತವೂ ಅನುಭವೈಕ್ಯವೇದ್ಯ. ಕಾರಣ, ಶಿವಾನುಭವವೆಂಬುದು ವೀರಶೈವ ದರ್ಶನದ ಸಾರ್ಥಕನಾಮ. ಶಿವನು ಅರಿವಿಗೆ ಬಾರದ ಘನವಸ್ತುವಾಗಿರುವಾಗ, ಅವನನ್ನು ಅರಿತು, ಕುರಿತು, ಅನುಭವಿಸುವ ರೀತಿಯನ್ನು, ನೀತಿಯನ್ನು ಶಿವಾನುಭವ ಸಿದ್ಧಾಂತವು ಪ್ರಾಂಜಲವಾಗಿ ನಿರೂಪಿಸಿದೆ. ವಿಶ್ವರೂಪದಲ್ಲಿ ಜ್ಞೇಯನಾಗಿ, ಜೀವರೂಪದಲ್ಲಿ ಜ್ಞಾತೃವಾಗಿ, ನಿರುಪಾಧಿ-ನಿತ್ಯನಿರಂಜನ ರೂಪದಲ್ಲಿ ತನ್ನತಾನೇ ಬೆಳಗುವ, ತೊಳಗುವ ಸ್ವಯಂಜ್ಯೋತಿಯಾಗಿ ಶಿವನು ಸರ್ವವಿಧದಿಂದಲೂ ಅನುಭವಕ್ಕೆ ಬರುವನು. ಈ ತೆರನಾದ ಅನುಭವ ಅತೀಂದ್ರಿಯವಾದರೂ, ಪದಾರ್ಥ-ಕಾಯವಳಿದು, ಪ್ರಸಾದ ಕಾಯನಾಗಿ ಉಳಿದ ಸರ್ವಾಂಗಲಿಂಗಿ ಶರಣನ ಲಿಂಗೇಂದ್ರಿಯಗಳಿಗೆ ಸರ್ವಥಾ ಸಾಧ್ಯವಿದೆ. ಅತೀಂದ್ರಿಯಾನುಭಾವವೆಂದರೆ, ಅಂಗವಿಕಾರದ ಬಳಿವಿಡಿದು ಬರುವ, ದೇಹಭಾವ ಜೀವ ಭಾವಗಳನ್ನು ಅಳವಡಿಸಿಕೊಂಡು, ಹರಿದಾಡುವ ಅಂಗೇಂದ್ರಿಯಗಳಿಗೆ ನಿಲುಕದ ಅನುಭವವೆಂದು ವಿವರಿಸಬಹುದು, ಹೇಳಬಹುದು.

ವಿಶ್ವದ ಅನುಭವ, ಆ ವಿಶ್ವಾತ್ಮನ ಅನುಭವ, ಜೀವಸ್ವರೂಪದ ಅನುಭವ—ಇವುಗಳ ಮುಪ್ಪುರಿಯೇ ಶಿವಾನುಭವವಾಗಿದೆ. ಸೃಷ್ಟಿಕರ್ತನೇ ಸೃಷ್ಟಿಯಾಗಿ ಪರಿ

ಣಮಿಸಿರುವಾಗ, ಸೃಷ್ಟಿಯ ಬಗೆಗೆ ಮಿಥ್ಯತ್ವವನ್ನು ಹೇಳುವುದಾಗಲಿ, ಬಾಧಕವೆನ್ನುವುದಾಗಲಿ ಸರಿಯಲ್ಲ. ಈಶಸೃಷ್ಟಿಯು ಪ್ರಸಾದ ರೂಪದಲ್ಲಿ ಸೇವ್ಯವಾದ ಕಾರಣ ಸತ್ಯವೂ, ಸಾಧಕವೂ ಆಗಿದೆ. ಸೃಷ್ಟಿಯ ಸಹಾಯವಿಲ್ಲದೆ ನಮಗೆ ಸೃಷ್ಟಿಕರ್ತನಲ್ಲಿ ಸಾಮರಸ್ಯವಿಲ್ಲ. ಸೃಷ್ಟಿಯ ನಿರ್ದಿಷ್ಟ ವಸ್ತುಗಳಾದ ಶಬ್ದಾದಿ ವಿಷಯಗಳು, ದೇಹೇಂದ್ರಿಯಾದಿಗಳು ನಮಗೆ ಬಂಧನವಲ್ಲ. ನಮ್ಮ ತೃಷ್ಣಾದೃಷ್ಟಿಯೇ ನಮಗೆ ತೀವ್ರ ಬಂಧನ. ಬಂಧನ-ನಿವೃತ್ತಿಯು ತೃಷ್ಣಾತ್ಯಾಗವಲ್ಲದೆ, ಭೋಗಗಳ ತ್ಯಾಗವಲ್ಲ. ತ್ಯಾಗದ ಹಿನ್ನೆಲೆಯಲ್ಲಿ ಭೋಗಿಸುವ ಭೋಗವೇ ಯೋಗ ಜೀವನ ಶಕ್ತಿಗಳ ಸದುಪಯೋಗವೇ ಭೋಗವಾಗಿದ್ದು, ಅದುವೇ ಬಿಂದು-ಸಿಂಧುಗಳ ಹಾಗೆ ಶಿವ ಜೀವರ ಯೋಗವಾಗಿದೆ.

ಶಕ್ತಿಗಳ ಸದುಪಯೋಗವೆಂದರೆ, ಶಕ್ತಿಗಳನ್ನು ಭಕ್ತಿಯಾಗಿ ಪರಿವರ್ತಿಸಿಕೊಳ್ಳುವುದು. ಕ್ರಿಯಾ ಜ್ಞಾನಗಳ ಮಧುರ ಮಿಶ್ರಣವಾದ ಸದ್ಭಾವಸ್ವರೂಪದ ಭಕ್ತಿಯೇ ಷಟ್‌ಸ್ಥಲ ಯೋಗದ, ಸಮನ್ವಯ ಯೋಗದ ದಿವ್ಯಶಕ್ತಿಯಾಗಿದೆ. ಆ ಶಕ್ತಿ, ವಿಧೇಯ ಭಕ್ತಿಯಾಗಿ ದಾಸೋಹಂಭಾವವನ್ನೂ, ವಿಚಾರ ಭಕ್ತಿಯಾಗಿ ಸೋಹಂ ಭಾವವನ್ನೂ, ವಿಶುದ್ಧ ಭಕ್ತಿಯಾಗಿ ಸತಿ-ಪತಿ ಭಾವವನ್ನೂ ವ್ಯಕ್ತಗೊಳಿಸುತ್ತದೆ. ಭುಕ್ತಿ-ಮುಕ್ತಿಗಳಿಗೆ ಮಾತೆಯಾದ ಭಕ್ತಿಯು ಅಷ್ಟಾವರಣದ ನಿಷ್ಠೆಯಿಂದ ಪಂಚಾಚಾರಗಳಲ್ಲಿ ಸಂಚರಿಸಿ, ಷಟ್‌ಸ್ಥಲಗಳನ್ನು ಸಾಧಿಸಿ ಧನ್ಯವಾಗಿದೆ! ಕೃತಾರ್ಥವಾಗಿದೆ.

ಜ್ಞಾನ-ಕ್ರಿಯೆಗಳು ಒಂದಾಗಿ ತನ್ನಲ್ಲಿ ಕರಗಿಕೊಂಡುದೇ ಅನುಭವ. ಆ ಅನುಭವವನ್ನು ವೈಖರಿವಾಣಿಯಲ್ಲಿ ಹೊರಸೂಸುವುದೇ ಅನುಭಾವ. ಅದು ಶಿವನ ಸಂಬಂಧವಾಗಿದ್ದರೆ ಶಿವಾನುಭವ. ಅದುಳ್ಳವನೇ ಅನುಭಾವಿ!

ಅನುಭವ ಮಾನವ ಜೀವನದ ಹೂವು; ಶಿವಾನುಭವ ಬಾಳೆಂಬ ಹೆಮ್ಮರದ ಹಣ್ಣು. ಶಿವಸಂಬಂಧವಾಗಿರುವುದರಿಂದ ಹೆಮ್ಮರದ ಹಣ್ಣು. ಅದರ ವ್ಯಾಪ್ತಿ ಹೆಚ್ಚು, ಜೀವನಿಗೆ ಮೆಚ್ಚು. ಆ ಮರವೊಂದಾದರೂ ಅದರ ಹಣ್ಣುಗಳು ಹಲವಾಗಬಹುದು. ಆ ಹಣ್ಣುಗಳಲ್ಲಿರುವ ರೂಪು-ರಸಾದಿಗಳು ಮಾತ್ರ ಭಿನ್ನಭಿನ್ನವಲ್ಲ. ಸಂತರು (ಶರಣರು) ಕಾಯದಿಂದ ಭಿನ್ನಭಿನ್ನವಾಗಿರಬಹುದು. ಆದರೆ, ಅವರುಗಳ ಭಾವ, ಅನುಭಾವಗಳು ಒಂದೇ. ಅದೇ ಸಿರಿವಂತಿಕೆ. ಅದರಿಂದ ಅದು ಆತ್ಮಾನುಭವವೆಂದು ಹೆಸರು ತಳೆಯಿತು. ಅದುವೆ ಶಿವಾನುಭವ;ಆತ್ಮನೇ ಶಿವ, ಆತ್ಮಾನುಭವವೇ ಶಿವಾನುಭವ. ಆ ಆತ್ಮನೊಬ್ಬ; ಆತನನುಭವವೊಂದು, ಆತ್ಮವ್ಯಾಪಕ, ಆ ಆತ್ಮಾನುಭವವೂ ವ್ಯಾಪಕ. ಮೊದಲು ಆ ಆತ್ಮಾನುಭವವಾದರೆ ಸಾಕು. ಉಳಿದೆಲ್ಲದರ ಅನುಭವ ಆದಂತೆಯೇ ! ಆತ್ಮಾನುಭವ ಯಾರಲ್ಲಿದ್ದರೂ, ಎಷ್ಟು ಜನರಲ್ಲಿದ್ದರೂ

ಅದು ಒಂದೇ. ಅದಿಲ್ಲದಾಗ ಅನ್ಯವಸ್ತುಗಳು ಅನೇಕವಾಗಿರುವ ಮೂಲಕ ಅವುಗಳ ಅನುಭವವೂ ಅನೇಕ.

ತಾನು ಕೇಳಿದುದನ್ನು, ಕಂಡದ್ದನ್ನು, ತಿಳಿದುದನ್ನು ಆಚರಣೆಯಲ್ಲಿ, ಉಪಭೋಗದಲ್ಲಿ, ಅಧ್ಯಾತ್ಮದಲ್ಲಿ ಅಳವಡಿಸಿಕೊಳ್ಳುವುದೆ ಅನುಭವ. ಹೀಗಿಲ್ಲದೆ, ಒಬ್ಬ ದೊಂದೆಡೆಯಲ್ಲಿ ಆಡಿದ ನುಡಿಗಳನ್ನು ಓದಿ ಬಂದು ಬರೀ ನುಡಿವುದೇ ಅನುಭವವಲ್ಲ. ಅದು ಅರಿವು ಮಾತ್ರ. ಆ ಅರಿವು ಆತ್ಮೀಯವಾಗದು, ಅದು ಅಸ್ಥಿರದು. ಅದನ್ನು ಆಚರಣೆಯ ಮುಖಾಂತರ, ಆರೋಗಣೆಯ ಮುಖಾಂತರ ಅಳವಡಿಸಿಕೊಂಡಾಗ ಅನುಭವವಾಗುತ್ತದೆ. ಅದು ಸ್ವಕೀಯವೆನಿಸುತ್ತದೆ. ಸ್ವಾನುಭವವೆನಿಸುತ್ತದೆ. ಆಚರಣೆಗೆ ತಾರದೆ ಮಾಡುವ ಕೆಲಸ ಅದೊಂದು ಹಮಾಲಿ ಕೆಲಸ. ಬರೀ ಒಂದು ವಸ್ತುವಿನ ವಿಷಯವಾಗಿ ಕೇಳಿ ತಿಳಿದರೆ ಅನುಭವವೆನಿಸದು. ಬರೀ ಕಣ್ಣಿನಿಂದ ಕಂಡ ಮಾತ್ರಕ್ಕೆ ಅನುಭವಕ್ಕೆ ಬಾರದು.

ಜಗವಂದ್ಯರೆಂದು ನುಡಿವರು ನೋಡಾ,
ಭವಬಂಧನದ ಕುಣಿಕೆಯ ಕಳೆಯಲರಿಯರು ನೋಡಾ,
ಭವ ತಮ್ಮ ತುಳಿತುಳಿದು ಕೊಂದಿತ್ತು ನೋಡಾ,
ಶಬ್ದವೇದಿಗಳೆಂದು ನುಡಿದು ನಡೆಯರು ನೋಡಾ,
ನಿಶ್ಶಬ್ದ ವೇಧಿಸದಿದ್ದರೆ ಗುಹೇಶ್ವರ ನೋಡಿ ನಗುತಿಪ್ಪನೋಡಾ"

ನಡೆಯಿಲ್ಲದ ನುಡಿಗಳು ಪ್ರಯೋಜನವಿಲ್ಲ. ನುಡಿಯಿದ್ದು ನಡೆಯಿಲ್ಲದಿದ್ದರೆ ಕೇಡು. ನಡೆಯಿದ್ದು ನುಡಿಯಿಲ್ಲದಿದ್ದರೂ ಅದು ಸೊಗದ ಬೀಡು, ಬಿರಿದು ಕಂಪು ಬೀರುವ ಮಲ್ಲಿಗೆಯ ಹೂವು.

ಶಿವಾನುಭವದ ಉಗಮ ಬಹು ಪುರಾತನವಾದುದು. ಆ ಕಾಲವನ್ನು ನಿರ್ದಿಷ್ಟವಾಗಿ– ಐತಿಹಾಸಿಕವಾಗಿ–ನಿರೂಪಿಸಲು ಶಕ್ಯವಿಲ್ಲದಿದ್ದರೂ ಶಿವಾಗಮಗಳಿಗಿಂತಲೂ ಬಹು ಹಿಂದಿನಕಾಲದ್ದೆಂದು ಹೇಳಬಹುದಾಗಿದೆ. ಉಪನಿಷತ್ತುಗಳಲ್ಲಿ, ವೇದಗಳಲ್ಲಿ ಶಿವಾನುಭವದ ಸ್ಥೂಲ ಸ್ವರೂಪ ಗೋಚರವಾಗುತ್ತದೆ. ಶಿವಾಗಮಗಳ ಸಾರರೂಪವಾಗಿ ಹೊರಹೊಮ್ಮಿದ ಸಿದ್ಧಾಂತ ಶಿಖಾಮಣಿಯಲ್ಲಿ ಶ್ರೀ ಶ್ರೀ ಶಿವಯೋಗಿ ಶಿವಾಚಾರ್ಯ ಮಹಾಸ್ವಾಮಿಗಳವರು "ಚಿದಾನಂದ ಪರಾಕಾಶ ಶಿವಾನುಭವ ಯೋಗತಃ "–ಎಂದು ತನ್ನಾಮನಿರ್ದೇಶನ ಸಮಯದಲ್ಲಿ ಶಿವಾನುಭವ ಪದ ಪ್ರಯೋಗ ಮಾಡಿರುತ್ತಾರೆ. ಅಲ್ಲದೆ ಶಿವಾನುಭವದ ಗಾಂಭೀರ್ಯ, ಗೌರವ ಪ್ರತಿಷ್ಠೆಗಳನ್ನು ಅರ್ಥಗರ್ಭಿತವಾಗಿ, ಹೃದಯಂಗಮವಾಗಿ ಆತ್ಮಾನುಭವದಿಂದ ಹೇಳಿರುತ್ತಾರೆ.

ಜ್ಞಾನ, ಸುಜ್ಞಾನ, ಮಹಾಜ್ಞಾನವೆಂದು–ಅರಿವು ಮೂದೆರನಾಗಿದೆ. ಯಾವು ದಾದರೊಂದು ವಿಷಯದಲ್ಲಿ ನಾವು ಬರೀ ಕೇಳಿದ್ದು ಅರಿವು. ಕೇಳಿದ ಬಳಿಕ ಆ ವಸ್ತುವನ್ನು ಕಣ್ಣಾರ ಕಂಡರೆ ಸುಜ್ಞಾನ. ಇದೂ ಪೂರ್ಣವಲ್ಲ. ಕಂಡದ್ದನ್ನು ಕೂಡಿದಾಗ, ಇಲ್ಲವೆ ಪ್ರಯೋಗೆದಲ್ಲಿ ಕಂಡುಕೊಂಡಾಗ ಅದು ಮಹಾಜ್ಞಾನವೆನಿಸು ತ್ತದೆ. ಈ ಮಹಾಜ್ಞಾನವೇ ಅನುಭಾವ. ಅದೇ ಮಹಾದೇವಾನುಭವವಾದಲ್ಲಿ ಶಿವಾನುಭವವೆನಿಸುತ್ತದೆ.

ಬರೀ ಅರಿವೇ ಶಿವಾನುಭವವಲ್ಲ; ಬರೀ ಅರಿವಿನಿಂದ ಅಖಂಡಾನಂದ ಲಭಿಸದು. ಅರಿವು ಪರೋಕ್ಷ-ಪ್ರತ್ಯಕ್ಷವೆಂದು ಎರಡು ವಿಧದಾಗಿದೆ. ಪರೋಕ್ಷ ಅರಿವು ಪ್ರತ್ಯಕ್ಷ ವಾದಾಗ ಅಂದರೆ ಆಚರಣೆಯಲ್ಲಿ ಅಳವಟ್ಟಾಗ, ಅದು ಚಿತ್ ಆಗಿ, ಅದರಿಂದ ಅಖಂಡಾನಂದ ಉಂಟಾಗುತ್ತದೆ. ಹಾಗಾದಾಗ ಅದು ಸ್ವಾನುಭವ ಅಥವಾ ಶಿವಾನು ಭವವೆನಿಸುತ್ತದೆ. ಆ ಶಿವಾನುಭವವು ಶುದ್ಧವಾಗಿರುತ್ತದೆ. ಅಲ್ಲಿ ಮೋಡಿನ ಮುಸುಗಿಲ್ಲ. ಅದರಿಂದ ಅದು ಪರಾಕಾಶ. ಆ ಪರಾಕಾಶದಲ್ಲಿ ಎಲ್ಲ ವಿದ್ಯೆ ವಿಜ್ಞಾನ ಗಳೂ ಅಡಕವಾಗಿರುತ್ತವೆ. ಅದಕ್ಕೆ ಅವಿದ್ಯೆಯ ಆವರಣವಿಲ್ಲ. ನಮಗೆ ಕಾಣುವ ಭೌತಾಕಾಶಕ್ಕೆ ಕಾರ್ಮೋಡಗಳ ಮುಸುಕು ಆವರಿಸಿದಂತೆ ಕಾಣುತ್ತದೆ. ಪರಾಕಾಶಕ್ಕೆ ಈ ಸಂಭವವೇ ಇಲ್ಲ. ಅಂತಹ ಪರಿಶುದ್ಧ ಪರಾಕಾಶ ಸ್ವರೂಪವಾಗಿದೆ ಶಿವಾನು ಭವ! ಆ ಶಿವಾನುಭವವುಳ್ಳವನೇ ಶಿವಯೋಗಿ! ಶ್ರೀ ಶಿವಯೋಗಿ ಶಿವಾಚಾರ್ಯರಿಗೆ ಅಂತಹ ಅಮೋಘವಾದ ಅನುಭವವಿದ್ದಿತು. ಅದರಿಂದ ಅವರಿಗೆ ಶಿವಯೋಗಿ ಎಂಬ ಸಾರ್ಥಕ ನಾಮವಿತ್ತು.

ಮಾನವನಿಗೆ ಅನುಭವವೇ ಸಂಪತ್ತು; ಅನುಭವವೇ ಮಹತ್ತು. ಅದಕ್ಕಿಂತ ಬೇರೆ ವಿದ್ಯೆ-ವಿಜ್ಞಾನಗಳಿಲ್ಲ; ಶಾಂತಿ-ಕಾಂತಿಗಳಿಲ್ಲ. "ಶಿವಾನುಭವ" ಎಂಬಲ್ಲಿ ಶಿವ, ಅನು, ಭವ ಎಂದು ಮೂರು ಪದಗಳಿವೆ. ಪದ ಮೂರಿದ್ದರೂ ಪರಿಣಾಮ ಒಂದೇ. ಮಂಗಳಾನುಭವ ಮತ್ತು ಶಿವನೊಡನೆ ಅಥವಾ ಶಿವನಾಗಿ ಇರು ಎಂಬರ್ಥಗಳು ಸ್ಪಷ್ಟವಾಗಿದ್ದರೂ ಇನ್ನೂ ವಿಶಿಷ್ಟಾರ್ಥಗಳು ಅದಕ್ಕಿವೆ. ಆದ್ದರಿಂದ ಆ ಮೂರು ಪದಗಳ ಅರ್ಥವೇನು ? ಮೂಲವೇನು ? ವಿವರವೇನು ? ಎಂದು ಹೇಳ ಬೇಕಾಗಿದೆ.

ವೀರಶೈವ ದರ್ಶನದಲ್ಲಿ ಮೂರಕ್ಕೆ ಮಹತ್ವವಿದೆ. ಮೊಟ್ಟಮೊದಲು ಆ ಪರ ವಸ್ತು ಒಂದು ಮೂರಾಗುತ್ತದೆ. ಅಂಗವೂ ಮೂರು; ಲಿಂಗವೂ ಮೂರು, ಗುರುವೂ ಮೂರು– ಹೀಗೆ ಮೂರು ಮೂರಾಗಿ ತೋರಿದರೂ ಒಂದಾಗಿ ಪರಿಣಮಿ ಸುವುದೆ, ಅಂದರೆ ಪರ್ಯವಸಾನವಾಗುವುದೆ ತತ್ತ್ವ. ಶಿವಾನುಭವ ಪದದಲ್ಲಿ ಈ ಅರ್ಥ ಅಂತರ್ಭೂತವಾಗಿದೆ. ಒಂದು ಮೂರಾಗಿ; ಮೂರು ಒಂದಾಗುವುದೇ

ಶಿವಾನುಭವ ಮೂಲ ಮರ್ಮ. ವೀರಶೈವ ಮತದ–ವಿಶ್ವದ ಮೂಲತತ್ತ್ವಗಳೆಷ್ಟಿವೆಯೋ ಅವೆಲ್ಲ ಅರ್ಥಗಳೂ ಇದರಲ್ಲಿ ಅಡಕವಾಗಿವೆ. ವೀರಶೈವ ಧರ್ಮದ ವಿಶಿಷ್ಟಾರ್ಥವೂ ಇದರಲ್ಲಿದೆ.

ಶಿವ ಅಂದರೆ ಲಿಂಗ, ಅನು ಅಂದರೆ ಅಂಗ, ಭವ ಅಂದರೆ ಸಾಮರಸ್ಯ! ಲಿಂಗಾಂಗ ಸಾಮರಸ್ಯ ಎಂಬ ತತ್ತ್ವಾರ್ಥವೂ ಇದರಲ್ಲಿದೆ.

ಶಿವಾನು ಅಂದರೆ ಲಿಂಗದೊಡನೆ, ಭವ ಹುಟ್ಟು-ಇರು-ಐಕ್ಯವಾಗು ಎಂದರ್ಥ. ಇದರಿಂದ ವೀರಶೈವರಲ್ಲಿರುವ ಲಿಂಗೋದ್ಭವ, ಲಿಂಗಭೋಗೋಪಭೋಗ ಲಿಂಗೈಕ್ಯ ಈ ಪದಪ್ರಯೋಗಗಳ ಔಚಿತ್ಯ ಸಾರ್ಥಕ್ಯಗಳನ್ನು 'ಶಿವಾನುಭವ' ಪದ ಉಗ್ಗಡಿಸುತ್ತದೆ. ಜನನ, ಜೀವನ, ಮರಣ ಇವುಗಳನ್ನು ಜಯಿಸುವ ಅರ್ಥವು ಶಿವಾನುಭವ ಪದದಲ್ಲಿದೆ. ಪ್ರಕೃತಿ, ವಿಕೃತಿಗಳ ಮೀರಿ, ಪ್ರಪಂಚಕೋಟಲೆಯ ತೂರಿ, ಪರಮಾರ್ಥ ಜೀವಿಗಳಾಗಬೇಕಾದರೆ, ಶಿವಾನುಭಾವಿಗಳಾಗದೆ ವಿಧಿಯಿಲ್ಲ. ಪ್ರಪಂಚಾನುಭವ, ಪಾರಮಾರ್ಥಾನುಭವ ಎಂದು ಅನುಭವ ಎರಡು ಬಗೆಯಾಗಿದೆ. ಪರಮಾರ್ಥಾನುಭವವೆ ಶಿವಾನುಭವ!

ಸೃಷ್ಟಿಯ ನಿಯತಿಯಿಂದಲೊ, ಕರ್ಮದ ಕಾರಣದಿಂದಲೊ, ಜನರು ಇಲ್ಲಿಗೆ ಕರೆಯದೇ ಬರುತ್ತಾರೆ; ಅಂದರೆ ಹುಟ್ಟುತ್ತಾರೆ. ಹೇಳದೆ ಕೇಳದೆ ಇಲ್ಲಿಂದ ಹೊರಡುತ್ತಾರೆ, ಸಾಯುತ್ತಾರೆ. ಇವರನ್ನು ಕರೆದವರಿಲ್ಲ; ಕಳುಹುವರಿಲ್ಲ. ಅವರು ಅನುಭಾವಿಗಳಾಗಿ, ತಾವು ಬಂದ ಮರ್ತ್ಯದ ಮಣಿಹವ ಮಾಡಿ ಮುಗಿಸುವವರಾದರಲ್ಲವೆ ಅವರ ಅಗತ್ಯ ಜಗತ್ತಿಗೆ ಏನು? ಆಗ ಅಂತಹವರನ್ನು ಜಗತ್ತು ಕಾಲಾನುಕಾಲಕ್ಕೆ ಕರೆಯುತ್ತದೆ. ಈಗ ನಾವು ಅನೇಕ ಮಂದಿ ಶಿವಶರಣರನ್ನು ಕರೆಯುವುದಿಲ್ಲವೆ? ನೆನೆಯುವುದಿಲ್ಲವೆ? ಅಂತಾಗಬೇಕಾದರೆ, ಮಹಾನುಭಾವರಾಗದೆ ಶಕ್ಯವಿಲ್ಲ. ಲಿಂಗಾನುಭಾವಿಗಳಾಗದೆ ಸಾಧ್ಯವಿಲ್ಲ.

"ಕರೆಯದೆ ಬಂದುದ–ಹೇಳದೆ ಹೋದುದನಾರು ಅರಿಯರಲ್ಲ,
ಅಂದಂದಿಗೆ ಬಂದ ಪ್ರಾಣಿಗಳಾರು ಅರಿಯರಲ್ಲ,
ಗುಹೇಶ್ವರನೆಂಬ ಲಿಂಗವುಣ್ಣದೆ ಹೋದುದನಾರು ಅರಿಯರಲ್ಲ"

ಪ್ರಭುದೇವರ ಈ ಪ್ರಸಾದವಾಣಿ ಮೇಲಿನ ಅಭಿಪ್ರಾಯವನ್ನೇ ಸ್ಪಷ್ಟೀಕರಿಸುತ್ತದೆ. ನಾವು ಇಲ್ಲಿಗೆ ಬಂದುದೇಕೆ? ಎಂಬುದನ್ನು ಅರಿತು ಅದರಂತೆ ಆಚರಿಸುವುದೆ ಪ್ರಥಮ ಅನುಭವ. ಬಂದು ಜೀವಿಸುತ್ತಿರುವುದೇತಕ್ಕಾಗಿ? ಯಾವರೀತಿ? ಎಂಬುದನ್ನರಿತು, ಅನುಕೂಲ ವೃತ್ತಿಯಿಂದ, ಅನುವರಿದು ಮುನ್ನಡೆವುದೇ ಎರಡನೆಯ ಶಿವಾನುಭವ. ಇದರಿಂದ ಹೋಗುವಾಗ ಹಳಹಳಿಸದೆ, ಉಳಿದವರೆಲ್ಲರೂ ಬಯ

ಸುತ್ತಿದ್ದಂತೆ ಹೋಗುವುದೆ ಮರಣದ ಮೂರನೆಯ ಉದಾತ್ತವಾದ ಅನುಭವ. ಅಂಥವರು ಹೋದರೂ ಇದ್ದಂತೆಯೆ.

"ಕಾಯಗೊಂಡು ಹುಟ್ಟಿದ ಮೂಢರೆಲ್ಲ ಸಾಯದ
ಸಂಚುವನರಿವುದೆ ಚಲುವ ಗುಹೇಶ್ವರ"

ಈ ಅನುಭವಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳದೆ ಚಿರಕೀರ್ತಿಗಳಿಸದೆ, ಹುಳುಗಳಂತೆ ಹುಟ್ಟಿ, ಹೀನ ಬಾಳು ಬಾಳಿ, ಯಾರಿಗೂ ತಿಳಿಯದಂತೆ, ಯಾರಿಗೂ ಬೇಕಾಗದಂತೆ ಸತ್ತುಹೋಗುವುದರಲ್ಲಿ ಯಾವ ಪುರುಷಾರ್ಥವಿದೆ? ಅವನೆಂತಹ ಅನುಭಾವಿ? ಅಂತಹವನಿಂದ ಆತನಿಗಾಗಲಿ,-ಯಾರಿಗಾಗಲಿ-ಏನು ಪ್ರಯೋಜನ? ಸ್ವಾನುಭವ ಅಥವಾ ಶಿವಾನುಭವಾನುಭವಿಯೇ-ಜೀವನವೇ ಪರಮ ಜೀವನ.

"ದೇಶಗುರಿಯಾಗಿ ಲಯವಾಗಿ ಹೋದವರ ಕಂಡೆ,
ತಮಂಧ ಗುರಿಯಾಗಿ ಲಯವಾಗಿ ಹೋದವರ ಕಂಡೆ,
ಕಾಮ ಗುರಿಯಾಗಿ ಬಂದುಹೋದವರ ಕಂಡೆ,
ಗುಹೇಶ್ವರಾ, ನೀ ಗುರಿಯಾಗಿ ಹೋದವರ ಕಾಣೆ!"

"ಆಸೆಗೆ ಸತ್ತುದು ಕೋಟಿ,
ಆಮಿಷಕ್ಕೆ ಸತ್ತುದು ಕೋಟಿ,
ಹೊನ್ನು ಹೆಣ್ಣು ಮಣ್ಣಿಂಗೆ ಸತ್ತುದು ಕೋಟಿ.
ಗುಹೇಶ್ವರಾ, ನಿನಗಾಗಿ ಸತ್ತವರಾರನೂ ಕಾಣೆ!"

ಮಾನವನಾಗಿ ಮರ್ತ್ಯಕ್ಕೆ ಬಂದ ಬಳಿಕ ಬರಿ ಕಾಮ-ತಮಸ್ಸುಗಳಿಗೆ ಗುರಿಯಾಗಿ ಹೋಗಬಾರದು, ಬರಿ ದೇಶಗುರಿಯಾಗಿ ಹೋಗಬಾರದು. ಈಶ ಗುರಿಯಾಗಿ ಹೋಗಬೇಕು. ಹಾಗೆ ಹೋಗುವುದರಲ್ಲಿಯೇ ಹಮುಳತೆ ಇದೆ, ಹವಣತೆ ಇದೆ, ಹಸಾದತೆ ಇದೆ. ತನ್ನ ಅನುಭವದ ಆದರ್ಶ ಬಾಳನ್ನು ಲೋಕಕ್ಕೆ ಕೊಟ್ಟು ಹೋಗುವುದೆ. ಲೋಕಕ್ಕೆ ಹೇಳಿ ಹೋದಂತೆ! ತಾನು ಸ್ವಾನುಭಾವಿಯಾಗುವುದೇ ಆದರ್ಶ ಬಾಳು, ಆಧ್ಯಾತ್ಮ ಬಾಳು, ಮಹಾನುಭಾವ ಬಾಳು. ಆತನ ಹೆಸರು-ಬೇಡ ಬೇಡವೆಂದರೂ-ಹರವಿ ಹಬ್ಬುಗೆಯಾಗುತ್ತದೆ. ಮಾನವನ ಪರಿಣತೆಯನ್ನು, ಪರಿಪೂರ್ಣತೆಯನ್ನು ರೂಪಿಸುತ್ತದೆ ಶಿವಾನುಭವ. ಸೌಜನ್ಯತೆ, ಸೌಶೀಲ್ಯತೆ, ಶಾಶ್ವತತೆಗಳನ್ನು ಸಂಪಾದಿಸುತ್ತದೆ ಶಿವಾನುಭವ. ಅಂತಹ ಶಿವಾನುಭವಕ್ಕೆ ಮಿಸಲಾಗದೆ ಜಗದಜನ, ಇದಕ್ಕೆ ಬದಲಾಗಿ ಬಾಳಿ ಸಾಯುತ್ತದೆ, ಹೇಳ ಹೆಸರಿಲ್ಲದೆ ಹೋಗುತ್ತದೆ.

# ೨

ಶಿವಾನುಭವ ಸಾಗರದ ಆಳವನ್ನು ಕಂಡುಹಿಡಿಯುವುದು ಸುಲಭ ಸಾಧ್ಯವಲ್ಲವೆಂಬುದು ಎಲ್ಲರಿಗೂ ಅರಿತ ವಿಷಯ. ಅದರಲ್ಲಿರುವ ಅಮೂಲ್ಯ ಮುತ್ತು ರತ್ನಗಳನ್ನು ಸಂಪಾದಿಸುವುದು ಅತಿಸಾಹಸದ ಕಾರ್ಯವಾಗಿದೆ. ಶಿವಾನುಭವವು ಅನುಭವ ಪ್ರಧಾನವಾದ ಶಾಸ್ತ್ರ. ಅನುಭವಕ್ಕೆ ಬಾರದನ್ನು ನಿಲುಕದ್ದನ್ನು ಬಳಸಬಾರದೆಂಬುದು ಅದರಕಟ್ಟು. ಪರಶಿವನು ಸಮಸ್ತ ಪದಾರ್ಥಗಳಲ್ಲಿ ನಿಖಿಲ ಪ್ರಾಣಿಗಳಲ್ಲಿ ವ್ಯಾಪಿಸಿರುವನೆಂದು ತಿಳಿಯುವುದಲ್ಲದೆ ತನ್ನ ಸರ್ವ ವ್ಯವಹಾರದಲ್ಲಿ ಭಿನ್ನವಿಲ್ಲದಂತೆ ಸಕಲ, ನಿಷ್ಕಲ ರೂಪದಿಂದಿರುವನೆಂದು ತಿಳಿಯುವುದೇ ಶಿವಾನುಭವವೆನಿಸುತ್ತದೆ. "ಅನುಭೂತಿಂ ವಿನಾಮೂಢೋವೃಥಾ ಬ್ರಹ್ಮಣಿಮೋದತೆ। ಪ್ರತಿಬಿಂಬಿತ ಶಾಖಾಗ್ರ ಫಲಾಸ್ವಾದನ ಮೋದವತ್ ।" ಎಂಬ ವಾಕ್ಯಾನುಸಾರವಾಗಿ ಅನುಭವವಿಲ್ಲದ ಬ್ರಹ್ಮದ ವಿಚಾರವು ಸವಿಯದ ಹಣ್ಣಿನ ರಸಾಸ್ವಾದದ ಕಥೆಯಂತೆ ವ್ಯರ್ಥ. ಅನುಭವಕ್ಕೆ ನಿಲುಕದಿರುವ ಆಧ್ಯಾತ್ಮಿಕತತ್ತ್ವಗಳನ್ನು ಎಲ್ಲರ ಮನಮೆಚ್ಚಿಸುವಂತೆ-ಆಚರಿಸುವಂತೆ-ಬೋಧಿಸುವ ಚಾತುರ್ಯವು "ಶಿವಾನುಭವ" ಶಾಸ್ತ್ರಕ್ಕೆ ಸಲ್ಲುವುದೆಂದು ಹೇಳಬಹುದು.

ಈ ಸಂಸಾರವು ಮಿಥ್ಯಾ ಮತ್ತು ಹೊನ್ನು, ಹೆಣ್ಣು, ಮಣ್ಣು, ಮಾಯೆಯೆಂದು ಮುಂದುಗಾಣದೆ ಬಳಲುವವರಿಗಾಗಿ

"ಹೊನ್ನು ಮಾಯೆಯಲ್ಲ, ಹೆಣ್ಣು ಮಾಯೆಯಲ್ಲ, ಮಣ್ಣು ಮಾಯೆಯಲ್ಲ,
ಮನದ ಮುಂದಣ ಆಸೆಯೇ ಮಾಯೆ ಕಣಾ ಗುಹೇಶ್ವರಾ"

ಎಂದು ಪ್ರಭುದೇವರು ಮನದ ಭ್ರಮೆಯನ್ನು ಹೋಗಲಾಡಿಸಿರುತ್ತಾರೆ. ತನ್ನ ವಿನೋದಕ್ಕಾಗಿ ಹುಟ್ಟಿಸಿದ ಜಡಚೇತನಾತ್ಮಕವಾದ ವಿಶ್ವವು ಪರಶಿವನಲೀಲೆಯಾಗಿದೆ. "ಲೀಲೆ ಎಂಬುದು ಜಗತ್ತನ್ನು ಕೆಲಸಕ್ಕೆ ಬಾರದ ವ್ಯರ್ಥವಸ್ತುವೆಂದು ಭಾವಿಸಬಾರದೆಂದು" ಶ್ರೀ ಅರವಿಂದರು ಶರಣರ ತತ್ತ್ವವನ್ನು ಒಪ್ಪಿರುತ್ತಾರೆ. ಕಾರಣ ಜಗನ್ಮಿಥ್ಯಾತ್ವಾಭಿಮಾನವ್ಯರ್ಥವಾದುದು. ಆಚಾರವೇಸ್ವರ್ಗ, ಅನಾಚಾರವೇ ನರಕವೆಂದು ಸಾರಿ ಸ್ವರ್ಗ ನರಕಗಳ ಲೋಕಾಂತರ ಕಥೆಯನ್ನು ಕಿತ್ತೊಗೆದು ಇಲ್ಲಿಯೇ ನಮ್ಮ ನಡೆ-ನುಡಿಗಳಿಂದ ಅನುಭವಿಸಬೇಕೆಂದು ತಿಳಿಸಿರುತ್ತಾರೆ. ಬೀಜದಲ್ಲಿ ಮರವಾಗುವ ಶಕ್ತಿಯಿರುವಂತೆ, ಲೋಹ ಬಂಗಾರವಾಗುವಂತೆ, ಜೀವನಿಗೆ ದೇವನಾಗುವ ಶಕ್ತಿಯಿದೆ. ಅದನ್ನುಭಾವನಾ ಜ್ಞಾನ, ಸತ್ಕ್ರಿಯೆಗಳ ಸಹಾಯದಿಂದ ಸಾಕ್ಷಾತ್ಕರಿಸಲು ಸಾಧ್ಯವೆಂದು ಶಿವಾನುಭವದ ಅಭಿಪ್ರಾಯ. ಭಾವನೆಯೆಂದರೆ. ಜೀವಗತ ಸಂಸ್ಕಾರ ಭಾವ ಮತ್ತು ಭಾವನಾ ಸಮಾನಾರ್ಥಕ ಶಬ್ದಗಳು.

"ವಸ್ತುನೋಭಾವ ವೃತ್ತಿನ್ಯೋ ಭಾವಾ ಜ್ಞಾನ ಸಮುದ್ಭವಃ" ವಸ್ತುವಿನ ಗುಣಕಿಸಿಯೇ ಭಾವ. ಅಭಾವದಿಂದಜ್ಞಾನ. "ವಿನ್ನ ಭಾವನೆಯು ವಿರ್ಗಿಸು ಜೀವನವು

ಕೇಳಾ" ಎಂಬ ಮಹಾದೇವಿಯಕ್ಕನ ಅನುಭವವು ಜೀವ ಭಾವ ಬೇರಿಲ್ಲವೆಂದು ಸೂಚಿಸುತ್ತದೆ. ಜಗತ್ತಿನಲ್ಲಿ ಎಲ್ಲರೂ ಒಂದೊಂದು ಬಗೆಯ ಭಾವದಿಂದ ಬಾಳುತ್ತಿರುವರು. ಹೊರಗೆ ನೋಡಿದರೆ, ಗಂಡು ಹೆಣ್ಣೆಂದು ಭಿನ್ನವಾಗಿ ತೋರಿದರೂ ವಿವಾಹ ಸಂಬಂಧದಿಂದ ಒಳಗೆ ಸತಿಪತಿ ಭಾವವುಳ್ಳವರಾಗಿ ಬಾಳುತ್ತಾರೆ. ಹಾಗೆಯೇ ಜ್ಞಾನ ಸಂಬಂಧದಿಂದ ಗುರು ಶಿಷ್ಯ ಭಾವನೆಯು ಬೆಳೆಯುತ್ತದೆ. ಅಂತೆಯೇ ದೇವನಾಗಬೇಕಾದರೆ ಜೀವಭಾವವನ್ನಳಿಯಬೇಕು. "ಪೂರ್ಣಯೋಗವು ಮನುಷ್ಯನ ಯಾವ ಬಗೆಯ ಹೊರಗಿನ ಬದಲಾವಣೆಯಿಂದ ಶಕ್ಯವಿರದೆ ಮಾನವನ ಸಂಪೂರ್ಣ ಜೀವಸತ್ತೆಯು ಒಳಗಿನಿಂದ ಬದಲಾದರೆ ಮಾತ್ರಸಾಧ್ಯವಿದೆ, ಎಂಬ ಅರವಿಂದರ ವಚನವು.

"ಮಂಡೆ ಬೋಳಾದರೇನಯ್ಯಾ ಭಾವ ಬೋಳಾಗದನ್ನಕ್ಕರ,
ತನು ಬತ್ತಲಾದರೇನಯ್ಯಾ ಮನ ಬತ್ತಲೆಯಾಗದನ್ನಕ್ಕರ"

ಎಂಬ ವಚನಕಾರರ ನುಡಿಯೂ ಅಂತರಂಗದ ಪರಿವರ್ತನೆಯನ್ನೇ ಸಮರ್ಥಿಸುತ್ತದೆ. ಭಾವನಾವಿಮರ್ಶೆಯು ಶಿವಾನುಭವ ಶಾಸ್ತ್ರದಲ್ಲಿ ಹೆಚ್ಚಾಗಿ ತೋರುತ್ತದೆ. ತತ್ತ್ವದ ಮಡಲಿನಲ್ಲಿ ಅಡಗಿರುವ ಭಾವನೆಯನ್ನು ಬಯಲಿಗೆ ತಂದು, ಅದರ ಬಲದಿಂದ ಯೋಗಿಯೂ ಭೋಗಿಯೂ ಆಗಬಹುದೆಂಬ ಭಾವದ ಕಾಣ್ಕೆಯನ್ನು ಸಲ್ಲಿಸಿರುತ್ತಾರೆಂಬುದನ್ನು "ಬಸವಣ್ಣನ ಭಾವದ ಕಾಣ್ಕೆ ಕಾಣ್ಕೆಹೊ" ಎಂಬ ಹರಿಹರ ದೇವನ ನುಡಿಯಿಂದ ಕಾಣಬಹುದು.

ನಿರಾಕಾರವಾದ ಭಾವ ಸಾಕಾರವಾಗುವುದೆಂದು ಹೇಳಿದರೆ ಅಚ್ಚರಿಪಡಬಹುದು. ಚಿತ್ರಿಕನೊಳಡಗಿದ ಚಿತ್ರದ ರೂಪು ಹೇಳಲೂ ತೋರಲೂ ಬಾರದಿದ್ದರೂ ಪಟದಲ್ಲಿ ತರತರದ ಬಣ್ಣಗಳಿಂದ ಚಿತ್ರಿಸಿದಾಗ ಭಾವದಲ್ಲಿದ್ದ ನಿರಾಕಾರ ಚಿತ್ರವು ಪಟದಲ್ಲಿ ಸಾಕಾರತೆಯನ್ನು ಹೊಂದುತ್ತಿರುವುದು ಅನುಭವದ ಮಾತಾಗಿದೆ. ಸಾಕಾರ ನಿರಾಕಾರಕ್ಕೆ ಸಕಲ ನಿಷ್ಕಲವೆಂಬ ಸಂಜ್ಞೆ. ಭಾವ ನಿಷ್ಕಲ (ನಿರಾಕಾರ) ಮನಸ್ಸು ಸಕಲ ನಿಷ್ಕಲ (ಸಾಕಾರ ನಿರಾಕಾರ) ಶರೀರ ಸಕಲ (ಸಾಕಾರ). ನಿಷ್ಕಲವಾದ ಭಾವ ಲಿಂಗವು ಮನಸ್ಥಲಕ್ಕೆ ಬಂದು ಸಕಲ ನಿಷ್ಕಲವಾದ ಪ್ರಾಣಲಿಂಗವೆಂದೆನಿಸಿತು. ಅದೇ ಸ್ಥೂಲ ಶರೀರದಲ್ಲಿ ಸಕಲರೂಪ ಇಷ್ಟಲಿಂಗವಾಯಿತು.

"ಬಯಲ ಮೂರ್ತಿಯ ಮಾಡಿ ಕರಸ್ಥಲಕ್ಕೆ ಕೊಟ್ಟನಯ್ಯಾ ಶ್ರೀಗುರು.
ಬಯಲ ಮೂರ್ತಿಯು ಅಮೂರ್ತಿಯು ಮಾಡಿ ಎನ್ನ
ಪ್ರಾಣದೊಳಗಿರಿಸಿದನಯ್ಯಾ ಶ್ರೀಗುರು,
ಬಯಲು ಬಯಲನೆ ಬೆರಸಿ ಬಯಲೆಂದೆನಿಸಿ ಎನ್ನ ಭಾವದಲ್ಲಿರಿಸಿದನಯ್ಯಾ.
ಇದು ಕಾರಣ ಎನ್ನ ಕರಸ್ಥಲ, ಮನಸ್ಥಲ, ಭಾವಸ್ಥಲದಲ್ಲಿ ನಿಮ್ಮ ಧರಿಸಿ
ನಾನು ಅಂಗ ಲಿಂಗ ಸಂಬಂಧಿಯಾದೆ ಕಾಣಾ ಮಹಾಲಿಂಗ
ಗುರು ಶಿವ ಸಿದ್ಧೇಶ್ವರ ಪ್ರಭುವೇ ॥

ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಈ ವಚನವು ಶರೀರದ ಒಳಹೊರಗೆ ಪರಶಿವನ ವ್ಯಾಪ್ತಿಯನ್ನು ತೋರಿಸುತ್ತದೆ. "ಸಗುಣ ನಿರ್ಗುಣ ಪರ ಬ್ರಹ್ಮನ ಸರ್ವಾಂತರ್ಯಾಮಿತ್ವವನ್ನು ಸಾಕ್ಷಾತ್ಕರಿಸಿಕೊಳ್ಳುವುದೇ ಪೂರ್ಣಯೋಗ" ಎಂಬ ಅರವಿಂದರ ಮಾತು ವೀರಶೈವರ ಲಿಂಗೋಪಾಸನೆಯನ್ನು ಸಮಗ್ರವಾಗಿ ಸಮರ್ಥಿಸುತ್ತಿರುವುದು. ಆದುದರಿಂದ ಪರಮಾತ್ಮನು ಕೇವಲ ಸಾಕಾರ, ನಿರಾಕಾರ ವೆಂದು ವಾದಿಸುವುದು ನಿರಾಧಾರವಾದುದು; ಅಲ್ಲದೆ ಅನುಭವಶೂನ್ಯವಾದದ್ದೆಂದು ಹೇಳಬಹುದು. ಅಂಗ–ಲಿಂಗ ಸಾಮರಸ್ಯ ಇವುಗಳಲ್ಲಿ ಲಿಂಗತತ್ವವು ಕೆಳಗಿನ ವಚನ ಗಳಿಂದ ಚೆನ್ನಾಗಿ ತಿಳಿಯಬರುತ್ತದೆ.

"ಲಿಂಗವಸ್ಥೂಲ ವೆಂಬರು ಕೆಲರು, ಲಿಂಗವು ಸ್ಥೂಲವಲ್ಲ.
ಲಿಂಗವ ಸೂಕ್ಷ್ಮವೆಂಬರು ಕೆಲರು, ಲಿಂಗವು ಸೂಕ್ಷ್ಮವಲ್ಲ.

ಸ್ಥೂಲ ಸೂಕ್ಷ್ಮದ ಮೇಲಣದ ಜ್ಞಾನರೂಪು. ಪರಾನಂದ ಪರಬ್ರಹ್ಮವೇ ಲಿಂಗವೆಂದರಿದ ಅರಿವು ಅಖಂಡ ರೂಪು ನಿಜ ಗುರು ಸ್ವತಂತ್ರ ಸಿದ್ಧಲಿಂಗೇಶ್ವರನು ತಾನೆ ಬೇರಿಲ್ಲ"

"ಲಿಂಗವೆಂಬುದು ಸರ್ವಕಾರಣ, ಪರಮ ನಿರ್ಮಲ;
ಲಿಂಗವೆಂಬುದು ಸಚ್ಚಿದಾನಂದ ನಿತ್ಯಪರಿಪೂರ್ಣ;
ಲಿಂಗವೆಂಬುದು ಸರ್ವಲೋಕೋತ್ಪತ್ತಿಗೆ ಮೂಲಕಾರಣ.
ಲಿಂಗವೆಂಬುದು ಸರ್ವ ತತ್ತ್ವಪೂರ್ಣ, ನಿಜಚೈತನ್ಯ.
ಲಿಂಗವೆಂಬುದು ಜನ್ಮವಾರುಧಿಯ ದಾಂಟಿಸುವ ಛತ್ರ.
ಲಿಂಗವೆಂಬುದು ಶರಣರ ಹೃದಯದಲ್ಲಿ ಬೆಳಗುವ ಜ್ಯೋತಿರ್ಮಯ
ಲಿಂಗವು"

"ಜಗದಗಲ, ಮುಗಿಲಗಲ, ಮಿಗೆಯಗಲ, ನಿಮ್ಮಗಲ ಪಾತಾಳದಿಂದತತ್ತ
ನಿಮ್ಮ ಶ್ರೀಚರಣ. ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ.
ಅಗಮ್ಯ, ಅಪ್ರಮಾಣ, ಅಗೋಚರ–ಅಪ್ರತಿಮ ಲಿಂಗವೇ ಎನ್ನ ಕರಸ್ಥಲಕ್ಕೆ
ಬಂದು ಚುಳುಕಾದಿರಯ್ಯಾ"

ಸದ್ಗುರುವಿನ ವೇಧಾ, ಮಂತ್ರ, ಕ್ರಿಯಾದೀಕ್ಷೆಯಿಂದ ಆಣವ ಮಾಯಾ ಕಾರ್ಮಿಕ ಮಲಗಳನ್ನಳಿದ ಶುದ್ಧ ಜೀವನೇ ಅಂಗ. ಆ ಅಂಗ ಲಿಂಗಗಳು ಒಂದಾಗಿ ಬೆರೆಯುವುದೇ ಸಾಮರಸ್ಯ. ಆ ಅಂಗ ಲಿಂಗವೆರಡಕ್ಕೂ ಸಾಮರಸ್ಯವು ಸಹಜ ಸಿದ್ಧವಾದುದು.

'ರಸೋ ವೈ ಸಃ' ಎಂದು ಶೃತಿಯು ಪರಶಿವನು ರಸರೂಪನೆಂದು ಸಾರುತ್ತಿದೆ. ರಸವೆಂದರೆ ಪ್ರೇಮ, ಭಕ್ತಿ ಎಂಬರ್ಥದಿಂದ ಕೂಡಿರುವುದು. ಸಮಾನಾನುರಾಗವು

ಪರಸ್ಪರರನ್ನೊಂದುಗೂಡಿಸುವುದು. "ಗಂಡ ಶಿವಲಿಂಗ ದೇವರಭಕ್ತ. ಹೆಂಡತಿ ಮಾರಿ ಮಸಣಿಯ ಭಕ್ತೆ'' ಎನ್ನುವಂತಿದ್ದರೆ ಸತಿ–ಪತಿಗಳ ಸಾಂಸಾರಿಕ ಜೀವನ ಸರಾಗವಾಗಲಾರದು. 'ಸತಿಪತಿಗಳೊಂದಾದ ಭಕ್ತಿಹಿತವಾಗಿಪ್ಪುದುಶಿವಂಗೆ' ಎಂಬ ಅನುಭವಯುಕ್ತವಾದ ಮಾತು ಲಿಂಗಾಂಗ ಸಾಮರಸ್ಯಕ್ಕೆ ಸರಿದೋರುವುದು. ಲಿಂಗಾಂಗಗಳು ಒಂದಾಗುವುದಕ್ಕೆ ಭಕ್ತಿಯೇ ಮೂಲ. ಅನುಭವ ಶಾಸ್ತ್ರದಲ್ಲಿ ಭಕ್ತಿ ಪಂಚಮ ಪುರುಷಾರ್ಥವೆಂದೆನಿಸಿದೆ. ಭಕ್ತಿ ಎಂದರೆ ಸಹಜವಾದ ಪ್ರೇಮ. ಒಂದೇ ಜಲ ಉಪಾಧಿಯಿಂದ ನಾನಾರಸವಾಗುವಂತೆ, ಪ್ರೇಮವು ವ್ಯವಹಾರದಲ್ಲಿ ಸ್ನೇಹ ವಾತ್ಸಲ್ಯವೆನಿಸಿ ಪಾರಮಾರ್ಥಿಕದಲ್ಲಿ ಭಕ್ತಿಯೆನಿಸುವುದು. ಈ ಪ್ರೇಮ ಭಕ್ತಿಗಳು ಪರಸ್ಪರರನ್ನಾಶ್ರಯಿಸಿ ಬೆಳೆಯುವಾಗ ಕಿರಿಯರು ಹಿರಿಯರನ್ನು ಗೌರವಿಸುವುದು ಭಕ್ತಿಯೆಂದೂ, ಹಿರಿಯರು ಕಿರಿಯರನ್ನು ಪ್ರೀತಿಸುವುದು ಪ್ರೇಮ ಅಥವಾ ಅನುಗ್ರಹವೆನಿಸುವುದು. ಈ ಭಕ್ತಿ ಪ್ರಸಾದಗಳು ಬೀಜಾಂಕುರದಂತೆ ಪರಸ್ಪರ ಜನ್ಯ ಜನಕ ಭಾವದಿಂದಿರುವುವು. ಈ ವಿಧವಾದ ಭಕ್ತಿಯು ಅಂಗ ಲಿಂಗಗಳೆರಡನ್ನೊಂದುಗೂಡಿಸುವುದರಿಂದ ಸಾಮರಸ್ಯವೆನಿಸುವುದು. ಮಾನವನು ತನ್ನಲ್ಲುಂಟಾಗುವ ಸುಖ–ದುಃಖಗಳ ಆಗುಹೋಗುಗಳನ್ನರಿತು ಶರೀರ ಮನ ಭಾವಗಳನ್ನು ಸುವ್ಯವಸ್ಥಿತವಾಗಿ ದೇವನಲ್ಲಿ ಬೆರಸುವುದೇ ಲಿಂಗಾಂಗಯೋಗ. ಇದಕ್ಕೆ ಶಿವಯೋಗ ಅಥವಾ ಸಹಜಯೋಗವೆನ್ನುವ ವಾಡಿಕೆಯುಂಟು. ಮಂತ್ರ, ಲಯ, ಹಠ, ರಾಜಯೋಗಗಳು ಈ ಸಹಜ ಯೋಗದಲ್ಲಡಗಿರುವುದರಿಂದ ಪೂರ್ಣಯೋಗವೆನಿಸುವುದು. ಈ ಯೋಗಾನುಭವದ ವಚನ ಸಂಪತ್ತೇ ಅನುಭವಶಾಸ್ತ್ರವಾಗಿ ಪರಿಣಮಿಸಿದೆ. ಅದಕ್ಕಾಗಿ ಮುನ್ನಿನ ಶರಣರು-ಸಾಹಿತಿಗಳು ಮುಕ್ತಿಗಿಂತಲೂ ಭಕ್ತಿಯನ್ನೇ ವಿಶೇಷವಾಗಿ ವರ್ಣಿಸಿ ಬೇಡಿದ್ದಾರೆ.

"ಅಂಗೈಯೊಳಗಣ ಲಿಂಗವ ನೋಡುತ್ತಾ,
ಕಂಗಳು ಕಡೆಗೋಡಿವರಿಯುತ್ತಾ, ಸುರಿಯುತ್ತಾ, ಎಂದಿಪ್ಪೆನೋ?
ನೋಟವೇ ಪ್ರಾಣವಾಗಿ ಎಂದಿಪ್ಪೆನೋ?
ಕೂಟವೇ ಪ್ರಾಣವಾಗಿ ಎಂದಿಪ್ಪೆನೋ?
ವಿನ್ನಂಗವಿಕಾರದ ಸಂಗವಳಿದು-ಕೂಡಲ ಸಂಗಯ್ಯಾ
ಲಿಂಗ, ಲಿಂಗವೆನುತ್ತಾ ಎಂದಿಪ್ಪನೊ!''

"ಕಾಮ ಸಂಗ ನಿಸ್ಸಂಗವಾಗಿ ಇನ್ನಾವ ಸಂಗವನರಿಯೆನಯ್ಯಾ,
ಮಿಗೆ ಒಲಿದೆನಾಗಿ, ಅಗಲಲಾರೆ, ನಗೆಮೊಗದರಸ,
ಅವಧಾರು ಕೂಡಲ ಸಂಗಮದೇವ''

"ವಾರವೆಂದರಿಯೆ, ದಿನವೆಂದರಿಯೆ. ಏನೆಂದರಿಯೆನಯ್ಯಾ.
ಇರುಳೆಂದರಿಯೆ, ಹಗಲೆಂದರಿಯೆ,
ನಿಮ್ಮುವ ಪೂಜಿಸಿ ಎನ್ನುವ ಮರೆದೆ ಕೂಡಲ ಸಂಗಮದೇವ''
ನಿಮ್ಮ ನೋಟವನಂತಸುಖ. ನಿಮ್ಮ ಕೂಟ ಪರಮ ಸುಖ.
ಅಷ್ಟಕೋಟಿ ರೋಮಂಗಳೆಲ್ಲ ಕಂಗಳಾಗಿ ನೋಡುತ್ತಿದ್ದೆನು...."

ಈ ಯೋಗದಲ್ಲಿ ಪ್ರತಿಪಾದಿತವಾಗಿರುವ ಭಕ್ತಿಯು ಜ್ಞಾನಕ್ರಿಯಾತ್ಮಕವೂ ಅವ್ಯಭಿಚಾರಿಣಿಯೂ ಆಗಿರುವುದು. ಈ ಯೋಗದಲ್ಲಿ ದೇವ ಜೀವರಿಗೆ (ಲಿಂಗಾಂಗ) ಸತಿ-ಪತಿ ಭಾವವನ್ನು ಕಲ್ಪಿಸಿ ಆಚರಿಸುತ್ತಿರುವಂತೆ ಮತ್ತಾವಯೋಗದಲ್ಲಿಯೂ ಅಥವಾ ಆಧ್ಯಾತ್ಮಿಕ ಶಾಸ್ತ್ರದಲ್ಲಿಯೂ ಇಂತಹ ಭಾವದ ಕಲ್ಪನೆಯಿಲ್ಲವೆನ್ನಬಹುದು. ಸತಿ-ಪತಿಗಳಲ್ಲಿ ಸಾಮರಸ್ಯಾತ್ಮಕ ಅದ್ವೈತಾವಸ್ಥೆಯುಂಟಾಗುವಂತೆ ಬೇರೆ ಮತ್ತಾವ ಬಾಂಧವ್ಯದಲ್ಲಿರುವುದಿಲ್ಲವೆಂಬನುಭವದಿಂದಲೇ ಅಂಗ (ಶರಣಸತಿ) ಲಿಂಗ (ಪತಿ) ಸಂಬಂಧದಿಂದ ವ್ಯವಹರಿಸುವುದು ತಾತ್ವಿಕವೂ, ಅನುಭವಗಮ್ಯವೂ, ಸಮಂಜಸವೂ ಆಗಿರುವುದೆಂದು ಬಗೆದು ವಚನಕಾರರು ಈ ಲಿಂಗಾಂಗ ಸಾಮರಸ್ಯದ ತತ್ತ್ವವನ್ನು ಎಲ್ಲರ ಮನ ಮೆಚ್ಚುವಂತೆ ಪ್ರತಿಪಾದಿಸಿರುತ್ತಾರೆ.

"ಕುರುಳು, ಬೆರಳು, ಮುಡುಹು, ಮುಂಬಲ್ಲು, ಕೊಳ್ಳು; ಸಿರಿಯುಸಿಕ್ಕಿ
ದಾಂಟಿದಡೆಅಂತೆನ್ನ ನಂಬು;
ಪರಪುರುಷರ ಮುಖ ನೋಡದಂತೆ ಮಾಡಾ.
ಬಳಿಕ ನೀನೇ ಹೇಗೆ ಇರಿಸಿದಂತೆ ಇರಿಸಾ.
ಎನ್ನ ಉರದಲ್ಲಿ ಕೂಡಲ ಸಂಗಯ್ಯನೆಂದು ಬರೆಯಾ.
ಪರಿಬ್ರಹ್ಮರಿಗೆರಗದಂತೆ ಬಳಿಸೀರನೆರೆಯಾ."
"ಸಂಸಾರವೆಂಬ ಶ್ವಾನನಟ್ಟಿ ಮೀಸಲ ಬೀಸರವ ಮಾಡದಿರಯ್ಯಾ !
ಎನ್ನಚಿತ್ತವು ನಿಮ್ಮ ಧ್ಯಾನವಯ್ಯಾ! ನೀವಲ್ಲದೆ ಮತ್ತೇನನೂ ಅರಿಯೆನು !
ಕನ್ನೆಯಲ್ಲಿ ಕೈವಿಡಿದೆನು ನಿಮ್ಮಲ್ಲಿ ನೆರೆದೆನು.
ಮಚ್ಚಿಸು ಕಂಡೆಯಾ ಮಹಾಲಿಂಗವೇ ! ಸತಿಯಾನು, ಪತಿನೀನಯ್ಯಾ
ಮನೆಯೊಡೆಯ ಮನೆಯ ಕಾಯ್ದಿಪ್ಪಂತೆ ನೀನೆನ್ನ ಮನವ ಕಾಯ್ದಿಪ್ಪ ಗಂಡನು
ನಿನಗೋಪಮ ಸಮನಸ್ಕ್ಕೈಹರಿಸಿದರೆ,ನಿನ್ನ ಭಿಮಾನಹಾನಿ ಕೂಡಲಸಂಗಮದೇವ

ವಿಚಾರಿಸಿದಷ್ಟೂ ಅರ್ಥಕೊಡುವ, ಶ್ರೀ ಬಸವಣ್ಣನವರ ಮುತ್ತಿನಂತಹ ಈ ವಚನಗಳಿಂದ ದೇವ ಜೀವರುಗಳಲ್ಲಿರುವ ಸತಿ-ಪತಿ ಭಾವವು ವ್ಯಕ್ತವಾಗಿರುವುದಲ್ಲದೆ, ಪರಿಶುದ್ಧಾತ್ಮಕವಾದ ಆದರ್ಶ ದಾಂಪತ್ಯದಿಂದ ಸರ್ವರೂ ಪಾಠ ಕಲಿಯಬೇಕಾಗಿರುವುದೂ.

೩

ನಾವು ಯಾವ ಮಾರ್ಗದಿಂದ ಹೋದರೂ ಗುರಿ ಒಂದೆ. ಇದು ನಮ್ಮ ಪ್ರಾಚೀನರ ಮತ. ಅದೆಂದರೆ ಮೋಕ್ಷ ಇಲ್ಲವೇ ಮುಕ್ತಿ. ಮುಕ್ತಿ ಎಂದರೆ ಬಿಡುಗಡೆ, ಅಥವಾ ಭವಬಂಧನದಿಂದ ಪಾರಾಗಿ ಪರಮಾತ್ಮನ ಸಾನ್ನಿಧ್ಯವನ್ನು ಹೊಂದುವುದು.

ಮುಕ್ತಿ ಚತುರ್ವಿಧ: ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ. ಪರಮಾತ್ಮನ ಲೋಕದಲ್ಲಿಯೇ ವಾಸಿಸುವ ಅರ್ಹತೆಯನ್ನು ಜೀವನು ಪಡೆಯುವುದು ಸಾಲೋಕ್ಯ. ಪರಮಾತ್ಮನ ಸಮೀಪದಲ್ಲಿಯೇ ಇರುವುದು ಸಾಮೀಪ್ಯ. ಪರಮಾತ್ಮನ ರೂಪೇ ಜೀವನರೂಪವಾಗುವುದು ಸಾರೂಪ್ಯ. ಪರಮಾತ್ಮನೊಡನೆ ಜೀವನು ಒಂದಾಗಿ ಹೋಗುವುದು ಸಾಯುಜ್ಯ.

ಈ ಮುಕ್ತಿಗಳ ಸೂಕ್ಷ್ಮ ವಿಶ್ಲೇಷಣಕ್ಕಾಗಲಿ, ಅವುಗಳಲ್ಲಡಗಿದ ಮೂಲ ಕಲ್ಪನೆಗಾಗಲಿ, ಶಿವಯೋಗದಲ್ಲಿ ಮಹತ್ವವಿಲ್ಲ. ಭವವೊಂದು ಬಂಧನ; ಜೀವನು ಜನ್ಮ ತಾಳುವುದೇ ಒಂದು ಬಂಧನ, ಜಗತ್ತು ಮಾಯಾಮಯ; ಅದೂ ಒಂದು ಬಂಧನ; ಈ ಬಂಧನದೊಳಗಿಂದ ಬಿಡುಗಡೆ ಹೊಂದಿ, ಶಿವನ ಸಾನ್ನಿಧ್ಯವನ್ನಾಗಲಿ ಶಿವನೊಡನೆ ಸಾಯುಜ್ಯವನ್ನಾಗಲಿ ಅಥವಾ ಇವೆರಡರ ನಡುವಿನ ಅವಸ್ಥಾವಿಶೇಷವನ್ನಾಗಲಿ ಕೋರುವುದೇ ಜೀವನ ಪ್ರಯತ್ನವಾಗಿರತಕ್ಕದ್ದು—ಎಂಬುದು ಶಿವಯೋಗಕ್ಕೆ ಮಾನ್ಯವಿಲ್ಲ. ಇದೂ ಸಾಧ್ಯವಾಗುವುದು. ಆದರೆ ಇದೇ ಸಾಧ್ಯವಲ್ಲ ಎಂಬುದೇ ಅದರ ದೃಷ್ಟಿಕೋನವಾಗಿದೆ.

ಅಂಗವು ಲಿಂಗದೆಡೆಗೆ ಅಭಿಮುಖವಾಗುವುದು ಶಿವಯೋಗದ ಕೀಲವಾಗಿದೆ. ತನ್ನನ್ನು ಕೆಳಕ್ಕೆ ಜಗ್ಗುವ ಪ್ರವೃತ್ತಿಗಳು ತನ್ನಲ್ಲಿಯೇ ಇವೆ. ಅವುಗಳಿಂದ ಜೀವನು ಪುರುಷ ಪ್ರಯತ್ನದಿಂದ ಬಿಡುಗಡೆ ಮಾಡಿಕೊಂಡು, ಶಿವಾಭಿಮುಖನಾಗಬೇಕೆಂಬುದೇ ಶಿವಯೋಗದ ಮೊದಲ ಮೆಟ್ಟಿಲಾಗಿದೆ. ಈ ಜಗ್ಗಾಟವು ಪೂರ್ತಿಯಾಗಿ ನಿಂತು ಹೋಗಿ, ಜೀವನು ಸತತವಾಗಿ ಸರ್ವಾಂಗೀಣವಾಗಿ ಸಂಪೂರ್ಣವಾಗಿ ಶಿವನನ್ನೇ ಕುರಿತು ಪ್ರೀತಿ-ಆಸಕ್ತಿ-ಮಮತೆಗಳನ್ನು ಇಟ್ಟುಕೊಳ್ಳಬೇಕೆಂಬುದೇ ಶಿವಯೋಗದ ಆದ್ಯ ಸೂತ್ರ. ಶ್ರೀ ಅರವಿಂದರು ಇದನ್ನೇ "ನಿಚ್ಚ ಅಚ್ಚ ಬಯಕೆ" ಎಂದಿರುವರು. ಒಂದು ದೃಷ್ಟಿಯಲ್ಲಿ ಜ್ಞಾನ ಭಕ್ತಿ, ಕರ್ಮ ಮಾರ್ಗತ್ರಯದಲ್ಲಿ ಭಕ್ತಿಯೇ ಕೇಂದ್ರ ಸ್ಥಾನದಲ್ಲಿದ್ದು, ಉಳಿದೆರಡು ಮಾರ್ಗಗಳಿಗೆ ಪೂರಕವಾಗಿದೆ ಎನ್ನಬಹುದು.

ಅಂಗದ ಭಕ್ತಿ ಪರಿಪೂರ್ಣವೂ, ಭಗವದೇಕಮುಖಿಯೂ ಉತ್ಕಟವೂ ಆದಂತೆ, ಲಿಂಗದ ಕಾರುಣ್ಯವು ಅಂಗದಿಂದ ಆಕೃಷ್ಟವಾಗಿ ಕೆಳಗೆ ಹರಿಯುತ್ತ ಬರುವುದು. ಪ್ರಭುವಿನ ಕಾರುಣ್ಯವು ಜೀವನದಲ್ಲಿ ಶಕ್ತಿಯಾಗಿ ಕಾರ್ಯ ಮಾಡುವುದು. ಜೀವನು

ಮಾಡಬಯಸುವುದನ್ನು ಶಿವನೇ ಶಕ್ತಿಯಾಗಿ ಜೀವನಿಂದ ಮಾಡಿಸುವನು. ಭವ ಬಂಧನದ ಬಿಡುಗಡೆ ತನಗೆ ತಾನೆ ಆಗುವುದು. ಭವದಲ್ಲಿದ್ದುಕೊಂಡೇ ಮೋಕ್ಷ ಸುಖವನ್ನು ಅನುಭವಿಸುವ ಸ್ಥಿತಿಯೊದಗುವುದು. ಭಕ್ತಿ-ಶಕ್ತಿಗಳ ಬೆಸುಗೆಯಿಂದ ಆಗುವುದು ಮುಕ್ತಿ. ಭಕ್ತಿ ಮೇಲೇರುತ್ತ ಏರುತ್ತ ಪರಮಾತ್ಮನನ್ನು ಮುಟ್ಟುವುದು. ಪ್ರಭು ಪ್ರಸಾದವು ಶಕ್ತಿಸ್ವರೂಪವನ್ನು ತಾಳಿ ಕೆಳಗಿಳಿಯುತ್ತ, ಭಕ್ತನನ್ನು ತಕ್ಕೈಸಿ, ಅವನ ಜೀವನವನ್ನು ಸವಿಗೊಳಿಸುವುದು. ಜೀವನ ಭಕ್ತಿಯು ಕ್ರಮವರಿತು ಮೇಲ ಕ್ಕೇರಿದಂತೆ, ದೇವನ ಶಕ್ತಿಯು ತದನುಗುಣವಾಗಿ ಕೆಳಕ್ಕಿಳಿಯುವುದು. ಸಾಮಾನ್ಯ ವಾಗಿ ಜೀವನು ಮೂಲಾಧಾರದಲ್ಲಿ ಅವಿತುಕೊಂಡಿರುವನು. ಸಂಸಾರದ ಸಿಹಿ ಕಹಿ ಫಲಗಳನ್ನುಂಡು, ಅವುಗಳಿಂದ ಮನನೊಂದು ಬಹಿರ್ಮುಖ ಪ್ರವೃತ್ತಿಯಿಂದ ಅಂತ ರ್ಮುಖನಾಗ ಹತ್ತುವುದೇ ಭಗವದಭಿಮುಖ ಪ್ರವೃತ್ತಿಯ ಮೊದಲನೆಯ ಕುರುಹು. ಹೀಗೆ ಜೀವನು ಅಂತರ್ಮುಖಿಯಾಗಿ ಆಧಾರ ಚಕ್ರದಿಂದ ಸ್ವಾಧಿಷ್ಠಾನಕ್ಕೆ ಏರಿದ ನೆಂದರೆ, ಆ ಪ್ರಮಾಣಕ್ಕನುಸರಿಸಿ ಸಹಸ್ರಾರದಲ್ಲಿದ್ದ ಶಿವನ ಶಕ್ತಿಯು ಆಜ್ಞಾ ಚಕ್ರಕ್ಕೆ ಇಳಿದು ಬರುವುದು. ಜೀವನದಲ್ಲಿ ಇಂದ್ರಿಯ ನಿಗ್ರಹ, ತಾಳ್ಮೆ, ಆತ್ಮಸಂಯಮನ, ಸ್ಥಿತಪ್ರಜ್ಞತೆ, ಆಚಾರ ಶುದ್ಧಿಗಳು ಅಳವಟ್ಟು, ಜೀವನು ಸ್ವಾಧಿಷ್ಠಾನ ಚಕ್ರದಿಂದ ಮಣಿಪೂರಕ ಚಕ್ರವನ್ನು ಮುಟ್ಟಿದನೆಂದರೆ, ಶಿವನ ಶಕ್ತಿಯು ಆಜ್ಞೇಯ ಚಕ್ರದಿಂದ ವಿಶುದ್ಧಿ ಚಕ್ರಕ್ಕೆ ಇಳಿದು ಬರುವುದು. ಹಾಗೆಯೇ ಮಣಿಪೂರಕ ಚಕ್ರದಲ್ಲಿದ್ದ ಜೀವನು ನಿರ್ಮಲಮತಿ, ಪ್ರಸನ್ನ ದೃಷ್ಟಿಯಿಂದೊಡಗೂಡಿ ಅನಾಹತ ಚಕ್ರವನ್ನು ಅಡರಿದನೆಂದರೆ, ವಿಶುದ್ಧಿ ಚಕ್ರದಲ್ಲಿದ್ದ ಶಿವನ ಶಕ್ತಿಯು ಅನಾಹತಕ್ಕೆ ಇಳಿದು ಬರು ವುದು. ಅನಾಹತ ಚಕ್ರದಲ್ಲಿ ಅರ್ಥಾತ್ ಹೃದಯಕಮಲದಲ್ಲಿ ಮೇಲಿನಿಂದ ಇಳಿದು ಬಂದ ಶಿವನ ಶಕ್ತಿಯೂ, ಕೆಳಗಿನಿಂದ ಏರಿಹೋದ ಜೀವನ ಭಕ್ತಿಯೂ ಸಂಧಿ ಸುವುವು. ಈ ಭಕ್ತಿ-ಶಕ್ತಿಗಳ ಬೆಸುಗೆಯಿಂದ ಆಗುವುದು ಮುಕ್ತಿಯು. ಇದುವೇ ನಿಜವಾದ ಬಿಡುಗಡೆಯು. ಈ ಬಿಡುಗಡೆಯಲ್ಲಿ ಜೀವನ ಸಂಪೂರ್ಣವಾದ ಪರಿ ವರ್ತನೆಯು ಕಂಡು ಬರುವುದು. ಈ ಪರಿವರ್ತನೆಯೇ ಮುಖ್ಯವಾದುದು. ಪರಿ ವರ್ತನೆಯನ್ನು ಈ ರೀತಿ ವಿವರಿಸಬಹುದು. ಜೀವನ ತನುಮನ ಭಾವಗಳು ಈಗಿದ್ದ ಸ್ಥಿತಿಯಲ್ಲಿ ಕಬ್ಬಿಣದೋಪಾದಿಯಲ್ಲಿವೆ. ಪರುಷವು ಕಬ್ಬಿಣವನ್ನು ಮುಟ್ಟಿತೆಂದರೆ, ಕಬ್ಬಿಣ ಬಂಗಾರವಾಗುವುದೆಂದು ಹೇಳುವರು. ಕಬ್ಬಿಣವು ತುಕ್ಕುಹಿಡಿಯುವುದು. ಬಂಗಾರವು ತುಕ್ಕುಹಿಡಿಯುವುದಿಲ್ಲ. ಅದರಂತೆ ಗುರುವಿನ, ಶಿವನ ಕಾರುಣ್ಯ ಶಕ್ತಿ ಯಿಂದ ಜೀವನ ಅಂಗವು ಮಾರ್ಪಟ್ಟು, ಬಂಗಾರವಾಯಿತೆಂದರೆ, ತನುಮನ ಭಾವ ಗಳು ಶುದ್ಧವಾಗಿ ಸಂಸಾರದಲ್ಲಿದ್ದು ವ್ಯವಹರಿಸಿದರೂ ಅದರಿಂದ ಅವು ತುಕ್ಕು ಹಿಡಿಯುವುದಿಲ್ಲ. ನಿಜವಾದ ಪರುಷವೆಂದರೆ ಪರಮಾತ್ಮನ ಕಾರುಣ್ಯವೆ!

ಅನುಭಾವಿಗಳು, ಶರಣರು, ಸಂತರು ಮುಕುತಿಗಿಂತಲೂ ಅನನ್ಯ ಭಾವದ ಭಕುತಿಯೇ ಅಧಿಕವೆಂದು ಆಡಿರುವರು. ಅದರಂತೆ ಆಚರಿಸಿರುವರು. ಚತುರ್ವಿಧ ಫಲ ಪದವಿಗಳನ್ನು ಅವರು ಕಡೆಗಣಿಸಿರುವರು.

ಭಕುತಿರತಿಯು ಸಂಭಾಷಣೆಯಿಂದವೆ–
ಮುಕುತಿಯು ಮರೆದೆನು, ಕಾಯದ ಭೇದವ
ಪ್ರಕೃತಿಯು ತೊರೆದೆನು, ಸುತ್ತಿನ ಮಾಯಾಪಾಶವ ಹರಿದೆನಲಾ
ಸುಕೃತಿಯಾಯ್ತು ನಿಮ್ಮಯ ನೆನಹಿಂದವೆ,
ಮುಕುತಿಯ ಫಲಗಳ ದಾಂಟಿಯೆ ಬಂದೆನು,
ಶಕುತಿಯಾದೆನ್ನ, ಪ್ರಾಣಲಿಂಗಕೆ ಮಿಗೆಬಲಿದಾರುತಿಯಾ

ಅಕ್ಕಮಹಾದೇವಿಯವರ ಈ ವಚನ ಮೇಲಿನ ಮಾತನ್ನು ಸಮರ್ಥಿಸುತ್ತದೆ.

ಘನೀಭೂತ ಗುರುಕರುಣವೇ ಲಿಂಗವು. ಪರಮಾತ್ಮನ ಕಾರುಣ್ಯವು ಹಲವು ಸಲ ಬಂದು ನಮಗೆ ಭೇಟಿಯಾಗಿ ಹೋಗುವುದುಂಟು. ನಾವು ಮಾತ್ರ ಅದನ್ನು ಗುರುತಿಸಲು ಶಕ್ತರಿರುವುದಿಲ್ಲ. ಇಲ್ಲವೆ, ಸ್ವಾಗತಿಸಲು ಸಿದ್ಧರಿರುವುದಿಲ್ಲ. ದೇವ ಲೋಕದ ಹಸು ನಮ್ಮ ಮನೆಗೆ ನಡೆದು ಬರುವುದುಂಟು. ನಾವು ಅದನ್ನು ಕಟ್ಟಿ ದಿವ್ಯ ಕ್ಷೀರವನ್ನು ಪಾನ ಮಾಡಲು ಸಿದ್ಧರಿರುವುದಿಲ್ಲ. ಬರುವ ಪ್ರಭು ಪ್ರಸಾದ ವನ್ನು ಗುರುತಿಸುವುದು ಯೋಗದಲ್ಲಿ ಪ್ರಗತಿ ಹೊಂದುತ್ತಿರುವುದರ ಪ್ರಥಮ ಚಿಹ್ನೆ.

ನಮ್ಮ ದಿನದಿನದ ವ್ಯವಹಾರಗಳಲ್ಲಿಯೂ ಚಿಕ್ಕ ಪುಟ್ಟ ಕೆಲಸಗಳಲ್ಲಿಯೂ ಶಿವಕಾರುಣ್ಯವು ಪ್ರಕಟವಾಗುವುದುಂಟು. ಅದನ್ನು ತಿಳಿದುಕೊಳ್ಳುವ ತತ್ಪರತೆ ಬೇಕು. ಅವ್ಯಗ್ರತೆ ಬೇಕು. ಹಸು ಬಂದರೂ ಅದನ್ನು ಕಟ್ಟಿಕೊಳ್ಳದಿರುವ ಸ್ಥಿತಿಯಿದೆ ನಮ್ಮದು. ಪರಮಾತ್ಮನ ಕಾರುಣ್ಯವು ಬಂದು ನಮ್ಮ ಎದೆಯ ಬಾಗಿಲನ್ನು ತಟ್ಟಿದರೂ ನಾವದನ್ನು ಒಳಗೆ ಕರೆದುಕೊಳ್ಳುತ್ತಿಲ್ಲ. ನಮ್ಮ ಸ್ಥಿತಿ ಆ ರೀತಿಯಿದೆ.

ಮನೆಗೆ ಬರುವ ದೇವಲೋಕದ ಕಾಮಧೇನುವನ್ನು ನಾವು ಕಟ್ಟಿಕೊಳ್ಳಬೇಕು. ಅದು ಹಾಯುವುದು, ಒದೆಯುವುದು, ಅದನ್ನು ತಾಳುವ ಶಕ್ತಿಯಿದ್ದರೆ, ಅದರ ಹಾಲು ಬೆಣ್ಣೆ ಉಣ್ಣುವೆವು. ಪರಮಾತ್ಮನ ಪಾದವನ್ನು ತಾಳಿಕೊಳ್ಳುವುದು ಸುಲಭದ ಮಾತಲ್ಲ. ಅಂಗವು ಲಿಂಗದ ಅನುಗ್ರಹವನ್ನು ಸೆರೆಹಿಡಿದುಕೊಂಡು ಜೀವನಕ್ಕೆ ಅನ್ವ ಯಿಸಿಕೊಂಡು ಮುಂದುವರಿಯುವುದು ಯೋಗಮಾರ್ಗದಲ್ಲಿಯ ಮಹಾಸಾಧನೆಯಾ ಗಿದೆ. ಸಿದ್ದರಾಮೇಶ್ವರರು ಈ ಕಾಮಧೇನುವನ್ನು ಕಟ್ಟಿದರು. ಅದರ ಹೈನವನ್ನು ಉಂಡರು. ಚೆನ್ನಬಸವಣ್ಣನವರಿಂದ ಒದಗಿದ ಕರುಣ ಪ್ರಸಾದದಲ್ಲಿ ಓಲಾಡಿದರು.

ಶ್ರೀ ಚೆನ್ನಬಸವೇಶ್ವರ ಸ್ವಾಮಿಗಳು ಸಿದ್ಧರಾಮೇಶ್ವರರಿಗೆ ಇಷ್ಟಲಿಂಗವನ್ನು ಕರುಣಿಸಿದೊಡನೆ ಆ ಕರುಣವು ಅವರ ಅಂಗವನ್ನು ಆವರಿಸಿ ಅವರಲ್ಲಿ ಉಂಟು ಮಾಡಿದ ಮಾರ್ಪಾಟನ್ನು ಕಂಡು ಹರ್ಷಿತರಾಗಿ, ಸಿದ್ಧರಾಮದೇವರ ಬಗೆಗೆ:

"ಹಸು ಹಮುನಾಯಿತ್ತು, ಹಸು ಮನೆಗೆ ಬಂದಿತ್ತು,
ಹಸು ಕಟ್ಟ ಬಂದವರೆಲ್ಲರ ಒಕ್ಕಲಿಕ್ಕಿ ತುಳಿಯುತ್ತ,
ಕೂಡಲ ಚೆನ್ನಸಂಗಯ್ಯನಲ್ಲಿ ಹಸುವ ಕಟ್ಟಿದಾತ
ನಮ್ಮ ಸಿದ್ಧರಾಮಯ್ಯದೇವರೊಬ್ಬರೆ"

ಎಂದು ಮನದುಂಬಿ ಹಾಡಿದ್ದಾರೆ.

"ಹಸುವ ಕಟ್ಟಬಂದವರೆಲ್ಲರ ಒಕ್ಕಲಿಕ್ಕಿ ತುಳಿಯಿತ್ತೆಂದರೆ" ನಿಜವಾಗಿಯೂ ಕಾಮಧೇನು ಇಲ್ಲವೆ ಗುರುಕರುಣವು ಸಾಧಕನನ್ನು ಘಾಸಿ ಮಾಡಲಾರದು. ಆದರೆ ಸಾಧಕನು ಒಮ್ಮೊಮ್ಮೆ ಆತುರವನ್ನು ಆಹಾರಗೊಂಡು, ಕಠೋರವಾದ ವ್ರತನಿಯಮ ಉಪವಾಸಗಳಿಂದ ತನ್ನ ದೇಹಕ್ಕಾಗಲಿ, ಇಲ್ಲವೇ ಕೆಲವು ನಿಷ್ಟುರವಾದ ಸಂಕಲ್ಪದಿಂದ ತನ್ನ ಮನಸ್ಸಿಗೆ ಕ್ಲೇಷವನ್ನು ಕೊಟ್ಟುಕೊಳ್ಳುವವನು. ಇದರಿಂದ ಅವನು ಘಾಸಿಯಾಗುವನು. ಹೀಗೆ ಮಾಡಿದರೆ ಗುರುಕಾರಣ್ಯವೆಂಬ ಹಸುವನ್ನು ಹಿಡಿದು ಕಟ್ಟಲಿಕ್ಕಾಗದು. ಅದು ತಾನಾಗಿಯೇ ಸಾಧಕನ ಇರವನ್ನು ಅರಿತು, ಅವನ ಬಳಿ ಬರುವುದು. ಅವನ ಹಸಿವು ಇಂಗುವಂತೆ ಇನಿವಾಲನ್ನುಣಿಸುವುದು.

## ಕೊನೆಯ ಮಾತು

ಶಿವಾನುಭವವು ಕೇವಲ ತತ್ತ್ವಮಯವಾದ ಶಾಸ್ತ್ರವಾಗಿರದೆ ಲೋಕವ್ಯವಹಾರ ಬೋಧಕವಾದ ನೀತಿ ಶಾಸ್ತ್ರವೂ ಆಗಿರುವುದು. ಅಲ್ಲದೆ ಪರಸ್ಪರರಲ್ಲಿ ಸತ್ಯ, ಧೈರ್ಯ ಪ್ರಾಮಾಣಿಕತೆ ಮೊದಲಾದ ಮಹದ್ಗುಣ ಸಂಪತ್ತನ್ನು ಸುಗಮವಾಗಿ ಉಂಟು ಮಾಡುವುದು. ಶಿವಾನುಭವವು ಜೀವ ಜಗತ್ತು ಈಶ್ವರ ಮೊದಲಾದವುಗಳ ಯಥಾರ್ಥದ ತತ್ತ್ವವನ್ನೊಳಗೊಂಡಿರುವ ಅನುಭವ ಪೂರ್ಣವಾದ ಶಾಸ್ತ್ರವೆನಿಸಿಕೊಂಡಿರುವುದಲ್ಲದೆ, ತನ್ನದೊಂದು ವೈಶಿಷ್ಟ್ಯವನ್ನು ಕಾಯ್ದುಕೊಂಡು ಜನತೆಗೆ ಅಚ್ಚುಮೆಚ್ಚಿನದಾಗಿದೆ.

"ಓಂ ತತ್ಸತ್, ಶಿವಾರ್ಪಣಮಸ್ತು"

● ಶ್ರೀ ಮುರಿಗೆಪ್ಪ ವೀರಪ್ಪಎಲಿ
ಶ್ರೀ ಮುರುಘಾಮಠ, ಧಾರವಾಡ.

ಕಿರಿದಾದ ಬೀಜದಲ್ಲಿ ಹಿರಿಯ ತರುವಡಗಿದ ಪರಿಯಂತೆ,
ಕರಗತವಾದ ಕನ್ನಡಿಯಲ್ಲಿ ಕರಿ ಗಿರಿಗಳು ತೋರುವ ಪರಿಯಂತೆ,
ಜಗದ್ವ್ಯಾಪಕವಾದ ಪರವಸ್ತುವು ಖಂಡಿತಾಕಾರವಾದ ಶರೀರದಲ್ಲಿ
ಅತಿ ಸೂಕ್ಷ್ಮ ಪ್ರಮಾಣದಿಂದಿರ್ಪಂತೆ,
ಪರತರ ಶಿವಲಿಂಗವು ಸದ್ಭಕ್ತರನುದ್ಧರಿಪ ಸದಿಚ್ಛೆಯಿಂದ
ಲಿಂಗಾಕಾರವಾಗಿ ನೆಲೆಗೊಂಡಿರ್ಪುದು............
ಕೂಡಲ ಸಂಗಮದೇವಾ, ಇದು ನಿಮ್ಮ ದಿವ್ಯ ಲೀಲೆಯಯ್ಯಾ!

ಸಣ್ಣ ಬೀಜದಲ್ಲಿ ಹಿರಿದಾದ ಗಿಡವಾಗುವ ಶಕ್ತಿ ಅಡಗಿರುವಂತೆ, ಜೀವನಲ್ಲಿ ದೇವನಾಗುವ ಶಕ್ತಿ ಅಡಗಿರುತ್ತದೆ. ಮಾನವನು ದೇವರಾಗಬಲ್ಲ. ದೇವರಲ್ಲಿ ಸಮರಸ ಹೊಂದಬಲ್ಲ. 'ಮಣ್ಣು ಬಿಟ್ಟು ಮಡಕೆಯಿಲ್ಲ. ತನ್ನ ಬಿಟ್ಟು ದೇವರಿಲ್ಲ' ಎಂಬ ಬಸವಣ್ಣನವರ, ಚನ್ನಬಸವಣ್ಣನವರ ವಾಣಿಯು ವೀರಶೈವದ ವೈಶಿಷ್ಟ್ಯವನ್ನು ವ್ಯಕ್ತಮಾಡುತ್ತದೆ.

ವೀರಶೈವ ಧರ್ಮವು ಜ್ಞಾನಕ್ರಿಯಾತ್ಮಕವಾದುದು. ಜ್ಞಾನವೇ ಕ್ರಿಯೆ. ಕ್ರಿಯೆಯೇ ಜ್ಞಾನ. ಕ್ರಿಯೆಯನ್ನು ಬಿಟ್ಟು ಜ್ಞಾನವಿಲ್ಲ. ಜ್ಞಾನವನ್ನು ಬಿಟ್ಟು ಕ್ರಿಯೆಯಿಲ್ಲ.

"ಹೊರಗುರಿಯು ಲೊಳಗನ್ನ ಪರಿಪಕ್ವವಾದಂತೆ
ಹೊರಗಣ ಸತ್ಕ್ರಿಯೆಯಾಂ-ತರದ ಸುಜ್ಞಾನ ವೇ
ದೊರೆದ ಶ್ರೀ ಗುರುವೆ ಕೃಪೆಯಾಗು''

ಎಂದು ಮೈಲಾರದ ಬಸವಲಿಂಗ ಶರಣರು ಅನುಭವ ವಾಣಿಯನ್ನು ಉಸುರಿದ್ದಾರೆ. ಪಾತ್ರೆಯ ಕೆಳಗೆ ಉರಿ ಹಚ್ಚಿದರೆ ಪಾತ್ರೆಯಲ್ಲಿ ಅನ್ನವು ಪರಿಪಕ್ವವಾಗುವ ಹಾಗೆ ಲಿಂಗವಂತನು ಹೊರಗೆ ಆಚರಿಸುವ ಲಿಂಗಪೂಜಾ ಸತ್ಕ್ರಿಯೆಗಳಿಂದ ಆತನ ಅಂತರಂಗದಲ್ಲಿ ಸುಜ್ಞಾನವುಂಟಾಗುತ್ತದೆ. ಲಿಂಗಾನುಭವ ಉಂಟಾಗುತ್ತದೆ. ಲಿಂಗದ ಬೆಳಕಿನಲ್ಲಿ ಸಮರಸಹೊಂದುತ್ತಾನೆ. ಲಿಂಗಪೂಜೆಯೇ ಸತ್ಕ್ರಿಯೆ, ಅದರಿಂದುಂಟಾಗುವ ಲಿಂಗಾನುಭವವೇ ಜ್ಞಾನ. ಇದು ಕ್ರಿಯಾಜ್ಞಾನಗಳ ವೈಶಿಷ್ಟ್ಯ.

ವೇದಾಂತಿಗಳಂತೆ ಜ್ಞಾನಬದ್ಧರಲ್ಲ.
ಮುನಿಗಳಂತೆ ಕ್ರಿಯಾಬದ್ಧರಲ್ಲ.
ಸಾಧಕರಂತೆ ಕಾರ್ಯಬದ್ಧರಲ್ಲ.
ಜ್ಞಾನಕ್ರಿಯಾ ಕಾರ್ಯಗಳಲ್ಲಿ ಕೂಡಲ ಚನ್ನಸಂಗನ ಶರಣರು
ನಿರತರು ಕಾಣಾ ಸಿದ್ಧರಾಮಯ್ಯ.

ಎಂದು ಷಟ್‌ಸ್ಥಲ ಜ್ಞಾನ ಚಕ್ರವರ್ತಿ ಚನ್ನಬಸವಣ್ಣನವರು ಅಪ್ಪಣೆಕೊಡಿಸಿದ್ದಾರೆ. ಇದಕ್ಕೂ ವಿವರವಾಗಿ ಈ ಕೆಳಗಿನಂತೆ ಹೇಳಿದ್ದಾರೆ:

ಕ್ರಿಯೆಯೇ ಜ್ಞಾನ, ಆ ಜ್ಞಾನವೇ ಕ್ರಿಯೆ.
ಜ್ಞಾನವೆಂದರೆ ತಿಳಿಯುವುದು, ಕ್ರಿಯೆಯೆಂದರೆ ತಿಳಿದಂತೆ ಮಾಡುವುದು.
ಪರಸ್ತ್ರೀಯ ಭೋಗಿಸಬಾರದೆಂಬುದೇ ಜ್ಞಾನ; ಅದರಂತೆ ಆಚರಿಸುವುದೇ ಕ್ರಿಯೆ.
ಅಂತು ಆಚರಿಸದಿದ್ದರೆ, ಅದೇ ಅಜ್ಞಾನ ನೋಡಾ,
ಕೂಡಲಚನ್ನ ಸಂಗಮ ದೇವಾ.

"ಲಿಂಗದಲಿ ಮನವಾಗಿ ಲಿಂಗದಲಿ ನೆನಹಾಗಿ
ಲಿಂಗದಲಿ ನೋಟ ನುಡಿ ಕೂಟವಾದವನು
ಲಿಂಗವೇ ಅಕ್ಕು ಸರ್ವಜ್ಞ"

ಎಂದು ಸರ್ವಜ್ಞ ಕವಿಗಳು ಹೇಳಿದ್ದಾರೆ.

"ತನಗವಸಾನಭೂಮಿ ಶಿವಲಿಂಗಂ, ಅದಕ್ಕವಸಾನ ಭೂಮಿ ತಾನುಂ" ಲಿಂಗಕ್ಕೆ ತಾನೇ ನಿಲುಕಡೆಯ ಸ್ಥಾನ, ತನಗೆ ಲಿಂಗವೇ ನಿಲುಕಡೆಯ ಸ್ಥಾನ (ಗತಿ-ಮತಿಯು) ಆಗಿ ಆಚರಿಸುವುದೇ ಲಿಂಗಾಂಗಿಯ ಧರ್ಮ. ಇಂತಹ ಮಂಗಲ ತಮ ಸ್ಥಿತಿಯನ್ನು ಪಡೆಯಲು ಲಿಂಗ ಸಕೀಲುಗಳ ಅವಶ್ಯಕತೆಯಿದೆ.

## ಲಿಂಗ ಸಕೀಲಗಳು

'ಕೀಲು' ಎರಡು ಬಿಡಿ ಬಿಡಿ ಭಾಗಗಳನ್ನು ಜೋಡಿಸುತ್ತದೆ. ಸಂಬಂಧಪಡಿಸುತ್ತದೆ. 'ಸಕೀಲ' ಅಂದರೆ, ಸಂಬಂಧಪಡಿಸುವದು ಮತ್ತು ಸಮರಸಗೊಳಿಸುವದು, ಲಿಂಗಸಕೀಲು ಲಿಂಗ ಅಂಗಗಳನ್ನು ಸಂಬಂಧಪಡಿಸಿ ಸಮರಸಗೊಳಿಸುತ್ತದೆ.

ವಿಧಗಳು :

೧. ಷಡ್ವಿಧ ಸಕೀಲಗಳು
೨. ಅಷ್ಟವಿಧ ಸಕೀಲಗಳು
೩. ೩೬ ವಿಧ ಸಕೀಲಗಳು
೪. ೧೦೮ ವಿಧ ಸಕೀಲಗಳು
೫. ೨೧೬ ವಿಧ ಸಕೀಲಗಳು ಮೊದಲಾದವುಗಳು.

## ಮೂರು ಲಿಂಗಗಳ ಸಕೀಲು

ಪ್ರತಿಯೊಬ್ಬ ಮನುಷ್ಯನಿಗೆ ಸ್ಥೂಲ, ಸೂಕ್ಷ್ಮ, ಕಾರಣವೆಂಬ ಮೂರು ತನುಗಳಿರುತ್ತವೆ. ಜಾಗ್ರದವಸ್ಥೆಯಲ್ಲಿ ವ್ಯವಹರಿಸುವ ತನುವೇ ಸ್ಥೂಲ ಶರೀರವು (ತನು). ಸ್ಥೂಲ ತನುವಿನಲ್ಲಿ ೨೫ ತತ್ತ್ವಗಳಿರುತ್ತವೆ. ಕನಸಿನ ವ್ಯವಹಾರವು ಮನಸ್ಸಿನ ವ್ಯವಹಾರವು ಸೂಕ್ಷ್ಮ ತನುವಿನ ವ್ಯವಹಾರವು. ಈ ಸೂಕ್ಷ್ಮತನುವಿನಲ್ಲಿ ೧೭ ತತ್ತ್ವಗಳಿರುತ್ತವೆ. ಭಾವವು, ಅಂದರೆ ಗಾಢನಿದ್ರೆಯಲ್ಲಿ ಆನಂದವನ್ನನುಭವಿಸುತ್ತಿರುವ ತನುವು ಕಾರಣ ಶರೀರವು; ಈ ಶರೀರದಲ್ಲಿ ಮೂರು ತತ್ತ್ವಗಳಿರುತ್ತವೆ.

ಈ ಮೂರು ತನುಗಳಿಗೆ ಸಂಬಂಧಿಸಿ ಇಷ್ಟಲಿಂಗವು–ಇಷ್ಟಲಿಂಗ, ಪ್ರಾಣಲಿಂಗ ಭಾವಲಿಂಗವೆಂದು ಮೂರು ರೂಪಾಗಿರುವುದು. ಸ್ಥೂಲಶರೀರದಲ್ಲಿ ಇಷ್ಟಲಿಂಗ, ಸೂಕ್ಷ್ಮ ಶರೀರದಲ್ಲಿ ಪ್ರಾಣಲಿಂಗ, ಕಾರಣ ಶರೀರದಲ್ಲಿ ಭಾವಲಿಂಗಗಳು ಸಂಬಂಧಿಸಲ್ಪಟ್ಟಿರುತ್ತವೆ.

"ಭಾವ, ಮನಕ್ಕೆ ಲಿಂಗವ ಧರಿಸಿ, ಕಾಯಕ್ಕೆ ಲಿಂಗವಿಲ್ಲದಿರಬಹುದೆ? ಎರಡಂಗ ಭಕ್ತರಾಗಿ ಒಂದೇಗ ಭವಿಯಾಗಿಪ್ಪ ಭ್ರಾಂತರ ಮುಖವ ನೋಡಲಾಗದು. ತನು ಮನಭಾವದಲ್ಲಿ ಲಿಂಗವಧರಿಸಿ, ಲಿಂಗತ್ರಯಕ್ಕೆ ಅಂಗತ್ರಯಕ್ಕೆ ಅಗಲಿಕೆಯಿಲ್ಲದ ಅಚಲನಾಗಿರ್ದೆನಯ್ಯಾ, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ." ಈ ಮೊದಲಾಗಿ ಅನೇಕ ಅನುಭವದ ವಚನಗಳು ಮೂರು ತನುಗಳಿಗೆ ಮೂರು ಲಿಂಗಗಳ ಅವಶ್ಯಕತೆಯನ್ನು ತಿಳಿಸುತ್ತವೆ. ಲಿಂಗ ಸಂಬಂಧವಿಲ್ಲದ ತನು ಭವಿಯಾಗುತ್ತದೆಂಬುದನ್ನು ಎಚ್ಚರಿಸುತ್ತವೆ.

ಸ್ಥೂಲತನುವಿನಲ್ಲಿ ಸತ್ಕ್ರಿಯೆಗಳು ನೆಲೆಗೊಂಡಿದ್ದರೆ, ಅಲ್ಲಿ ಇಷ್ಟಲಿಂಗ ಸಂಬಂಧವಿದೆಯೆಂದು ತಿಳಿಯಬೇಕು. ಪರಹಿತ ಕಾರ್ಯಗಳು ಮತ್ತು ಲಿಂಗಪೂಜಾದಿ ಕ್ರಿಯೆಗಳು ಸತ್ಕ್ರಿಯೆಗಳು.

ಮನದಲ್ಲಿ ಸದ್ವಿಚಾರಗಳು, ಲಿಂಗಧ್ಯಾನ, ಲಿಂಗಚಿಂತನೆಗಳು ಗಟ್ಟಿಗೊಂಡಿದ್ದರೆ, ಸೂಕ್ಷ್ಮ ಶರೀರದಲ್ಲಿ ಪ್ರಾಣಲಿಂಗದ ಸಂಬಂಧವಿದ್ದಂತೆ.

ಭಾವದಲ್ಲಿ ಶಿವಭಾವನೆಯೂ ಸದಾ ಆನಂದವೂ ತುಂಬಿದ್ದರೆ ಕಾರಣ ದೇಹದಲ್ಲಿ ಭಾವಲಿಂಗವಿದ್ದಂತೆ. ಆಗುಹೋಗುಗಳೆಲ್ಲವೂ ಈಶ್ವರೇಚ್ಛೆ. ಸುಖದುಃಖಗಳು ಒದಗಿದಾಗ ಹಿಗ್ಗದೇ ಕುಗ್ಗದೇ ಅವೆಲ್ಲ ಪ್ರಸಾದವೆಂದು ಭಾವಿಸುವದು ಹಾಗೂ ಲಿಂಗದೆಚ್ಚರದಲ್ಲಿರುವುದು ಭಾವಲಿಂಗ ಸಂಬಂಧ. ಈ ಮೂರೂ ಲಿಂಗಗಳ ಸಂಬಂಧದಿಂದ ತನು ಮನ ಭಾವಗಳು ಲಿಂಗಮಯವಾಗಿ ಉಳಿಯುವುದೇ ಈ ಮೂರು ಲಿಂಗಗಳ ಸಕೀಲಿನ ಪ್ರಯೋಜನ.

## ಷಡ್ವಿಧ (೬ ತರಹದ) ಸಕೀಲಗಳು

ವೀರಶೈವನ ಕ್ರಿಯೆಗಳೆಲ್ಲವೂ ಲಿಂಗಕ್ರಿಯೆಗಳಾಗಬೇಕು. ಆತನ ಭೋಗವೆಲ್ಲವೂ ಲಿಂಗಪ್ರಸಾದವಾಗಬೇಕು. ಆದ್ದರಿಂದ ಲಿಂಗವಂತರು ಕರ್ಮೇಂದ್ರಿಯಗಳಲ್ಲಿ ಜ್ಞಾನೇಂದ್ರಿಯಗಳಲ್ಲಿ, ಷಡ್‌ಧಾತುಗಳಲ್ಲಿ ಲಿಂಗವನ್ನು ಸಂಬಂಧಿಸಿ ಸರ್ವಾಂಗಲಿಂಗಿಯಾಗಬೇಕು. ಜ್ಞಾನೇಂದ್ರಿಯಗಳು ಲಿಂಗಮುಖವೂ ಹೌದು, ಭೋಗಮುಖವೂ ಹೌದು.

ನೋಡುವದು, ನುಡಿಯುವದು, ಮೂಸಿಸುವದು, ರುಚಿಸುವದು, ಮುಟ್ಟುವದು, ತೃಪ್ತಿ ಪಡೆಯುವದು—ಈ ಸ್ಥೂಲ ದೇಹದ ಎಲ್ಲ ಕೆಲಸಗಳು ಇಂದ್ರಿಯಗಳಿಂದ ನಡೆಯುತ್ತವೆ.

> "ಲೋಕದ ಚೇಷ್ಟೆಗೆ ರವಿ ಬೀಜವಾದಂತೆ, ಕರಣಂಗಳ ಚೇಷ್ಟೆಗೆ
> ಮನವೇ ಬೀಜ. ಎನಗೆ ಉಳ್ಳುದೊಂದು ಮನ. ಆ ಮನ ನಿಮ್ಮಲ್ಲಿ
> ಒಡವೆರೆದ ಬಳಿಕ ಎನಗೆ ಭವವುಂಟೇ ಚೆನ್ನಮಲ್ಲಿಕಾರ್ಜುನಾ !"

ಎಂದು ಅಕ್ಕಮಹಾದೇವಿಯರು ಹೇಳಿದಂತೆ ಇಂದ್ರಿಯಗಳ ಕ್ರಿಯೆಗಳಿಗೆ ಮನವೇ ಮೂಲ ಕಾರಣವು. ಮನವಿಲ್ಲದಿದ್ದರೆ ಇಂದ್ರಿಯಗಳು ಕೆಲಸ ಮಾಡಲಾರವು. ಅಲ್ಲದೆ ಭಾವದಿಂದ ಪ್ರೇರಣೆಯಾಗದ ಹೊರತು ಮನ ಮತ್ತು ಇಂದ್ರಿಯಗಳು (ಕರಣಗಳು) ಕೆಲಸ ಮಾಡಲಾರವು : ಮೂರೂ ತನುಗಳು ಸ್ವತಂತ್ರವಲ್ಲ. ಅವು ಪರಸ್ಪರಾವಲಂಬಿಯಾಗಿ ಕಾರ್ಯ ಮಾಡುತ್ತವೆ.

ಕ್ರಿಯೆಗಳು ಸ್ಥೂಲ ಮತ್ತು ಸೂಕ್ಷ್ಮ ಶರೀರಗಳಿಂದ ಉಂಟಾಗುತ್ತವೆ. ಆ ಕ್ರಿಯೆಗಳ ಪರಿಣಾಮವು ಕಾರಣ ಶರೀರದಲ್ಲಿ (ಭಾವದಲ್ಲಿ) ಒಡಮೂಡುತ್ತದೆ. ಕಾರಣ ಶರೀರವು ಈ ಅನುಭವಗಳನ್ನು ಕಾದಿಡುತ್ತದೆ. ಅದು ಅನುಭವಗಳನ್ನು ಸಂಗ್ರಹಿಸುವ ಕೊಟ್ಟಡಿಯು. ಮಾನವನು ಅವಶ್ಯ ಬಿದ್ದಾಗ ಭಾವದಿಂದ ಅನುಭಾವಗಳನ್ನು ಹೊರಪಡಿಸಿಕೊಂಡು ಉಪಯೋಗಿಸುತ್ತಾನೆ. ಎಂದೋ ಕಲಿತಂತೆ, ಹಾಗೂ ನೋಡಿದಂತೆ, ಮುಖಪಾಠ ಹೇಳಿಬಿಡುತ್ತೇವೆ. ಎಂದೋ ಕಲಿತಂತಹ, ಹಾಗೂ ನೋಡಿದಂತಹ ವಿಷಯಗಳ ಪರಿಣಾಮವು ಭಾವದಲ್ಲಿ ಸಂಗ್ರಹವಾಗಿದ್ದರಿಂದ ಆ ಸಂಗ್ರಹವನ್ನೇ ಪ್ರಸಂಗಾನುಸಾರವಾಗಿ ಉಪಯೋಗಿಸಿಕೊಳ್ಳುತ್ತೇವೆ. ಒಳ್ಳೆಯ ವಿಷಯಗಳ ಸಂಗ್ರಹವಿದ್ದರೆ ಒಳ್ಳೆಯ ಕೆಲಸಗಳಾಗುತ್ತವೆ. ಹಾಗಲ್ಲದೆ, ದುಷ್ಟ ಸಂಗ್ರಹವಿದ್ದರೆ ಆ ಮನುಷ್ಯನಿಂದ ದುಷ್ಟ ಕೆಲಸಗಳಾಗುತ್ತವೆ. ಒಳ್ಳೆಯ ಸಂಗ್ರಹವನ್ನು ಮಾಡುವ ರೀತಿಯನ್ನು ಷಟ್‌ಸ್ಥಲ ಶಾಸ್ತ್ರವು ತಿಳಿಸುತ್ತದೆ. ಆರು ಇಂದ್ರಿಯಗಳಲ್ಲಿ ಆರು ಲಿಂಗಗಳನ್ನು ಸಂಬಂಧಿಸುವುದರಿಂದ ಭಾವದಲ್ಲಿ ಒಳ್ಳೆಯ ಸಂಗ್ರಹವಾಗುತ್ತದೆ.

ಒಂದು ಲಿಂಗವೇ ಮೂರು ತನುಗಳನ್ನು ಕುರಿತು ಇಷ್ಟ, ಪ್ರಾಣ, ಭಾವಲಿಂಗ ವೆಂದು ಮೂರು ರೂಪಾದಂತೆ, ಆ ಮೂರು ಲಿಂಗಗಳು ಆರು ಇಂದ್ರಿಯಗಳನ್ನು ಕುರಿತು ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಮಹಾ ಲಿಂಗವೆಂದು ಆರು ಲಿಂಗಗಳಾಗಿವೆ. ಈ ಆರು ಲಿಂಗಗಳು ಕರ್ಮೇಂದ್ರಿಯ ಜ್ಞಾನೇಂದ್ರಿಯಗಳಲ್ಲಿ ಈ ಕೆಳಗಿನಂತೆ ಸಂಬಂಧಿಸಲ್ಪಟ್ಟಿವೆ.

| | ಕರ್ಮೇಂದ್ರಿಯಗಳು | ಜ್ಞಾನೇಂದ್ರಿಯಗಳು | ಲಿಂಗಗಳು |
|---|---|---|---|
| ೧. | ಗುದ | ನಾಸಿಕಾ | ಆಚಾರಲಿಂಗ |
| ೨. | ಗುಹ್ಯ | ಜಿಹ್ವಾ | ಗುರುಲಿಂಗ |
| ೩. | ಪಾದ | ನೇತ್ರ | ಶಿವಲಿಂಗ |
| ೪. | ಪಾಣಿ (ಹಸ್ತ) | ತ್ವಚ (ಚರ್ಮ) | ಜಂಗಮಲಿಂಗ |
| ೫. | ವಾಕ್ | ಕರ್ಣ (ಶ್ರೋತ್ರ) | ಪ್ರಸಾದಲಿಂಗ |
| ೬. | ಹೃದಯ | ಹೃದಯ | ಮಹಾಲಿಂಗ |

ಮೂಸಿಸುವುದು (ವಾಸನೆ ತಕ್ಕೊಳ್ಳುವುದು) ಆಚಾರಲಿಂಗದ ಕ್ರಿಯೆ.
ಗಂಧವು (ವಾಸನೆಯು) ಆಚಾರಲಿಂಗದ ಭೋಗ.
ರುಚಿಸುವುದು ಗುರುಲಿಂಗದ ಕ್ರಿಯೆ: ನೋಟವು ಶಿವಲಿಂಗದ ಭೋಗ.

ಸ್ಪರ್ಶಿಸುವುದು ಜಂಗಮಲಿಂಗದ ಕ್ರಿಯೆ; ಸ್ಪರ್ಶವು ಜಂಗಮಲಿಂಗದ ಭೋಗ (ತೃಪ್ತಿ). ಕಿವಿಯಿಂದ ಕೇಳುವುದು ಪ್ರಸಾದ ಲಿಂಗದ ಕ್ರಿಯೆ; ಶಬ್ದವು (ಧ್ವನಿಯು) ಪ್ರಸಾದಲಿಂಗದ ಭೋಗ. ಗಂಧ, ರಸ, ರೂಪ. ಸ್ಪರ್ಶ, ಶಬ್ದ ಇವೆಲ್ಲವುಗಳ ತೃಪ್ತಿಯು ಹೃದಯ ಮುಖವಾಗಿ ಮಹಾಲಿಂಗಕ್ಕೆ ತೃಪ್ತಿಯಾಗುತ್ತವೆ.

ಈ ರೀತಿಯಾಗಿ ಷಡ್ವಿಧ ಲಿಂಗ ಸಕೀಲಿನಿಂದ ಲಿಂಗವಂತನ ಕ್ರಿಯೆಗಳೆಲ್ಲವೂ ಲಿಂಗಕ್ರಿಯೆಗಳಾಗುತ್ತವೆ. ಭೋಗವೆಲ್ಲವೂ ಲಿಂಗಪ್ರಸಾದವಾಗುತ್ತವೆ. ಮಂಗಲ ಮಯವಾದ ಇವುಗಳ ಪರಿಣಾಮವು ಭಾವದಲ್ಲಿ ಸಂಗ್ರಹವಾಗುತ್ತವೆ. ಇಂದ್ರಿಯಗ ಳೆಲ್ಲವೂ ಲಿಂಗಸ್ವರೂಪವಾಗುತ್ತವೆ. ಈ ರೀತಿ ಇಂದ್ರಿಯಗಳ ಮುಖವಾಗಿ ಆರು ಲಿಂಗಗಳಿಗೆ ಅರ್ಪಿಸುವ ಅರ್ಪಣ ಕ್ರಮವು ಜ್ಞಾನಾರ್ಪಣವೆಂದು ಕರೆಯ ಲ್ಪಡುತ್ತದೆ.

ಅರ್ಪಣದಲ್ಲಿ ಕ್ರಿಯಾರ್ಪಣ (ಕಾಯಾರ್ಪಣ), ಜ್ಞಾನಾರ್ಪಣ (ಕರಣಾರ್ಪಣ) ಭಾವಾರ್ಪಣವೆಂದು ಮೂರು ವಿಧ.

## ಕ್ರಿಯಾರ್ಪಣ

ವೀರಶೈವನು ಪ್ರತಿದಿನ ನಿಯಮಿತ ಕಾಲದ ಲಿಂಗಾರ್ಚನೆಯ ನಂತರ ಲಿಂಗಕ್ಕೆ ಅರ್ಪಿಸಿ ಪ್ರಸಾದವನ್ನು ಸೇವಿಸುವುದು ಕ್ರಿಯಾರ್ಪಣವು. ಎಡೆಯ ಬಟ್ಟಲದಲ್ಲಿಯ

ಪದಾರ್ಥಗಳು ಕ್ರಮಬದ್ಧವಾಗಿ ಭಸ್ಮ ಮಂತ್ರಗಳಿಂದ ಶುದ್ಧಮಾಡಲ್ಪಡಬೇಕು. ಅವುಗಳ ರೂಪವನ್ನು ಇಷ್ಟಲಿಂಗಕ್ಕೂ, ರುಚಿಯನ್ನು ಪ್ರಾಣಲಿಂಗಕ್ಕೂ, ತೃಪ್ತಿಯನ್ನು ಭಾವಲಿಂಗಕ್ಕೂ ಅರ್ಪಿಸಿ, ಶುದ್ಧ, ಸಿದ್ಧ, ಪ್ರಸಿದ್ಧ, ಪ್ರಸಾದವನ್ನು ಸೇವಿಸಬೇಕು. ಈ ಮೂರು ಪ್ರಸಾದಗಳು ಮತ್ತು ಅರ್ಪಿತವು ಮುಗಿಯುವುದರೊಳಗಾಗಿ ಆಗುವ ಅಪ್ಯಾಯನ ಪ್ರಸಾದ, ಸಮಯ ಪ್ರಸಾದ, ಪಂಚೇಂದ್ರಿಯ ವಿರಹಿತ ಪ್ರಸಾದ, ಅಂತಃಕರಣ ವಿರಹಿತ ಪ್ರಸಾದ, ಪ್ರಸಾದಿಯ ಪ್ರಸಾದ, ಸದ್ಭಾವಪ್ರಸಾದ, ಸಮತಾ ಪ್ರಸಾದ, ಜ್ಞಾನ ಪ್ರಸಾದವೆಂಬ ಎಂಟು ಪ್ರಸಾದಗಳು ಸೇರಿ ಏಕಾದಶ ಪ್ರಸಾದವಾಗುತ್ತವೆ. ಇದು ಕ್ರಿಯಾಪೂರ್ವಕವಾದ ಅರ್ಪಣವು—ಕಾಯಾರ್ಪಣವು. ಲಿಂಗಾರ್ಪಿತವಮಾಡಿಕೊಳ್ಳುವುದರೊಳಗಾಗಿ ನಡೆಯತಕ್ಕದ್ದು. ಸ್ಥೂಲ ತನುವಿನ ಆಹಾರ ವಸ್ತುಗಳಿಗೆ ಸಂಬಂಧಿಸಿರುವುದು. ವೀರಶೈವನು ಪಾದೋದಕ ಪ್ರಸಾದಗಳನ್ನು ಸೇವಿಸುತ್ತಾನಲ್ಲದೆ, ಅನ್ನ ನೀರುಗಳನ್ನು ಸ್ವೀಕರಿಸುವದಿಲ್ಲೆಂದು ಶಿವಾನುಭಾವಿಗಳೂ ವೀರಶೈವ ಧರ್ಮ ತತ್ತ್ವಗಳೂ ಈ ರೀತಿ ಪ್ರತಿಪಾದಿಸುತ್ತವೆ.

## ಜ್ಞಾನಾರ್ಪಣ

ಸರ್ವತ್ರ, ಸದಾ, ಅನಿರೀಕ್ಷಿತವಾಗಿ, ಅನಿಚ್ಛಾಪೂರ್ವಕವಾಗಿ ಇಂದ್ರಿಯಗಳ ಮುಖವಾಗಿ ಬರುವ ಗಂಧ, ರಸ, ರೂಪ, ಸ್ಪರ್ಶ, ಶಬ್ದ, ತೃಪ್ತಿಗಳನ್ನು ಆಚಾರಾದಿ ಷಡ್ಲಿಂಗಗಳಿಗೆ ಅರ್ಪಿಸುತ್ತಾ ಲಿಂಗವಂತರು ಪ್ರಸಾದ ಭೋಗಿಯಾಗಿರುತ್ತಾರೆ. ಇಂದ್ರಿಯಗಳಲ್ಲಿ ಲಿಂಗಸಂಬಂಧವಮಾಡಿಕೊಂಡು, ಇಂದ್ರಿಯಗಳ ಕ್ರಿಯೆಗಳೆಲ್ಲ ಲಿಂಗ ಕ್ರಿಯೆಗಳು. ಭೋಗವನ್ನು ಲಿಂಗಭೋಗವನ್ನಾಗಿಸಿಕೊಂಡು ವರ್ತಿಸುತ್ತಾರೆ. ಇದು ತನು, ಮನ, ಭಾವಶುದ್ಧಿಯಾದವರಿಗೆಲ್ಲ ಸಾಧಿಸಲು ಬರುವಂಥಾದ್ದು, ಅನ್ಯರಿಗೆ ಸಾಧ್ಯವಿಲ್ಲ.

## ೩೬ ವಿಧ ಸಕೀಲುಗಳು

ಆಚಾರಾದಿ ಆರು ಲಿಂಗಗಳಿಗೆ ಗಂಧ, ರಸ, ರೂಪ, ಸ್ಪರ್ಶ, ಶಬ್ದ, ಪರಿಣಾಮ (ತೃಪ್ತಿ) ಗಳೆಂಬ ವಿಷಯಗಳನ್ನು ಅರ್ಪಿಸಿ, ಆ ಪ್ರಸಾದವನ್ನು ಸ್ವೀಕರಿಸುವ ಕ್ರಮವು ಹಿಂಗೆ ಷಡ್ವಿಧ ಸಕೀಲಿನಲ್ಲಿ ಹೇಳಲ್ಪಟ್ಟಿದೆ. ಆದರೆ ಗಂಧಾದಿ ಪ್ರತಿಯೊಂದು ವಿಷಯದಲ್ಲಿ ಸ್ವಾಭಾವಿಕವಾಗಿ ಆರಾರು ಭಾಗಗಳಿರುತ್ತವೆ. ನಾವು ಷಡ್ರಸಾನ್ನ ಭೋಜನ ಮಾಡಿದೆವೆಂದು ಲೌಕಿಕರು ಸ್ವಾಭಾವಿಕವಾಗಿ ಹೇಳುತ್ತಾರೆ. ರಸದಲ್ಲಿ ಒಗರು, ಮಧುರ, ಖಾರ, ಹುಳಿ, ಕಹಿ, ಸಿಹಿ ಎಂದು ಆರು ವಿಧಗಳಿರುತ್ತವೆ. ಹೀಗೆಂತೇ, ಗಂಧದಲ್ಲಿ ಬೇರು, ಗೆಡ್ಡೆ ಗೆಣಸುಗಳ ಗಂಧ, ಮರ ತೊಗಟೆಗಳ ಗಂಧ, ಚಿಗುರು, ತಳಿರು ಪತ್ರೆಯ ಗಂಧ, ಮೊಗ್ಗೆ ಪುಷ್ಪಗಳ ಗಂಧ, ಕಾಯಿ ದೋರೆ ಹಣ್ಣುಗಳ ಗಂಧ—ಇವೆಲ್ಲದರಲ್ಲಿನ ಗಂಧವನ್ನರಿಯುವುದು (ಮಹಾಲಿಂಗಕ್ಕೆ) ಎಂದು ಆರು

ವಿಧಗಳಿರುತ್ತವೆ. ಹೀಗೆಯೇ ಪ್ರತಿಯೊಂದು ವಿಷಯದಲ್ಲಿ ಆರು ಆರು ಭಾಗಗಳಿರುತ್ತವೆ. ಈ ವಿಭಾಗಗಳ ಅರ್ಪಿತಕ್ಕೆ ಆಚಾರಾದಿ ಪ್ರತಿಯೊಂದು ಲಿಂಗವು ಆರಾರು ಭಾಗಗಳಾಗಿರುತ್ತದೆ. ಲಿಂಗಗಳಿಗೆ ಪದಾರ್ಥಗಳನ್ನರ್ಪಿಸುವ ಭಕ್ತನೂ ಆರು ರೂಪಗಳನ್ನು ಹೊಂದಲೇಬೇಕು. ಭಕ್ತಾದಿ ಆರು ಅಂಗಸ್ಥಲಗಳಲ್ಲಿಯೂ ಆರಾರು ಭಾಗಗಳಿರುತ್ತವೆ. ಪ್ರತಿಯೊಂದು ಅಂಗದಲ್ಲಿ ಆರು ಭಾಗಗಳು x ಆರು ಅಂಗಗಳು = ೩೬ ಅಂಗಸ್ಥಲಗಳು. ಪ್ರತಿಯೊಂದು ಲಿಂಗದಲ್ಲಿ ಆರು ಭಾಗಗಳು x ಆರು ಲಿಂಗಸ್ಥಲಗಳು = ೩೬ ಲಿಂಗಸ್ಥಲಗಳು. ಅಂಗ ಲಿಂಗಗಳು ಆರಾರು ವಿಭಾಗಗಳಾದಂತೆ ಶಕ್ತಿ, ಭಕ್ತಿ, ಹಸ್ತ, ಮುಖ, ಪದಾರ್ಥ, ಪ್ರಸಾದಗಳು ಆರಾರು ಭಾಗಗಳಾಗಿ ೩೬ ವಿಭಾಗಗಳಾಗುತ್ತವೆ.

ಸಕೀಲಗಳು ಮನುಷ್ಯನಲ್ಲಿ ಕೆಲವೊಂದು ತರದ ವಿಶೇಷ ಗುಣಗಳ ವಿಕಾಸಕ್ಕೆ ಕಾರಣವಾಗಿರುತ್ತವೆ. ಎಲ್ಲ ಸ್ಥಳಗಳಲ್ಲಿ ಮನುಷ್ಯನು ಉತ್ಕ್ರಾಂತಿಯನ್ನು ಹೊಂದುತ್ತ ಲಿಂಗಾಂಗ ಸಾಮರಸ್ಯ ಸ್ಥಿತಿಯನ್ನು ಪಡೆಯುತ್ತಾನೆ.

ಯಾವುದೊಂದು ಸ್ಥಲವನ್ನು ಆಶ್ರಯಿಸಿದರೂ ಆ ಸ್ಥಲದಲ್ಲಿಯೇ ಆರೂ ಸ್ಥಲಗಳ ಅನುಭವವನ್ನೂ ಲಿಂಗಾಂಗ ಸಾಮರಸ್ಯವನ್ನು ಪಡೆಯಬಹುದೆಂಬುದು ಶಿವಶರಣರ ಅನುಭವ. ಹಾಗೂ ಸ್ಥಲವಿಚಾರದಲ್ಲಿ ಅವರು ಪ್ರಗತಿ ಮಾರ್ಗವನ್ನು ಕಂಡುದರ ಹೆಗ್ಗುರುತಾಗಿರುವದು.

"ಪ್ರಥಮದಲ್ಲಿ ಭಕ್ತನಾದೆನೆಂಬರು, ದ್ವಿತೀಯದಲ್ಲಿ
ಮಹೇಶ್ವರನಾದೆನೆಂಬರು,
ತೃತೀಯದಲ್ಲಿ ಪ್ರಸಾದಿಯಾದೆನೆಂಬರು, ಚತುರ್ಥದಲ್ಲಿ
ಪ್ರಾಣಲಿಂಗಿಯಾದೆನೆಂಬರು,
ಐದನೆಯದರಲ್ಲಿ ಶರಣನಾದೆನೆಂಬರು, ಆರನೆಯದರಲ್ಲಿ ಐಕ್ಯನಾದೆನೆಂಬರು.
ಆರು ಸ್ಥಲವ ಮೀರಿ ಪರವಯವನೊಂದಿಹೆನೆಂಬರು; ಇದು ಖಂಡಿತ.
ಷಟ್‌ಸ್ಥಲ ಜ್ಞಾನ ನಿರ್ಣಯವಲ್ಲ.
ಆವಾವ ಸ್ಥಲವ ಅಂಗಗೊಂಡರೂ, ಆ ಸ್ಥಲದಲ್ಲಿ ಷಡ್ವಿಧ ಲಿಂಗದಲ್ಲಿ ಬೆರಸಿ
ಬೇರಿಲ್ಲದಿರಬಲ್ಲಡೆ ಸದ್ಭಕ್ತನೆಂಬೆನಯ್ಯ ಮಹಾಲಿಂಗ ಗುರು
ಶಿವ ಸಿದ್ಧೇಶ್ವರ ಪ್ರಭುವೇ!"

ಎಂದು ತೋರಿಸಿದ ಸಿದ್ಧಲಿಂಗ ಶಿವಯೋಗಿಗಳ ಮತ್ತು ಅನೇಕ ಅನುಭಾವಿಗಳ ವಚನಗಳು ಆವ ಸ್ಥಲದಲ್ಲಿ ನಿಂದಡೂ, ಅದೇ ಸ್ಥಲದಲ್ಲಿ ಷಟ್‌ಸ್ಥಲವಳವಡಬೇಕೆಂಬುದನ್ನು ದೃಢೀಕರಿಸುತ್ತವು.

ಇಷ್ಟಲಿಂಗ ಪೂಜೆಯಲ್ಲಿ, ಇಷ್ಟ, ಪ್ರಾಣ, ಭಾವಲಿಂಗಗಳ ಪೂಜೆಯೂ, ಆಚಾರಾದಿ ಷಡ್ಲಿಂಗಗಳ ಪೂಜೆಯೂ ಪೂರ್ಣವಾಗುತ್ತವೆ. ಅಲ್ಲಿ ಷಟ್‌ಸ್ಥಲಗಳೂ

ಪೂರ್ಣವಾಗುತ್ತವೆ. ಆದುದರಿಂದ ಷಟ್‌ಸ್ಥಲಾಚರಣೆಯು ಕ್ರಮ ಸಮುಚ್ಚಯ ವಲ್ಲ. ಅದು ಸಮ ಸಮುಚ್ಚಯವೆಂದು ಶಿವಶರಣರ ವಚನಗಳಿಂದ ಸ್ಪಷ್ಟವಾಗಿ ಕಂಡುಬರುತ್ತದೆ.

## ೨೧೬ ವಿಧ ಸಕೀಲುಗಳು (ಭಾವಾರ್ಪಣ)

ಷಟ್‌ಸ್ಥಲಗಳು ಸ್ಥೂಲ ಶರೀರಕ್ಕೆ ಸಂಬಂಧವುಳ್ಳವುಗಳು.
೩೬ ಸ್ಥಲಗಳು ಸೂಕ್ಷ್ಮ ಶರೀರಕ್ಕೆ ಸಂಬಂಧವುಳ್ಳವುಗಳು.
೨೧೬ ಸ್ಥಲಗಳು ಕಾರಣ ಶರೀರಕ್ಕೆ ಸಂಬಂಧವುಳ್ಳವುಗಳು.
ಕರಣಾರ್ಪಣದಿಂದ ಕರಣಗಳು ಶುದ್ಧವಾಗುತ್ತವೆ.
ಭಾವಾರ್ಪಣದಿಂದ ಆತ್ಮನೂ, ಆತ್ಮನ ಭಾವಗಳೂ ಶುದ್ಧವಾಗುವವು.
ಅಂದರೆ, ಪ್ರಸಾದ ರೂಪವಾಗುವವು.
ಕಾಯಾರ್ಪಣದಲ್ಲಿ ಇಷ್ಟಲಿಂಗಕ್ಕೆ ಪ್ರಾಧಾನ್ಯತೆಯೂ, ತನು ಶುದ್ಧಿಯೂ.
ಕರಣಾರ್ಪಣದಲ್ಲಿ ಪ್ರಾಣಲಿಂಗಕ್ಕೆ ಪ್ರಾಧಾನ್ಯತೆಯೂ,
ಭಾವಾರ್ಪಣದಲ್ಲಿ ಭಾವಲಿಂಗಕ್ಕೆ ಪ್ರಾಧಾನ್ಯತೆಯೂ ಇರುತ್ತದೆ.

**ಭಾವಾರ್ಪಣವು:** ಕರಣಾರ್ಪಣದಲ್ಲಿಯ ೩೬ ಭಾಗಗಳಲ್ಲಿ ಪ್ರತಿಯೊಂದರಲ್ಲಿ ಭಾವಲಿಂಗ ಸಂಬಂಧದಲ್ಲಿ ಆರು ಕ್ರಿಯೆಗಳಾಗುತ್ತವೆ.

(೧) ವಿಷಯಗಳನ್ನು ಇಂದ್ರಿಯಗಳು ತಟ್ಟುವುದು (ಸೋಂಕುವದು)
(೨) ತಟ್ಟಿದ್ದನ್ನು ತಿಳಿಯುವುದು.
(೩) ತಿಳಿದದ್ದನ್ನು ನಿಶ್ಚಯಿಸುವದು.
(೪) ನಿಶ್ಚಯಿಸಿದ್ದನ್ನು ಅನುಭವಿಸುವದು.
(೫) ಅನುಭವಿಸಿದ್ದನ್ನು ಆನಂದಿಸುವದು.
(೬) ಆನಂದದಿಂದ ತೃಪ್ತನಾಗುವದು.

ಹೀಗೆ ಗಂಧ, ರಸ, ರೂಪ, ಸ್ಪರ್ಶ, ಶಬ್ದ, ಪರಿಣಾಮುಗಳನ್ನು ಭೋಗಿಸು ವಲ್ಲಿ ಪ್ರತಿಯೊಂದು ವಿಷಯಕ್ಕೆ ಈ ಆರು ಕ್ರಿಯೆಗಳ ಸಂಬಂಧವಿರುತ್ತದೆ. ಇವು ಆತ್ಮ ಸಂಬಂಧವಾದವುಗಳು. ಇವುಗಳನ್ನು ಭಾವಲಿಂಗಕ್ಕೆ ಅರ್ಪಿಸಬೇಕು. ೩೬ತೆರದ ಕರಣಾರ್ಪಣದ ಪ್ರತಿಯೊಂದರಲ್ಲಿ ಮೇಲೆ ಹೇಳಿದ ಆರು ಕ್ರಿಯೆಗಳಿದ್ದು, ಈ ಕ್ರಿಯೆ ಗಳೆಲ್ಲವು ೩೬ರ ಪ್ರತಿಯೊಂದರಲ್ಲಿ ಇರುವುದರಿಂದ ಎಲ್ಲವೂ ಸೇರಿ ೩೬x೬ = ೨೧೬ ತೆರದ ಅರ್ಪಣಗಳಾಗುವವು. ಇದು ಭಾವಾರ್ಪಣವು.

೧. ತೃಪ್ತಿಪದಾರ್ಥಗಳು ಇಂದ್ರಿಯಗಳಿಗೆ ತಟ್ಟುವುದು——ಆಚಾರಲಿಂಗಕ್ಕೆ
೨. ತಟ್ಟಿದ್ದನ್ನು ತಿಳಿಯುವುದು——ಗುರುಲಿಂಗಕ್ಕೆ

೩. ತಿಳಿದದ್ದನ್ನು ನಿಶ್ಚಯಿಸುವುದು——ಶಿವಲಿಂಗಕ್ಕೆ
೪. ನಿಶ್ಚಯಿಸಿದ್ದನ್ನು ಅನುಭವಿಸುವದು——ಜಂಗಮ ಲಿಂಗಕ್ಕೆ
೫. ಅನುಭವದಿಂದ ಆನಂದಿಸುವದು——ಪ್ರಸಾದ ಲಿಂಗಕ್ಕೆ
೬. ಆನಂದದಿಂದ ತೃಪ್ತನಾಗುವದು——ಮಹಾಲಿಂಗಕ್ಕೆ
ಅರ್ಪಿತವಾಗುತ್ತದೆ.

**ಉದಾಹರಣೆ:**

ಕೋಗಿಲೆಯು ಆನಂದದಿಂದ ಧ್ವನಿಮಾಡುವಾಗ ಅನಿರೀಕ್ಷಿತವಾಗಿ ಆ ಧ್ವನಿಯು ನಮ್ಮ ಕಿವಿಗೆ ತಟ್ಟುವುದೇ ಆಚಾರ ಲಿಂಗಕ್ಕೆ ಅರ್ಪಿತ. ತಟ್ಟಿದ ಕೂಡಲೆ ಆ ಗಾನವು ಎಲ್ಲಿಂದ ಬಂತು? ಯಾರು ಹಾಡಿದವರು? ಎಂದು ಯೋಚಿಸಿ, ಇದು ಕೋಗಿಲೆಯು ಗಾನವೆಂದು ತಿಳಿಯುವದು ಗುರುಲಿಂಗಕ್ಕೆ ಅರ್ಪಿತವು. ಇಂಥಲ್ಲಿಯೇ ಕೋಗಿಲೆಯು ಕೂತಿದೆ. ನಾನು ಕೇಳಿದ ಧ್ವನಿಯು ಈ ಕೋಗಿಲೆಯದೇ ಇರಬೇಕೆಂದು ನಿಶ್ಚಯಿಸುವದು ಶಿವಲಿಂಗಕ್ಕೆ ಅರ್ಪಿತವು. ಕಿವಿಗೊಟ್ಟು ಅದನ್ನು ಕೇಳಿ ಅನುಭವಿಸುವದು ಜಂಗಮ ಲಿಂಗಕ್ಕೆ ಅರ್ಪಿತವು. ಅನುಭವದಿಂದ ಆನಂದವುಂಟಾಗುವುದು ಪ್ರಸಾದ ಲಿಂಗಕ್ಕೆ ಅರ್ಪಿತವು. ಆನಂದದಿಂದ ತೃಪ್ತನಾಗುವುದು ಮಹಾಲಿಂಗಕ್ಕೆ ಅರ್ಪಿತವು. ಈ ಎಲ್ಲ ಕ್ರಿಯೆಗಳು ವಿಲಂಬವಿಲ್ಲದೆ ೪–೫ ಸೆಕೆಂಡುಗಳಲ್ಲಿಯೇ ಆಗುತ್ತವೆ.

ಇವುಗಳನ್ನು ಭೋಗಿಸಲು ೩೬ ಲಿಂಗಸ್ಥಲಗಳಲ್ಲಿ ಒಂದೊಂದರಲ್ಲಿ ಆರಾರ ರಂತೆ ೨೧೬ ಲಿಂಗಸ್ಥಲಗಳಾಗುತ್ತವೆ. ಇದೇ ರೀತಿ ಶಕ್ತಿ, ಭಕ್ತಿ, ಹಸ್ತ, ಮುಖ, ಪದಾರ್ಥ, ಪ್ರಸಾದ ಈ ಎಲ್ಲವೂ ೨೧೬ ತೆರನಾಗುತ್ತವೆ.

ಕಾಯಾರ್ಪಣ, ಕರಣಾರ್ಪಣಗಳು ಅಂದರೆ ಷಡ್ವಿಧ ಸಕೀಲಗಳು ಹಾಗು ೩೬ ವಿಧ ಸಕೀಲಗಳು ಇಂದ್ರಿಯಗಳಿಗೆ ಗೋಚರವಾದಂತಹವು. ಪರಿಶುದ್ಧನಾದ ಜೀವನಿಗೆ ಪ್ರಯತ್ನ ಮೂಲಕವಾಗಿ ಸಾಧ್ಯವಾದವುಗಳು. ಆದರೆ ಭಾವಾರ್ಪಣವು–೨೧೬ ಸಕೀಲುಗಳು ಶಬ್ದಗಳಿಂದ ವಿವರಿಸಲು ಅಸಾಧ್ಯವಾದವುಗಳು. ಅವು ಸೂಕ್ಷ್ಮಕ್ಕಿಂತ ಸೂಕ್ಷ್ಮತರವಾದವುಗಳು. ಅನುಭವಿಗಳಿಗೆ ಮಾತ್ರ ಅವು ಸಾಧಿಸಲು ತಕ್ಕವುಗಳು. ಕೇವಲ ಅನುಭವಗಮ್ಯವಾದವುಗಳು.

ವಿಸ್ತಾರ ಭಯದಿಂದ ಈ ಸಕೀಲುಗಳನ್ನು ಸಂಕ್ಷೇಪವಾಗಿ ಬರೆಯಲಾಗಿದೆ.

---

"ಪರತರ ಶಿವಲಿಂಗವೇ ಸಿ ನಿನಗಾಗಿ
ಕರಕಂಜದೊಳು ಕಾಣಿಸಿತು ಯೋಗಿ ಯಜಿಸು."

—ಶ್ರೀ ನಿಜಗುಣ ಶಿವಯೋಗಿಗಳು

# ಚತುರ್ವಿಧ ಸಾರಾಯ ಸಂಪತ್ತು

● ಲಿಂ. ಭಾಷ್ಯಾಚಾರ್ಯ ಷ.ಬ್ರ. ಶ್ರೀ ಸದಾಶಿವ ಶಿವಾಚಾರ್ಯರು
ಶ್ರೀ ಗುರು ಕುಮಾರಾಶ್ರಮ, ಗಿರಿಯಾಪುರ

ಭಕ್ತನ ಸಾಧನ ಭೂಮಿಕೆ ಬಿತ್ತರದ್ದು. ಭಾವ ಬಂಧುರವಾದದ್ದು. ಅಂಗ ಸ್ಥಲಕ್ಕೆ ಇರುವ ೪೪ ಉಪಸ್ಥಲಗಳಲ್ಲಿ ೧೫ ಉಪಸ್ಥಲಗಳು ಭಕ್ತಾಂಗನಿಗೆ ಮೀಸಲಾಗಿವೆ. ಹೆಚ್ಚು ಕಡಿಮೆ ಮೂರನೆ ಒಂದು ಭಾಗ ಭಕ್ತನ ಸಾಧನ ಸಂಪತ್ತಿ. ಹನ್ನೆರಡನೆಯದು ಚತುರ್ವಿಧ ಸಾರಾಯ ಸ್ಥಲ. ಇದಕ್ಕೆ ಪ್ರಸಾದ ಸ್ವೀಕಾರ ಸ್ಥಲವೆಂದು ಇನ್ನೊಂದು ಹೆಸರು.

ಪಿಂಡ, ಪಿಂಡಜ್ಞಾನ, ಸಂಸಾರಹೇಯ, ಗುರುಕಾರುಣ್ಯ, ಲಿಂಗಧಾರಣ, ಭಸ್ಮಧಾರಣ, ರುದ್ರಾಕ್ಷಧಾರಣ, ಪಂಚಾಕ್ಷರ ಜಪಸ್ಥಲ, ಭಕ್ತಮಾರ್ಗಕ್ರಿಯಾಸ್ಥಲ, ಉಭಯಸ್ಥಲ, ತ್ರಿವಿಧಸಂಪತ್ತಿಸ್ಥಲ, ಚತುರ್ವಿಧ ಸಾರಾಯ ಸ್ಥಲ (ಪ್ರಸಾದ ಸ್ವೀಕಾರ ಸ್ಥಲ), ಸೋಪಾಧಿದಾನ ಸ್ಥಲ, ನಿರುಪಾಧಿದಾನಸ್ಥನ, ಸಹಜದಾನಸ್ಥಲ– ಇವು ಹದಿನೈದು ಭಕ್ತನ ಸಾಧನಸ್ಥಲಗಳು. ಇವುಗಳಲ್ಲಿ ಈ ಬರಹಕ್ಕೆ ವಿಷಯವಾದುದು ಹನ್ನೆರಡನೆಯ ಉಪಸ್ಥಲವಾದ ಚತುರ್ವಿಧ ಸಾರಾಯ ಸ್ಥಲ.

ಈ ಹೆಸರೇ ಹೆಚ್ಚು ಸವಿಯಾಗಿದೆ; ಸತ್ವಶಾಲಿಯಾಗಿದೆ. ಇದು ಭಕ್ತನ ಸಾರಾಯ ಸಂಪತ್ತು. ತನು ಮನ ಪ್ರಾಣ ಭಾವಗಳನ್ನು ಪ್ರಸನ್ನಗೊಳಿಸುವ ಪರಮಾಮೃತ ರಸ. ಪ್ರಸನ್ನಗೊಳಿಸಿ ಪರಿಣಾಮವನ್ನುಂಟುಮಾಡುವ ಸಾರಾಯ ಸ್ಥಲ. ಸರ್ವಾತ್ಮನಿವೇದನರೂಪ "ಸಹಜದಾನ ಸ್ಥಲ." ಸಂಪನ್ನನನ್ನಾಗಿಸುವ ಸ್ಥಲ. ತತ್ತ್ವಸಾರವನ್ನೊಳಗೊಂಡ ಸ್ಥಲ.

"ಚತುರ್ವಿಧ ಸಾರಾಯ ಸಂಪತ್ತು" ಎಂದರೆ ನಾಲ್ಕು ಬಗೆಯ ಹಿರಿದಾದ ಸಿರಿ. ಗುರು-ಲಿಂಗ-ಜಂಗಮ-ಪ್ರಸಾದ ಈ ನಾಲ್ಕು ಭಕ್ತನಿಗೆ ಬೃಹತ್ ಸಂಪತ್! ಈ ನಾಲ್ಕರಲ್ಲಿ ಬೃಹತ್ತತ್ತ್ವ ಗರ್ಭೀಕರಿಸಿದೆ.

ಗುರು ಎಂದರೆ ಬೃಹತ್ತು. ಭಾನು ಕಳೆಯದ ಭಾವ ಕತ್ತಲೆಯನ್ನು ಕಳೆವ ಗುರುಭಾನು ಬೃಹತ್ತಲ್ಲವೆ? ಸಾರಾಯ ಸಂಪತ್ತಲ್ಲವೆ? ಜಾಗತಿಕ ಸೃಷ್ಟಿ ಸ್ಥಿತಿ ಲಯಗಳನ್ನು ತನ್ನೊಳಗೆ ಒಳಗೊಂಡು ಕರಸ್ಥಲಕ್ಕೆ ಕುಳಕಾಗಿ ಗುರುಕರುಣೆಯಿಂದ ಬಂದ

ಲಿಂಗ ಘನವಾದುದಲ್ಲವೆ? ಶಿಷ್ಯನಿಗೆ ಶ್ರೀಗುರು ಕರುಣಿಸಿದ ಘನಧನವಲ್ಲವೆ? ಜನನ ಜೀವನ ಮರಣಗಳನ್ನು ಗೆದ್ದ ಜಂಗಮ ಜೇಷ್ಠನೆನಿಸನೆ? ಆಕಾರದಲ್ಲಿ ಆಕಾಂಕ್ಷೆಯಿಲ್ಲದೆ ನಿರಾಕಾರವೆ ನಿಲವಾಗಿ ಇರುವಾತನು–ನಿರಪೇಕ್ಷೆಯೆ ನಿಜಸ್ವಭಾವವಾಗಿರುವಾತನು ಜಡಕ್ಕೂ ಜಡಭಾವಕ್ಕೂ ಚೇತನವನ್ನು ಚಿಮ್ಮಿಸುವಾತನು ಗರಿಷ್ಠನೆನಿಸನೆ? ಎಲ್ಲ ನೋವುಗಳನ್ನು ನುಂಗಿ ಮನವನ್ನು ನಿರ್ಮಲಗೊಳಿಸುವ ನಿಶ್ಚಲವಾಗಿಸುವ ಪ್ರಸಾದ (ಅನುಗ್ರಹ) ಪರಮ ಸಂಪದವೆನಿಸದೆ? ಪ್ರಸನ್ನತೆಯೆ ಪ್ರಸಾದ. ಅದು ಭಕ್ತನಿಗೆ ಗುರು-ಲಿಂಗ-ಜಂಗಮರಿಂದ ಲಭಿಸುತ್ತದೆ. ಈ ಸ್ಥಲದವರೆಗೆ ಭಕ್ತನು ಪಡೆಯುತ್ತಾನೆ. ಮುಂದಿನ ಸ್ಥಲದಿಂದ ಕೊಡಗಲಿಯುತ್ತಾನೆ. ವಿಭೂತಿ ರುದ್ರಾಕ್ಷಿ ಮಂತ್ರ ಲಿಂಗಗಳನ್ನು ಗುರುವಿನಿಂದ ಪಡೆಯುತ್ತಾನೆ. ಅಲ್ಲದೆ ಅಂಗತ್ವವನ್ನು ಮಂತ್ರ ಜ್ಞಾನವನ್ನು ಲಿಂಗಾರ್ಚನೆಯನ್ನು ಜಂಗಮ ಸ್ವರೂಪ ಪ್ರಜ್ಞೆಯನ್ನು ಶ್ರೀಗುರುವಿನಿಂದಲೇ ಪಡೆಯುತ್ತಾನೆ. ಗುರು ಲಿಂಗ ಜಂಗಮ ಸಮನ್ವಯದಲ್ಲಿ ಪಾದೋದಕ-ಪ್ರಸಾದಗಳನ್ನು ಪಡೆಯುತ್ತಾನೆ.

"ದಾಸೋಽಹಂ ಎಂಬ ಸಂಜ್ಞೆಗೊಂಡು ಹೋಗಿ ಗುರುವ ಕಂಡೆ,
ಲಿಂಗವ ಕಂಡೆ,
ಜಂಗಮವ ಕಂಡೆ, ಪ್ರಸಾದವ ಕಂಡೆ ಇಂತೀ ಚತುರ್ವಿಧ ಸಾರಾಯದಲ್ಲಿ
ಸಂಪನ್ನನಾದೆನು ಕಾಣಾ, ಕೂಡಲ ಸಂಗಮ ದೇವಾ!''

ಪ್ರಸಾದಕ್ಕೆ ಎರಡು ಮುಖ. ಒಂದು ಒಡಲ ಹಸಿವನ್ನು ತೀರಿಸುವ ಪ್ರಸಾದ. ಇನ್ನೊಂದು ಆತ್ಮದ ಹಸಿವನ್ನು ಇಂಗಿಸುವ ಪ್ರಸಾದ. ಅದು ಅನುಗ್ರಹ ರೂಪದಲ್ಲಿ ಅಳವಡುತ್ತದೆ. ಅದ್ದರಿಂದ ಕ್ರಿಯೆ ಜ್ಞಾನ ವೈರಾಗ್ಯ ಅನುಭವ ಆನಂದಗಳು ಲಭಿಸುತ್ತವೆ. ಅಕ್ರಿಯೆ, ಅಜ್ಞಾನ, ವಿಷಯಾನುರಾಗ ಅನನುಭವ ಅಸುಖಗಳು ತೊಲಗುತ್ತವೆ. ಇದಾಗಬೇಕಾದರೆ ಭಕ್ತನಲ್ಲಿ ದಾಸೋಽಹಂ ಭಾವ ಅಗತ್ಯ. ವಿನಯಭಾವವೊಂದೇ ಇದರ ಪೂರ್ಣ ಪ್ರಯೋಜನವಲ್ಲ; ಮುಖ್ಯ ಧ್ಯೇಯವೂ ಅಲ್ಲ. ಇದೊಂದು ಅಂಶ ಮಾತ್ರ. ಗೌಣಗುಣ ಸಂಪಾದನೆ ಮಾತ್ರ. ನಿರಹಂಕಾರದೊಡನೆ ತನ್ನದನ್ನು ತನ್ನನ್ನು ಸಮರ್ಪಿಸಿ ತಾದಾತ್ಮ್ಯಭಾವವನ್ನು ತಳೆಯುವುದೇ 'ದಾಸೋಹಂ' ಭಾವದ ಪೂರ್ಣಸಾಧನ; ಪ್ರಧಾನ ಸಾಧನ.

ಗುರು ಪ್ರಸಾದ, ಲಿಂಗ ಪ್ರಸಾದ. ಜಂಗಮ ಪ್ರಸಾದಗಳನ್ನು ಪಡೆಯುವುದರಿಂದ ತ್ರಿವಿಧ ತನು ಶುದ್ಧಿ, ತ್ರಿವಿಧ ಮನಶುದ್ಧಿ, ತ್ರಿವಿಧ ಭಾವ ಶುದ್ಧಿಗಳು ಸಮನಿಸುತ್ತವೆ. ಹೀಗೆ ಪರಿಶುದ್ಧವಾದ ತನು-ಮನ-ಭಾವಗಳನ್ನು ಶಿವನಿಗೆ ಸಮರ್ಪಿಸುವುದೇ ತ್ರಿವಿಧ ದಾಸೋಹವೆನಿಸುತ್ತದೆ. ಈ ತ್ರಿವಿಧವನ್ನು ತ್ರಿವಿಧಕ್ಕೆ ಸಮರ್ಪಿಸುವಾತನೇ ತ್ರಿವಿಧ ದಾಸೋಹಿ ಎನಿಸುತ್ತಾನೆ. ಅಂತಾದಾಗ ಆತನು ಸಹಜದಾನಿ

ಯಾಗುತ್ತಾನೆ. ಆಗ ಭಕ್ತಸ್ಥಲ ಪೂರ್ಣ ಪ್ರಾಪ್ತವಾಗುತ್ತದೆ. ಆಗ ಆತನ ತನು ಸಾರಾಯ, ಮನ ಸಾರಾಯ, ಭಾವ ಸಾರಾಯವಾಗುತ್ತವೆ. ಹಮ್ಮು ಹಂಬಲಗಳು ಅಳಿಯುತ್ತವೆ. ನಿರಹಮ್ಮು ನಿರೀಹಗಳು ಮೈಗೂಡುತ್ತವೆ. ಸರ್ವ ಸಮರ್ಪಣ ಶಕ್ತಿ ಸಂಭವಿಸುತ್ತದೆ. ಸಮರ್ಪಿಸದೆ ಭೋಗಿಸಲು ಭಕ್ತನಿಗೆ ಹಕ್ಕಿಲ್ಲ. ಪತಿ ಪ್ರಥಮ ವಲ್ಲಿ ಉಣ್ಣದೆ ಸತಿ ಊಟ ಮಾಡಳು. ಮಾಡಿದರೆ ಅದು ಪತಿವ್ರತೆಯ ಲಕ್ಷಣವಲ್ಲ. ಅದು ಭಕ್ತಿ ವ್ರತವಲ್ಲ. ಪತಿ ಪ್ರೀತಿಗೆ ಕುರುಹಲ್ಲ. ಪತಿಪರಾಯಣತೆಗೆ ಪ್ರತೀಕವಲ್ಲ.

"ಅರ್ಪಯಿತ್ವಾ ನಿಜೇಲಿಂಗೇ ಪತ್ರಂ ಪುಷ್ಪಂ ಫಲಂ ಜಲಂ।
ಅನ್ನಾದ್ಯಂ ಸರ್ವಭೋಜ್ಯಂಚ ಸ್ವೀಕುರ್ಯಾದ್ಭಕ್ತಿಮಾನ್ನರಃ॥
ಗುರುತ್ವಾತ್ಸರ್ವಲೋಕಾನಾಂ ಶಂಭೋರಮಿತ ತೇಜಸಃ।
ತಸ್ಮೈ ನಿವೇದಿತಂ ಸರ್ವಂ ಸ್ವೀಕಾರ್ಯಂ ತತ್ಪರಾಯಣೈಃ॥

—ಸಿದ್ಧಾಂತ ಶಿಖಾಮಣಿ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಭೌತಿಕ ಆಧ್ಯಾತ್ಮಿಕ ಪದಾರ್ಥಗಳನ್ನೆಲ್ಲ ಶಿವಲಿಂಗಕ್ಕೆ ಗುರುಲಿಂಗಕ್ಕೆ ಸಮರ್ಪಿಸಿ ಶೇಷಪ್ರಸಾದವನ್ನು ಆರೋಗಿಸುವಂತೆ ಚತುರ್ವಿಧ ಸಾರಾಯ ಸ್ಥಲದ ಸದ್ಭಕ್ತನಿಗೆ ಅಪ್ಪಣೆ ಕೊಡಿಸಿದ್ದಾರೆ. ಭಕ್ತ ಉಪಭೋಗಿಯಾಗಬೇಕಲ್ಲದೆ ಭೋಗಿಯಾಗಬಾರದು. ಶೇಷಪ್ರಸಾದವಲ್ಲಿರುವ ಶಕ್ತಿ ಸಣ್ಣದಲ್ಲ; 'ನಿರ್ಮಾಲ್ಯಂ ನಿರ್ಮಲಂ' ಎಂದೂ 'ಅಶ್ವಮೇಧಸ್ಯ ಯತ್ಫಲಂ ತದವಾಪ್ಯತೆ' ಎಂದೂ ಉದ್ಬೋಧಿಸಿದ್ದಾರೆ. ಕೊನೆಯದಾಗಿ

"ತಸ್ಮಾದ್ಗುರುಂ ಮಹಾಲಿಂಗಂ ಶಿವಯೋಗಿನ ಮೇವಚ।
ಪೂಜಯೇತ್ತತ್ಪ್ರಸಾದಾನ್ನಂ ಭುಂಜೀತ ಪ್ರತಿವಾಸರಂ ॥"

ಎಂದು ಅಪ್ಪಣೆ ಮಾಡಿ ಚತುರ್ವಿಧ ಸಾರಾಯಸ್ಥಲ ಲಕ್ಷಣವನ್ನು ಪ್ರತಿಬೋಧಿಸಿ ಪೂರ್ಣಗೊಳಿಸಿದ್ದಾರೆ. ನಿತ್ಯ ಗುರುಲಿಂಗ ಜಂಗಮ ಅರ್ಚನೆಯನ್ನು ಮಾಡಿ ಎಲ್ಲವನ್ನೂ ಅವರಿಗೆ ಅರ್ಪಿಸಿ, ಅನಂತರ ಅವರಿಂದ ಬಂದ ಶೇಷಪ್ರಸಾದವನ್ನು ಆರೋಗಿಸುವುದೇ ಭಕ್ತನ ಸದ್ವ್ರತ. ಅದೇ ಚತುರ್ವಿಧ ಸಾರಾಯ ಸ್ಥಲಾಚರಣೆ. ಅದೇ ಸಾರಾಯ ಸಂಪತ್ ಸಂಪಾದನೆ.

ಅರಿಯುವಿಕೆಯೆ ಗುರುತ್ವ. ಅರಿತಂತೆ ಆಚರಿಸುವಿಕೆ ಲಿಂಗತ್ವ. ಅರಿದಾಚರಿಸಿ ಶಿವನನ್ನು ಅನುಭವಿಸುವಿಕೆ ಜಂಗಮತ್ವ ಅಥವಾ ಚರತ್ವ. ಅನುಭವಿಸಿ ಆನಂದಿಸುವಿಕೆ ಪ್ರಸಾದತ್ವ. ಇವು ಜೀವನದ ಸಾರಾಯ (ಮೌಲ್ಯ) ಚತುರ್ವಿಧ. ಇವಿಲ್ಲದೆ ಮಾನವನ ಜೀವನಕ್ಕೆ ಮೌಲ್ಯವಿಲ್ಲ. ಅಷ್ಟೇ ಅಲ್ಲ, ಮಾನವತೆ ಮಣ್ಣುಗೂಡುತ್ತದೆ,

ಅರಿವು ಅಳವಡಲು ಅದನ್ನು ಬೋಧಿಸುವ ಗುರು ಬೇಕು. ಆಚಾರ ಅಂಗವಿಸಲು ಅರ್ಚನಸ್ವರೂಪ ಲಿಂಗಬೇಕು. ಅರಿವು ಆಚಾರ ಕರಿಗೊಂಡು ಅನುಭವ ಮೈಗೂಡಬೇಕಾದರೆ ಜಂಗಮ ಬೇಕು. ಅಂತೆಯೇ ಪ್ರಸಾದವಿಲ್ಲದೆ ಪರಿಣಾಮ ದೊದಗದು. ಜೀವನಾನುಭವದ ಸಾರವೇ ಚತುರ್ವಿಧ ಸಾರಾಯ ಸ್ಥಲವಾಗಿದೆ ಯೆಂದರೆ ತೆಗೆದುಹಾಕುವ ಮಾತಲ್ಲ.

ಅರಿವು, ಆಚಾರ, ಅನುಭವ, ಆನಂದ ಇವು ದೈವೀಗುಣಗಳು. ಇದನ್ನು ಅಳ ವಡಿಸುವ ಮಾನವ ದೇವರುಗಳೇ ಗುರುಲಿಂಗ ಜಂಗಮರು. ಇವರ ಅನುಗ್ರಹವೇ ಪ್ರಸಾದ. ಈ ಗುಣಗಳು ಮಾನವನಿಗೆ ಬೇಕೇಬೇಕು.

ಗುಣಭವಿಗೆ ಗುರುನಾಸ್ತಿ, ಅಂಗಭವಿಗೆ ಆಚಾರನಾಸ್ತಿ
ಲಿಂಗಭವಿಗೆ ಜಂಗಮನಾಸ್ತಿ, ಪ್ರಾಣಭವಿಗೆ ಪ್ರಸಾದನಾಸ್ತಿ;
ಈ ಚತುರ್ವಿಧ ನಾಸ್ತಿಗೆ ಇಹಪರವಿಲ್ಲವಯ್ಯ,
ಕೂಡಲ ಸಂಗಮ ದೇವಯ್ಯ."

ಈ ದಿಸೆಯಲ್ಲಿ ಇಂದು ಮನನಾರ್ಹವಾದ ಮಾತು. ವಿಚಾರಣೀಯ ವಚನ. ಮಾನವನು ಮುಖ್ಯವಾಗಿ ಈ ನಾಲ್ಕು ಭವಿತನವನ್ನು ನೀಗಬೇಕು. ಹಣವಿಲ್ಲದಿದ್ದರೂ ಗುಣವಿಲ್ಲದಿರಬಾರದು. ಗುಣವಿಲ್ಲದೆ ಗೌರವಬಾರದು, ಗುರುಕೃಪೆಯಾಗದು. ಗುಣಿಗೆ ಗುರುಕೃಪೆ ಲಭಿಸುತ್ತದೆ. ಗುರುಕೃಪೆಯಿದ್ದಲ್ಲಿ ಅಂಗತ್ವ ಅಳವಡುತ್ತದೆ. ಅಂಗತ್ವವಿರುವಲ್ಲಿ ಆಚಾರ-ಲಿಂಗಗಳಿರುತ್ತವೆ. ಲಿಂಗ ಗುರುಕೃಪೆಯ ಸಂಕೇತ. ಜಂಗಮತ್ವ ಪ್ರಾಪ್ತಿಗೆ ಸಾಧನ ಅಥವಾ ಆಶ್ರಯ. ಇಷ್ಟಲಿಂಗದಿಂದ ಅಂಗಭವಿತನ ಹೋದರೆ ಪ್ರಾಣಲಿಂಗದಿಂದ ಪ್ರಾಣದ ಭವಿತನ ಬಿಟ್ಟೋಡುತ್ತದೆ. ಆಗ ಗುರು ಲಿಂಗ ಜಂಗಮ ರೂಪದೇವನ ಪ್ರಸಾದ ಲಭಿಸುತ್ತದೆ. ಇಹದಲ್ಲಿ ಸುಸ್ಥಿತಿ, ಪರದಲ್ಲಿ ಸದ್ಗತಿ ಸಮನಿಸುತ್ತವೆ.

ಕ್ರಿಯಾಲಿಂಗಧಾರಣವಿರುವಲ್ಲಿ ಅರ್ಚನಾಚಾರಗಳಿರುತ್ತವೆ. ಜ್ಞಾನಲಿಂಗ ಧಾರಣವಿರುವಲ್ಲಿ ಅನುಭವಾನಂದಗಳಿರುತ್ತವೆ. ಕ್ರಿಯಾ-ಜ್ಞಾನ ಸಮರಸವೇ ಅನುಭವ. ಆ ಅನುಭವದಿಂದ ಆನಂದ ರೂಪ ಪ್ರಸಾದ. ಈ ನಾಲ್ಕಕ್ಕೆ ನಿಲುಕಿದಾತನೆ ಚತುರ್ವಿಧ ಸಾರಾಯಸ್ಥಲಿ.

ಈ ವಿಚಾರದಲ್ಲಿ ಈ ಎರಡು ವಚನಗಳು ಸ್ಮರಣೀಯವಾಗಿವೆ. ಸುಧಾರಣೀಯ ವಾಗಿವೆ.

"ಅರಿವಿಲ್ಲದ ಕಾರಣ ಭವಕ್ಕೆ ಬಂದರು, ಅರಿವಿಲ್ಲದವಂಗೆ ಗುರುವಿಲ್ಲ,
ಗುರುವಿಲ್ಲದವಂಗೆ ಆಚಾರವಿಲ್ಲ. ಆಚಾರವಿಲ್ಲದವಂಗೆ ಲಿಂಗವಿಲ್ಲ,

ಲಿಂಗವಿಲ್ಲದವಂಗೆ ಜಂಗಮವಿಲ್ಲ, ಜಂಗಮವಿಲ್ಲದವಂಗೆ ಪ್ರಸಾದವಿಲ್ಲ,
ಪ್ರಸಾದವಿಲ್ಲದವಂಗೆ ಗಣತ್ವವಿಲ್ಲ.
ಅರಿವು ಸಾಹಿತ್ಯ ಗುರು, ಗುರು ಸಾಹಿತ್ಯ ಆಚಾರ;
ಆಚಾರ ಸಾಹಿತ್ಯ ಲಿಂಗ, ಲಿಂಗ ಸಾಹಿತ್ಯ ಜಂಗಮ;
ಜಂಗಮ ಸಾಹಿತ್ಯ ಪ್ರಸಾದ, ಪ್ರಸಾದ ಸಾಹಿತ್ಯ ಗಣತ್ವ;
ಇದು ಕಾರಣ ಕೂಡಲ ಚನ್ನಸಂಗಯ್ಯನಲ್ಲಿ
ಈ ಒಂದು ಸ್ಥಲದವರಿಗೆಲ್ಲಾ ಭಕ್ತಿಸ್ಥಲ ಉನ್ನತವುಂಟು
ಸಕಲ ನಿಃಕಲ ನಿರ್ವಾಣ ಲಿಂಗೈಕ್ಯವಪೂರ್ವ."

"ಗುರುವ ಮುಟ್ಟಿ ಗುರುವಾಯಿತ್ತು, ಲಿಂಗಮುಟ್ಟಿ ಲಿಂಗವಾಯಿತ್ತು,
ಜಂಗಮ ಮುಟ್ಟಿ ಜಂಗಮವಾಯಿತ್ತು,
ಪ್ರಸಾದ ಮುಟ್ಟಿ ಪ್ರಸಾದವಾಯಿತು
ಪ್ರಸಾದ ಪರವಸ್ತು ಪರದಲ್ಲಿಪ್ಪುದಾಗಿ,
ಇನ್ನು ಪ್ರಸಾದ ಮುಟ್ಟಬೇಕೆಂಬ
ಸಾರಾಯ ಸ್ಥಲ ಸಂಪನ್ನರಲ್ಲದವರ
ಮುಖವ ನೋಡಲಾಗದು ಕೂಡಲ ಚನ್ನಸಂಗಯ್ಯ."

ಇಲ್ಲಿ ಇನ್ನೊಂದು ವಿಷಯವನ್ನು ವಿಚಾರಿಸದೆ ಬಿಡುವಂತಿಲ್ಲ. ಅದು ಗುರು ಜಂಗಮರ ವಿಚಾರ. ವಾಸ್ತವವಾಗಿ ಇವರಿಬ್ಬರಲ್ಲಿ ಭೇದವಿಲ್ಲ. ತರತಮವಿಲ್ಲ. ಆ ನಿರಾಕಾರವೇ ಸಾಕಾರವಾಗಿ ಗುರು ಲಿಂಗ ಜಂಗಮವೆಂದು ತ್ರಿವಿಧವಾಗಿದೆ. ಹಾಲಿನಲ್ಲಿ ಶುಭ್ರತ್ವ-ಮಧುರತ್ವ-ದ್ರವತ್ವಗಳಿರುವಂತೆ ಈ ಗುರುಲಿಂಗ ಜಂಗಮರಿರುವರು. ಈ ಮೂರು ಅವಿಭಾಜ್ಯ ವಸ್ತುಗಳು. ಇದರಲ್ಲಿ ಒಂದಿಲ್ಲವಾದರೆ ವಸ್ತುವಿನ ಪೂರ್ಣತ್ವಕ್ಕೆ ಕೊರತೆ. ಸಲ್ಲಕ್ಷಣಕ್ಕೆ ಭಂಗ. ಸ್ವರೂಪ ಪ್ರಜ್ಞೆ ಶೂನ್ಯ.

"ಮಾಡಿ ಮಾಡಿಸಿಕೊಂಬಿವೆರಡರ ನಿಲುಕಡೆ ಒಂದೆ!
ಗುರು ಒಂದೆ, ಲಿಂಗ ಒಂದೆ, ಜಂಗಮ ಒಂದೆ, ಪ್ರಸಾದ ಒಂದೆ;
ಒಂದಾದಲ್ಲಿ ಎರಡಾಗಿ ಬಗೆಯದೆ ಮಾಡುವ ಭಕ್ತ ನೀನೇ
ಕೂಡಲ ಸಂಗಮದೇವಾ!"

ಆ ಒಂದೇವಸ್ತು ಸ್ವಲೀಲಾನಂದಕ್ಕಾಗಿ ಸ್ವಭಕ್ತರುದ್ಧಾರಕ್ಕಾಗಿ ನಾಲ್ವಗೆಯಾದರೂ ವಾಸ್ತವಿಕವಾಗಿ ನಾಲ್ಕೂ ಒಂದೆ! ಇದನ್ನು ಅರಿದ ಭಕ್ತನು ನಾಲ್ಕರಲ್ಲಿ ಭಿನ್ನ ಮಾಡಬಾರದು, ಮಾಡುವುದು ಉಚಿತವಲ್ಲ. ಅಂತೆಯೇ ಗುರುಜಂಗಮರಲ್ಲಿಯೂ ಭೇದಭಾವವಿರಬಾರದು. ಒಂದಿಲ್ಲದೆ ಇನ್ನೊಂದು ಲಭಿಸದು.

ಗುರು-ಜಂಗಮರೂ ಪರಸ್ಪರ ಭಿನ್ನಭಾವಿಗಳಾಗಿರಬಾರದು. ಸಂಬಂಧಾಚರಣೆಯಲ್ಲಿ ಗುರುವಿನಲ್ಲಿ ಜಂಗಮತ್ವವಿದೆ. ಜಂಗಮದಲ್ಲಿ ಗುರುತ್ವವಿದೆ. ಇವರಿಬ್ಬರೂ ಚರಲಿಂಗರು. ತಾತ್ವಿಕವಾಗಿ ಭಕ್ತಭಕ್ತರಲ್ಲಿಯೂ ಮೇಲು ಕೀಳಿಲ್ಲ. ಲಿಂಗವಂತಿಕೆ ಒಂದೆ! ಸಂಸ್ಕಾರ ಒಂದೆ ! ಈ ಸಮನ್ವಯಭಾವ ಸರ್ವರಲ್ಲಿ ಬಾರದೆ ಸಮಾಜಪ್ರಗತಿ ಕನಸಿನ ಗಂಟು. ಒಗ್ಗಟ್ಟಿನ ಬಲ ಗಾಳಿಗೋಪುರ, ಇಂದಿನ ವಾತಾವರಣದಲ್ಲಿ ಸಾಮಾಜಿಕ ಸಮನ್ವಯ ತೀರ ಅಗತ್ಯ; ತೀರ ಅನಿವಾರ್ಯ.

ಈ ದೆಸೆಯಲ್ಲಿ ಚನ್ನಬಸವಣ್ಣನವರ ಆಚರಣೆ ಆದರ್ಶವಾಗಿದೆ.

"ಗುರುವಿನಲ್ಲಿ ಸ್ವಾಯತ, ಲಿಂಗದಲ್ಲಿ ಸನ್ನಿಹಿತ,
ಜಂಗಮದಲ್ಲಿ ಆಯತ, ಪ್ರಸಾದದಲ್ಲಿ ಪರಿಣಾಮಿ,
ಇಂತೀ ಚತುರ್ವಿಧದಲ್ಲಿ ಸನ್ಮತನು ಗುಹೇಶ್ವರ
ಲಿಂಗದಲ್ಲಿ ಚನ್ನಬಸವಣ್ಣನು."

ಇದರಂತೆ ಪ್ರಭುದೇವರು ಬಸವಣ್ಣನನ್ನೂ ಕುರಿತು ಬಗೆದುಂಬಿ ಹೀಗೆ ಹಾಡಿದ್ದಾರೆ:

"ಗುರು ಒಂದೇ ಬಸಿರು, ಲಿಂಗ ಒಂದೇ ಬಸಿರು,
ಜಂಗಮ ಒಂದೇ ಬಸಿರು. ಪ್ರಸಾದ ಒಂದೇ ಬಸಿರು,
ಇದನಾರಯ್ಯ ಅಮಳೋಕ್ಯವ ಮಾಡಿ ಬೇರೆ ತೋರಿದವರು?
ಇದನಾರಯ್ಯ ಪ್ರಜ್ವಲಿತವಮಾಡಿ ಬೇರೆ ತೋರಿದವರು?
ಪೂರ್ವಾಚಾರಿ ಭಕ್ತಿ ಭಂಡಾರಿ ಸಂಗನ ಬಸವಣ್ಣ,
ಎನಗೆ ನೀನು ಗೊಹೇಶ್ವರ ಲಿಂಗವ ತೋರಿದೆಯಾಗಿ
ಲೋಕಾದಿ ಲೋಕವೆನಗೆ ಕಿಂಚಿತ್"

ಕೊನೆಯದಾಗಿ ಚನ್ನಬಸವಣ್ಣನವರ ಅಮೃತವಾಣಿಯನ್ನು ಕೇಳಿರಿ:

"ಹರ ತನ್ನ ರೂಪ ತೋರಬೇಕೆಂದು, ಗುರು ರೂಪಾಗಿ ಬಂದು
ಮನಸ್ಥಲಕ್ಕೆ ಮಂತ್ರವಾದ, ತನುಸ್ಥಲಕ್ಕೆ ಪ್ರಸಾದವಾದ,
ಕರಸ್ಥಲಕ್ಕೆ ಲಿಂಗವಾದ, ಪ್ರಾಣಸ್ಥಲಕ್ಕೆ ಜಂಗಮವಾದ.
ಇಂತು ಚತುರ್ವಿಧ ಕೂಡಲ ಚನ್ನಸಂಗಯ್ಯ, ಬಸವಣ್ಣನೊಬ್ಬನೆ!"

ಮತ್ತೆ, ಹೀಗೆ ನಿರೂಪಿಸಿದ್ದಾರೆ:

"ಗುರುವಿಂಗೆ ಗುರುವಾಗಿ ಗುರುಪ್ರಸಾದವ ಕೊಂಬುದು.
ಲಿಂಗಕ್ಕೆ ಲಿಂಗವಾಗಿ ಲಿಂಗಪ್ರಸಾದವ ಕೊಂಬುದು.
ಜಂಗಮಕ್ಕೆ ಜಂಗಮವಾಗಿ ಜಂಗಮ ಪ್ರಸಾದವ ಕೊಂಬುದು.
ಪ್ರಸಾದಕ್ಕೆ ಪ್ರಸಾದವಾಗಿ ತ್ರಿವಿಧ ಪ್ರಸಾದವ ಕೊಂಬುದು,

ಇಂತೀ ಚತುರ್ವಿಧ ಸ್ಥಲಕ್ಕೆ ಚತುರ್ವಿಧವಾಗಬಲ್ಲಡೆ
ಕೂಡಲ ಚೆನ್ನಸಂಗಯ್ಯನಲ್ಲಿ ಲಿಂಗೈಕ್ಯವು.

ಈ ಪ್ರಾಸಾದಿಕ ವಾಣಿಯಲ್ಲಿ, ಈ ಸ್ವಯಾನುಭಾವದ ವಚನದಲಿ ಚತುರ್ವಿಧ ಸಾರಾಯದ ಸಾರಾಂಶವೆಲ್ಲ ಸನ್ನಿಹಿತವಾಗಿದೆ. ಸ್ವಾನುಭಾವಸಂಪನ್ನ ಸಾಹಿತ್ಯವಾಗಿದೆ. ಚತುರ್ವಿಧ ಸಾರಾಯ ಪ್ರಸಾದವೆ ಪ್ರತ್ಯಕ್ಷ ಪರವಸ್ತುವಾಗಿ ಅಪರೋಕ್ಷಾನುಭೂತಿಗೆ ಸಾಕ್ಷಾತ್ಕರಿಸಿದೆ. ಇದರ ಮುಂದೆ ಮಾತಿಲ್ಲ.

ಗುರು–ಲಿಂಗ–ಜಂಗಮ–ಪ್ರಸಾದ ಈ ನಾಲ್ಕು ಎಲ್ಲ ಭಕ್ತರಿಗೂ ಸಾರಾಯ ಸಂಪತ್ತು. ಇವಿಲ್ಲದ ಭಕ್ತತ್ವ ಬಾರದು. ಇವುಗಳಲ್ಲಿ ತರತಮವಿಲ್ಲ, ಇರಬಾರದು. ಇದನ್ನು ಎಲ್ಲರೂ ತಿಳಿದಾಚರಿಸಿದರೆ ಸೊಗಸು; ಸಾಮಾಜಿಕ ಅಭ್ಯುದಯಕ್ಕೆ ಲೇಸು.

**ಈ ಬರಹಕ್ಕೆ ಆಕರಗಳು:**

೧. ಜೀವನ ಸಿದ್ಧಾಂತ (ಭಕ್ತ ಸಂಪುಟ)
೨. ಸಿದ್ಧಾಂತ ಶಿಖಾಮಣಿ
೩. ಪ್ರಭುದೇವರ ವಚನ
೪. ಬಸವಣ್ಣನವರ ವಚನ
೫. ಚನ್ನಬಸವಣ್ಣನವರ ವಚನ

---

ಪರವನರಿದ ಸತ್ಪುರುಷರ ಸಂಗದಿಂದ
ಶಿವಯೋಗದ ವಚನಾಮೃತವನು
ಸದ್ಭಕ್ತಿಯುಳ್ಳ ಮಾಹೇಶ್ವರನು ತನ್ನ ಶ್ರೋತ್ರಮುಖದಲ್ಲಿ ಕೇಳಿ,
ಮನೋಮುಖದಲ್ಲಿ ಹಾರೈಸಿ, ತೃಪ್ತಿಮುಖದಲ್ಲಿ
ಸಂತೋಷವ ನೆಯ್ದುಬಲ್ಲಡೆ
ಆ ಸುಖವು ಪರಿಣಾಮವನೊಡಗೂಡುವದು. ಹೀಂಗಲ್ಲದೆ,
ಸಂಸಾರ ವಿಷಯರಸವ ತನ್ನ ಹೃದಯದ ಕೂಪದಲ್ಲಿ
ತುಂಬಿಕೊಂಡಿಪ್ಪ ಜೀವರ ಕಾಯದಲ್ಲಿ
ವಚನಾಮೃತವ ತುಂಬಿದರೆ,
ಛಿನ್ನಘಟದಲ್ಲಿ ಉದಕವ ಹೊಯ್ದಂತೆ ಕಾಣಾ ಗುಹೇಶ್ವರಾ.
—ಪ್ರಭುದೇವರು

---

# ಸಮನ್ವಯ ಸಿದ್ಧಾಂತ

● ಆಸ್ಥಾನ ವಿದ್ವಾನ್ **ಎಂ. ಜಿ. ನಂಜುಂಡಾರಾಧ್ಯರು**
ನಿವೃತ್ತ ವೇದಾಂತ ಪ್ರಾಧ್ಯಾಪಕರು: ಮೈಸೂರು.

ಲೋಕದಲ್ಲಿ ಎಲ್ಲರೂ ಬಯಸುವುದು ಸುಖವನ್ನು. ಆ ಸುಖವು ದುಃಖ ಮಿಶ್ರವಾಗಿರಬಾರದು. ಇಲ್ಲಿ ನಾವು ಅನುಭವಿಸುವ ಸುಖವು ಅಂತಹುದಲ್ಲ. ನಮ್ಮ ಜೀವನದಲ್ಲಿ ಸುಖ ದುಃಖಗಳು ಬೆಳಕು-ಕತ್ತಲುಗಳಂತೆ ಒಂದಾದ ಮೇಲೆ ಒಂದು ಬರುತ್ತಲೇ ಇರುತ್ತವೆ.

ದುಃಖಮಿಶ್ರವಲ್ಲದ ಸುಖವೊಂದುಂಟು. ಅದಕ್ಕೆ 'ಭೂಮಾ' ಎಂದು ಹೆಸರು. ಭೂಮವೇ ಸುಖಮಯ. ಅಲ್ಪದಲ್ಲಿ ಸುಖವಿಲ್ಲ: ಯಾವುದು ಅತ್ಯಂತ ವಿಪುಲವೋ ಅನಂತವೋ ಅದು ಸುಖಮಯ. ಆದ್ದರಿಂದ ಮಾನವನು ಅಂತಹ ಭೂಮಾವನ್ನೇ ಕುರಿತು ವಿಚಾರ ಮಾಡಬೇಕು (ಛಾಂ. ೭–೨೩) ಎನ್ನುತ್ತದೆ ಶ್ರುತಿ.

ಹಾಗಾದರೆ ಸುಖಮಯವಾದ 'ಭೂಮಾ' ಎಂಬುದೇನು? ಎಂದು ಪ್ರಶ್ನಿಸಿ ಕೊಂಡ ಶ್ರುತಿಯು 'ಭೂಮಾ' ಎಂಬುದು ಅಂತರಾತ್ಮನೇ. ಸುಖವು ಯಾವುದೇ ಬಾಹ್ಯ ವಸ್ತುವನ್ನು ಅವಲಂಬಿಸಿಲ್ಲ. ಬಾಹ್ಯಸಂಪತ್ತನ್ನು ಅವಲಂಬಿಸಿಲ್ಲ. ಸಂತುಷ್ಟ ನಾದ ಅಂತರಾತ್ಮನೇ ಭೂಮಾ ಎಂಬುದರ ಆಶ್ರಯಸ್ಥಾನ ಎನ್ನುತ್ತದೆ.

ಆದ್ದರಿಂದ ಅಂತಹ ಅಲೌಕಿಕವೂ ಆನಂದಾತ್ಮಕವೂ ಆದ ಸುಖವನ್ನು ಪಡೆಯು ವುದಕ್ಕಾಗಿಯೇ ಎಲ್ಲ ದರ್ಶನಗಳೂ ಹೊರಟಿವೆ. ದರ್ಶನ*ವೆಂದರೆ ತನ್ನನ್ನು ತಾನು ಅರಿಯುವುದು. 'ಸ್ವಾತ್ಮ ಪ್ರತ್ಯಕ್ಷ' ಎಂದು ಅದನ್ನು ಕರೆಯುತ್ತಾರೆ. ಅತೀಂದ್ರಿಯಾ ತ್ಮಕವೂ ಆತ್ಮ ಸಾಕ್ಷಾತ್ಕಾರ ಸಾಧನವೂ ಆದ ಶಾಸ್ತ್ರವೆಂಬ ದರ್ಶನವಿಲ್ಲದಿದ್ದರೆ ತನ್ನನ್ನು ತಾನು ಅರಿಯಲು ಸಾಧ್ಯವಾಗುತ್ತಿದ್ದಿಲ್ಲ. ಆದ್ದರಿಂದ ಶಾಸ್ತ್ರವು 'ದರ್ಶನ' ಎಂಬ ಹೆಸರು ತಳೆದಿದೆ. 'ಅಪರೋಕ್ಷಾನುಭೂತಿ'. 'ಪ್ರತಿಬೋಧ' ಮುಂತಾದವು ಸ್ವಾತ್ಮ ಪ್ರತ್ಯಕ್ಷದ ಪರ್ಯಾಯ ಪದಗಳು.

ಜಗತ್ತಿಗೆ ಮೂಲವಾದ ವಸ್ತು ಒಂದೇ. ಆದರೂ ಅದನ್ನು ಕಾಣುವ ದಾರಿ ಗಳು ಬೇರೆ ಬೇರೆ. ಆ ವಸ್ತುವನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲೆಳಸಿದ ಸಾಧಕರ

---

*. 'ದೃಶಿರ್ ಪ್ರೇಕ್ಷಣೇ' ಎಂಬ ಧಾತುವಿಗೆ 'ಲ್ಯುಟ್ ಪ್ರತ್ಯಯವು ಬಂದು' ಅನಾದೇಶವಾಗಿ 'ದರ್ಶನ' ಶಬ್ದವು ನಿಷ್ಪನ್ನವಾಗುತ್ತದೆ!

ಅನುಭವವನ್ನು ಅವು ಅವಲಂಬಿಸಿವೆ. ಸಾಧಕರ ರುಚಿಭೇದದಿಂದ ದಾರಿಗಳು ಬೇರೆಯಾದರೂ ಅವೆಲ್ಲವುಗಳ ಗುರಿ ಒಂದು.

ಆತ್ಮನನ್ನು ಅನುಭವಕ್ಕೆ ತಂದುಕೊಳ್ಳಲು ಹೊರಟ ಸಾಧಕರ ಮಾರ್ಗಗಳಲ್ಲಿ ಮೂರು ಮುಖ್ಯವಾಗಿ ಕಂಡುಬರುತ್ತವೆ. ಅವು ಕ್ರಮವಾಗಿ 'ಭೇದಾಭೇದ', 'ಅಭೇದ' ಮತ್ತು 'ಭೇದ' ಎಂದು. ಸೂತಸಂಹಿತೆಯು ಇವುಗಳಲ್ಲಿ ಸಮನ್ವಯಾತ್ಮಕವಾದ 'ಭೇದಾಭೇದ'ಕ್ಕೆ ಅಗ್ರತೆ ನೀಡಿದೆ.*

ಭಾರತೀಯ ವೇದಾಂತ ದರ್ಶನಗಳಲ್ಲಿ 'ಸಮನ್ವಯ ಸಿದ್ಧಾಂತ' ಎಂಬ ಹೆಸರು ಸಂದಿರುವುದು ಶಕ್ತಿ ವಿಶಿಷ್ಟಾದ್ವೈತ ದರ್ಶನಕ್ಕೆ ಮಾತ್ರ. ಏಕೆಂದರೆ, ಅದು ತನ್ನ ಹೆಸರಿನಿಂದಲೇ ಭೇದಾಭೇದ ಅಥವಾ 'ದ್ವೈತಾದ್ವೈತ ಸಿದ್ಧಾಂತ'. ಹಗಲಿರುಳುಗಳಂತೆ ಪರಸ್ಪರ ವಿರುದ್ಧವಾದ ದ್ವೈತ ಮತ್ತು ಅದ್ವೈತ ವೇದಾಂತ ದರ್ಶನಗಳಿಗೆ ಒಂದು ಸುಮಧುರ ಸೇತುವೆ ಬೆಸೆದ ಹಿರಿಮೆ ಇದಕ್ಕೆ ಲಭಿಸಿದೆ.

ವೀರಶೈವ ಆಚಾರ್ಯರಲ್ಲಿ ಒಬ್ಬರಾದ ಭಗವತ್ಪಾದ ಶ್ರೀಪತಿ ಪಂಡಿತಾರಾಧ್ಯರು ತಮ್ಮ ಶ್ರೀಕರ ಭಾಷ್ಯದ ಪ್ರಾರಂಭದಲ್ಲಿ ಈ ಉದ್ದೇಶವನ್ನು ಸ್ಪಷ್ಟಪಡಿಸಿದ್ದಾರೆ*೧. ವಿಶೇಷಾದ್ವೈತ ಎಂಬ ವೀರಶೈವ ಸಿದ್ಧಾಂತವು ಎಲ್ಲ ಶೃತಿಗಳಿಗೂ ಪ್ರಾಮಾಣ್ಯವನ್ನು ಒಪ್ಪುವ 'ಸಮನ್ವಯ ಸಿದ್ಧಾಂತ' ಎಂದಿದ್ದಾರೆ.

ವೇದಾಂತಿಗಳಲ್ಲಿ ಅದ್ವೈತಿಗಳು 'ಬ್ರಹ್ಮವೊಂದೇ ನಿಜ (ಸತ್ಯ) ಉಳಿದ ಜೀವ ಮತ್ತು ಜಗತ್ತುಗಳು ಸುಳ್ಳು, ಎಂದರೆ ಮಿಥ್ಯ' ಎನ್ನುತ್ತಾರೆ. ನಮ್ಮ ಎದುರಿಗೆ ಕಾಣುವ ಈ ಜೀವ ಜಗತ್ತುಗಳು ನಿಜವಲ್ಲ. ಹಗ್ಗವನ್ನು ಹಾವೆಂದೂ, ಕಪ್ಪೆಚಿಪ್ಪನ್ನು ಬೆಳ್ಳಿಯೆಂದೂ ತಪ್ಪಾಗಿ ತಿಳಿಯುವಂತೆ ಬ್ರಹ್ಮವನ್ನು ತಪ್ಪಾಗಿ ತಿಳಿದಿದ್ದೇವೆ. ಈ ಬಗೆಯ ತಿಳಿವನ್ನು 'ಭ್ರಾಂತಿ', 'ಅವಿದ್ಯೆ' ಅಥವಾ 'ವಿವರ್ತ' ಎಂದಿದೆ ದರ್ಶನ.

ಅಜ್ಞಾನ ರೂಪವಾದ ಅವಿದ್ಯೆಯು ಅಳಿದು ಸುಜ್ಞಾನೋದಯವಾದಾಗ ಉಳಿವುದು ಬ್ರಹ್ಮವೊಂದೇ. ಜೀವ-ಜಗತ್ತುಗಳಲ್ಲ. 'ನಾನು' ಎಂಬ ಜೀವಭಾವವು ಹೋಗಿ 'ನಾನೇ ಬ್ರಹ್ಮ', 'ಅಹಂ ಬ್ರಹ್ಮಾಸ್ಮಿ' ಎಂಬ ತಿಳಿವು ಉದಿಸಿದಾಗ ಜೀವನು ನಿತ್ಯವಾದ ಆನಂದ ಸ್ವರೂಪವೇ ಆಗಿರುತ್ತಾನೆ. ಅದೇ ಅದ್ವೈತ ಅಥವಾ ಮೋಕ್ಷ.

---

* ಭೇದಾ ಭೇದಸ್ತಥಾ ಭೇದೋ ಭೇದ ಏತೇ ಮಹಾತ್ರಯಃ —ಸೂತಸಂಹಿತೆ

*೧ ಶ್ರುತ್ಯೈಕದೇಶ ಪ್ರಾಮಾಣ್ಯಂ ದ್ವೈತಾದ್ವೈತಮತಾದಿಷು ।
ದ್ವೈತಾದ್ವೈತ ಮತೇ ಶುದ್ಧೇ ವಿಶೇಷಾದ್ವೈತ ಸಂಜ್ಞಿತೇ ॥
ವೀರಶೈವೈಕ ಸಿದ್ಧಾಂತೇ ಸರ್ವಶ್ರುತಿ ಸಮನ್ವಯಃ । —ಶ್ರೀಕರಭಾಷ್ಯ

ದ್ವೈತ ಎಂಬುದು ಎರಡು ಎಂಬುದರ ಭಾವ. ಜೀವ ಮತ್ತು ಬ್ರಹ್ಮರು ಒಂದಲ್ಲ; ವಸ್ತುತಃ ಅವರು ಬೇರೆ ಬೇರೆ. ಜೀವ ಕಿಂಚಿಜ್ಞ, ಬ್ರಹ್ಮವು ಸರ್ವಜ್ಞ. ಇವೇ ಮುಂತಾದ ಗುಣಗಳಲ್ಲಿ ಇವರಿಬ್ಬರಲ್ಲಿ ಅಜ-ಗಜಾಂತರವಿದೆ. ಅಂದಮೇಲೆ ಅವರಿಬ್ಬರೂ ಒಂದು ಎಂಬ ಮಾತು ಅನುಭವ ವಿರುದ್ಧ. ದ್ವೈತಿಗಳು ಈ ಬಗೆಯ ಭೇದವು ಕೇವಲ ಜೀವ ಬ್ರಹ್ಮರಲ್ಲಿ ಮಾತ್ರವೇ ಅಲ್ಲ, ಅದು ದೇವ-ಜಗದ್ಭೇದ; ಜೀವ-ಜೀವಭೇದ, ಜೀವ-ಜಗದ್ಭೇದ, ಜಗತ್-ಜಗದ್ಭೇದ ಎಂದು ಐದು ಬಗೆ ಎನ್ನುತ್ತಾರೆ.

'ಸುಂದರವಾದ ರೆಕ್ಕೆಗಳಿರುವ, ಯಾವಾಗಲೂ ಅಗಲದೆ ನಿತ್ಯ ಸಹಿರೆನಿಸಿರುವ ಎರಡು ಹಕ್ಕಿಗಳು ಒಂದೇ ಅಶ್ವತ್ಥವೃಕ್ಷವನ್ನು ಆಶ್ರಯಿಸಿವೆ. ಇವುಗಳಲ್ಲಿ ಒಂದು ಆ ಮರದ ಹಣ್ಣು ಮೆಲ್ಲುತ್ತದೆ. ಮತ್ತೊಂದು ಅವಕ್ಕೆ ಸಾಕ್ಷಿಯಾಗಿ ಸುಮ್ಮನೆ ನೋಡುತ್ತಿರುತ್ತದೆ.* ಎಂಬ ಅರ್ಥದ ಶ್ರುತಿಯಲ್ಲಿ ರೂಪಕ ಮರ್ಯಾದೆಯಿಂದ ವರ್ಣಿತವಾಗಿರುವ ಹಕ್ಕಿಗಳು 'ಜೀವಾತ್ಮ' ಮತ್ತು 'ಪರಮಾತ್ಮ'ರು. ಅವರು ಶರೀರವೆಂಬ ವೃಕ್ಷವನ್ನು ಆಶ್ರಯಿಸಿದ್ದಾರೆ. ಅವರಲ್ಲಿ ಜೀವಾತ್ಮನು ತನ್ನ ಕರ್ಮ ಫಲವನ್ನು ಉಣ್ಣುತ್ತಾನೆ. ಪರಮಾತ್ಮನು ಅದಕ್ಕೆ ಸಾಕ್ಷಿಯಾಗಿದ್ದಾನೆ' ಎಂಬುದು ಈ ಶ್ರುತಿಯ ಭಾವ.

'ಜ್ಞಾ ಜ್ಞೌದ್ವಾವಜಾವೀ ಶಾನೀಶೌ' (ಶ್ವೇ. ೧-೯) 'ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೆ ಪರಾರ್ಧೇ! ಛಾಯಾತಪೌ ಬ್ರಹ್ಮವಿದೋ ವದಂತಿ' (ಕಠ ೧.೩.೧೦) ಮುಂತಾದ ದ್ವಿವಚನಾಂತ ಶ್ರುತಿಗಳು ದ್ವೈತವನ್ನು ಪ್ರತಿಪಾದಿಸುತ್ತವೆ.

ಇಲ್ಲಿಯೇ ದಾರ್ಶನಿಕರಲ್ಲಿ ಮತಭೇದವುಂಟಾಗಿರುವುದು. ಶ್ರುತಿಗಳಲ್ಲಿ ಕೆಲವು ಅದ್ವೈತವನ್ನು ಪ್ರತಿಪಾದಿಸಿದರೆ ಮತ್ತೆ ಕೆಲವು ದ್ವೈತವನ್ನು ಸಾಧಿಸುತ್ತವೆ. ಈ ಸಮಯದಲ್ಲಿ ಅದ್ವೈತಿಗಳು ದ್ವೈತ ಪ್ರತಿಪಾದಕವಾದ ಶ್ರುತಿಗಳನ್ನು ಪೂರ್ವಪಕ್ಷವೆಂದು ಭಾವಿಸಿ ಜೀವ-ಬ್ರಹ್ಮರ ಅಭೇದವನ್ನು ಸಿದ್ಧಾಂತ ಮಾಡಿದ್ದಾರೆ.

ಅದರಂತೆ ದ್ವೈತಿಗಳು, ದ್ವೈತವು ಎಲ್ಲರ ಅನುಭವ ವಿಷಯವಾದುದರಿಂದ 'ಸ ಆತ್ಮಾತತ್ತ್ವಮಸಿ' ಮುಂತಾದ ಅದ್ವೈತ ಪ್ರತಿಪಾದಕ ಶ್ರುತಿಗಳಿಗೆ ಸ+ಅತತ್ತ್ವಮಸಿ ಮುಂತಾಗಿ ಅಕಾರವನ್ನು ಪ್ರಶ್ಲೇಷಿಸಿಯೂ, ಕೆಲವು ಕಡೆ ಅಭೇದ ಶ್ರುತಿಗಳು ಪೂರ್ವಪಕ್ಷವೆಂದು ವಾದಿಸಿಯೂ ಜೀವ ಮತ್ತು ಬ್ರಹ್ಮರಿಗೆ ಭೇದವನ್ನೇ ಸಾಧಿಸುತ್ತಾರೆ.

---

* ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋಽಭಿಚಾಕಶೀತಿ॥(ಮುಂ.೩.೧೧)

ವೇದ ಪ್ರಾಮಾಣ್ಯವನ್ನು ಒಪ್ಪುವ ಈ ಎರಡು ಪಂಥಗಳೂ ಸಮಗ್ರ ಶ್ರುತಿಗೆ ಪ್ರಾಮಾಣ್ಯವನ್ನು ಕೊಡದೆ ಶ್ರುತಿಯ ಏಕದೇಶಕ್ಕೆ ಮಾತ್ರ ಪ್ರಾಮಾಣ್ಯ ನೀಡಿದ ದೋಷಕ್ಕೆ ಗುರಿಯಾಗಿವೆ. ಆದಕ್ಕಾಗಿಯೇ ಸಮಗ್ರ ಶ್ರುತಿಗೆ ಪ್ರಾಮಾಣ್ಯವನ್ನು ಒಪ್ಪುವ ಪರಮ ವೈದಿಕ ಪಂಥವೆನಿಸಿದ 'ದ್ವೈತಾದ್ವೈತ' ಸಿದ್ಧಾಂತವು ಪ್ರಾಧಾನ್ಯ ಪಡೆದನ್ನು.

ಇದೇನು? ಬೆಳಕು-ಕತ್ತಲುಗಳಂತೆ ಪರಸ್ಪರ ವಿರುದ್ಧವಾದ ಭೇದ ಹಾಗೂ ಅಭೇದ ಶ್ರುತಿಗಳಿಗೆ ಸಮನ್ವಯವೆಂದರೇನು ! ಎಂದು ಶಂಕಿಸುವವರಿಗೆ ಶ್ರೀಪತಿ ಪಂಡಿತಾರಾಧ್ಯರು ಸಮಂಜಸ ಉತ್ತರವನ್ನು ಅಲ್ಲಿಯೇ ಕೊಟ್ಟಿದ್ದಾರೆ. 'ವಿಶೇಷಾದ್ವೈತ' ಎಂದು ಹೆಸರಿಸಿದ ಅವರ ಸಿದ್ಧಾಂತದಲ್ಲಿ 'ವಿ' ಎಂದರೆ ಪರಮಾತ್ಮ (ವೀಪಕ್ಷಿ ಪರಮಾತ್ಮನೋಃ-(ಕೋಶ) ಶೇಷ ಎಂದರೆ ಶಿವನ ಅಂಶವಾದ ಜೀವಾತ್ಮ. ಜೀವನಿಗೆ ಅಂಶತ್ವವನ್ನು ಶ್ರುತಿ-ಸೂತ್ರಗಳು ಒಪ್ಪಿವೆ) ಇವರಿಬ್ಬರಿಗೆ 'ಯಥಾನದ್ಯಃ' ಎಂಬ ಶ್ರುತಿ ಸಾಮರಸ್ಯವನ್ನು ಹೇಳುತ್ತದೆ.

ವಿಶಬ್ದೇನೋಚ್ಯತೆ ಶಂಭು 'ಹಂಸ ಹಂಸೇ'ತಿ ಮಂತ್ರತಃ ।
ಶೇಷ ಶಬ್ದೇನ ಶಾರೀರೋ 'ಯಥಾಗ್ನೇರಿ'ತಿ ಮಂತ್ರತಃ ॥
ಅದ್ವೈತೇನ ಭವೇದ್ಯೋಗೋ 'ಯಥಾನದ್ಯ' ಇತಿಶ್ರುತೇಃ ॥

## ವಿಶೇಷಾದ್ವೈತ

ವಿಶ್ವ ಶೇಷಶ್ಚ ವಿಶೇಷೌ ಜೀವೇಶೌ; ತಯೋರದ್ವೈತಂ, ವಿಶೇಷಾದ್ವೈತಂ ಎಂಬುದು ಈ ಪದದ ನಿರ್ವಚನ.

ವಿಶಿಷ್ಟಾದ್ವೈತ ಅಥವಾ ಶಕ್ತಿ ವಿಶಿಷ್ಟಾದ್ವೈತ, ಶಿವಾದ್ವೈತ ಅಥವಾ ಶಿವ ಯೋಗ ಮುಂತಾದ ಪದಗಳು ಈ ಸಿದ್ಧಾಂತದ ಪರ್ಯಾಯ ಪದಗಳು. ಇವುಗಳ ವ್ಯುತ್ಪತ್ತಿಯನ್ನು ಹೀಗೆ ಸಂಗ್ರಹಿಸಬಹುದು.

## ವಿಶಿಷ್ಟಾದ್ವೈತ ಅಥವಾ ಶಕ್ತಿ ವಿಶಿಷ್ಟಾದ್ವೈತ

ಶ್ರೀ ಮನ್ನೀಲಕಂಠ ಶಿವಾಚಾರ್ಯರು (ಕ್ರಿ.ಶ. ೧೪೦೦) ಈ ಸಿದ್ಧಾಂತಕ್ಕೆ ವಿಶಿಷ್ಟಾದ್ವೈತ ಅಥವಾ ಶಕ್ತಿವಿಶಿಷ್ಟಾದ್ವೈತ ಎಂದು ಹೆಸರಿಸಿದ್ದಾರೆ. ಆದರೆ ಇದು ಶ್ರೀ ರಾಮಾನುಜೀಯರು ಹೇಳುವ 'ಜೀವ ಶರೀರಕಂ ಬ್ರಹ್ಮ' ಎಂಬ ಅರ್ಥದ ವಿಶಿಷ್ಟಾದ್ವೈತವಲ್ಲ. ಇಲ್ಲಿರುವ ವೈಶಿಷ್ಟ್ಯ ಶಕ್ತಿಯದು.

ಜೀವಬ್ರಹ್ಮರು ಕೇವಲರಲ್ಲ; ಅವರು ವಿಶಿಷ್ಟರು. ಘಟ ಎಂಬಲ್ಲಿ 'ಘಟತ್ವ'ವು ಹೇಗೆ ವಿಶೇಷವೋ, ಅದರಂತೆ ಬ್ರಹ್ಮದ ವಿಶೇಷ ಶಕ್ತಿಯೇ ! ಅಗ್ನಿ ಮತ್ತು ಅಗ್ನಿ ಕಣಗಳಿಗೆ ದಾಹಕತ್ವರೂಪ ಅಭೇದವಿರುವಂತೆ ಅಗ್ನಿತ್ವ ಮತ್ತು ಕಣತ್ವ ಎಂಬ

ಭೇದವೂ ಸ್ವತಃ ಸಿದ್ಧ. 'ಅಹಿಕುಂಡಲ' ಎಂಬಲ್ಲಿ ಭೇದಾಭೇದಗಳಿಗೆ ಹೇಗೆ ವಿರೋಧವಿಲ್ಲವೋ ಅದರಂತೆ ಶಕ್ತಿವಿಶಿಷ್ಟ ಜೀವ ಮತ್ತು ಬ್ರಹ್ಮರಲ್ಲಿ ಅದ್ವೈತವು ಸ್ವತಃ ಸಿದ್ಧವೇ ಆಗಿದೆ.* ಈ ಸಿದ್ಧಾಂತದಲ್ಲಿ ಜೀವನು ಸ್ಥೂಲಚಿತ್ (ಕಿಂಚಿಜ್ಞತ್ವ) ಮತ್ತು ಸ್ಥೂಲ ಅಚಿತ್ (ಕಿಂಚಿತ್ ಕರ್ತೃತ್ವ) ರೂಪ ಶಕ್ತಿ ವಿಶಿಷ್ಟ. ಹೀಗೆ ಉಭಯ ವಿಧವಾದ ಶಕ್ತಿವಿಶಿಷ್ಟರಾದ ಜೀವ-ಶಿವರಿಗೆ ಆಗುವ ಸಾಮರಸ್ಯ ರೂಪ ಅದ್ವೈತವೇ ವಿಶಿಷ್ಟಾದ್ವೈತ. ಈ ಪದಗಳ ನಿರುಕ್ತಿ ಹೀಗಿದೆ—'ವಿಶಿಷ್ಟಂ ಚ ವಿಶಿಷ್ಟಂಚ ವಿಶಿಷ್ಟೇ, ತಯೋರದ್ವೈತಂ–ವಿಶಿಷ್ಟಾದ್ವೈತಮ್.'

ಶಕ್ತಿಶ್ಚ ಶಕ್ತಿಶ್ಚ ಶಕ್ತೀ, ತಾಭ್ಯಾಂ ವಿಶಿಷ್ಟೌ ಜೀವೇಶೌ. ತಯೋರದ್ವೈತಂ ಶಕ್ತಿವಿಶಿಷ್ಟಾದ್ವೈತಮ್.'

**ಶಿವಾದ್ವೈತ**-ಶಿವಶ್ಚ ಶಿವಶ್ಚ ಶಿವೌ ಜೀವೇಶೌ, ತಯೋರದ್ವೈತಂ ಶಿವಾದ್ವೈತಂ.

**ಶಿವಯೋಗಃ**—ಶಿವೇ ಯೋಗಃ, ಶಿವಯೋಗಃ.

## ಬ್ರಹ್ಮವು ಶಕ್ತಿ ವಿಶಿಷ್ಟ

ಅದ್ವೈತಿಗಳು ಬ್ರಹ್ಮವು ಕೇವಲ ಶುದ್ಧ ಎಂದು ಒಪ್ಪಿದ್ದಾರೆ. ಶ್ರುತಿಯಲ್ಲಿರುವ 'ಸಚ್ಚಿದಾನಂದಂ ಬ್ರಹ್ಮ' ಎಂಬ ಪದಕ್ಕೆ ಸತ್ತು-ಚಿತ್ತು-ಆನಂದ ಸ್ವರೂಪವೇ ಬ್ರಹ್ಮ ಎಂದು ಹೇಳುತ್ತಾರೆ, ಸತ್ >ಇರುವಿಕೆ, ಚಿತ್ >ಬೆಳಗುವಿಕೆ, ಆನಂದ >ಸಂತೋಷ ಗಳು ಗುಣ ವಿಶೇಷಗಳಾದುದರಿಂದ ಅವು ಜಡ. ಇಂಥ ಜಡವಾದ ಗುಣಗಳನ್ನೇ ಬ್ರಹ್ಮವೆಂದು ಹೇಳಿದಲ್ಲಿ ಅದು ಎಂದಿಗೂ ಜಗತ್ತಿನ ಸೃಷ್ಟಿ-ಸ್ಥಿತಿ–ಲಯ–ತಿರೋಧಾನ ಮತ್ತು ಅನುಗ್ರಹಗಳೆಂಬ ಪಂಚಕೃತ್ಯ ಕರ್ತೃವಾಗಲಾರದು. ಆದುದರಿಂದ 'ಸಚ್ಚಿದಾನಂದಂ ಬ್ರಹ್ಮ' ಎಂಬುದಕ್ಕೆ 'ಸಚ್ಚಿದಾನಂದ ವಿಶಿಷ್ಟ' ಎಂದು ಅರ್ಥವಿಸ ಬೇಕು. 'ಅರ್ಶ ಆದಿಭ್ಯೋಽಚ್' ಎಂಬ ವ್ಯಾಕರಣ ನಿಯಮದಂತೆ 'ಆಯಾಗುಣ ವುಳ್ಳದ್ದು' ಎಂಬ ಅರ್ಥದಲ್ಲಿ 'ಸಚ್ಚಿದಾನಂದಂ' ಎಂಬುದಕ್ಕೆ ಸದ್ವಿಶಿಷ್ಟ ಮತ್ತು

---

* ನಜೀವ ಬ್ರಹ್ಮಣೋರೈಕ್ಯಂ ಸೂತ್ರಸ್ಯ ಸ್ವರಸತಃ ಸ್ಫುರೇತ್ ।
ಇತಿವ್ಯಾಚಕ್ಷತೆ ಶಕ್ತಿವಿಶಿಷ್ಟಂ ವಿಷಯಸ್ತ್ವಿತಿ ॥
ಯಥಾ ಘಟ ಇತಿಜ್ಞಾನೇ ಘಟತ್ವಂ ಸ್ಯಾದ್ವಿಶೇಷಣಮ್ ।
ತಥಾ ಬ್ರಹ್ಮಣಿ ವೈಶಿಷ್ಟ್ಯಂ ಶಕ್ತಿರಿತ್ಯಭಿಧೀಯತಾಮ್ ॥
ಅಗ್ನಿಸ್ಫುಲಿಂಗಯೋರ್ನಾಸ್ತಿ ಯಥಾ ಭೇದಃ ಸ್ವರೂಪತಃ।
ಅಗ್ನಿತ್ವೇನ ಕಣತ್ವೇನ ಭೇದೋಽಪಿ ಸ್ಫುರತಿ ಕ್ವಚಿತ್ ॥
ಯಥಾಹಿ ಕುಂಡಲಮಿತಿ ಭೇದಾ ಭೇದೌ ತಥಾತ್ರ ಚ ।
ತಸ್ಮಾಚ್ಛಕ್ತಿ ವಿಶಿಷ್ಟಸ್ಯ ಜಿಜ್ಞಾಸಾ ಬ್ರಹ್ಮಣಃ ಸ್ಫುಟಮ್ ॥

ಆನಂದ ವಿಶಿಷ್ಟ ಎಂಬುದಾಗಿ ಆ ಬ್ರಹ್ಮನು ಸತ್ತು-ಚಿತ್ತು-ಆನಂದವುಳ್ಳ ಚೇತನ ವಿದಾಗುತ್ತದೆ. ಇವರಿಂದ 'ಅಸ್ಮಿ' ಪ್ರಕಾಶೇ, ನಂದಾಮಿ ಎಂದರೆ 'ನಾನು ಇದ್ದೇನೆ', 'ಚೇತಗುತ್ತಿದ್ದೇನೆ' ಮತ್ತು 'ಆನಂದ ಪಡುತ್ತಿದ್ದೇನೆ' ಎಂಬ ಅನುಭವವೂ ಆ ಬ್ರಹ್ಮಕ್ಕಿದೆ ಎಂದಾಯಿತು. ಈ ಬಗೆಯ ಅನುಭವವನ್ನೇ ದರ್ಶನದಲ್ಲಿ 'ವಿಮರ್ಶಾಶಕ್ತಿ' ಎಂದು ಕರೆದಿದೆ.

ವಿಮರ್ಶಾಖ್ಯಾ ಪರಾಶಕ್ತಿರ್ವಿಶ್ವವೈಚಿತ್ರ್ಯಕಾರಿಣೀ ।
ಯಸ್ಮಿನ್ ಪ್ರತಿಷ್ಠಿತಾ ಬ್ರಹ್ಮ ತದಿದಂ ವಿಶ್ವಭಾಜನಮ್ ॥ ೩೧
ಯಥಾ ಚಂದ್ರೇ ಸ್ಥಿರಾ ಜ್ಯೋತ್ಸ್ನಾ ವಿಶ್ವವಸ್ತು ಪ್ರಕಾಶಿನೀ ।
ತಥಾ ಶಕ್ತಿರ್ವಿಮರ್ಶಾಖ್ಯಾ ಪ್ರಕಾಶೇ ಬ್ರಹ್ಮಣಿ ಸ್ಥಿರಾ ೩೨
(ಸಿ.ಶಿ.ಪ. ೨೦)

ಬ್ರಹ್ಮವು ಶಕ್ತಿ ವಿಶಿಷ್ಟ ಎಂಬ ಅಂಶವನ್ನು 'ಪರಾಸ್ಯ ಶಕ್ತಿರ್ವಿವಿಧೈವಶ್ರೂಯತೇ' (ಶ್ವೇ. ೬-೮) 'ದೇವಾತ್ಮ ಶಕ್ತಿಂ ಸ್ವಗುಣೈರ್ನಿಗೂಢಾಂ' (ಶ್ವೇ. ೧-೩) ಮುಂತಾದ ಶ್ರುತಿಗಳು ಸಮರ್ಥಿಸುತ್ತವೆ. ಅದ್ವೈತಿಗಳು ಹೇಳುವ 'ಮಾಯಾ' ಪದವು 'ಯಾಮಾಸಾ ಮಾಯಾ' (ಮಿಥ್ಯ) ಎಂಬ ಅರ್ಥದಲ್ಲಿದೆ. ಆದರೆ ಶಿವಾದ್ವೈತದಲ್ಲಿನ ಮಾಯಾ ಶಬ್ದ ನಿರ್ವಚನವು ಶಿವಗತ ವಿಮರ್ಶಾಶಕ್ತಿಯೆ.

ಮಾಂ ಶಿವಂ ಪರಮಂ ಬ್ರಹ್ಮ ಪ್ರಾಪ್ನೋತೀತಿ ಸ್ವಭಾವತಃ ।
ಮಾಯೇತಿ ಪ್ರೋಚ್ಯತೆ ಲೋಕೇ ಬ್ರಹ್ಮನಿಷ್ಠಾ ಸನಾತನೀ ॥
ಎಂಬ ಉಕ್ತಿ ಇದನ್ನು ಸಮರ್ಥಿಸುತ್ತದೆ.

## ಜೀವ ಸ್ವರೂಪ

ಜೀವನು ಶಿವನ ಅಂಶ; ಮತ್ತು ಜೀವರು ಅನಂತ ಎಂಬುದನ್ನು ಶ್ರುತಿ ಪ್ರತಿಪಾದಿಸಿದೆ. 'ಉಜ್ವಲವಾಗಿ ಉರಿಯುವ ಬೆಂಕಿಯಿಂದ ಸರೂಪವಾದ ಸಾವಿರಾರು ಕಿಡಿಗಳು ಉದಿಸುವಂತೆ ಆ ಅಕ್ಷರ ಪರಬ್ರಹ್ಮದಿಂದ ವಿವಿಧ ವಾಸನಾ ವಿಶೇಷವುಳ್ಳ ಜೀವಿಗಳು ಅಭಿವ್ಯಕ್ತವಾಗುತ್ತಾರೆ.* 'ಮಮೈವಾಂಶೋ ಜೀವ ಲೋಕೇ ಜೀವಭೂತಸ್ಸನಾತನಃ (ಭ.ಗೀ.) 'ಅಂಶೋಃ ನಾನಾವ್ಯಪದೇಶಾತ್ (ಬ್ರ. ಸೂ. ೨-೩-೪೩) ಎಂಬ ಶ್ರುತಿ ಸೂತ್ರಗಳು ಈ ವಿಷಯವನ್ನು ಸಮರ್ಥಿಸಿವೆ.

---

* ಯಥಾ ಸುದೀಪ್ತಾತ್ ಪಾವಕಾತ್ ವಿಸ್ಫುಲಿಂಗಾಃ ಸಹಸ್ರಶಃ ಪ್ರಭವಂತೇ ಸರೂಪಾಸ್ತಥಾ ಕ್ಷರಾದ್ವಿವಿಧಾಃ ಸೋಮ್ಯಭಾವಾಃ ಪ್ರಜಾಯಂತೇ ತತ್ರ ಚೈವಾಪಿಯಂತಿ । —(ಮುಂಡಕ ೨. ೧. ೧.)

## ಜಗತ್ಸೃಷ್ಟಿ, ಪರಿಣಾಮವಾದ

ಜಗತ್ತು ಶಕ್ತಿ ವಿಶಿಷ್ಟ ಬ್ರಹ್ಮದ ಪರಿಣಾಮ. ಸುವರ್ಣವು ಆಭರಣಗಳಾಗಿ ಪರಿಣಾಮ ಹೊಂದುವಂತೆ ಬ್ರಹ್ಮವೇ ಜಗತ್ತಾಗಿ ಪರಿಣಮಿಸಿತು. ಆತ್ಮಶಕ್ತಿಯ ವಿಕಾಸದಿಂದ ಶಿವನೇ ಜಗನ್ಮಯನಾದ. ಸಂಕುಚಿತವಾಗಿ ಮಡಿಸಿದ್ದ ವಸ್ತ್ರವನ್ನು ಬಿಚ್ಚಿ ಹರಡಿದಾಗ ಅದೇ ಕುಟಿ (ಡೇರೆ) ಯಾಗುವಂತೆ. * ಮರವು ಕೊಂಬು ರೆಂಬೆ ಎಲೆ ಹೂವಾಗಿ ಪರಿಣಮಿಸಿರುವಂತೆ ಶಿವನೇ ಭೂಮಿ ಗಗನ ರೂಪ ಪಂಚಭೂತ ಪ್ರಪಂಚವಾಗಿ ಪರಿಣಾಮ ಹೊಂದಿದ್ದಾನೆ, ಆಲದ ಬೀಜದಲ್ಲಿ ಮುಂದೆ ಮೊಳೆತು ಮರವಾಗಲಿರುವ ಆಲದಮರ ಸೂಕ್ಷ್ಮವಾಗಿರುವಂತೆ ಶಿವನಲ್ಲಿ ವಿಶ್ವವು ಬೀಜರೂಪವಾಗಿ ಅಡಕವಾಗಿತ್ತು.

'ಪರಶಿವನ ಶಕ್ತಿ ವಿಸ್ತಾರವೇ ವಿಶ್ವ'*೧ ಲೋಕದಲ್ಲಿ ಶಕ್ತಿ ಮತ್ತು ಶಕ್ತಿವಾನ್ ಎಂಬ ಎರಡೇ ಪದಗಳಿವೆ. ಶಕ್ತಿಯ ವಿಕಾಸವೇ ಜಗತ್ತು. ಶಿವನು ಶಕ್ತಿವಿಶಿಷ್ಟ. *೨ 'ನಾನೇ ನಾನಾವಿಧ ಪ್ರಪಂಚವಾಗಿ ಪರಿಣಮಿಸುವೆನು. *೩ 'ಜೇಡರ ಹುಳು ತನ್ನ ಎಂಜಲಿನಿಂದಲೇ ಬಲೆ ಹೆಣೆಯುವಂತೆ ಶಿವ ತನ್ನ ಶಕ್ತ್ಯಂಶದಿಂದ ವಿಶ್ವನಿರ್ಮಾಣ ಮಾಡಿದನು. *೪ ಮುಂತಾದ ಉಕ್ತಿಗಳು ಜಗತ್ತು ಶಿವನ ಪರಿಣಾಮ ಎಂಬುದನ್ನು ಸಮರ್ಥಿಸುತ್ತವೆ. ಒಟ್ಟಿನಲ್ಲಿ, ಶಕ್ತಿವಿಶಿಷ್ಟ ಶಿವನು ಜಗತ್ತಿಗೆ ಕಾರಣ ಎಂಬಲ್ಲಿ ಅವನು ತನ್ನ ಶಕ್ತ್ಯಂಶದಿಂದ ಉಪಾದಾನ ಕಾರಣನೂ ಚೈತನ್ಯಾಂಶದಿಂದ ನಿಮಿತ್ತ ಕಾರಣನೂ ಆಗಿರುವುದರಿಂದ ಶಿವನು ಜಗತ್ತಿಗೆ 'ಅಭಿನ್ನ ನಿಮಿತ್ತೋಪಾದಾನ ಕಾರಣ ನೆನಿಸಿದ್ದಾನೆ.

## ಜಗತ್ತು ಸತ್ಯ

ಅದ್ವೈತಿಗಳು ಬ್ರಹ್ಮವೊಂದೇ ಸತ್ಯ. ಜೀವ ಜಗತ್ತುಗಳು ಮಿಥ್ಯ ಎನ್ನುತ್ತಾರೆ. ಆದರೆ ಶಿವಾದ್ವೈತದಲ್ಲಿ ಜೀವ-ಜಗತ್ತುಗಳು ಶಿವನ ಪರಿಣಾಮವಾದ್ದರಿಂದ ಅವು ಸತ್ಯ. ಶೃತಿಯು 'ಪರಬ್ರಹ್ಮವು ಜಗತ್ತನ್ನು ಸೃಜಿಸಿ ಅದರಲ್ಲಿ ತಾನೇ ಪ್ರವೇಶಿಸಿತು. *೫ ಎಂದು ಹೇಳಿರುವುದರಿಂದ ಜಗತ್ತು ಸತ್ಯ. ಜಗದ್ಗುರು ರೇಣುಕರು

---

* ಆತ್ಮಶಕ್ತಿ ವಿಕಾಸೇನ ಶಿವೋ ವಿಶ್ವಾತ್ಮನಾ ಸ್ಥಿತಃ|
ಕುಟೀಭಾವಾದ್ಯಥಾ ಭಾತಿ ಪಟಃ ಸ್ವಸ್ಯ ಪ್ರಸಾರಣಾತ್|| (ಸಿ.ಶಿ. ೧೦-೬೫)

*೧ ಸ್ವಶಕ್ತಿ ಪ್ರಚಯೋಽಸ್ಯ ವಿಶ್ವಂ (ಶಿವಸೂತ್ರ ೨-೩೦)

*೨ ಶಕ್ತಿಶ್ಚ ಶಕ್ತಿಮಾಂಶ್ಚೈವ ಪದಾರ್ಥದ್ವಯ ಮುಚ್ಯತೇ |
ಶಕ್ತಯೋಽಸ್ಯ ಜಗತ್ಕೃತ್ಸ್ನಂ ಶಕ್ತಿಮಾಂಸ್ತು ಮಹೇಶ್ವರಃ||(ಸರ್ವಮಂಗಲಾ)

*೩ ಬಹು ಸ್ಯಾಂ ಪ್ರಜಾಯೇಯ (ಛಾಂ. ೬-೨-೩)

*೪ ಯಥೋರ್ಣನಾಭಿ ಸೃಜತೇ ಗೃಹ್ಣತೇ ಚ (ಮುಂಡಕ ೧-೧-೭)

*೫ ತತ್ಸೃಷ್ಟ್ವಾ ತದೇವಾನುಪ್ರಾವಿಶತ್ (ತೈ. ಅ.೬)

ಶಿವತತ್ತ್ವಾತ್ ಸಮುತ್ಪನ್ನಂ ಜಗದಸ್ಮಾನ್ನ ಭಿದ್ಯತೇ ।
ಫೇನೋರ್ಮಿಬುದ್ಬುದಾಕಾರೋ ಯಥಾ ಸಿಂಧೋರ್ನಭಿದ್ಯತೇ॥
(ಸಿ. ಶಿ. ಪ. ೧೦)

ಎಂದು ಹೇಳಿ ಮಣ್ಣಿನಿಂದಾದ ಗಡಿಗೆ ಹೇಗೆ ಮಣ್ಣಿಗಿಂತ ಬೇರೆಯಲ್ಲವೋ, ಸಮುದ್ರದ ನೊರೆ ತೆರೆ ಬುದ್ಬುದಾದಿಗಳು ಹೇಗೆ ಕಡಲಿನಿಂದ ಬೇರೆ ಅಲ್ಲವೋ ಅದರಂತೆ ಶಿವತತ್ತ್ವದಿಂದ ಉದಿಸಿದ ಜಗತು ಶಿವನಿಂದ ಬೇರೆ ಅಲ್ಲ ಎಂದಿದ್ದಾರೆ.

## ಶಕ್ತಿ ಭಕ್ತಿಗಳ ಸ್ವರೂಪ

ಶಿವನು ತನ್ನ ಲೀಲೆಗಾಗಿ ಜಗತ್ತನ್ನು ಸೃಷ್ಟಿಸಿದ. 'ಸ ಏಕಾಕಿ ನ ರಮತೇ' 'ಸದ್ವಿತೀಯ ಮೈಚ್ಛತ್' 'ಸಚ್ಚ ಅಸಚ್ಚಾ ಭವತ್' ಮುಂತಾದ ಶ್ರುತಿಗಳಲ್ಲಿ ಈ ಅರ್ಥವನ್ನು ಸಮರ್ಥಿಸಲಾಗಿದೆ. ಆಗಮಗಳಲ್ಲಿ ಜಗತ್ತಿಗೆ ಕಾರಣವಾದ ಪರಬ್ರಹ್ಮವು 'ಸ್ಥಲ' ಎಂದು ಕರೆಯಲ್ಪಟ್ಟಿದೆ. ಈ ಚರಾಚರಾತ್ಮಕವಾದ ವಿಶ್ವವು ಯಾವುದರಿಂದ ಹೊರಹೊಮ್ಮಿ ಮತ್ತೆ ಎಲ್ಲಿ ಅಡಗುವುದೋ ಅದೇ ಸ್ಥಲತತ್ತ್ವ ಎಂದು ಹೇಳಿದೆ * ಪ್ರಳಯದಲ್ಲಿ ಸ್ವಸ್ಥವಾಗಿದ್ದ ಬ್ರಹ್ಮಕ್ಕೆ ಜಗತ್ತನ್ನು ಸೃಜಿಸಬೇಕೆನಿಸಿದಾಗ ಅದು 'ಕ್ಷೋಭ'ಗೊಂಡಿತು ಎಂದರೆ ಅವನ ಪ್ರಜ್ಞಾಶಕ್ತಿ ಸ್ಫುರಿಸಿತು. ಆಗ ಸ್ಥಲವು ಎರಡು ಭಾಗವಾಯಿತು. ಒಂದು ಲಿಂಗಸ್ಥಲ ಮತ್ತೊಂದು ಅಂಗಸ್ಥಲ. *೧ ಚರಾಚರ ವಿಶ್ವವೆಲ್ಲವೂ ಪ್ರಳಯದಲ್ಲಿ ಎಲ್ಲಿ ಅಡಗಿ ಮತ್ತೆ ಸೃಷ್ಟಿಯಲ್ಲಿ ಯಾವುದರಿಂದ ಹೊರ ಹೊಮ್ಮುವುದೋ ಅದೇ ಲಿಂಗಸ್ಥಲ. *೨ ಅಂ ಎಂದರೆ ಪರಬ್ರಹ್ಮ. ಅದರ ಕಡೆ ಅಭಿಮುಖವಾದ ಜೀವ ತತ್ತ್ವವೇ ಅಂಗಸ್ಥಲ. *೩

ಹೀಗೆ ಸ್ಥಲ ಶಬ್ದ ವಾಚ್ಯವಾದ ಶಕ್ತಿವಿಶಿಷ್ಟ ಪರಬ್ರಹ್ಮವು ಲಿಂಗ ಮತ್ತು ಅಂಗ ಎಂದು ವಿಭಕ್ತವಾದಾಗ ಅಲ್ಲಿರುವ ಶಕ್ತಿಯೂ ಇತ್ತೆರನಾಯಿತು. ಲಿಂಗಸ್ಥಲವನ್ನು ಆಶ್ರಯಿಸಿದ ಶಕ್ತಿ 'ಕಲೆ' ಎಂಬ ಹೆಸರು ತಳೆಯಿತು. ಅದರಂತೆ ಅಂಗಸ್ಥಲವನ್ನು ಆಶ್ರಯಿಸಿದ ಶಕ್ತಿ ಆ ಜೀವಿಯ ಉದ್ಧಾರಕ್ಕಾಗಿ 'ಭಕ್ತಿ' ಎನಿಸಿತು. ಜಗನ್ನಿರ್ಮಾಣ ಕಾಲ (ಪ್ರವೃತ್ತಿ) ದಲ್ಲಿ ಶಿವನಿಗೆ ನೆರವಾದ ಮಾಹೇಶ್ವರಿ ಶಕ್ತಿಯೇ

---

* ಸ್ಥೀಯತೇ ಲೀಯತೇ ಯತ್ರ ಜಗದೇತಚ್ಚರಾಚರಂ ।
ತದ್ಬ್ರಹ್ಮ ಸ್ಥಲಮಿತ್ಯಾಹುಃ ಸ್ಥಲತತ್ತ್ವ ವಿಶಾರದಾಃ॥ (ಅನು. ಸೂ.)

*೧ ಸ್ವಶಕ್ತಿ ಕ್ಷೋಭಮಾತ್ರೇಣ ಸ್ಥಲಂ ತದ್ದ್ವಿವಿಧಂ ಭವೇತ್ ।
ಏಕಂ ಲಿಂಗಸ್ಥಲಂ ಪ್ರೋಕ್ತಮನ್ಯದಂಗಸ್ಥಲಂ ಸ್ಮೃತಂ॥ (ಅನು ೨-೧೦)

*೨ ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಂ।
ತದೇತಲ್ಲಿಂಗಮಿತ್ಯುಕ್ತಂ ಲಿಂಗತತ್ತ್ವ ಪರಾಯಣೈಃ॥ (ಅನು ಸೂ. ೩-೨)

*೩ ಅಂ ಭವೇತ್ ಪರಮಂ ಬ್ರಹ್ಮ ತತ್ಪರಂ ತತ್ಪರಾಯಣಂ।
ಅಂಗಸ್ಥಲಮಿತಿ ಪ್ರಾಹುರಂಗತತ್ತ್ವ ವಿಶಾರದಾಃ॥ (ಅನು. ಸೂ ೪-೩)

ನಿವೃತ್ತಿ ಮಾರ್ಗದಲ್ಲಿ ಆ ಜೀವಿಯನ್ನು ಮೇಲೆತ್ತಲು ಮಾತೃಸ್ವರೂಪಿಣಿಯಾಗಿ ಭಕ್ತಿ ಎನಿಸಿತು. ಮಹಾಕಾಲಾನಲ ಜ್ವಾಲೆಯು ಮನೆ ಬೆಳಗುವ ದೀಪವಾದಂತೆ.

ಜ್ವಾಲೆ ತಮಸ್ವಿನಿ–ಭಕ್ತಿ ಸುಪ್ರಕಾಶಿನಿ. ಶಕ್ತಿ ಸವಾಸನಾ–ಭಕ್ತಿ ನಿರ್ವಾಸನಾ, ಮಹತ್ತರ ಮತ್ತು ಶುದ್ಧ. ಯದ್ಯಪಿ ಶಕ್ತಿಯೇ ಭಕ್ತಿ, ಭಕ್ತಿಯೇ ಶಕ್ತಿ. ಅವೆರಡಕ್ಕೂ ಅಷ್ಟು ವ್ಯತ್ಯಾಸವಿಲ್ಲ. ಆದರೂ ವಿಚಾರ ಮಾಡಿದರೆ ಇವೆರಡಕ್ಕೂ ಮಹದಂತರವುಂಟು.

## ಶಕ್ತಿ – ಭಕ್ತಿ

೧. ಶಕ್ತಿಯಿಂದ ಪ್ರಪಂಚ ಸೃಷ್ಟಿ——ಭಕ್ತಿಯಿಂದ ಪ್ರಪಂಚ ಲಯ.

೨. ಶಕ್ತಿ ವೈಚಿತ್ರ್ಯದಿಂದ ನಿರೂಪವೂ ರೂಪವಾಗುತ್ತದೆ—

—ಭಕ್ತಿ ವೈಚಿತ್ರ್ಯದಿಂದ ರೂಪವೂ ನಿರೂಪವಾಗುತ್ತದೆ.

೩. ಪ್ರಪಂಚವನ್ನು ಬೆಳೆಸುವ ಬಯಕೆ ಶಕ್ತಿಗೆ—

—ಭಕ್ತಿಗೆ ಪ್ರಪಂಚವನ್ನು ಮುಗಿಸುವ ಅಪೇಕ್ಷೆ.

೪. ಶಕ್ತಿ ಅಧೋಮುಖಿ——ಭಕ್ತಿ ಊರ್ಧ್ವಮುಖಿ

೫. ಶಕ್ತಿ ಸಮಾಯಾ——ಭಕ್ತಿ ನಿರ್ಮಾಯಾ

೬. ಉಪಾಸ್ಯತ್ವ ಶಕ್ತಿಯದು——ಭಕ್ತಿಯದು ಉಪಾಸಕತ್ವ

೭. ಶಕ್ತಿ ಲಿಂಗಸ್ಥಲವನ್ನು ಆಶ್ರಯಿಸಿದೆ.

—ಭಕ್ತಿ ಅಂಗಸ್ಥಲವನ್ನು ಆಶ್ರಯಿಸಿದೆ.

ಯಾವ ದೃಷ್ಟಿಯಿಂದ ನೋಡಿದರೂ ಶಕ್ತಿಗಿಂತ ಭಕ್ತಿಯೇ ಮಿಗಿಲು*

## ಪ್ರವೃತ್ತಿ ಮಾರ್ಗ–ಮೂವತ್ತಾರು ತತ್ತ್ವಗಳು

ಸಚ್ಚಿದಾನಂದ ರೂಪವಾದ ಪರಶಿವ ಬ್ರಹದಲ್ಲಿನ ವಿಮರ್ಶಾಶಕ್ತಿಯ ಪರಿಣಾಮವೇ ಜಗತ್ತು ಎಂದು ಹೇಳಲಾಯಿತು. ಶಿವಶಕ್ತಿಯು ಜಗತ್ಸೃಷ್ಟಿಯಲ್ಲಿ ಪ್ರವೃತ್ತವಾದಾಗ ಅದು ಕ್ರಮವಾಗಿ ಮೂವತ್ತಾರು ತತ್ತ್ವಗಳಾಗಿ ಪರಿಣಮಿಸುತ್ತದೆ.

## ಶುದ್ಧ ತತ್ತ್ವಗಳು–೫

ಶಿವ—ಶಕ್ತಿ—ಸದಾಶಿವ—ಈಶ್ವರ—ಶುದ್ಧವಿದ್ಯಾ.

## ಮಿಶ್ರ ತತ್ತ್ವಗಳು–೭

ಮಾಯಾ—ಕಲಾ—ವಿದ್ಯಾ—ರಾಗ—ಕಾಲ—ನಿಯತಿ—ಪುರುಷ.

---

*ಅಪಿ ತರ್ಕ ಪ್ರತಿಷ್ಠಾನಾತ್ ಶಕ್ತೇರ್ಭಕ್ತಿರ್ಗರೀಯಸಿ (ಶ. ಸೂ. ೨–೨೦)

## ಅಶುದ್ಧ ತತ್ತ್ವಗಳು ೨೪

ಪ್ರಕೃತಿ
ಚಿತ್ತ—ಬುದ್ಧಿ—ಅಹಂಕಾರ—ಮನಸ್ಸು (ಅಂತಃಕರಣ ಚತುಷ್ಟಯಂ)
ಶ್ರೋತ್ರ—ತ್ವಕ್—ನೇತ್ರ—ಜಿಹ್ವಾ—ಘ್ರಾಣ (ಜ್ಞಾನೇಂದ್ರಿಯ ಪಂಚಕ)
ವಾಕ್—ಪಾಣಿ—ಪಾದ—ಪಾಯು—ಉಪಸ್ಥ (ಕರ್ಮೇಂದ್ರಿಯ ಪಂಚಕ)
ಶಬ್ದ—ಸ್ಪರ್ಶ—ರೂಪ—ರಸ—ಗಂಧ (ತನ್ಮಾತ್ರಾ ಪಂಚಕ)
ಆಕಾಶ—ವಾಯು—ವಹ್ನಿ—ಜಲ—ನೆಲ (ಭೂತ ಪಂಚಕ)

ಎಂಬ ಮೂವತ್ತಾರು ತತ್ತ್ವಗಳಾಗಿ ಪರಿಣಮಿಸಿ ಜಗತ್ತು ನಿರ್ಮಾಣ ವಾಯಿತು. ತತ್ತ್ವ ಮೂವತ್ತಾರು ಎಂಬುದಕ್ಕೆ ಶ್ರುತಿ ಸಮ್ಮತಿಯುಂಟು.*

ಹೀಗೆ ಶಕ್ತಿ ವಿಶಿಷ್ಟ ಪರಶಿವಬ್ರಹ್ಮವು 'ಬಹುಸ್ಯಾಂ ಪ್ರಜಾಯೇಯ' ಎಂಬ ಉಕ್ತಿಯಂತೆ ಸೃಷ್ಟಿಗೆ ಉನ್ಮುಖವಾದಾಗ ಬ್ರಹ್ಮನಿಷ್ಠ ಇಚ್ಛಾಶಕ್ತಿಯೇ ಜಗದ್ರೂಪ ವಾಗಿ ಪರಿಣಮಿಸಿ ಹದಿನಾಲ್ಕು ಲೋಕಗಳ ಸೃಷ್ಟಿಯಾಯಿತು.*೧

## ನಿವೃತ್ತಿ ಮಾರ್ಗ

ಜಗತ್ ಪ್ರವೃತ್ತಿಯಲ್ಲಿ ಶಿವನಿಗೆ ನೆರವಾದ ಶಕ್ತಿಯೇ ಜಗತ್ತಿನ ನಿವೃತ್ತಿಯಲ್ಲಿ ಜೀವನನ್ನು ಉದ್ಧರಿಸುವುದಕ್ಕಾಗಿ ಭಕ್ತಿಯಾಗಿ ಪರಿಣಮಿಸಿ ಜೀವ (ಅಂಗ) ನನ್ನು ಆಶ್ರಯಿಸುತ್ತದೆ ಎಂದು ಹೇಳಲಾಯಿತು. ಹೀಗೆ ಭಕ್ತಿ ಅವನನ್ನು ಹೊಂದಬೇಕಾ ದರೆ ಅವನಲ್ಲಿ ಪಾಪವು ಅಳಿದು ಪುಣ್ಯವು ಮಿಗಿಲಾಗಿರಬೇಕು. ಅನೇಕ ಜನ್ಮಗಳಲ್ಲಿ ಮಾಡಿದ ಸತ್ಕರ್ಮಗಳ ಫಲವಾಗಿ ಪಾಪವು ಅಳಿದು ಶುದ್ಧಾಂತಃಕರಣನಾದ ಜೀವಿಯು 'ಪಿಂಡ'ನೆನಿಸುತ್ತಾನೆ. ಆಗ ಅವನ ಮೇಲೆ ಶಿವನ ಕೃಪೆ ಬೀಳುತ್ತದೆ, ಇದಕ್ಕೆ ಶಾಸ್ತ್ರದಲ್ಲಿ "ಶಕ್ತಿಪಾತ"ವೆಂದು ಹೆಸರು. ಹಾಗಾದಾಗ ಜೀವಿಯಲ್ಲಿ ಕೆಲವು ಬದಲಾ ವಣೆಗಳು ಕಾಣುತ್ತವೆ. ಶಿವನಲ್ಲಿ, ಶಿವಭಕ್ತರಲ್ಲಿ, ಶಿವಶಾಸ್ತ್ರಗಳಲ್ಲಿ ಆಸಕ್ತಿ ಶ್ರದ್ಧೆ

---

* ಪುನಸ್ತಂಹೋವಾಚ. ಕಾನಿ ಷಟ್ ತ್ರಿಂಶತ್ ತತ್ತ್ವಾನೀತಿ. ಸ ಆತ್ಮಾ ಆಹ, ಶಿವಶಕ್ತಿ ಸದಾಶಿವೇಶ್ವರ ಶುದ್ಧವಿದ್ಯಾ ಏತಾನಿ ಶುದ್ಧಾನಿ ಪಂಚ ತತ್ತ್ವಾನಿ, ಮಾಯಾ ಕಾಲೋನಿಯತಿಃ ಕಲಾ ವಿದ್ಯಾ ರಾಗಃ ಪುರುಷ ಇತಿ ಶುದ್ಧಾ ಶುದ್ಧಾನಿ ಸಪ್ತ ತತ್ತ್ವಾನಿ..........
—(ವೃದ್ಧ ಜಾಬಾಲೋಪನಿಷತ್)

*೧ ಅನಾದಿ ನಿಧನಾತ್ ಶಾಂತಾತ್ ಶಿವಾತ್ ಪರಮ ಕಾರಣಾತ್ |
ಇಚ್ಛಾಶಕ್ತಿರ್ವಿನಿಷ್ಕ್ರಾಂತಾ ತತೋ ಜ್ಞಾನಂ ತತಃ ಕ್ರಿಯಾ ||
ತತೋ ಪ್ರೇತ್ಯ ಸ್ಯಾನಿ ಭೂತಾನಿ ಭುವನಾನಿ ಚತುರ್ದಶ || (ಶಿವಾಗಮ)

ಭವದಲ್ಲಿ ನಿರಾಸಕ್ತಿ, ವಿಷಯಗಳಲ್ಲಿ ಅನಾಸಕ್ತಿ ಲಕ್ಷಣಗಳು ಕಾಣುತ್ತವೆ. ಅವಿಚ್ಛಿನ್ನವಾದ ಈ ಲಕ್ಷಣಗಳನ್ನು ಗುರ್ತಿಸಿ ಗುರು ಅವನಿಗೆ ದೀಕ್ಷೆ ಎಸಗುತ್ತಾನೆ.*

ಅನಾದಿ ಕರ್ಮವಶದಿಂದ ಜೀವನಲ್ಲಿ ಆಣವ, ಮಾಯಿಯ ಮತ್ತು ಕಾರ್ಮ ಎಂಬ ಮಲಗಳು ಸ್ವಾಭಾವಿಕವಾಗಿ ಇರುತ್ತವೆ ತಾಮ್ರದಲ್ಲಿ ಕಿಲುಬು ಇರುವಂತೆ. ರಸವೇಧವಾದಾಗ ತಾಮ್ರದಲ್ಲಿ ಸ್ವಾಭಾವಿಕವಾಗಿಯೇ ಇದ್ದ ಕಿಲುಬು ನಾಶವಾಗಿ ಅದು ಸುವರ್ಣವಾಗುತ್ತದೆ. ಅಲ್ಲಿಂದ ಮುಂದೆ ಅದರಲ್ಲಿ ಕಿಲುಬಿಗೆ ಅವಕಾಶವಿಲ್ಲ. ಅದರಂತೆ ಜೀವಿಯಲ್ಲಿ ಆಣವಾದಿ ಮಲಗಳು ಸ್ವಾಭಾವಿಕವಾದರೂ ಅವು ಸದ್ಗುರುವಿನ ಕೃಪೆಗೆ ಪಾತ್ರವಾಗಿ ಶಿವದೀಕ್ಷೆ ಪಡೆದ ಮೇಲೆ ನಾಶವಾಗುವವು. ಆಗ ಅವನು ಭಕ್ತನೆನಿಸುತ್ತಾನೆ.

## ಮಲಗಳ ಸ್ವರೂಪ

ಜೀವನು ಶಿವನಅಂಶ ಎಂದು ಹೇಳಲಾಯಿತು. ಅಂದಮೇಲೆ ಶಿವನಲ್ಲಿ ಪರಿಪೂರ್ಣತ್ವ, ಸರ್ವಜ್ಞತ್ವ ಮತ್ತು ಸರ್ವಕತೃತ್ವರೂಪ ಗುಣಗಳಿದ್ದವು. ಮೂಲತಃ ಜೀವನು ಶಿವನೇ. ಆದರೂ ಅವನು ಅನಾದಿ ಕರ್ಮವಶದಿಂದ ಬೆಂಕಿಯಿಂದ ಕಿಡಿ ಸಿಡಿದಂತೆ ಶಿವಾಂಶವಾಗಿ ಶಿವನಿಂದ ಬೇರ್ಪಟ್ಟನು! ಆಗ ಶಿವನಲ್ಲಿದ್ದ ಪರಿಪೂರ್ಣತ್ವ ಮರೆತು 'ತಾನು ಅಪೂರ್ಣ' ಎಂಬ ಭಾವ ಉದಿಸಿತು. ಇದೇ ಆಣವ ಮಲ. ತಾನು ಮೊದಲು ಸರ್ವಜ್ಞನಾದರೂ ಈಗ ತಾನು ಕಿಂಚಿಜ್ಞನೆನಿಸಿದ. ಇದೇ ಮಾಯಾಮಲ. ಸರ್ವಕರ್ತೃತ್ವಶಕ್ತಿ ಮರೆಯಾಗಿ ತಾನು ಕಿಂಚಿತ್ಕರ್ತೃ ಎಂಬ ತಿಳಿವೇ ಕಾರ್ಮ ಮಲ. ಈ ಬಗೆಯ ಮೂರು ಮಲಗಳಿಂದ ಆವೃತನಾದ ಜೀವನು ಸಂಸಾರಿಯೆನಿಸಿ, ಜನನ ಮರಣಗಳ ಸುಳಿಯಲ್ಲಿ ಬಿದ್ದು ಪರಿಭ್ರಮಿಸತೊಡಗಿದ. ಶಿವದೀಕ್ಷೆಯಿಂದ ಜೀವಿಗೆ ಆವರಿಸಿದ ಮೇಲೆ ಹೇಳಿದ ಮೂರು ಮಲಗಳು ನಾಶವಾಗುತ್ತವೆ.

ದೀಕ್ಷೆ ಮೂರು ವಿಧ. ವೇಧಾ, ಮಾಂತ್ರೀ ಮತ್ತು ಕ್ರಿಯಾ ಎಂದು. ಗುರುವು ಶಿಷ್ಯನನ್ನು ಸಮೀಪಕ್ಕೆ ಕರೆದು, ಅವನನ್ನು ಕೃಪಾದೃಷ್ಟಿಯಿಂದ ನೋಡಿ

---

* ಯೇಷಾಂ ಶರೀರಿಣಾಂ ಶಕ್ತಿಃ ಪತತ್ಯೇವ ನಿವೃತ್ತಯೇ ।
ತೇಷಾಂ ತಲ್ಲಿಂಗ ಮೌತ್ಸುಕ್ಯಂ ಮುಕ್ತೌ ದ್ವೇಷೋಭವಸ್ಥಿತೌ ।
ಭಕ್ತಿಶ್ಚ ಶಿವಭಕ್ತೇಷು ಶ್ರದ್ಧಾ ತಚ್ಛಾಸಕೇ ಶಿವೇ ।
ಏಭಿರ್ಲಕ್ಷೈರ ವಿಚ್ಛಿನ್ನೈಃ ಶಕ್ತಿಪಾತೋ ಮಹಾತ್ಮಭಿಃ ।
ಅನುಮೇಯಃ ಸದೀಕ್ಷೈಶ್ಚ ಶಕ್ತಿಪಾತಾನುಸಾರತಃ ।
ಶಕ್ತಿಪಾತಂ ಸಮಾಲೋಕ್ಯ ದೀಕ್ಷಯಾ ಯೋಜಯೇಪದಂ ।
—ಪಾರಮೇಶ್ವರ ಮೃಗೇಂದ್ರಾಗಮಗಳು

ಅವನ ಮಸ್ತಕದ ಮೇಲೆ ಹಸ್ತವನ್ನು ಇಡುವುದೇ ವೇಧಾದೀಕ್ಷೆ. ಇದರಿಂದ ಜೀವನ ಆಣವ ಮಲವು ನಷ್ಟವಾಗುತ್ತದೆ. ತರುವಾಯ ಶಿವದೀಕ್ಷಾಂಗವಾಗಿ ಎಸಗುವ ಮಂತ್ರದೀಕ್ಷೆಯಿಂದ ಅವನಲ್ಲಿದ್ದ ಮಾಯಾಮಲವೂ, ಕುಂಡಮಂಡಲಾತ್ಮಕವಾದ ಕ್ರಿಯಾದೀಕ್ಷೆಯಿಂದ ಕಾರ್ಮ ಮಲವೂ ನಷ್ಟವಾಗಿ ಅವನು ಪರಿಶುದ್ಧವಾದ ಅಪರಂಜಿಯಂತೆ ಬೆಳಗುವ ಶಿವಭಕ್ತನೆನಿಸುತ್ತಾನೆ.

ದೀಯತೇಚ ಶಿವಜ್ಞಾನಂ ಕ್ಷೀಯತೇ ಪಾಶಸಂಚಯಃ ।
ತಸ್ಮಾದ ತಃ ಸಮಾಖ್ಯಾತಾ ದೀಕ್ಷೇತೀಯಂ ವಿಚಕ್ಷಣೈಃ ॥
(ಸಿ. ಶಿ. ೫)

ದೀಕ್ಷಯಾ ಮುಚ್ಯತೇ ದೇಹಿ ತ್ರಿವಿಧಾತ್ ಪಾಶಬಂಧನಾತ್ ।
ಶಿವತ್ವಂ ಯಾತಿ ಸತತಂ ನ ಪುನಃ ಪಶುತಾಂ ವ್ರಜೇತ್ ॥
(ವೀರಶೈವಾಚಾರ ಕೌಸ್ತುಭ)

ಮುಂತಾದ ಉಕ್ತಿಗಳು ಈ ವಿಷಯವನ್ನು ಸಮರ್ಥಿಸುತ್ತವೆ,

## ಮುಕ್ತಿ ಉಪಾಯ

ಶಿವದೀಕ್ಷೆಯಿಂದ ಪಾಶಮುಕ್ತನಾದ ಜೀವನನ್ನು ಉದ್ಧರಿಸುವುದಕ್ಕಾಗಿಯೇ ಭಕ್ತಿಯು ಅವನನ್ನು ಆಶ್ರಯಿಸುತ್ತದೆ. ಈ ಭಕ್ತಿಯು ಶ್ರದ್ಧಾ, ನಿಷ್ಠಾ, ಅವಧಾನ, ಅನುಭವ, ಆನಂದ ಮತ್ತು ಸಮರಸ ಎಂಬ ಆರು ಹಂತಗಳಲ್ಲಿ ಭಕ್ತನನ್ನು ಮೇಲೆ ಮೇಲೆ ಕೊಂಡೊಯ್ದು ಶಿವನಲ್ಲಿ ಸಮರಸಗೊಳಿಸುತ್ತದೆ. ಅದರ ಕರ್ಮವನ್ನು ಹೀಗೆ ಸಂಗ್ರಹಿಸಲಾಗಿದೆ :

## ಷಟ್‌ಸ್ಥಲ ಸೋಪಾನ

**ಭಕ್ತಸ್ಥಲ :** ಇದು 'ಬೀಜವೃಕ್ಷನ್ಯಾಯಸ್ಥಲ'. ಪರಶಿವ ಶಕ್ತಿಪಾತ (ಕೃಪೆ) ದಿಂದ ಕೃತಾರ್ಥನಾಗಿ ಶಿವದೀಕ್ಷೆ ಪಡೆದ ಜೀವನಲ್ಲಿ ಭಕ್ತಿಯು ಶ್ರದ್ಧಾರೂಪವಾಗಿ ಇರುತ್ತದೆ. ಆಗ ಅವನಲ್ಲಿ ದೇಹಾದಿ ಅಭಿಮಾನವು ನಷ್ಟವಾಗಿ ಅವನಿಗೆ ಗುರು–ಲಿಂಗ–ಜಂಗಮ-ಭಸ್ಮ–ರುದ್ರಾಕ್ಷ–ಮಂತ್ರ-ಪಾದೋದಕ ಮತ್ತು ಪ್ರಸಾದ ಎಂಬ ಅಷ್ಟಾವರಣಗಳಲ್ಲಿ, ಲಿಂಗಾಚಾರ–ಸದಾಚಾರ-ಶಿವಾಚಾರ–ಗಣಾಚಾರ ಮತ್ತು ಭೃತ್ಯಾಚಾರ ಎಂಬ ಪಂಚ ಆಚಾರಗಳಲ್ಲಿ ಶ್ರದ್ಧೆ ಮೂಡಿ ಅವುಗಳನ್ನು ಅನುಷ್ಠಾನ ಮಾಡುವ ಪ್ರವೃತ್ತಿಯುಂಟಾಗುತ್ತದೆ. ಈ ಬಗೆಯ ಅನುಷ್ಠಾನದ ಪ್ರಭಾವದಿಂದ ಬೆಣ್ಣೆ ತೆಗೆಯಲು ಮೊಸರನ್ನು ಮಥಿಸುವಂತೆ ಜೀವಾತ್ಮನಲ್ಲಿ ಶಿವತ್ವ ಅಭಿವ್ಯಕ್ತವಾಗಿ ಪ್ರೇಮ ಮಂಥನವು ಆರಂಭವಾಗುತ್ತದೆ.

ಸದಾಚಾರಃ ಶಿವೇ ಭಕ್ತಿರ್ಲಿಂಗೇ ಜಂಗಮ ಏಕಧೀಃ ।
ಲಾಂಛನೇ ಶರಣೇ ಭಕ್ತಿರ್ಭಕ್ತ ಸ್ಥಲ ಮನುತ್ತಮಮ್ ॥

ಎಂಬುದು ಈ ಸ್ಥಲದ ಸ್ವರೂಪ.

**ಮಹೇಶ್ವರ ಸ್ಥಲ**: ಇದು "ಸಲಿಲ ಮುಕ್ತನ್ಯಾಯಸ್ಥಲ." ಕಡಲಿನಲ್ಲಿರುವ ಮುತ್ತಿನ ಚಿಪ್ಪಿನಲ್ಲಿ ಬಿದ್ದ ಸ್ವಾತೀ ಮಳೆಯ ನೀರುಹನಿ ಕಾಲಾಂತರದಲ್ಲಿ ಗಟ್ಟಿಗೊಂಡು ಮುತ್ತು ಆಗುವಂತೆ ಭಕ್ತನ ಈಶ್ವರಾಭಿಮುಖವಾದ ಶ್ರದ್ಧೆಯೇ ಚಿತ್ತಸ್ಥೈರ್ಯ ರೂಪದಿಂದ ಘನೀಭಾವ ಪಡೆದು ನಿಷ್ಠೆಯಾಗಿ ಪರಿಣಮಿಸುತ್ತದೆ. ಆದ್ದರಿಂದ ಈ ಸ್ಥಲದಲ್ಲಿನ ಭಕ್ತಿಗೆ 'ನಿಷ್ಠಾಭಕ್ತಿ' ಎಂದು ಹೆಸರು. ಅದರಿಂದ ಸಾಧಕನು ತನ್ನ ಆಚಾರ ವಿಚಾರ ಮತ್ತು ಅನುಷ್ಠಾನಗಳಲ್ಲಿ ದೃಢವ್ರತನಾಗುತ್ತಾನೆ. ಅವನೇ ಶಿವವ್ರತಿ.

ಕೇವಲೇ ಸಹಜೆ ದಾನೇ ನಿಷ್ಣಾತಃ ಶಿವತತ್ಪರಃ।
ಬ್ರಹ್ಮಾದಿ ಸ್ಥಾನ ವಿಮುಖೋ ಭಕ್ತೋ ಮಾಹೇಶ್ವರಸ್ಮೃತಃ॥

ತನ್ನವೆನಿಸಿದ್ದ ತನು, ಮನ ಮತ್ತು ಧನವೆಂಬ ತ್ರಿವಿಧವನ್ನು ದಾಸೋಹಂ ಭಾವದಿಂದ ದಾನಮಾಡಿ, ಬ್ರಹ್ಮಪದವಿಯೇ ಮೊದಲಾದುವನ್ನೆಲ್ಲ ತೃಣಕ್ಕೆ ಸಮಾನವಾಗಿ ಭಾವಿಸುವ ಭಕ್ತನೇ ಮಾಹೇಶ್ವರನೆನಿಸುತ್ತಾನೆ.

## ಪ್ರಸಾದಿ ಸ್ಥಲ:

ಇದು 'ಅನಲಕಾಷ್ಠನ್ಯಾಯಸ್ಥಲ' ಇಲ್ಲಿಯ ಭಕ್ತಿಯು ಚಿತ್ತಶುದ್ಧಿಯ ಮೂಲಕ 'ಅವಧಾನ ಭಕ್ತಿ' ಎನಿಸಿರುತ್ತದೆ. ಕಾಷ್ಠಕ್ಕೆ ಸೋಂಕಿದ ಬೆಂಕಿಯು ಕಾಷ್ಠವನ್ನು ಸಂಪೂರ್ಣವಾಗಿ ವ್ಯಾಪಿಸಿ ಸುಟ್ಟು ಹೇಗೆ ಕಾಷ್ಠಗುಣಗಳನ್ನು ಕಳೆಯುತ್ತದೆಯೋ ಅದರಂತೆ ಈಶ್ವರ ಪ್ರೇಮವು–ಅವಧಾನವೆನಿಸಿ ಸಾಧಕನ ತ್ರಿಕರಣಗಳನ್ನು ವ್ಯಾಪಿಸಿ ಅಲ್ಲಿಯ ಶಬ್ದ ಸ್ಪರ್ಶ ಮೊದಲಾದ ತನ್ಮಾತ್ರಾ ವಿಷಯಗಳೆನಿಸಿದ ಸ್ರಕ್‌ಚಂದನಾದಿ ವಿಷಯಗಳನ್ನು ಭಸ್ಮಗೊಳಿಸಿ ಅವನ್ನು ಪ್ರಸಾದ ರೂಪವಾಗಿ ಪರಿವರ್ತಿಸುತ್ತದೆ. ಆಗ ಸಾಧಕನಲ್ಲಿ ಚಿತ್ತ ಪ್ರಸನ್ನತೆ ಮೂಡುತ್ತದೆ. ಅಂಥ ಭಕ್ತನ ವ್ಯವಹಾರವೆಲ್ಲ ಶಿವರೂಪ. ಅವನ ಆಚಾರ ಶಿವಾಚಾರವೆಂದೆನಿಸಿ ಅವನು 'ಪ್ರಸಾದ ಕಾಯ' ನಾಗಿರುತ್ತಾನೆ.

ಮನಃ ಪ್ರಸಾದ ಸಿದ್ಧ್ಯರ್ಥಂ ನಿರ್ಮಲ ಜ್ಞಾನಕಾರಣಮ್।
ಶಿವಪ್ರಸಾದಂ ಸ್ವೀಕುರ್ವನ್ ಪ್ರಸಾದೀ ಹ್ಯೇಷಕಥ್ಯತೇ॥

## ಪ್ರಾಣಲಿಂಗೀ ಸ್ಥಲ:

ಇಲ್ಲಿಯದು 'ಅನುಭವ ಭಕ್ತಿ'. 'ಇದು ಭ್ರಮರ ಕೀಟನ್ಯಾಯಸ್ಥಲ' ಅವನು ಅನುಭವ ಭ್ರಮರವನೆ ನೆನೆನೆನೆದು ಕೀಟವು ಭ್ರಮರವೇ ಆಗುವ ಪರಿ.

ಕೀಟೋ ಭ್ರಮರ ಯೋಗೇನ ಭ್ರಮರೋ ಭವತಿ ಧ್ರುವಮ್।
ಶಿವಭಕ್ತಃ ಶಿವಯೋಗೇನ ಶಿವೋಭವತಿ ನಿಶ್ಚಿತಮ್॥

ಎಂಬಂತೆ ಜೀವಭ್ರಮೆ ಅಳಿದ ಸಾಧಕನು ಶಿವಾನುಭಾವಿಯಾಗುತ್ತಾನೆ. ನಿರಂತರವೂ ಶಿವಚಿಂತನದಲ್ಲಿರುವ ಸಾಧಕನು ಶಿವಧ್ಯಾನ–ಪೂಜಾ–ಜಪಾದಿಗಳಲ್ಲಿ ಶಿವನ ಅನುಭವ ಪಡೆಯುತ್ತಾನೆ.

ಲಿಂಗಂಚಿದಾತ್ಮಕಂ ಬ್ರಹ್ಮ ತಚ್ಛಕ್ತಿಃ ಪ್ರಾಣರೂಪಿಣೀ।
ತದ್ರೂಪಲಿಂಗ ವಿಜ್ಞಾನೀ ಪ್ರಾಣಲಿಂಗೀತಿ ಕಥ್ಯತೇ॥

ಎಂಬುದು ಅವನ ಸ್ಥಿತಿ.

## ಶರಣ ಸ್ಥಲ

'ಸತಿ ಪತಿ ನ್ಯಾಯಸ್ಥಲ' ಇದು. ಇಲ್ಲಿಯದು 'ಆನಂದ ಭಕ್ತಿ' ಶಿವನ ನಿತ್ಯತ್ವ ವಿಷಯದಲ್ಲಿ ಉಂಟಾದ ನಿಶ್ಚಿಂತೆಯಿಂದ ಅವನಿಗೆ ಆನಂದ. ಇಲ್ಲಿಯ ಸಾಧಕ ಶಿವಾನಂದಿ. ಈ ಸ್ಥಿತಿಯನ್ನು ಶ್ರುತಿಯು

'ಯಥಾಪ್ರಿಯಯಾ ಸಂ ಪರಿಷ್ವಕ್ತೋನ ಬಾಹ್ಯಂ ಕಿಂಚ ವೇದ ನಾಂತರಂ।
ತಥಾಬ್ರಹ್ಮಣಾ ಸಂ ಪರಿಷ್ವಕ್ತಃನ ಕಿಂಚಿತ್ ವೇದನಾಂತರಮ್'

ಎಂಬುದಾಗಿರುತ್ತದೆ.

ಸತೀಚಾಹಂ ಪತಿರ್ಲಿಂಗಂ ಹೃದಿ ಯುಕ್ತಃ ಸ್ವಯಂ ಪ್ರಭುಃ।
ಪ್ರಾಪಂಚಿಕ ಸುಖಂನಾಸ್ತಿ ಶರಣಸ್ಥಲ ಮುತ್ತಮಮ್॥

## ಐಕ್ಯ ಸ್ಥಲ :

ಇದು 'ಶಿಖಿ ಕರ್ಪೂರ ನ್ಯಾಯ ಸ್ಥಲ', ಇಲ್ಲಿಯದು 'ಸಮರಸ ಭಕ್ತಿ', ಭೂತವಸ್ತುಗಳೆನಿಸಿದ ಶಿಖಿ ಮತ್ತು ಕರ್ಪೂರಗಳು ಸಂಯೋಗ ಮಾತ್ರದಿಂದ ಒಂದಾಗಿ ಉರಿದು ಕಡೆಗೆ ಎರಡೂ ಇಲ್ಲವಾಗುವಂತೆ ಶರಣನೆನಿಸಿದ ಸಾಧಕನು ಸಮರಸ ಭಕ್ತಿಯ ಪ್ರಭಾವದಿಂದ ಕಿಂಚಿಜ್ಞತ್ವ–ಕಿಂಚಿತ್ಕರ್ತೃತ್ವಾದಿ ಜೀವಗುಣವಳಿದು ಮುಕ್ತನಾಗಿ ಸರ್ವಜ್ಞತ್ವ–ಸರ್ವಕರ್ತೃತ್ವಗಳು ಮೂಡಿ, ನೀರಿನಲ್ಲಿ ನೀರು, ಬೆಂಕಿಯಲ್ಲಿ ಬೆಂಕಿ ಬೆರೆದಂತೆ, ನದೀ ಸಮುದ್ರ ನ್ಯಾಯದಿಂದ ಸಾಮರಸ್ಯ ಪಡೆಯುತ್ತಾನೆ.

ಪ್ರಾಣಲಿಂಗಾದಿ ಯೋಗೇನ ಸುಖಾತಿಶಯ ಮೇಯಿವಾನ್।
ಶರಣಾಖ್ಯಶ್ಶಿವೇ ನೈಕ್ಯಭಾವನಾ ದೈಕ್ಯವಾನ್ ಭವೇತ್॥

ಇದೇ ಸಮರಸ ಮುಕ್ತಿಯ ಸ್ವರೂಪ, 'ಲಿಂಗಾಂಗ ಸಾಮರಸ್ಯ.

## ಉಪಸಂಹಾರ

ಕರ್ಮ–ಜ್ಞಾನ–ಭಕ್ತಿ: ದ್ವೈತ ಮತ್ತು ಅದ್ವೈತಗಳಿಗೆ ಸಮನ್ವಯವನ್ನು ಹೇಳುವುದು ಮಾತ್ರವಲ್ಲದೆ ಈ ಸಿದ್ಧಾಂತದಲ್ಲಿ ಕರ್ಮ ಮತ್ತು ಜ್ಞಾನಗಳಿಗೆ ಸಮ–ಸಮುಚ್ಚಯವನ್ನು ಹೇಳಲಾಗಿದೆ. ವೇದಾಂತಿಗಳಲ್ಲಿ ಕೆಲವರು ಮೊದಲು ಕರ್ಮ ಅನಂತರ ಜ್ಞಾನ, ಜ್ಞಾನದಿಂದ ಮೋಕ್ಷ ಎಂದು ಹೇಳುತ್ತಾರೆ. ಗಿಡವು ಬೆಳೆದು ಕ್ರಮವಾಗಿ ಮೊದಲು ಹೂ ಬಿಟ್ಟು ತರುವಾಯ ಹಣ್ಣು ಬಿಡುವಂತೆ. ಇದಕ್ಕೆ **ಕ್ರಮ ಸಮುಚ್ಚಯ** ವೆಂದು ಹೆಸರು. ಆದರೆ, ವೀರಶೈವವು ಕರ್ಮ ಜ್ಞಾನಗಳೆರಡೂ ಮುಕ್ತಿಗೆ ಸಾಧನ ಎಂದು ಹೇಳುತ್ತದೆ. ಇದಕ್ಕಾಗಿ ವೀರಶೈವ ಆಚಾರ್ಯರು **'ಅಂಧ ಪಂಗು ನ್ಯಾಯ'*** ವನ್ನು ಉದಾಹರಿಸುತ್ತಾರೆ. ಗಗನದಲ್ಲಿ ಹಾರುವ ಹಕ್ಕಿಗೆ ಹೇಗೆ ಎರಡೂ ಪಕ್ಕಗಳು ಅವಶ್ಯಕವೋ ಅದರಂತೆ ಮೋಕ್ಷ ಕಾಮಿಗೆ ಕರ್ಮ ಜ್ಞಾನಗಳೆರಡೂ ಮುಖ್ಯ, ಕೇವಲ ಔಷಧ ಜ್ಞಾನದಿಂದಲೇ ರೋಗ ವಾಸಿಯಾಗುವುದಿಲ್ಲ. ಆ ಔಷಧ ಸೇವನ ರೂಪ ಕ್ರಿಯೆಯೂ ಅತ್ಯಾವಶ್ಯಕ. ಭಕ್ತಿಯಲ್ಲಿ ಕರ್ಮ–ಜ್ಞಾನಗಳೆರಡೂ ಹದವರಿತು ಬೆರೆದಿರುವುದರಿಂದ ವೀರಶೈವವು ಭಕ್ತಿಗೆ ಪ್ರಾಮುಖ್ಯತೆ ನೀಡಿದೆ.

## ಭಕ್ತಿಕಾಂಡದ ವೈಶಿಷ್ಟ್ಯ

ಧರ್ಮಾಧರ್ಮ ಕರ್ಮಗಳಿಗೆಲ್ಲ ನಾನೇ ಕರ್ತನು ಎಂಬ ಅಭಿಮಾನ ಕರ್ಮಕಾಂಡದ್ದು. ನಾನು ಕರ್ತನಲ್ಲ, ಕರ್ತೃತ್ವವೂ ನನಗಿಲ್ಲ. ನಾನು ಸಾಕ್ಷಿಯೂ ಅಲ್ಲ ಎಂಬ ಅಭಿಮಾನ ಜ್ಞಾನಕಾಂಡದ್ದು. ಭಕ್ತಿಕಾಂಡದಲ್ಲಿ ನಾನು ಕರ್ಮ ಕರ್ತೃವೂ ಅಲ್ಲ, ಸಾಕ್ಷಿಯೂ ಅಲ್ಲ, ಆದರೆ ಇದೆಲ್ಲಕ್ಕೂ ಶಿವನೇ ಕರ್ತೃ ಹಾಗೂ ಸಾಕ್ಷಿ ಎಂದು ದಾಸೋಹ ಭಾವದಿಂದಿರುವುದೇ ಭಕ್ತಿಕಾಂಡದ ವೈಶಿಷ್ಟ್ಯ.*೧ ಶರೀರ ಮೊದಲಾದ

---

* ಜ್ಞಾನವಿಲ್ಲದ ಕ್ರಿಯೆ ಅಂಧ (ಕುರುಡ) ಕರ್ಮವಿಲ್ಲದ ಜ್ಞಾನ ಪಂಗು (ಕುಂಟ). ಇವು ಒಂದೊಂದೇ ತಮ್ಮ ಗುರಿ ಮುಟ್ಟಲಾರವು. ಅದಕ್ಕಾಗಿ ಕುರುಡನ ಭುಜದ ಮೇಲೆ ತುಳಿತ ಕುಂಟನ ಸೂಚನೆಯಂತೆ ದಾರಿ ನಡೆದು ಇಬ್ಬರೂ ಗುರಿ ಮುಟ್ಟುವರು.

*೧ ಅಹಂಕರ್ತಾ ಸಮಸ್ತಸ್ಯ ಧರ್ಮಾಧರ್ಮಸ್ಯ ಕರ್ಮಣಃ ।
ಇತ್ಯನೇನಾಭಿಮಾನೇನ ಕರ್ಮಕಾಂಡೋಽಯ ಮುಚ್ಯತೇ॥ ೧೮
ನಾಹಂಕರ್ತಾಸ್ಯ ಕರ್ತೃತ್ವಂ ನೈವಸಾಕ್ಷೀ ಸ್ವಭಾವತಃ ।
ಇತ್ಯನೇವಾಭಿಮಾನೇನ ಜ್ಞಾನಕಾಂಡೋಽವಿಯ ಮುಚ್ಯತೇ ೧೯
ನಕರ್ತಾ ನಸಾಕ್ಷೀಚ ಶಿವಏವೇತಿ ಕರ್ಮಣೋಃ ।
ದ್ವಯಾಭಿಮಾನರಾಹಿತ್ಯಂ ಭಕ್ತಿಕಾಂಡೋಽಯ ಮುಚ್ಯತೇ. ೨೦
(ಅದು. ಸೂ. ೮)

ಪದಾರ್ಥಗಳನ್ನೆಲ್ಲಾ ಭಗವದರ್ಪಣ ಮಾಡಿ ಅವನೇ ನಾನೆಂಬ ಭಾವದಿಂದಿರುವುದೇ ದಾಸೋಹಂಭಾವ.*

## ಸ್ತ್ರೀ ಪುರುಷ ಸಂಸ್ಕಾರ

ಕೆಲವು ವೈದಿಕ ಪಂಥಗಳಲ್ಲಿ ಸ್ತ್ರೀಯರಿಗೂ ಹಾಗೂ ಶೂದ್ರರಿಗೆ ಉಪನಯನಾದಿ ಸಂಸ್ಕಾರ ನಿಷೇಧವಿದೆ. ಆದರೆ ವೀರಶೈವ ಧರ್ಮವು ಉಪನಿಷತ್ಕಾಲದಲ್ಲಿದ್ದ ಉದಾರವಾದ ವೈದಿಕ ಧರ್ಮವನ್ನು ಉಳಿಸಿಕೊಂಡು ಶಿವಕೃಪೆಗೆ ಪಾತ್ರರಾಗಿ 'ಶಕ್ತಿಪಾತ' ಲಕ್ಷಣಗಳಿಂದ ಕೂಡಿದ ಎಲ್ಲ ಮಾನವರಿಗೂ ಲಿಂಗಭೇದ ಜಾತಿ ವರ್ಣಭೇದಗಳ ಅಂತರವನ್ನು ಪರಿಗಣಿಸದೆ ಶಿವದೀಕ್ಷಾ ಸಂಸ್ಕಾರ ನೀಡುವ ವಿವೇಕವನ್ನು ತಳೆದಿದೆ.

## ಕಾಯಕ

ಕೆಲವರು ವೇದಾಂತಿಗಳು ಇಹವನ್ನು ತುಚ್ಛವೆಂದೂ, ದೇಹವನ್ನು ಹೇಯವೆಂದೂ ಭಾವಿಸಿ ಹೆಣ್ಣು-ಹೊನ್ನು ಮತ್ತು ಮಣ್ಣುಗಳನ್ನು ಹೀಗಳೆಯುವುದುಂಟು. ಆದರೆ ವೀರಶೈವ ಅನುಭಾವಿಗಳು ಜಗತ್ತು ಶಿವಸ್ವರೂಪವೆಂದು ಭಾವಿಸಿ ಪ್ರತಿಯೊಬ್ಬನೂ 'ಸತ್ಯ ಶುದ್ಧ ಕಾಯಕ' ವನ್ನು ಕೈಗೊಂಡು, 'ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು' ಎಂಬ ನೀತಿಯನ್ನು ಅನುಸರಿಸಿ ಸಾಮಾಜಿಕವಾಗಿಯೂ ಆತ್ಮೋದ್ಧಾರ ಲೋಕೋದ್ಧಾರ ಕಾಯಕಗಳಲ್ಲಿ ಭಾಗಿಯಾಗಬೇಕು ಎನ್ನುತ್ತಾರೆ ಆದರಿಂದ ಈ ಧರ್ಮ ಪರಮವೈದಿಕ. 'ತೇ ವೀರಶೈವಾ ಲೋಕಾನಾಂ ನಿತ್ಯಂ ಕ್ಷೇಮಾಭಿಲಾಷಿಣಃ' ಎಂದು ಶಾಸ್ತ್ರವು ಹೇಳಿದರೆ ಶಿವಶರಣರು ಸಕಲ ಜೀವಾಳಿಗೆ ಲೇಸನ್ನು ಬಯಸುವುದೇ ವೀರಶೈವ ಧರ್ಮದ ತಿರುಳೆಂದು ಬೋಧಿಸಿದ್ದಾರೆ. ಇದೇ ಸಮನ್ವಯ ಸಿದ್ಧಾಂತಸಾರ.

---

* ಶರೀರಾದಿ ಪದಾರ್ಥಾಂಶ್ಚ ದತ್ವಾದಾನಂ ಸಮರ್ಪಣಮ್
ಸಮರ್ಪ್ಯ ಸೋಽಹಮಸ್ಮೀತಿ ದಾಸೋಽಹಂಭಾವ ಉಚ್ಯತೇ ೬೦
(ಅನು. ಸೂ. ೭)

———

ಕೆರೆಹಳ್ಳ ಬಾವಿಗಳು ಮೈದೆಗೆದರೆ ಗುಳ್ಳೆ ಗೊರಚೆ ಚಿಪ್ಪು ಕಾಣಬಹುದು
ವಾರಿಧಿ ಮೈದೆಗೆದರೆ ರತ್ನಂಗಳ ಕಾಣಬಹುದು.
ಕೂಡಲ ಸಂಗನ ಶರಣರು ಮನದೆರೆದು ಮಾತನಾಡಿದರೆ
ಲಿಂಗವ ಕಾಣಬಹುದು.

—ಬಸವಣ್ಣನವರು

# ಮೂವತ್ತಾರು ತತ್ತ್ವಗಳ ವಿವೇಚನೆ

ವಿದ್ವಾನ್, **ಟಿ. ಜಿ. ಸಿದ್ಧಪ್ಪಾರಾಧ್ಯರು,** ಎಂ. ಎ.,
ಮಾನಸ ಗಂಗೋತ್ರಿ, ಮೈಸೂರು.

"ಲೋಕವತ್ತು ಲೀಲಾಕೈವಲ್ಯಂ" ಎಂಬ ಬ್ರಹ್ಮಸೂತ್ರವುಪರಮಾತ್ಮನಲ್ಲಿ ಲೀಲಾವಸ್ಥೆಯಂತೆ ಕೇವಲಾವಸ್ಥೆಯೂ ಉಂಟೆಂದು ತಿಳಿಸಿದೆ. "ಯದಾತಮಃ ತರ್ನ ದಿವಾನರಾತ್ರಿಃ ನ ಸತ್ ನ ಚ ಅಸತ್ ಶಿವ ಏವ ಕೇವಲಃ" ಎಂಬ ಶ್ರುತಿಯು ಪ್ರಳಯ ಕಾಲದಲ್ಲಿ ಪರಮಾತ್ಮನ ಏಕಾಂತಸ್ಥಿತಿಯನ್ನು ಸ್ವಸ್ಥಾವಸ್ಥೆಯನ್ನು ತಿಳಿಸುತ್ತದೆ. ಈ ಸಮಯದಲ್ಲಿ ಅವನ ಶಕ್ತಿ ಅವನ ಚಿತ್ಸ್ವರೂಪದಲ್ಲೇ ಅಡಗಿದ್ದು ಸೃಷ್ಟಿಕಾಲದಲ್ಲಿ ಅವನ ವಿನೋದಕ್ಕಾಗಿ ಮಾತ್ರವೇ ಅವನ ಇಚ್ಛೆಯಂತೆ ಹೊರಗೆ ಬಂದು ಕಾರ್ಯವು ಮುಗಿದೊಡನೆ ಅವನಲ್ಲಿಯೇ ಸೇರುವುದು. ಜಗತ್ತಿನ ಸೃಷ್ಟಿಯಾಗುವಾಗ ಶಕ್ತಿ ಪರಮಾತ್ಮನ ಸಂತೋಷದಂತೆ ಹೊರಗೆ ವ್ಯಾಪಿಸಿ ಜಗನ್ಮೋಹಕವಾದ್ದರಿಂದ ಮಾಯೆ ಎನಿಸುವುದು: ಸೃಷ್ಟಿಗೆ ಮೊದಲು ಆವಶ್ಯಕತೆ ಇಲ್ಲದ್ದರಿಂದ ಅದು ಅವನಲ್ಲಿಯೇ ಅವನ ಪ್ರಾಣರೂಪದಿಂದ ಅಡಗಿರುವುದು. ಆಗ ಶಕ್ತಿಗೆ ಚಿತ್ ಶಕ್ತಿ ಎಂದೂ, ಸೃಷ್ಟಿಯ ಅನಂತರ ಜಗದ್ವ್ಯಾಪಕವಾದ್ದರಿಂದ 'ಮಾಯೆ' ಎಂದೂ ಹೆಸರಿದೆ. ಮಾಯಾ ವಿಲಾಸವೇ ಸೃಷ್ಟಿಲೀಲೆ ಎಂದೂ ಪ್ರಾಣರೂಪದಿಂದ ಚಿತ್ಸ್ವರೂಪದಲ್ಲಿ ಅಡಗಿರುವುದೇ ಅವನ ಆತ್ಮಾರಾಮ ಸ್ಥಿತಿ ಅಥವಾ ಕೇವಲಾವಸ್ಥೆ ಎಂದೂ ಪ್ರಸಿದ್ಧಿ ಇದೆ. ಹೀಗೆ ಲೀಲೆಯಲ್ಲಾಗಲೀ ಕೈವಲ್ಯಸ್ಥಿತಿಯಲ್ಲಾಗಲೀ ಶಕ್ತಿ ಪರಮಾತ್ಮನನ್ನು ಬಿಟ್ಟು ಬೇರೆಯಾಗಿ ಇರಲಾರದು. ಅವನಲ್ಲಿ ಸಚ್ಚಿದಾನಂದ ರೂಪದಿಂದ ನೆಲೆಸಿರುವ ಚಿತ್‌ಶಕ್ತಿಯೇ ಹೊರಗೆ ಬಂದು ಸ್ವತಂತ್ರ ದ್ರವ್ಯವಾಗಿ ತನ್ನ ಸತ್ವರಜಸ್ತಮೋ ಗುಣಗಳ ಪ್ರಭಾವದಿಂದ ಜಗತ್ತನ್ನಾವರಿಸಿರುವುದು. ಆಗಲೂ ಸಹ ಪರಮಾತ್ಮನು ಸದ್ರೂಪದಿಂದ ಭೋಜ್ಯವಸ್ತುಗಳಲ್ಲಿಯೂ, ಸಚ್ಚಿದ್ರೂಪದಿಂದ ಜೀವವರ್ಗದಲ್ಲಿಯೂ ತನ್ನ ಶಕ್ತಿಯೊಡನೆ ಇದ್ದೇ ಇರುವನು. ಪರಮಾತ್ಮನಿಲ್ಲದೆ ಶಕ್ತಿಯೊಂದೇ ಸ್ವತಂತ್ರಿಸಿ ಏನೂ ಕೆಲಸಮಾಡಲಾರದು. ಈ ಶಕ್ತಿಯಿಲ್ಲದೆ ಪರಮಾತ್ಮನೊಬ್ಬನೇ ಯಾವ ಕಾರ್ಯದಲ್ಲಿಯೂ ಪ್ರವರ್ತಿಸಲಾರನು. ಹೀಗೆ ಶಕ್ತಿವಿಶಿಷ್ಟ ಪರಮಾತ್ಮನು ಲೀಲಾವಸ್ಥೆಯಲ್ಲಿ ಜಗದ್ವ್ಯಾಪಾರಗಳನ್ನು ನಿರ್ವಹಿಸುತ್ತ ತನ್ನ ಕೈವಲ್ಯಾವಸ್ಥೆಯಲ್ಲಿ ನಿಜಾನಂದವನ್ನು ಅನುಭವಿಸುತ್ತಿರುವನು. ಆನಂದಾನುಭವವು ಅವನಿಗೆ ಸಹಜಸ್ಥಿತಿ, ಜಗದ್ವ್ಯಾಪಾರಗಳ ನಿರ್ವಾಹವು ಲೀಲಾ ವಿನೋದ. ಹೀಗೆ ಇವೆರಡೂ ಅವನಲ್ಲಿ ಸಹಜವಾಗಿ ಹೊಂದಿಕೊಂಡಿವೆ.

ಇವೆರಡನ್ನೂ ಅವನು ಹೇಗೆ ನಿರ್ವಹಿಸುತ್ತಿರುವನೆಂಬುದನ್ನು ಪ್ರಸ್ಥಾನ ತ್ರಯಂಗಳು ಹೃದಯಂಗಮವಾಗಿ ಚಿತ್ರಿಸಿವೆ. ಪ್ರಳಯ ಕಾಲದಲ್ಲಿ ಅವನಿಗೆ ಏಕಾಕಿಯಾಗಿದ್ದುದರಿಂದ ಒಮ್ಮೆ ಬೇಸರ ಉಂಟಾಯಿತು. ಸರ್ವೈಶ್ವರ್ಯ ಸಂಪನ್ನನಾದ ಮಹಾರಾಜನಂತೆ ಪೂರ್ಣಕಾಮನೂ ಸ್ವತಂತ್ರನೂ ಆದ ಪರಮಾತ್ಮನಿಗೆ ಏಕಾಂತವಾದ ಬೇಸರವನ್ನು ಹೋಗಲಾಡಿಸಲು ತನ್ನ ಸ್ವಾತಂತ್ರ್ಯದಿಂದಲೇ ವಿನೋದದ ಪ್ರವೃತ್ತಿ ಹುಟ್ಟಿತು. ಆಗ ಅವನಿಗೆ ಪ್ರಪಂಚವನ್ನು ಸೃಷ್ಟಿಸುವ ಇಚ್ಛೆಯುಂಟಾಯಿತು. ಮನಸ್ಸಿನಲ್ಲಿ ಸಂಕಲ್ಪ ಮಾಡಿದೊಡನೆಯೇ ಅವನ ಇಚ್ಛಾಶಕ್ತಿ ತನ್ನ ಸಹಚಾರಿಣಿಯರಾದ ಜ್ಞಾನಕ್ರಿಯಾಶಕ್ತಿಗಳೊಡನೆ ಮುಂದೆ ಬಂದಳು. ಅವನ ಬೇಸರವನ್ನು ಹೋಗಲಾಡಿಸಲು ಅವನ ಶಕ್ತಿಯಲ್ಲದೆ ಬೇರೆ ಯಾರು ತಾನೆ ಮುಂದೆ ಬಂದಾರು? ಈ ಶಕ್ತಿಯಲ್ಲಿಯೇ ವಿಶ್ವವು ಸೂಕ್ಷ್ಮವಾಗಿ ಅಡಗಿದ್ದುದರಿಂದ ಪರಮಾತ್ಮನು ಈ ಶಕ್ತಿಯ ಸಂಪರ್ಕದಿಂದಲೇ ವಿನೋದ ಭೂಮಿಕೆಯನ್ನು ಪಡೆದು ತನ್ನ ಲೀಲೆಯನ್ನಾರಂಭಿಸಿದನು.

ವಾಯು ಸಂಪರ್ಕವೇ ಇಲ್ಲದೆ ನಿಶ್ಚಲವೂ ಗಂಭೀರವೂ ಆಗಿರುವ ಸಮುದ್ರದಲ್ಲಿ ಕೆಲವು ವೇಳೆ ವಾಯು ಸಂಪರ್ಕದಿಂದ ಮೊದಲಬಾರಿಗೆ ಕೊಂಚ ಚಲನೆಯುಂಟಾಗುವುದು ಸಹಜ. ಹೀಗೆ ಪರಮಾತ್ಮನಿಗೆ ವಿನೋದಿಸುವ ಇಚ್ಛೆ ಒಮ್ಮೆ ಉಂಟಾದ್ದರಿಂದ ಕೊಂಚ ವಿಕಾರವುಂಟಾಯಿತು. ಇಂತಹ ವಿಕಾರವೇ ಶಕ್ತಿ ಕ್ಷೋಭೆ ಎನಿಸಿತು. ಶಕ್ತಿಯಲ್ಲಿ ಸ್ವಸ್ಥಾವಸ್ಥೆ, ಕ್ಷುಭಿತಾವಸ್ಥೆ ಎಂದು ಎರಡು ಅವಸ್ಥೆಗಳು ಸಹಜವಾಗಿವೆ. ಪರಮಾತ್ಮನು ತನ್ನ ಆನಂದದಲ್ಲಿ ಮಗ್ನನಾಗಿದ್ದಾಗ ಅವನ ಶಕ್ತಿಯೂ ಸ್ವಸ್ಥಾವಸ್ಥೆಯಲ್ಲಿ ಸಚ್ಚಿದಾನಂದ ರೂಪದಲ್ಲಿಯೇ ಇರುವುದು. ಅವನಿಗೆ ವಿನೋದಿಸುವ ಇಚ್ಛೆಯುಂಟಾದಾಗ ಆ ಶಕ್ತಿ ಕ್ಷುಭಿತಾವಸ್ಥೆಯಲ್ಲಿ ಸತ್ವರಜಸ್ತಮೋಗುಣಾತ್ಮಕವಾಗಿ ಮಾಯೆಯೆನಿಸಿರುವುದು. ಚಂದ್ರನಲ್ಲಿ ಚಂದ್ರಿಕೆ ಹೇಗೆ ಸ್ಥಿರವಾಗಿ ನೆಲೆಸಿರುವುದೋ ಹಾಗೆ ಪ್ರಕಾಶರೂಪನಾದ ಪರಮಾತ್ಮನಲ್ಲಿ ಸಚ್ಚಿದಾನಂದಗಳ ವಿಮರ್ಶರೂಪವೂ ಅನುಭವರೂಪವೂ ಆದ ಚಿತ್‌ಶಕ್ತಿ ಎಂದೆಂದೂ ಅಗಲದಂತೆ ಅವನ ಸ್ವಭಾವವಾಗಿ ಪ್ರಾಣರೂಪದಿಂದ ನೆಲೆಸಿರುವುದು. ಈ ಪ್ರಾಣಶಕ್ತಿಯ ಕಿಂಚಿದಂಶವು ಹೊರಗೆ ಬಂದು ಜ್ಞಾನ ಕ್ರಿಯಾಶಕ್ತಿಗಳ ಸಹಕಾರದಿಂದ ಅವನಿಗೆ ವಿನೋದ ಭೂಮಿಕೆಯನ್ನು ರಕ್ಷಿಸಲು ಮೂವತ್ತಾರು ತತ್ತ್ವಗಳಾಗಿ ಪರಿಣಮಿಸಿ ಜಗದ್ರೂಪವನ್ನು ತಾಳಿರುವುದು. ಈ ಶಕ್ತಿಯನ್ನೇ ಭಗವದ್ಗೀತೆಯು ಪರಮಾತ್ಮನ ತೇಜಸ್ಸೆಂದು ತಿಳಿಸಿದೆ. ಅಲ್ಲಿಗೆ ಶಕ್ತಿ ತೇಜಸ್ಸು ಇವೆರಡೂ ಪರಮಾತ್ಮನ ದಿವ್ಯ ಪ್ರಕಾಶವನ್ನು ತಿಳಿಸುವ ಪದಗಳೆಂದು ಹೇಳಿದ ಹಾಗಾಯಿತು. 'ವಿಷ್ಟಭ್ಯಾಹ ಮಿದಂ ಕೃತ್ಸ್ನಂ ಏಕಾಂಶೇನ ಸ್ಥಿತೋ ಜಗತ್' ಎಂದು ಗೀತೆಯಲ್ಲಿ ಪರಮಾತ್ಮನು ಈ ಸಮಸ್ತ ಜಗತ್ತನ್ನೂ ತನ್ನ ಶಕ್ತಿಯ ಏಕಾಂಶದಿಂದ ವ್ಯಾಪಿಸಿರುವನೆಂದು ತಾನೇ ತಿಳಿಸಿದ್ದಾನೆ: ಅಲ್ಲಿಗೆ

ಮೂವತ್ತಾರು ತತ್ತ್ವಗಳೂ ಶಕ್ತಿವಿಶಿಷ್ಟ ಪರಮಾತ್ಮನ ಪರಿಣಾಮವೆಂದು ಹೇಳಿದ ಹಾಗಾಯಿತು. ಈ ಮೂವತ್ತಾರು ತತ್ತ್ವಗಳು ಹೀಗಿವೆ. "ಶಿವ, ಶಕ್ತಿ, ಸದಾ ಶಿವ, ಈಶ್ವರ, ಶುದ್ಧವಿದ್ಯೆ, ಮಾಯಾ, ಕಲಾ, ವಿದ್ಯಾ, ರಾಗ, ಕಾಲ, ನಿಯತಿ, ಪುರುಷ, ಪ್ರಕೃತಿ, ಮಹತ್ (ಬುದ್ಧಿ), ಅಹಂಕಾರ, ಮನಸ್ಸು, ಶ್ರೋತ್ರ, ತ್ವಕ್, ಚಕ್ಷು. ಜಿಹ್ವೆ, ಘ್ರಾಣ, ವಾಕ್, ಪಾಣಿ, ಪಾದ, ಪಾಯು, ಉಪಸ್ಥ, ಶಬ್ದ, ಸ್ಪರ್ಶ. ರೂಪ, ರಸ, ಗಂಧ, ಆಕಾಶ, ವಾಯು, ಅಗ್ನಿ, ಜಲ, ಭೂಮಿ–ಹೀಗೆ ಒಬ್ಬ ಪರ ಮಾತ್ಮನೇ ತನ್ನ ಲೀಲಾ ವಿನೋದಕ್ಕಾಗಿ ಶಿವಾದಿ ಭೂಮ್ಯಂತವಾದ ಮೂವತ್ತಾರು ತ ತ್ತ್ವ ಗ ಳಾ ಗಿ ಪರಿಣಮಿಸಿರುವನು. ಸೃಷ್ಟಿ ಕಾಲದಲ್ಲಿ ಪ್ರವೃತ್ತಿಕ್ರಮದಿಂದ ಪರಮಾತ್ಮ ಚೈತನ್ಯವು ಶಿವನಿಂದ ಆರಂಭಿಸಿ ಕ್ರಮಕ್ರಮವಾಗಿ ಸಂಕೋಚಗೊಂಡು ಭೂಮಿಯಾಗಿ ಪರಿಣಮಿಸಿರುವುದು, ಪ್ರಳಯಕಾಲದಲ್ಲಿ ನಿವೃತ್ತಿಕ್ರಮದಿಂದ ಒಂದೊಂದು ತತ್ತ್ವವೂ ಭೂಮಿಯಿಂದ ಆರಂಭಿಸಿ ಹಿಂದೆ ಹಿಂದಕ್ಕೆ ಸರಿದು ಎಲ್ಲವೂ ಕೊನೆಗೆ ಶಕ್ತಿಯಲ್ಲಿ ಸೇರಿ, ಆ ಶಕ್ತಿ ಶಿವನಲ್ಲಡಗಿ, ಆ ಸಾಕಾರ ಶಿವನೂ ಸಹ ತನ್ನ ಮೂಲ ವಸ್ತುವೆನಿಸಿದ ನಿರಾಕಾರ ಪರಮಾತ್ಮದಲ್ಲಿ ಲಯವಾಗಿ, ಆ ನಿರಾಕಾರ ವಸ್ತು ಒಂದೇ "ಶಿವ ಏವ ಕೇವಲಃ" ಎಂಬ ಶೃತಿಯಂತೆ, ಸಾಕ್ಷಿ ಚೈತನ್ಯವಾಗಿ ಶೋಭಿಸು ತ್ತಿರುವುದು.

ಈ ಮೂವತ್ತಾರು ತತ್ತ್ವಗಳೂ ಶಕ್ತಿವಿಶಿಷ್ಟ ಪರಮಾತ್ಮನ ಪರಿಣಾಮ ಗಳಾದುದರಿಂದ ಕಾರ್ಯಕೋಟಿಯಲ್ಲಿ ಪ್ರವೇಶಿಸಿವೆ. ಪರಮಾತ್ಮನು ಇವೆಲ್ಲಕ್ಕೂ ಮೂಲಾಧಾರವೆನಿಸಿ ಆದಿಕಾರಣನಾಗಿರುವನು. ಅವನಲ್ಲಿ ಸಚ್ಚಿದಾನಂದ ಸ್ವರೂಪ ವನ್ನು ಬಿಟ್ಟು ಬೇರೆ ಯಾವುದೂ ಇಲ್ಲದ್ದರಿಂದ ಅವನು ನಿರ್ವಿಕಲ್ಪನೂ ನಿರಾಕಾರನೂ ಪ್ರಪಂಚಾತೀತನೂ ಆಗಿರುವನು. ಅವನು ಪ್ರಪಂಚಾತೀತನಾದ್ದರಿಂದ ಅವನಿಗೆ ಮೂವತ್ತಾರು ತತ್ತ್ವಗಳಲ್ಲಿ ಗಣನೆಯಿಲ್ಲ. ಈ ತತ್ತ್ವಗಳೆಲ್ಲ ಅವನಿಂದಲೇ ಅವನಿಗಾಗಿಯೇ ಹೊರಬಂದು, ಕೊನೆಗೆ ಅವನಲ್ಲಿಯೇ ಸೇರುವುವು ಇವೆಲ್ಲಕ್ಕೂ ಅವನೇ ಆಶ್ರಯನಾಗಿರುವುದರಿಂದ ಅವನು ಇವೆಲ್ಲದರೊಳಗೆ ಇದ್ದರೂ, ನೈಜಸ್ಥಿತಿ ಯಲ್ಲಿ ಇವೆಲ್ಲಕ್ಕೂ ಅತೀತನೂ ಆಗಿರುವನು. ಇವನು ಷಟ್‌ತ್ರಿಂಶ ತತ್ತ್ವಮಯನೂ ತತ್ತ್ವಾತೀತನೂ ಆಗಿರುವನು. ಇವನು ತನ್ನ ಶಕ್ತಿಯ ಅತ್ಯಲ್ಪಾಂಶದಿಂದ ಮೂವ ತ್ತಾರು ತತ್ತ್ವಗಳಾಗಿ ಪರಿಣಮಿಸಿದ್ದರೂ, ಅಧಿಕಾಂಶದಿಂದ ಲಿಂಗ, ಸ್ಥಲ, ಬ್ರಹ್ಮ ವೆನಿಸಿ, ಸ್ವಾನಂದವನ್ನು ಅನುಭವಿಸಿ ಮುಮುಕ್ಷುಗಳಿಗೆ ಚಿಂತಾಮಣಿಯಂತೆ ಆದರ್ಶ ವಾದ ಆಶ್ರಯಸ್ಥಾನನಾಗಿರುವನು. "ಪಾದೋಸ್ಯ ವಿಶ್ವಾ ಭೂತಾನಿ। ತ್ರಿಪಾದಸ್ಯಾ ಮೃತಂದಿವಿ" ಎಂದು ಪುರುಷ ಸೂಕ್ತವು ಅವನ ಮಹಿಮೆಯನ್ನು ತಿಳಿಸುತ್ತದೆ. ಅವನ ಅತ್ಯಲ್ಪಾಂಶದಲ್ಲಿ ಸಕಲ ಬ್ರಹ್ಮಾಂಡಗಳೂ ಕ್ರೋಢೀಕೃತವಾಗಿವೆ. ಉಳಿದ ಹೆಚ್ಚಿನ ಭಾಗವೆಲ್ಲವೂ ತನ್ನ ದಿವ್ಯಾಮೂರ್ತ ಸ್ಥಿತಿಯಲ್ಲಿ ಸ್ವಪ್ರಕಾಶವೇ ಆಗಿದೆ.

ಆವನ ಪರಿಣಾಮವೆನಿಸಿದ ತ್ರಿಮೂರ್ತಿಗಳೂ ಸಹ ಹೃದಯಾಕಾಶದಲ್ಲಿ ಪರಮಾತ್ಮನನ್ನು ದಿವ್ಯ ಲಿಂಗವೆಂದು ಭಾವಿಸಿ, ಧ್ಯಾನಿಸುತ್ತಲೇ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಲಿರುವರು. ಹೀಗೆ ಪರಮಾತ್ಮನು ತನ್ನನ್ನು ಅನೇಕ ಬಗೆಯ ಪ್ರಪಂಚದ ಆಕಾರದಲ್ಲಿ ಬದಲಾಯಿಸಿಕೊಂಡಿದ್ದರೂ ಈ ಸೃಷ್ಟಿಯಲ್ಲಿಯೇ ತನ್ನನ್ನು ಪೂರ್ತಿಯಾಗಿ ಮುಗಿಸಿಕೊಂಡಿಲ್ಲ. ಅವನ ಹೆಚ್ಚಿನ ಭಾಗವು ದಿವ್ಯ ಸ್ಥಿತಿಯಲ್ಲಿಯೇ ಉಳಿದಿದೆ. ಒಂದು ವಿಧದಲ್ಲಿ ಅವನು ಪ್ರಪಂಚಕ್ಕೆ ಮೂಲಕಾರಣನಾಗಿ ಅದರಲ್ಲಿ ಅಂತರ್ಗತನಾಗಿದ್ದಾನೆ. ಮತ್ತೊಂದು ವಿಧದಲ್ಲಿ ಅವನ ಒಂದಂಶವೇ ಷಟ್ತ್ರಿಂಶ ತತ್ತ್ವಾತ್ಮಕವಾದ ಪ್ರಪಂಚವಾಗಿ ಪರಿಣಮಿಸಿದೆ. ಹೀಗೆ ಪರಮಾತ್ಮನು ಪೂರ್ಣಾಂಶದಲ್ಲಿ ಸ್ವಸ್ಥಾವಸ್ಥೆಯಲ್ಲಿ ತನ್ನ ಆನಂದವನ್ನು ಅನುಭವಿಸುತ್ತಲಿದ್ದು, ತನ್ನ ಅಲ್ಪಾಂಶದಿಂದ ಅನಂತ ವಿಚಿತ್ರಾಕಾರನಾಗಿ ಶೋಭಿಸುತ್ತಿರುವನು. ಇದರಿಂದ ಜಗತ್ತು ಶಿವಾತ್ಮಕವೆಂದು ಸ್ಪಷ್ಟವಾಯಿತು. ಅವನು ತನ್ನ ವಿನೋದಕ್ಕಾಗಿ ಅನಂತಾಕಾರನಾಗಿ ಪರಿಣಮಿಸಿದ್ದರೂ ಅಧಿಕಾಂಶದಿಂದ ತನ್ನ ಶಕ್ತಿಯೊಡಗೂಡಿ ಸ್ವಯಂಭು ಸ್ಥಿತಿಯಲ್ಲಿಯೇ ಇರುವನು. ಈ ಸ್ಥಿತಿಯೇ ಅವನ ಲಿಂಗಾವಸ್ಥೆ. ಇದನ್ನೇ ವಚನಕಾರರು **"ಲೀಲೆಯಾದೊಡೆ ಉಮಾಪತಿ, ಲೀಲೆ ತಪ್ಪಿದೊಡೆ ಸ್ವಯಂಭು"** ಎಂದು ಮನಮುಟ್ಟುವಂತೆ ತಿಳಿಸಿರುವರು. ಇಂತಹ ಮಹಾದೇವನ ಲೀಲಾ ವಿನೋದ ಕ್ಷೇತ್ರವೇ ಈ ಪ್ರಪಂಚ. ಹೀಗೆ ಸರ್ವಾಧಾರನೂ ಸರ್ವಕಾರಣನೂ ಸರ್ವಾಶ್ರಯನೂ ಆದ ಪರಮಾತ್ಮನು ಭಕ್ತಾನುಗ್ರಹಕ್ಕಾಗಿ **ಮೂರ್ತ, ಅಮೂರ್ತ,** ಅಂದರೆ **ಸಾಕಾರ, ನಿರಾಕಾರ**–ಎರಡು ಸ್ಥಿತಿಗಳಲ್ಲಿಯೂ ಶೋಭಿಸುತ್ತಿರುವನು. ಸಾಕಾರ ಸ್ಥಿತಿಯಲ್ಲಿ ದಿವ್ಯ **ಅಪ್ರಾಕೃತ** ಮತ್ತು **ಪ್ರಾಕೃತಸ್ಥಿತಿ** ಎಂದು ಎರಡು ಬಗೆಗಳಿವೆ. ಅವನ ದಿವ್ಯ ಅಪ್ರಾಕೃತ ಸ್ಥಿತಿಯನ್ನು ಮೂವತ್ತಾರು ತತ್ತ್ವಗಳೊಳಗೆ ಮೊದಲನೆಯ ಐದು ತತ್ತ್ವಗಳಲ್ಲಿ ಕಾಣಬಹುದು. **ಶಿವ, ಶಕ್ತಿ, ಸದಾಶಿವ, ಈಶ್ವರ, ಶುದ್ಧವಿದ್ಯೆ**–ಇವು ಐದೂ ಪರಮಾತ್ಮನ ದಿವ್ಯಾವಸ್ಥಾ ವಿಶೇಷಗಳು. ಅವನಿಗೂ ಈ ಐದು ಸ್ಥಿತಿಗಳಿಗೂ ತಾದಾತ್ಮ್ಯಭಾವವಿರುವುದು. ಈ ಐದು ಶುದ್ಧ ಅವಸ್ಥೆಗಳಿಂದ ಅವನೇ ಜಗತ್ತಿನ ಐದು ವ್ಯಾಪಾರಗಳೆನಿಸಿದ. **ಅನುಗ್ರಹ, ತಿರೋಧಾನ, ಪ್ರಳಯ, ಸ್ಥಿತಿ, ಸೃಷ್ಟಿ** ಗಳನ್ನು ನಡೆಸುತ್ತಲಿರುವನು. ಅಮೂರ್ತನಾದರೂ ಪರಮಾತ್ಮನು ಜಗದ್ವ್ಯಾಪಾರಗಳನ್ನು ನಿರ್ವಹಿಸಲು ಹೀಗೆ ದಿವ್ಯ ಮೂರ್ತನಾಗುವನು. ಇಂತಹ ಜಗದ್ರಚನಾ ನೈಪುಣ್ಯವು ಅದ್ವೈತ ದರ್ಶನದ ಮಾಯಾ ಶಬಲಿತನಾದ ಈಶ್ವರನಲ್ಲಿ ಹೇಗೆ ಬಂದೀತು? ಅವನು ಕಲ್ಪಿತನಾದ್ದರಿಂದ ಉಪಾಸಕರನ್ನು ಹೇಗೆ ಅನುಗ್ರಹಿಸಿಯಾನು? ಇದರಿಂದಲೇ ಜಗತ್ತನ್ನು ಮಿಥ್ಯೆ ಎಂದು ಅಲ್ಲಿ ಭಾವಿಸಿದ್ದು ಯುಕ್ತವೆನಿಸಿದೆ. ಈಶ್ವರನು ಸತ್ಯವಾಗಿದ್ದರೆ ಅವನ ಕೃತಿಯು ಸತ್ಯವೂ ನಿತ್ಯವತ್ತರವೂ ಆದೀತು. ಮೂಲವೇ ಕಲ್ಪಿತವಾದರೆ ಅದರ ಪ್ರತಿಬಿಂಬವೂ ಹಾಗೆಯೇ. ಇರಬೇಕಾದೀತು. ಆದರೆ ವಾಸ್ತವವಾಗಿ ಪರಿಶೀಲಿಸಿದರೆ ಮೂಲ

ವಸ್ತುವೇ ಸತ್ಯವಾಗಿರುವುದರಿಂದ ಅದರ ಪರಿಣಾಮವಾಗಿರುವ ಮೂವತ್ತಾರು ತತ್ತ್ವಗಳೂ ಸತ್ಯವೇ ಆಗಿರುತ್ತವೆ.

ಇಂತಹ ಮಹಾಮಹಿಮನಾದ ನಿರಾಕಾರ ಪರಮಾತ್ಮನಿಗೆ ಪೂಜ್ಯ–ಪೂಜಕ ಲೀಲೆಯಲ್ಲಿ ಸೃಷ್ಟಿಗೆ ಉನ್ಮುಖನಾದಾಗ ಶಕ್ತಿಯಲ್ಲಿ ಕೊಂಚ ಚಲನವುಂಟಾಗಿ ಆ ಮೂಲಕ ಮೂವತ್ತಾರು ತತ್ತ್ವಗಳಾಗಿ ಪರಿಣಮಿಸುವ ಅವಕಾಶವುಂಟಾಯಿತು. ಈ ಬಗೆಯ ಪರಿಣಾಮವನ್ನು ಶಿವಾಗಮವು ಹೀಗೆ ತಿಳಿಸಿದೆ:

ಅನಾದಿ ನಿಧನಾತ್ ಶಾಂತಾತ್ ಶಿವಾತ್ ಪರಮಕಾರಣಾತ್
ಇಚ್ಛಾ ಶಕ್ತಿರ್ವಿನಿಷ್ಕ್ರಾಂತಾ ತತೋಜ್ಞಾನಂ ತತಃಕ್ರಿಯಾ॥
ತತೋತ್ಪನ್ನಾನಿ ಭೂತಾನಿ ಭುವನಾನಿ ಚತುರ್ದಶ॥

ಆದಿ ಅಂತ್ಯಗಳಿಲ್ಲದೆ ಸನಾತನನೂ ಪರಮಕಾರಣನೂ ಆದ ಪರಮಾತ್ಮನಿಂದ ಇಚ್ಛಾ ಶಕ್ತಿಯು ಹೊರಹೊಮ್ಮಿ, ಅದರಿಂದ ಜ್ಞಾನಕ್ರಿಯಾ ಶಕ್ತಿಗಳು ಹೊರಟವು. ಅನಂತರ ಮೂವತ್ತಾರು ತತ್ತ್ವಗಳು ಹೊರಹೊಮ್ಮಿದವು. ಇಲ್ಲಿ 'ಶಾಂತಾತ್ ಪರಮಕಾರಣಾತ್' ಎಂಬ ವಿಶೇಷಣಗಳಿಂದ ಶಿವಪದವು ಮೂಲ ಕಾರಣನಾದ ನಿರಾಕಾರ ಪರಮಾತ್ಮನಿಗೆ ಅನ್ವಯಿಸುವುದು. ಅಲ್ಲಿಂದ ಮುಂದೆ ಹೇಳಿರುವ ಇಚ್ಛಾದಿ ಶಕ್ತಿಗಳು ಚಿತ್ ಶಕ್ತಿಯ ಪರಿಣಾಮಗಳೆನಿಸಿವೆ. ಪರಮಾತ್ಮನಂತೆ ಪರಾಶಕ್ತಿಯು ಮೂವತ್ತಾರು ತತ್ತ್ವಗಳಿಗೆ ಮೂಲ ಕಾರಣವಾಗಿದ್ದರೂ, ಅವನು ಸ್ವತಂತ್ರನಾದ್ದರಿಂದ ಅವನೊಬ್ಬನೇ ಎಲ್ಲಕ್ಕೂ ಮೂಲವಸ್ತುವೆನಿಸಿರುವನು ಶಕ್ತಿ ಅವನಿಗೆ ಅಧೀನವಾಗಿ ಪ್ರವರ್ತಿಸುವುದರಿಂದ ಸ್ವತಂತ್ರ ತತ್ತ್ವವೆನಿಸಲಾರದು. ಆದ್ದರಿಂದ ಮೂವತ್ತಾರು ತತ್ತ್ವಗಳಿಗೂ ಮೂಲಭೂತವಾದ ವಸ್ತುವು ಶಕ್ತಿವಿಶಿಷ್ಟನೂ ಅದ್ವೈತನೂ ಆದ ನಿರಾಕಾರ ಪರಮಾತ್ಮನೊಬ್ಬನೇ ಆಗಿರುವನು. ಇವನಿಗೆ ಲೋಕಕಲ್ಯಾಣ ದೃಷ್ಟಿಯಿಂದ ವಿಸ್ತಾರವಾಗುವ ಇಚ್ಛೆಯುಳ್ಳದ್ದು ಸಹಜವೇ ಆಗಿದೆ. ಇಂತಹ ಇಚ್ಛೆಗೆ ಮೊದಲು ವಿವೇಚನೆಯೂ ಆಮೇಲೆ ರಚನೆಯೂ ಅವಶ್ಯಕವೆನಿಸಿದ್ದರಿಂದ ಈ ಕ್ರಮದಲ್ಲಿ ಜಗತ್ತಿನ ಸೃಷ್ಟಿಯಾದದ್ದೂ ವಿಹಿತವೇ ಆಗಿದೆ. ಈ ಬಗೆಯ ಸೃಷ್ಟಿಯೂ ಸಹ ಜೀವನೆನಿಸಿದ ಮಾನವನ ಕಲ್ಯಾಣಕ್ಕಲ್ಲದೆ ಬೇರೆಯಲ್ಲವೆಂಬ ಅಂಶ ಮೂವತ್ತಾರು ತತ್ತ್ವಗಳ ವಿವೇಚನೆಯಿಂದ ವ್ಯಕ್ತಪಡುವುದು,

## ಶಿವತತ್ತ್ವದ ವಿವೇಚನೆ

ಇಚ್ಛಾಶಕ್ತಿಯು ಅಂತರಂಗವೆನಿಸಿದ ಜ್ಞಾನಾಂಶವಲ್ಲಿ ಪ್ರವೇಶಿಸಿದ ಪರಮಾತ್ಮ ಚೈತನ್ಯವು ಶಿವನೆಂಬ ಹೆಸರಿನಿಂದ ಮಹಾ ಕೈಲಾಸದಲ್ಲಿ ಶೋಭಿಸುತ್ತಿರುವುದು. ಮುಮುಕ್ಷುಗಳಿಗೆ ಅನುಗ್ರಹ ಮಾಡಲಿಕ್ಕಾಗಿ ಅಮೂರ್ತ ಪರಮಾತ್ಮನು ದಯೆಯಿಂದ

ಪರಿಗ್ರಹಿಸಿದ ದಿವ್ಯ ಮೂರ್ತರೂಪವೇ ಈ ಶಿವನು. ಇವನಿಗೇ ಉಮಾಪತಿ, ನೀಲಕಂಠ, ಗೌರೀವರ, ಗಂಗಾಧರ, ಚಂದ್ರಶೇಖರ–ಎಂಬ ಹೆಸರುಗಳಿವೆ. ಈ ಶಿವನೇ ಅನುಗ್ರಹಕರ್ತನೂ ಉಪಾಸ್ಯನೂ ಆಗಿರುವನು. ಅಮೂರ್ತ ಪರಮಾತ್ಮನು ಉಪಾಸನೆಗೆ ದೊರೆಯಲಾರನು. ಅವನು ನಿರಾಕಾರ, ನಿರ್ಗುಣ ಮತ್ತು ನಿರ್ವಿಕಲ್ಪ ನಿರುವನು. ಅವನು ಹೀಗೆಯೇ ಇರುವನೆಂದು ತಿಳಿಯಲು ಸಾಧ್ಯವಾಗುವಂತಿಲ್ಲ. ಅವನು ಹೀಗೆ ಹಾಗೆ ಇರುವನೆಂದು ಶೃತಿಯಲ್ಲಿ ಹೇಳಿರುವುದೆಲ್ಲವೂ ಅವನ ಲೀಲಾ ಮೂರ್ತಿಯಾದ ಕೈಲಾಸವಾಸಿ ಶಿವನಿಗೆ ಅನ್ವಯಿಸುತ್ತದೆ. ಅಮೂರ್ತಪರಶಿವನು ಮುಮುಕ್ಷುಗಳನ್ನು ಅನುಗ್ರಹಿಸಲು ಈ ರೂಪದಿಂದಲೇ ಬರಬೇಕಾಗಿದೆ. ಅವನು ದಿವ್ಯಮೂರ್ತರೂಪದಿಂದ ಉಪಾಸನೆ ಮಾಡಿಸಿಕೊಂಡು ಅಮೂರ್ತರೂಪದಿಂದ ನಿಜ ಭಕ್ತರನ್ನು ತನ್ನಲ್ಲಿ ಐಕ್ಯಗೊಳಿಸಿಕೊಳ್ಳುವನು. ಇದೇ ಅವನ ಭಕ್ತಾನುಗ್ರಹಲೀಲೆ ಎನಿಸಿದೆ. ಗಟ್ಟಿತುಪ್ಪವೇ ಭೋಜನದಲ್ಲಿ ಬಡಿಸಲಿಕ್ಕೆ ಅನುಕೂಲವಾಗಲು ಕರಗಿ ತಿಳಿಯಾಗುವಂತೆ, ನಿರಾಕಾರ ಪರಮಾತ್ಮನೇ ಭಕ್ತರ ನಿರತಿಶಯ ಭಕ್ತಿಗೆ ಕರಗಿ ದಯೆಯಿಂದ ಅನುಗ್ರಹ ಮೂರ್ತಿಯಾಗಿ ಎದುರಿಗೆ ಬರುವನು. ಆದ್ದರಿಂದ ಭಕ್ತನು ಮೂಲವಸ್ತುವಿಗೂ ಸಾಕಾರಶಿವನಿಗೂ ಭೇದವನ್ನೆಣಿಸದೆ ಸಮದೃಷ್ಟಿಯನ್ನು ಮುಂದುವರಿಸಿಕೊಂಡು ಹೋಗಬೇಕು. ನಮ್ಮಲ್ಲಿ ಭಕ್ತಿಯನ್ನು ಹುಟ್ಟಿಸಿ ಬೆಳೆಸಲಿಕ್ಕಾಗಿಯೇ ನಿರಾಕಾರ ತತ್ತ್ವವು ದಿವ್ಯವಾದ ಆಕಾರವನ್ನು ಧರಿಸಿ, ಶಿವನೆನಿಸಿ ಲೋಕೋದ್ಧಾರಕ್ಕಾಗಿ ಕೈಲಾಸದಲ್ಲಿ ವಿರಾಜಿಸುತ್ತಲಿದ್ದಾನೆ.

## ಶಕ್ತಿ ತತ್ತ್ವದ ವಿವೇಚನೆ

ಇಚ್ಛಾಶಕ್ತಿಯು ಬಹಿರಂಗವೆನಿಸಿದ ಕ್ರಿಯಾಂಶದಲ್ಲಿ ಪರಮಾತ್ಮಚೈತನ್ಯವು ಪ್ರವೇಶಿಸಿ ಶಕ್ತಿತತ್ತ್ವವೆನಿಸಿರುವುದು. ಪರಮಾತ್ಮನ ಪ್ರಾಣವೆನಿಸಿದ ಚಿತ್‌ಶಕ್ತಿಯು ಅತ್ಯಲ್ಪಾಂಶದಿಂದ ಅವನಿಂದ ಬೇರೆಯಾಗಿ, ಸ್ವತಂತ್ರದ್ರವ್ಯವಾಗಿ ಪರಿಣಮಿಸಿ ಶಕ್ತಿ ತತ್ತ್ವವೆನಿಸಿತು. ಇದೇ ಶಕ್ತಿಯನ್ನು ಪರಮಾತ್ಮನಿಗೆ ಭೋಗಕಾಲದಲ್ಲಿ ಭವಾನಿ ಎಂದೂ, ಲೋಕರಕ್ಷಣೆಗೆ ಪುರುಷರೂಪದಿಂದ ವಿಷ್ಣುವೆಂದೂ, ದುಷ್ಟನಿಗ್ರಹ ಕಾಲದಲ್ಲಿ ಕಾಳಿ, ದುರ್ಗಿ ಎಂದೂ ಅನುಭವಿಗಳು ಕರೆದಿದ್ದಾರೆ. ಜಗದ್ವ್ಯಾಪಾರಲೀಲೆಯಲ್ಲಿ ಎರಡನೆಯದಾದ ತಿರೋಧಾನ ಕಾರ್ಯವನ್ನು ಈ ಶಕ್ತಿಯ ಕಡೆಯಿಂದ ಪರಮಾತ್ಮನು ಮಾಡಿಸುತ್ತಿರುವನು. ಅಮೂರ್ತಪರಮಾತ್ಮನಲ್ಲಿ ಚಿದ್ರೂಪದಿಂದ ನೆಲೆಸಿರುವ ಪರಾಶಕ್ತಿಯೇ ತಿರೋಧಾನ ಕಾರ್ಯವನ್ನು ನಡೆಸಲಿಕ್ಕಾಗಿ ಶಕ್ತಿ (ಭವಾನಿ) ಎಂಬ ಹೆಸರಿನಿಂದ ದಿವ್ಯ ರೂಪವನ್ನು ಪರಿಗ್ರಹಿಸಿ, ಕೈಲಾಸದಲ್ಲಿ ಶಿವನೊಡನೆ ವಿರಾಜಿಸುತ್ತಿರುವುದು. ಪರಾಶಕ್ತಿ ನಿರಾಕಾರವೆನಿಸಿದ್ದರೆ, ಈ ಶಕ್ತಿಸಾಕಾರ ದಿವ್ಯಮೂರ್ತಿ ಯೆನಿಸಿ, ಸಾಕಾರ ಶಿವನೊಡನೆ ಆನಂದ ಪಡುತ್ತಿರುವಳು. ಇವಳಿಗೆ ಉಮೆ, ಪಾರ್ವತಿ, ದಾಕ್ಷಾಯಿಣಿ, ಭವಾನಿ ಎಂಬ ಹೆಸರುಗಳಿವೆ. ಪರಾಶಕ್ತಿಯು ಭಕ್ತರನ್ನು ಪರೀಕ್ಷಿಸ

ಲಿಕ್ಕಾಗಿ ಭವಾನಿ ಎಂಬ ದಿವ್ಯ ಮೂರ್ತರೂಪವನ್ನು ತಾಳುವುದು ಸಹಜವೇ ಆಗಿದೆ. ಶಿವನು ಭಕ್ತರನ್ನು ಅನುಗ್ರಹಿಸಬೇಕಾದರೆ ಶಕ್ತಿ ಅವರ ಯೋಗ್ಯತೆ ಅಂತಸ್ತುಗಳನ್ನು ತಿರೋಧಾನವಿಧಿಯಿಂದ ಅನೇಕ ಬಗೆಗಳಲ್ಲಿ ಪರೀಕ್ಷಿಸಿ, ಶಿವನಿಗೆ ವರದಿಯನ್ನು ಒಪ್ಪಿಸ ಬೇಕಾದ್ದು ಯುಕ್ತ. ಯಮನು ನಚಿಕೇತನನ್ನು ಅನೇಕ ಪ್ರಲೋಭನೆಗಳಿಂದ ಪರೀಕ್ಷಿಸಿ, ಕೊನೆಗೆ ದಿವ್ಯ ತತ್ತ್ವೋಪದೇಶವನ್ನು ಅನುಗ್ರಹಿಸಿದನು. ಹಾಗೆಯೇ ಶಕ್ತಿಯು ಭಕ್ತರನ್ನು ಪರೀಕ್ಷಿಸಿ ಅನೇಕ ಪ್ರಲೋಭನೆಗಳಿಂದ ಶೋಧಿಸಿ, ಯೋಗ್ಯ ರಾದವರನ್ನು ಮಾತ್ರವೇ ಅನುಗ್ರಹಕ್ಕಾಗಿ ಶಿವನೆಡೆಗೆ ಕಳುಹಿಸುವಳು. ಇದೆಲ್ಲವನ್ನು ಲೋಕವಾಡಿಕೆಯಂತೆಯೇ ನಿರಾಕಾರ ಪರಮಾತ್ಮನು ಆದರ್ಶವಾದ ರೀತಿಯಲ್ಲಿ ನಡೆಸುತ್ತಲಿರುವನು.

## ಸದಾಶಿವ–ಈಶ್ವರ–ಶುದ್ಧವಿದ್ಯೆಗಳ ವಿವೇಚನೆ

ಪರಮಾತ್ಮನಿಗೆ ತನ್ನೊಳಗೆ ಅವ್ಯಕ್ತವಾಗಿ, ಎಂದರೆ ಇಂದ್ರಿಯಾಗೋಚರ ಸ್ಥಿತಿಯಲ್ಲಿ ಅಡಗಿದ್ದ ಜೀವರನ್ನು ತನ್ನಂತೆ ಸ್ವತಂತ್ರರನ್ನು ಪರಿಪೂರ್ಣರನ್ನಾಗಿ ಮಾಡಬೇಕೆಂಬ ಇಚ್ಛೆಯುಂಟಾಗುವುದು ಸಹಜ. ಆ ಕಾಲದಲ್ಲಿ ಹೊರಹೊಮ್ಮುವ ಇಚ್ಛಾಶಕ್ತಿಗೆ ಜ್ಞಾನಶಕ್ತಿ ಅಂತರಂಗವೆನಿಸಿ ಹೊರಬಿದ್ದರೆ, ಕ್ರಿಯಾಶಕ್ತಿ ಬಹಿರಂಗವೆನಿಸಿ ಹೊರ ಬೀಳುವುದು. ಈ ಜ್ಞಾನಶಕ್ತಿಯಲ್ಲಿ ಪ್ರವೇಶಿಸಿದ ಪರಮಾತ್ಮ ಚೈತನ್ಯವು ಭಕ್ತರ ಅನುಗ್ರಹಕ್ಕಾಗಿ ಶಿವನೆನಿಸಿದರೆ ಕ್ರಿಯಾಶಕ್ತಿಯಲ್ಲಿ ಅಭಿಮಾನಿಸಿದ ಅದೇ ಚೈತನ್ಯವು ಶಕ್ತಿ ಎನಿಸಿತು. ಈ ಜ್ಞಾನಶಕ್ತಿಯ ಉದ್ರೇಕಾವಸ್ಥೆಯಲ್ಲಿ ಪರಮಾತ್ಮ ಚೈತನ್ಯವು ಅಭಿಮಾನಿಸಿ ಸದಾಶಿವತತ್ತ್ವವಾಗಿ ಪರಿಣಮಿಸಿತು, ಕ್ರಿಯಾಶಕ್ತಿಯು ಉದ್ರೇಕಾ ವಸ್ಥೆಯಲ್ಲಿ ಪ್ರವೇಶಿಸಿದ ಚೈತನ್ಯವು ಈಶ್ವರ ತತ್ತ್ವವಾಗಿ ಪರಿಣಮಿಸಿತು. ಅಲ್ಲಿಗೆ ಸದಾಶಿವಾವಸ್ಥೆ, ಎಂದರೆ–ಜ್ಞಾನ–ಶಕ್ತ್ಯುದ್ರೇಕ ಸ್ಥಿತಿ ಎಂದೂ, ಈಶ್ವರಾವಸ್ಥೆ, ಎಂದರೆ–ಕ್ರಿಯಾಶಕ್ತ್ಯುದ್ರೇಕ ಸ್ಥಿತಿ ಎಂದೂ ಹೇಳಿದಂತಾಯಿತು. ಸದಾಶಿವಾವಸ್ಥೆ ಯನ್ನು ಜ್ಞಾನ ಶಕ್ತ್ಯಾಧಿಕ್ಯದಿಂದ ರುದ್ರನೆಂದೂ, ಈಶ್ವರಾವಸ್ಥೆಯನ್ನು ಕ್ರಿಯಾ ಶಕ್ತ್ಯಾಧಿಕ್ಯದಿಂದ ವಿಷ್ಣುವೆಂದೂ ಅನುಭಾವಿಗಳು ಕರೆಯುತ್ತಾರ. ರುದ್ರನಲ್ಲಿ ಜ್ಞಾನ ಶಕ್ತ್ಯಾಧಿಕ್ಯವೂ, ವಿಷ್ಣುವಿನಲ್ಲಿ ಕ್ರಿಯಾಶಕ್ತ್ಯಾಧಿಕ್ಯವೂ ಪ್ರಸಿದ್ಧವಾಗಿವೆ. ರುದ್ರನು ಸರ್ವಜ್ಞನೆಂದೂ, ವಿಷ್ಣುವು ಸರ್ವಶಕ್ತನೆಂದೂ ಅನುಭವಿಗಳು ಹೇಳುತ್ತಾರೆ. ಪರ ಮಾತ್ಮನು ರುದ್ರನಿಂದ ಪ್ರಳಯವನ್ನೂ, ವಿಷ್ಣುವಿನಿಂದ ರಕ್ಷಣೆಯನ್ನೂ, ನಡೆಸು ತ್ತಿರುವನು. ಜ್ಞಾನಕ್ರಿಯಾಶಕ್ತಿಗಳ ಸಮಾವಸ್ಥೆಯು ಶುದ್ಧವಿದ್ಯೆ ಎನಿಸುವುದು. ಈ ಶುದ್ಧವಿದ್ಯೆಯಲ್ಲಿ ಅಭಿಮಾನಿಸಿದ ಪರಮಾತ್ಮ ಚೈತನ್ಯವೇ ಸೃಷ್ಟಿಕರ್ತಬ್ರಹ್ಮ ವೆನಿಸಿತು. ಹೀಗೆ, ಸದಾಶಿವ, ಈಶ್ವರ. ಶುದ್ಧವಿದ್ಯೆ ಎಂಬ ಮೂರು ಅವಸ್ಥೆಗಳೇ ರುದ್ರ, ವಿಷ್ಣು, ಬ್ರಹ್ಮರೆಂಬ ತ್ರಿಮೂರ್ತಿಗಳೆನಿಸಿದರು. ಪರಮಾತ್ಮನು ತನ್ನೊಳಗೆ ಅಡಗಿದ್ದ ಜೀವವರ್ಗವನ್ನು ಹೊರಪಡಿಸಲು ಈ ತ್ರಿಮೂರ್ತಿಗಳ ರೂಪಗಳನ್ನು

ತನ್ನ ಶಕ್ತಿಯ ಸಂಪೂರ್ಣದಿಂದ ಅವನೇ ತಾಳಬೇಕಾಯಿತು. ಇದ್ದಕ್ಕಿದ್ದ ಹಾಗೆಯೇ ಜಗದ ಬಿಟ್ಟು ವ್ಯಕ್ತಿಯನ್ನು ಅವನು ತನ್ನ ಹೃದಯಾಕಾಶದಿಂದ ಹೊರಕ್ಕೆ ಎಸೆಯಲಾರನು. ತನ್ನೊಳಗೆ ಅಡಗಿದ್ದ ಜೀವ ವರ್ಗವು ಹೊರಗೆ ಬರಬೇಕಾದರೂ ಒಂದು ವ್ಯವಸ್ಥಿತ ಕ್ರಮದಲ್ಲಿಯೇ ಬರಬೇಕಾದ್ದು ವಿಹಿತ. ಲೋಕದ ವಾಡಿಕೆಯೂ ಹೀಗೆಯೇ ಇದೆ. ನಾವು ಭೂಮಿಯಲ್ಲಿ ಒಂದು ಸಸಿಯನ್ನು ಕಾಣಬೇಕಾದರೆ ಮೊದಲು ಬೀಜವನ್ನು ನೆಡುವೆವು. ಆ ಬೀಜವು ಮೊಳಕೆಯಾಗಿಯೇ ಹೊರಬರಬೇಕು. ಈ ಅವಸ್ಥೆಗಳನ್ನು ನಾವು ಲೋಕದಲ್ಲೂ ಕಾಣುತ್ತೇವೆ. ಬೀಜವು ನೆಲದಲ್ಲಿ ಬಿದ್ದರೆ, ಕೆಲವು ದಿನಗಳಲ್ಲಿ ಅದಕ್ಕೆ ಅಂಕುರಾಯಮಾಣ ಸ್ಥಿತಿ, ಎಂದರೆ, ಅಂಕುರವನ್ನು ಹುಟ್ಟಿಸುವ ಅವಸ್ಥೆ ಬರುತ್ತದೆ. ಆ ಮೇಲೆ ಬೀಜವು ಅಂಕುರದೊಡಗೂಡಿ ಅಂಕುರಿತವಾಗುತ್ತದೆ. ಕೊನೆಗೆ ಬೀಜವೇ ಮೊಳಕೆಯಾಗಿ ಹೊರಗೆ ಬರುತ್ತದೆ. ಹೀಗೆ ಬೀಜದಿಂದ ಅಂಕುರವಾಗಬೇಕಾದರೆ ಅಂಕುರಾಯಮಾಣಸ್ಥಿತಿ–ಅಂಕುರಿತಸ್ಥಿತಿ–ಈ ಮೂರು ಅವಸ್ಥೆಗಳನ್ನು ನಾವು ಕಾಣುತ್ತೇವೆ. ಲೋಕದಲ್ಲಿ ಇರುವಂತೆಯೇ ಪರಮಾತ್ಮನ ಸೃಷ್ಟಿಯಲ್ಲೂ ಇವೇ ಸ್ಥಿತಿಗಳನ್ನು ನಾವು ಕಾಣುತ್ತೇವೆ. ಕುಂಬಾರನಿಗೆ ಮಡಕೆ ಮಾಡಲು ಮಣ್ಣು ಹೇಗೆ ಉಪಾದಾನ ಕಾರಣವೋ ಹಾಗೆ ಪರಮಾತ್ಮನಿಗೆ ಸೃಷ್ಟಿಗೆ ಶಕ್ತಿಯೇ ಉಪಾಧಾನ ಕಾರಣವೆನಿಸಿರುವುದು. ಇದೇ ಕಾರ್ಯಕ್ಷೇತ್ರವೆನಿಸಿದೆ. ಈ ಶಕ್ತಿಯೆಂಬ ಭೂಮಿಯಲ್ಲಿ ಪರಮಾತ್ಮಬೀಜವು ಪ್ರವೇಶಿಸಿ ಅಂಕುರಾಯಮಾಣಾವಸ್ಥೆ, ಅಂಕುರಿತಾವಸ್ಥೆ, ಆಮೇಲೆ ಅಂಕುರಾವಸ್ಥೆ–ಇವನ್ನು ನಾವು ಕಾಣುತ್ತೇವೆ. ಹೀಗೆ ಪರಮಾತ್ಮನ ಸೃಷ್ಟಿಯಲೀಲೆ ಐದು ಬಗೆಯಾಗಿರುವುದರಿಂದ ಅವೈದನ್ನು ನಡೆಸಲು ಅವನ ಚೈತನ್ಯವು ಶಿವ, ಶಕ್ತಿ, ರುದ್ರ, ವಿಷ್ಣು, ಬ್ರಹ್ಮ ಎಂಬ ಐದು ಅವಸ್ಥೆಗಳನ್ನು ತಾಳಬೇಕಾಯಿತು. ಮಲಪಾಶಬದ್ಧರಾದ ಜೀವರನ್ನು ತನ್ನಂತೆ ಪರಿಪೂರ್ಣರನ್ನಾಗಿ ಮಾಡಲಿಕ್ಕಾಗಿ ಅವನು ಅವರನ್ನು ತನ್ನಿಂದ ಹೊರಗೆಡಹುವುದೇ ಅವನ ದಿವ್ಯಾನುಗ್ರಹವೆನಿಸಿದೆ. ಇದನ್ನು ಅವನು ಶಿವನಿಂದ ಮಾಡಿಸುವನು. ಹೀಗೆ ಶಿವಾನುಗ್ರಹದಿಂದ ಜೀವನು ಹೊರಗೆ ಹೊರಡಲು ಉದ್ಯುಕ್ತನಾಗುವನು. ಈ ಅನುಗ್ರಹವೇ ಜೀವನ ಬಹಿರ್ಗಮನಕ್ಕೆ ಬೀಜವೆನಿಸಿತು. ಅಲ್ಲಿಂದ ಮುಂದೆ ಶಕ್ತ್ಯವಸ್ಥೆಯಲ್ಲಿ ಜೀವರಿಗೆ ಹೊರಗೆ ಹೊರಡುವ ಪ್ರವೃತ್ತಿಯು ಬೆಳೆಯುವುದು. “ಶಕ್ತ್ಯಾಪ್ರವೃತ್ತಿಃ ಭಕ್ತ್ಯಾ ನಿವೃತ್ತಿಃ” ಎಂದು ಅನುಭವ ಸೂತ್ರವು ತಿಳಿಸಿದೆ. ಜೀವರಿಗೆ ಶಿವಾವಸ್ಥೆಯಲ್ಲಿ ಅನುಗ್ರಹ ದೊರೆತು ಶಕ್ತ್ಯವಸ್ಥೆಯಲ್ಲಿ ಅವರ ಕರ್ಮಾನುಗುಣವಾದ ದೇಹವು ದೊರಕುವುದು. ಶಕ್ತಿಯೇ ಈ ದೇಹವನ್ನು ಸ್ತ್ರೀಯ ಗರ್ಭದೊಳಗೆ ಸಾವಧಾನವಾಗಿ ಸೃಜಿಸುವುದು. ಹಾಗೆ ಬೆಳೆದ ದೇಹದೊಡನೆ ಜೀವನು ಹೊರಗೆ ಬರಬೇಕಾದರೆ ಒಂದು ಬಗೆಯ ದುಃಖವೇ ಆಗುತ್ತದೆ. ಆಗ ಆ ದುಃಖವನ್ನು ಮರೆಸಿ, ಹೊರಗಿನ ಪ್ರಪಂಚದ ಆಸೆಯನ್ನು ಹುಟ್ಟಿಸಲು ಶಕ್ತಿ ಮುಂದೆ ಬರುತ್ತದೆ.

ಇದೇ ತಿರೋಧಾನವೆನಿಸುವುದು. ಒಂದನ್ನು ಮರೆಸಿ ಮತ್ತೊಂದರ ಆಸೆಯನ್ನು ಹುಟ್ಟಿಸುವುದೇ ಈ ತಿರೋಧಾನ. ಇದನ್ನು ಶಕ್ತಿಯೇ ಮಾಡಬೇಕು. ದೇಹದಲ್ಲಿ ಸೇರಿ ಬೆಳೆಯುತ್ತಿರುವ ಜೀವನು ತನ್ನ ಮೂಲ ಬೀಜವೆನಿಸಿದ ಶಿವನನ್ನು ಮರೆತು ಆ ದೇಹದಲ್ಲಿಯೇ ಅಂಟಿಕೊಳ್ಳಲು ಅನುವಾಗುವನು. ಆ ಕಾಲದಲ್ಲಿ ಶಕ್ತಿ ಅವನಿಗೆ ತಿರೋಧಾನದ ಮೂಲಕ ಅಲ್ಲಿಯೇ ಇರುವ ಅಭಿಮಾನವನ್ನು ಹುಟ್ಟಿಸುವುದು. ಅಂತಹ ಸನ್ನಿವೇಶದಲ್ಲಿ ಪರಮಾತ್ಮ ಚೈತನ್ಯವು ರುದ್ರನೆನಿಸಿ ಜೀವನಿಗೆ ಗರ್ಭವಾಸದ ಅಭಿಮಾನವನ್ನು ತೊಲಗಿಸುವನು. ಶಕ್ತಿಯಿಂದ ಅಭಿಮಾನದ ಪ್ರವೃತ್ತಿಯುಂಟಾದರೆ ರುದ್ರನಿಂದ ಅಭಿಮಾನದ ಪ್ರಳಯವಾಗುವುದು. ಈಗ ಜೀವನಿಗೆ ಅಲ್ಲಿಯೇ ಸೇರಿಕೊಂಡಿರಬೇಕೆಂಬ ಇಚ್ಛೆ ತೊಲಗುವುದು. ಆಗ ವಿಷ್ಣು ತನ್ನ ರಕ್ಷಣೆಯ ಕಾರ್ಯವನ್ನು ಆರಂಭಿಸುವನು. ರುದ್ರನಿಂದ ಸ್ಥಾನದ ಅಭಿಮಾನವು ಜೀವನಿಗೆ ತೊಲಗಿದ ಮೇಲೆ ಅವನು ವಿಷ್ಣುವಿನಿಂದ ರಕ್ಷಣೆಯನ್ನು ಸಾಕಷ್ಟು ಹೊಂದಿ ಬ್ರಹ್ಮನ ಸೃಷ್ಟಿ ಕಾರ್ಯದ ಪರಿಣಾಮವಾಗಿ ದೇಹೇಂದ್ರಿಯಗಳೊಡನೆ ಕೂಡಿ ನಿಯಮಿತ ಕಾಲದಲ್ಲಿ ಹೊರಬೀಳುವನು. ಹೀಗೆ ಈ ಐದು ಪರಮಾತ್ಮನ ಅವಸ್ಥೆಗಳಿಂದ ಉಪಕೃತವಾಗಿ ಜೀವನು ಪ್ರಕೃತಿ ಸಂಬಂಧವಾದ ದೇಹದೊಡನೆ ಹೊರಬೀಳುವನು. ಪ್ರಪಂಚದಲ್ಲಿ ಪ್ರತಿಯೊಂದು ಜೀವವೂ ದೇಹದೊಡನೆ ಹೊರಬೀಳುವ ಮುನ್ನ ಈ ಬಗೆಯ ಅವಸ್ಥೆಗಳನ್ನು ಹೊಂದಲೇಬೇಕು. ಶಿವ, ಶಕ್ತಿ, ರುದ್ರ, ವಿಷ್ಣು, ಬ್ರಹ್ಮ ಈ ಐವರಿಂದ ಉಪಕಾರವನ್ನು ಅವರು ಹೊಂದಲೇಬೇಕು. ಅವ್ಯಕ್ತಸ್ಥಿತಿಯಲ್ಲಿ ನಿರಾಕಾರ ಪರಮಾತ್ಮನೊಳಗೆ ಅಡಗಿದ್ದು ಜೀವನು ವ್ಯಕ್ತರೂಪದಿಂದ ಹೊರಗೆ ಬರಬೇಕಾದರೆ ಐವರು ದಿವ್ಯಮೂರ್ತಿಗಳ ಪ್ರಸಾದವನ್ನು ಪಡೆಯಲೇಬೇಕು. ಅದಕ್ಕಾಗಿ ಜೀವರು ಪರಮಾತ್ಮನಿಗೆ ಅತ್ಯಂತ ಕೃತಜ್ಞರೂ ವಿಧೇಯರೂ ಆಗಿರಬೇಕಾದ್ದು ಅನಿವಾರ್ಯವೆನಿಸಿದೆ. ಮಣ್ಣುಮುದ್ದೆಯಂತೆ ಇಂದ್ರಿಯ ಗೋಚರ ಸ್ಥಿತಿಯಲ್ಲಿದ್ದ ಜೀವ ಚೈತನ್ಯವು ಸರ್ವಾಂಗ ಸುಂದರವಾದ ದೇಹೇಂದ್ರಿಯಗಳ ಸೌಕರ್ಯವನ್ನು ಪಡೆದು ತಾಯಿಯ ಗರ್ಭದಿಂದ ಹೊರಬರಬೇಕಾದರೆ ಪರಮಾತ್ಮನ ಕೃಪಾಪ್ರಸಾದಕ್ಕೆ ಪಾತ್ರನಾದಲ್ಲದೆ ಸಾಧ್ಯವಾಗಲಾರದು. ಈ ವಿಷಯವನ್ನು ಪ್ರತಿಯೊಬ್ಬ ಜೀವಿಯೂ ಬಾಳಿನಲ್ಲಿ ಪ್ರತಿನಿಮಿಷವೂ ಸ್ಮರಿಸಿಕೊಳ್ಳುತ್ತಿದ್ದರೆ ಅವನಿಗೆ ದುರ್ಭಾವನೆಯೂ ದುಷ್ಟಪ್ರವೃತ್ತಿಯೂ ಹುಟ್ಟಲಿಕ್ಕೆ ಸಾಧ್ಯವಾಗಲಾರದು. ಅಲ್ಲಿಗೆ ಜೀವಸೃಷ್ಟಿಯೇ ಪರಮಾತ್ಮನ ಅನುಗ್ರಹದ ದಿವ್ಯಪರಿಣಾಮವೆನಿಸಿದಂತಾಯಿತು. ದೇಹಾದಿ ಸೌಕರ್ಯಗಳನ್ನು ಪಡೆದು ಬಂದಿರುವ ಪ್ರತಿಯೊಬ್ಬ ಜೀವನೂ ತನ್ನ ವ್ಯವಹಾರಗಳನ್ನು ನಡೆಸುವಾಗ ಪರಮಾತ್ಮನಿಗೆ ಎಷ್ಟು ವಿಧೇಯನೂ ಕೃತಜ್ಞನೂ ಆಗಿದ್ದರೂ ಸಾಲದೆಂಬ ಅಂಶ ಇದರಿಂದ ಸ್ಪಷ್ಟವಾಯಿತು.

## ಮಾಯೆ—ಪುರುಷ. (೬-೧೨)

ಪರಮಾತ್ಮನ ಅನುಗ್ರಹದಿಂದ ಹೊರಗೆ ಬಂದ ಜೀವರು ದೇಹದ ಸುಖಗಳಿಗೆ ಮೈಮರೆತು ಮನಸ್ಸಿನ ದುಷ್ಪ್ರೇರಣೆಗಳಿಗೆ ವಶರಾಗಿ ಪರಮಾತ್ಮನನ್ನು ಮರೆತು ವಿಷಯ ಸುಖಗಳನ್ನು ಅನುಭವಿಸತೊಡಗುವರು. ಈ ರೀತಿಯಲ್ಲಿ ವಿಷಯ ವ್ಯಾಮೋಹಾಭಿಮಾನಗಳನ್ನು ಅವರಿಗೆ ಹುಟ್ಟಿಸಿ ಬೆಳೆಸಲಿಕ್ಕಾಗಿ ಶಕ್ತಿಯೇ ಮಾಯೆ ಎನಿಸಿ ಜೀವರನ್ನು ಆವರಿಸಿರುವುದು. ಮಾಯೆ ಎಂದರೆ ಆಕರ್ಷಣೀಯ ವಸ್ತು, ರೂಪ ರಸ ಗಂಧ ಸ್ಪರ್ಶ ಶಬ್ದಗಳಿಂದ ಆವರಿಸಿರುವ ಈ ಜಗತ್ತು ಜೀವರನ್ನು ತನ್ನ ಕಡೆಗೆ ಸೆಳೆಯುತ್ತಿರುವುದರಿಂದ ಅವರಿಗೆ ಮಾಯೆ ಎನಿಸಿದೆ. ಈ ಜೀವರೂ ಹೆಣ್ಣು ಗಂಡು ದೇಹಗಳಲ್ಲಿ ಹುಟ್ಟಿ ಬೆಳೆಯುತ್ತಿರುವುದರಿಂದ, ಹೆಣ್ಣಿಗೆ ಗಂಡೇ ಮಾಯೆ ಎನಿಸಿರುವನು. ಹಾಗೆಯೇ ಗಂಡಿಗೆ ಹೆಣ್ಣೇ ಮಾಯೆ ಎನಿಸಿರುವಳು. ಇವರಿಬ್ಬರಿಗೂ ಮನದ ಮುಂದಣ ಆಸೆಯೇ ಮಾಯೆ ಎನಿಸಿರುವುದು. ಹಿರಿಯರ ಆಸೆಯಿಂದ ಮಾತ್ರವೇ ಜೀವರು ಉದ್ಧಾರವಾಗಬಲ್ಲರು. ಆದರೆ ಮಾಯೆ ಎನಿಸಿದ ಮನಸ್ಸು ಅವರಲ್ಲಿ ಕ್ಷಣಿಕ ಸುಖಗಳ ಬಯಕೆಗಳನ್ನು ಹುಟ್ಟಿಸಿ ಹಿರಿಯ ಆಸೆಗಳನ್ನು ತೊಲಗಿಸುತ್ತಿರುವುದು. ದುಃಖ ಮೂಲವೂ ಕ್ಷಣಿಕವೂ ಆದ ವಿಷಯ ಸುಖಗಳಿಗೆ ಮೋಹಗೊಳ್ಳುತ್ತ ಜೀವರು ತಮ್ಮ ಮೂಲಾಧಾರವೆನಿಸಿದ ಪರಮಾತ್ಮನನ್ನೇ ಮರೆಯುವರು. ಹೀಗೆ ಮರೆಸತಕ್ಕ ಸಾಮರ್ಥ್ಯ ದೇಹೇಂದ್ರಿಯ ಮನೋರೂಪವಾದ ಮಾಯೆಗೆ ಸಹಜವೇ ಆಗಿದೆ. ಈ ಮಾಯೆ ಸತ್ತ್ವ ರಜಸ್ತಮೋ ಗುಣಾತ್ಮಕವಾದ್ದರಿಂದ ತನ್ನ ಅಸ್ತ್ರಗಳೆನಿಸಿದ ಈ ಮೂರು ಹಗ್ಗಗಳಿಂದ ಜೀವರನ್ನು ಕಟ್ಟಿಹಾಕಿದೆ. ಇವರು ವಾಸ್ತವವಾಗಿ ಪರಮಾತ್ಮನ ಅಂಶರೆಂಬುದನ್ನು ಮಾಯಾ ಪ್ರಭಾವದಿಂದ ಮರೆತು ದೇಹ ಧರ್ಮಗಳಾದ ವೈಷಮ್ಯ ವೈವಿಧ್ಯಗಳನ್ನು ಅಂಟಿಸಿಕೊಂಡು ಸಂಕಟಪಡುತ್ತಿರುವರು. ಪರಮಾತ್ಮನ ಶಿಶುಗಳೆನಿಸಿದ ಜೀವರು ಮಾಯೆಯ ರಕ್ಷಣೆಗೆ ಒಳಗಾಗಿ ತಮ್ಮ ಸಹಜವಾದ ಶಕ್ತಿಗಳನ್ನು ಕಳೆದುಕೊಂಡು ದಿನ ದಿನಕ್ಕೆ ಕ್ಷೀಣರಾಗುತ್ತಿರುವರು. ಪರಮಾತ್ಮನು ಸರ್ವ ಕರ್ತನೂ, ಸರ್ವಜ್ಞನೂ, ಪರಿಪೂರ್ಣನೂ, ನಿತ್ಯತೃಪ್ತನೂ, ವಿಭುವೂ ಆಗಿದ್ದರೆ, ಅವನಿಗೆ ನೇರವಾಗಿ ಸಂಬಂಧಿಸಿದ ಜೀವರು ಅವನಿಗೆ ವಿರುದ್ಧವಾದ ಧರ್ಮಗಳನ್ನು ಅಂಟಿಸಿಕೊಂಡಿರುವರು. ಇದು ಮಾಯೆಯ ದುಷ್ಪ್ರಭಾವವಲ್ಲದೆ ಬೇರೆಯಲ್ಲ. ಈ ಮಾಯೆ ಜೀವರನ್ನು ಪ್ರಪಂಚದಲ್ಲಿ ರಕ್ಷಣೆ ಮಾಡುವಾಗ ಇವರಿಗೆ ಐದು ಕವಚಗಳನ್ನು ತೊಡಿಸಿದೆ. ಈ ಐದು ಕವಚಗಳೇ **ಕಲಾ, ವಿದ್ಯಾ, ರಾಗ, ಕಾಲ, ನಿಯತಿ. ಕಲಾ** ಎಂದರೆ ಕಿಂಚಿತ್ಕರ್ತೃತ್ವಶಕ್ತಿ. **ವಿದ್ಯಾ** ಎಂದರೆ ಕಿಂಚಿಜ್ಞತಾ ಶಕ್ತಿ. **ರಾಗ** ಎಂದರೆ ಅಪರಿಪೂರ್ಣತೆ. **ಕಾಲ** ಎಂದರೆ ಅನಿತ್ಯತೆ. **ನಿಯತಿ** ಎಂದರೆ ನಿಯಮಬದ್ಧತೆ. ಹೀಗೆ ಶಿವಾಂಶನಾದ ಜೀವನು ತನ್ನ ಶಕ್ತಿ ಪ್ರಕಾಶಗಳ ವ್ಯಾಪ್ತಿಯನ್ನು ಸಂಕೋಚಗೊಳಿಸಿಕೊಂಡು ಸಂಸಾರಿಯೆನಿಸಿರುವನು. ಆದ್ದರಿಂದಲೇ ಇವನನ್ನು ಯುಕ್ತಾಯುಕ್ತ ವಿವೇಕವಿಲ್ಲದ ಪಶುವೆಂದು

ಅನುಭವಿಗಳು ಕರೆಯುತ್ತಾರೆ. ಈ ಐದು ಕವಚಗಳು ಅವನ ಶಕ್ತಿಯನ್ನು ಮುಚ್ಚಲು ಆವರಣವಾಗಿ ಅವನನ್ನು ದೇಹವೆಂಬ ಸೆರೆಮನೆಯಲ್ಲಿ ಕಳ್ಳತನದ ಭೋಗವನ್ನು ಅನುಭವಿಸುವಂತೆ ಮಾಡಿವೆ. ಇವು ಅವನ ಜ್ಞಾನ ಪ್ರಕಾಶಗಳನ್ನು ಮುಚ್ಚಿರುವುದರಿಂದ ಕಂಚುಕವೆನಿಸಿವೆ. ಈ ಕಂಚುಕಗಳಿಂದ ಆವೃತನಾಗಿ ಜೀವನು ಪರಮಾತ್ಮನನ್ನು ಮರೆತು, ನಾನು ಅವನ ಅಂಶನೆಂದು ತಿಳಿಯದೆ, ಮಾಯೆಯ ಪ್ರಸಾದವೆನಿಸಿದ ನ್ಯೂನತೆ, ನೈಚ್ಯಾನುಸಂಧಾನ, ದುರಭಿಮಾನ, ದುರಹಂಕಾರ ಪ್ರವೃತ್ತಿಗಳನ್ನು ಅನುಭವಿಸುತ್ತಿರುವನು. ಮಾಯೆಯು ಇವನ ಸಹಜವಾದ ಶಕ್ತಿಪ್ರಕಾಶ ವ್ಯಾಪ್ತಿಗಳನ್ನು ಪೂರ್ತಿಯಾಗಿ ಅಪಹರಿಸಿ, ಇವನಲ್ಲಿ ಸತ್ತ್ವರಜಸ್ತಮೋಗುಣಗಳ ಬಂಧನವನ್ನು ಕಲ್ಪಿಸಿದೆ. ಹೀಗೆ ಜೀವನು ಸಹಜವಾಗಿ ಅಲ್ಪಕರ್ತನೂ ಅಲ್ಪಜ್ಞನೂ, ಮೋಹಪೀಡಿತನೂ, ಕಾಲಬದ್ಧನೂ, ನಿಯಮಿತ ಶಕ್ತಿಕನೂ ಆಗಿರುವನು. ಈ ಸಂಕೋಚರೂಪವಾದ ಬಂಧನಗಳೆಲ್ಲವೂ ಮಾಯೆಯಿಂದಲೇ ಬಂದವಾದ್ದರಿಂದ ಈ ಮಾಯೆಗೆ ಬಂಧ, ಅವಿದ್ಯೆ, ಮಲ, ಪಾಶ, ಸಂಸಾರ ಎಂಬ ಹೆಸರುಗಳು ಬಂದಿವೆ. ಈ ಬಂಧವು ಪರಮಾತ್ಮ ಶಕ್ತಿಯಿಂದಲೇ ಸಹಜವಾಗಿ ಬಂದಿರುವ ಪ್ರಯುಕ್ತ ಇದು ಆಗಂತುಕವಲ್ಲ, ಕಲ್ಪಿತವಲ್ಲ, ಔಪಾಧಿಕವಲ್ಲ. ಆದರೆ ಸ್ವಾಭಾವಿಕವಾದದ್ದು. ಇಂತಹ ಮಲದಿಂದ ಆವೃತನಾಗಿರುವ ಜೀವನೇ ಸಹಜವಾಗಿ ಸಂಸಾರಿಪಶು ಎನಿಸಿರುವನು. ಇವನಿಗೆ ಪುರುಷನೆಂಬ ಹೆಸರು ಇದೆ. ಹೀಗೆ ಪರಮಾತ್ಮನೇ ಮಾಯಾಶಕ್ತಿಯ ಸಂಪರ್ಕದಿಂದ ತನ್ನ ಶಕ್ತಿ ಪ್ರಕಾಶಗಳನ್ನು ಸಂಕೋಚಗೊಳಿಸಿಕೊಂಡು ಜೀವನೆನಿಸಿರುವನು. ಇವನು ತನ್ನ ಮೂಲ ಸ್ಥಿತಿಯನ್ನು ಮರೆತು, ಮಾಯೆಯ ತೊಟ್ಟಿಲಿನಲ್ಲಿ ಜೋಗುಳವನ್ನು ಕೇಳುತ್ತಾ ಇಂದ್ರಿಯಗಳು ತಂದೊಡ್ಡುವ ಸುಖಗಳನ್ನು ಪಶುವಿನಂತೆ ಭೋಗಿಸುತ್ತಲಿರುವುದು ಸಹಜವಾಗಿದೆ.

## ಪ್ರಕೃತಿ-ಮಹದಾದಿ ತತ್ತ್ವಗಳು

ಮಾಯಾಶಕ್ತಿಯ ಸಂಬಂಧದಿಂದ ಜೀವನು ತನ್ನ ವಾಸ್ತವ ಸ್ವರೂಪವನ್ನು ಮರೆತಿರುವಾಗ ಅವನಿಗೆ ಹೊರಗಿನ ಸನ್ನಿವೇಶಗಳಲ್ಲಿ ಅಭಿಮಾನ ವ್ಯಾಮೋಹಗಳನ್ನು ಹುಟ್ಟಿಸಲಿಕ್ಕಾಗಿ ಪರಮಾತ್ಮನ ಚಿತ್‌ಶಕ್ತಿಯೇ ಮಾಯಾಶಕ್ತಿಯಲ್ಲಿ ಪ್ರವೇಶಿಸಿ ಪ್ರಕೃತಿ ಎನಿಸಿರುವುದು. ಸತ್ತ್ವರಜಸ್ತಮೋಗುಣಗಳ ಸಾಮ್ಯಾವಸ್ಥೆಯೇ ಈ ಪ್ರಕೃತಿ. ಈ ಪ್ರಕೃತಿಯೇ ಮುಂದಿನ ಇಪ್ಪತ್ತಮೂರು ತತ್ತ್ವಗಳಿಗೆ ಮೂಲಕಾರಣವಾಗಿರುವುದು. ಜಗದ್ರಚನೆಯಲ್ಲಿ ಪ್ರಧಾನವಾಗಿ ಇದರ ಉಪಯೋಗವಿರುವುದರಿಂದ ಇದಕ್ಕೆ ಪ್ರಧಾನವೆಂಬ ಹೆಸರೂ ಇದೆ. ಚಿತ್‌ಶಕ್ತಿಯು ಸಂಕೋಚವೆನಿಸಿದ ಈ ಪ್ರಕೃತಿಗೆ ಚಿತ್ತವೆಂಬ ಹೆಸರೂ ಸಹಜವಾಗಿ ಅನ್ವಯಿಸುತ್ತದೆ. ಚಿತ್‌ಶಕ್ತಿಯು ಸತ್ಯಜ್ಞಾನಆನಂದಮಯವಾಗಿದ್ದರೆ ಚಿತ್ತಶಕ್ತಿಯು ಸತ್ತ್ವರಜಸ್ತಮೋಗುಣಾತ್ಮಕವಾಗಿದೆ. ಸತ್ಯಕ್ಕೂ, ಸತ್ತ್ವಕ್ಕೂ, ಜ್ಞಾನಕ್ಕೂ, ರಜಸ್ಸಿಗೂ, ಆನಂದಕ್ಕೂ, ತಮಸ್ಸಿಗೂ

ಇರುವೆ-ಆನೆಗಳಷ್ಟು ಅಂತರವಿದೆ. ಆದ್ದರಿಂದಲೇ ಚಿತ್ರವೆನಿಸಿದ ಪ್ರಕೃತಿಯು ತ್ರಿಗುಣಾತೀತರಾದ ಶಿವ, ಶಕ್ತಿ, ರುದ್ರ, ವಿಷ್ಣು, ಬ್ರಹ್ಮರನ್ನು ತ್ರಿಗುಣಾತ್ಮಕವಾದ ಪ್ರಪಂಚದ ಅನುಗ್ರಹ, ತಿರೋಧಾನ, ಪ್ರಳಯ, ಸ್ಥಿತಿ, ಸೃಷ್ಟಿ, ಎಂಬ ವ್ಯವಹಾರಗಳನ್ನು ನಡೆಸಲು ಸಂಘಟನೆ ಮಾಡಿದೆ. ಇಂತಹ ಅದ್ಭುತವಾದ ರಚನೆಯಲ್ಲಿ ದಿವ್ಯ ಮೂರ್ತಿಗಳನ್ನು ಅಂಟಿಸಿ, ಭಗವದಂಶರಾದ ಜೀವರಿಗೆ ಭಗವಂತನನ್ನು ಮರೆಸಿ ತಮ್ಮ ತಮ್ಮಲ್ಲಿಯೇ ಭೇದಭಾವನೆಯನ್ನು ಹುಟ್ಟಿಸಿ, ಎದುರಿಗೆ ಇರುವ ಚಿತ್ರವಿಚಿತ್ರ ಕೃತಿಗಳನ್ನು ನೋಡಿ ಮೋಹಗೊಳ್ಳುವಂತೆ ಮಾಡಿರುವುದು. ಆದ್ದರಿಂದಲೇ ಇದಕ್ಕೆ ಪ್ರಕೃತಿ ಎಂಬ ಹೆಸರು ಅನ್ವರ್ಥವೆನಿಸಿದೆ. ದೇಹವೇ ಈ ಪ್ರಕೃತಿಯ ಬಾಹ್ಯರೂಪ ಇದರೊಳಗಿನ ಮನಸ್ಸು ಜೀವರನ್ನು ಈ ದೇಹದ ಸುಂದರವಾದ ರೂಪಕ್ಕೆ ಮೋಹಗೊಳಿಸಿ ಇದರ ಅನುಭವಕ್ಕಾಗಿ ಊಟವಿಲ್ಲದ ಹಗಲುಗಳನ್ನೂ ನಿದ್ರೆಯಿಲ್ಲದ ರಾತ್ರಿಗಳನ್ನೂ ಕಳೆಯಿಸುತ್ತಿರುವುದು. ಈ ಪ್ರಕೃತಿಯು ತನ್ನ ಮೂರು ಗುಣಗಳಿಂದ ಜೀವರಲ್ಲಿ ಸ್ವಾರ್ಥತೆ, ವ್ಯಾಮೋಹ, ಅಹಂಕಾರಗಳನ್ನು ಹುಟ್ಟಿಸಿ, ಆ ಮೂಲಕ ಅವರನ್ನು ರಾಗ ದ್ವೇಷಗಳ ಗುಳಿಯಲ್ಲಿ ಸಿಲುಕಿಸಿ ನರಳುವಂತೆ ಮಾಡಿದೆ. ಸ್ವಾರ್ಥಸಾಧನೆಗಾಗಿ ಮಾನವರು ಒಬ್ಬರನ್ನೊಬ್ಬರು ದ್ವೇಷಿಸುತ್ತಲೂ, ಮೋಹದ ಆಸೆಯಿಂದ ತನ್ನವರನ್ನು ಮಾತ್ರವೇ ಪ್ರೀತಿಸುತ್ತಲೂ, ಅಹಂಕಾರದ ದುಷ್ಪ್ರವೃತ್ತಿಯಿಂದ ಪರಮಾತ್ಮನ ಕರ್ತೃತ್ವವನ್ನು ಮರೆಯುತ್ತಲೂ ಮೆರೆಯುತ್ತಿರುವರು. ಇಷ್ಟೆಲ್ಲಾ ಅನಾಹುತಗಳಿಗೆ ಕಾರಣವಾದ ಪ್ರಕೃತಿಯ ನಿಜಸ್ಥಿತಿಯನ್ನು ತಿಳಿಯದೆ ಮಾನವರು ಅದರ ಪರಿಣಾಮವೆನಿಸಿರುವ ಬುದ್ಧಿ, ಅಹಂಕಾರ, ಮನಸ್ಸುಗಳನ್ನೂ ಜ್ಞಾನಕರ್ಮೇಂದ್ರಿಯಗಳನ್ನೂ ತಮ್ಮ ಮೂಲಸ್ಥಲವೆನಿಸಿದ ಪರಮಾತ್ಮನ ಸೇವೆಗೆ ವಿನಿಯೋಗಿಸದೆ ಅವುಗಳು ತಮ್ಮ ಮುಂದೆ ತಂದೊಡ್ಡುವ ರೂಪ ರಸ ಗಂಧ ಸ್ಪರ್ಶ ಶಬ್ದಗಳೆಂಬ ವಿಷಯಸುಖಗಳಿಗೆ ಆಕಾಶ, ವಾಯು, ತೇಜಸ್ಸು, ನೀರು, ನೆಲ ಈ ಐದು ತತ್ತ್ವಗಳ ಸಮಾವೇಶದಿಂದ ಆಗಿರುವ ಈ ದೇಹಗಳನ್ನು ಮೀಸಲಾಗಿಟ್ಟು ಅಷ್ಟನ್ನೇ ನಿತ್ಯಸುಖವೆಂದು ತಪ್ಪಾಗಿ ತಿಳಿದು ಅನುಭವಿಸುತ್ತಾ, ನಿರಾಶರೂ, ದುರ್ಬಲರೂ, ಹೇಡಿಗಳೂ ಆಗುತ್ತಿರುವರು. ಬುದ್ಧಿ, ಅಹಂಕಾರ, ಮನಸ್ಸು ಇವು ಮೂರು ತತ್ತ್ವಗಳೂ ತ್ರಿಗುಣಾತ್ಮಕವಾದ್ದರಿಂದ ಇವು ತಮ್ಮನ್ನು ಬಂಧಿಸಿ ಸೆರೆಮನೆಯಲ್ಲಿ ಇರಿಸಿವೆ ಎಂಬುದನ್ನು ಜೀವರು ತಿಳಿಯದೆ ಒದ್ದಾಡುತ್ತಿರುವರು.

ತ್ರಿಗುಣಾತ್ಮಕವಾದ ಮಾನವೀ ಪ್ರಕೃತಿಯು ಪಾಶರೂಪವೂ ಬಂಧರೂಪವೂ ಆದುದೆಂಬ ನಿಜವಾದ ಅರಿವು ಜೀವರಿಗೆ ಇಲ್ಲವಾದ್ದರಿಂದ ಇದರ ಅರಿವು ಮೂವತ್ತಾರು ತತ್ತ್ವಗಳನ್ನು ಅರಿತ ಮಹಾ ಶಿವಯೋಗಿಗಳ ಕೃಪಾಪ್ರಸಾದದಿಂದಲೇ ಆಗಬೇಕಾಗಿದೆ. ಜೀವಿತ ಕಾಲದಲ್ಲಿಯೇ ಪ್ರಕೃತಿಯನ್ನು ಶಿವಮಯವಾಗಿ ಪರಿಣಮಿಸುವಂತೆ ಮಾಡಿಕೊಂಡು, ಶಿವೈಕ್ಯ ಯೋಗವನ್ನು ಅನುಭವಿಸಿದ ಮಹಾ ಮಹಿಮರಿಂದಲೇ

ಜೀವರಿಗೆ ಪ್ರಕೃತಿಯು ನಿಜಸ್ಥಿತಿಯು ತಿಳಿಯಬೇಕಾಗಿದೆ. ಹಾಗೆ ತಿಳಿದವರು ಮನಸ್ಕರಿಸಿ ತಿಳಿಸಿದಲ್ಲದೆ ಪ್ರಕೃತಿಯ ವಿವೇಚನೆ ಜೀವರಿಗೆ ಮನವರಿಕೆಯಾಗದು. ಅದಕ್ಕಾಗಿಯೇ ಅನುಭವಿಗಳ ದಿವ್ಯ ಸಂಘಟನೆ ಮಾನವರಿಗೆ ಅನಿವಾರ್ಯವೆನಿಸಿದೆ. ಅನುಭವಿಗಳ ಮತ್ತು ಶರಣರ ಸಂದರ್ಶನಾಶೀರ್ವಾದಗಳ ಪ್ರಭಾವದಿಂದಲೇ ಪ್ರಕೃತಿ ತನ್ನ ಆಕರ್ಷಣವನ್ನು ಕೊನೆಗಾಣಿಸಬಲ್ಲದು. ಕೇವಲ ಶಾಸ್ತ್ರಜ್ಞಾನದಿಂದಲೇ ಪ್ರಕೃತಿಯನ್ನು ಜಯಿಸಲಿಕ್ಕೆ ಆಗಲಾರದು. ಪ್ರಕೃತಿಯನ್ನು ವಶಪಡಿಸಿಕೊಂಡು ಶಿವಮಯರಾಗಿ ಪ್ರಕಾಶಿಸಿದ **ಶ್ರೀ ನಿರಂಜನ ನಿರ್ವಾಣಸ್ವಾಮಿ** ಗಳಂತಹ ಶಿವಸ್ವರೂಪಿಗಳ ದಿವ್ಯದೃಷ್ಟಿಯೇ ಜೀವರ ಪ್ರಕೃತಿಯನ್ನು ಬದಲಾಯಿಸಲು ಸಮರ್ಥವಾದ ದಿವ್ಯಸಂಜೀವಿನಿ ಎನಿಸಿದೆ. ಯಾರು ಜೀವಿತಕಾಲದಲ್ಲಿ ಪ್ರಕೃತಿಯನ್ನು ಧಿಕ್ಕರಿಸಿ, ತಮ್ಮ ನಿಜಸ್ಥಿತಿಯಲ್ಲಿ ನೆಲೆಯಾಗಿ ನಿಲ್ಲುವರೋ ಅಂತಹ ಮಹಾವ್ಯಕ್ತಿಗಳ ಎದುರಿಗೆ ಪ್ರಕೃತಿ ತನ್ನ ವೈಭವ ವಿಲಾಸಗಳನ್ನು ತೋರಿಸಲಾರದೆ ನಾಚಿಕೆಯಿಂದ ತಲೆಬಾಗಿಸಿ ದಾಸಿಯಾಗಬಲ್ಲದು.

ಅಂತಹ ಮಹಾ ವ್ಯಕ್ತಿಗಳಲ್ಲೊಬ್ಬರಾದ **ಶ್ರೀ ನಿರಂಜನ ಪ್ರಣವ ಸ್ವರೂಪಿ ನಿರ್ವಾಣ ಮಹಾಸ್ವಾಮಿಗಳು** ಪ್ರಕೃತಿಯನ್ನು ಜಯಿಸಿ, ಅದರ ಸದುಪಯೋಗದಿಂದ ಆತ್ಮಕಲ್ಯಾಣವನ್ನು ಸಾಧಿಸಿ ಅನುಭವಿಸುವಂತಾಗಲೆಂಬ ಸದಾಶಯದಿಂದ ಶಿವಯೋಗ ಸಮಾಧಿಯಲ್ಲಿ ನಿತ್ಯಾನಂದವನ್ನು ಅನುಭವಿಸುತ್ತಾ ಮಾರ್ಗದರ್ಶಕರಾಗಿ ನಿರಂಜನಸ್ಥಿತಿಯಲ್ಲಿ ಶೋಭಿಸುತ್ತಿರುವರು. ಅವರ ದಿವ್ಯದರ್ಶನಾಶೀರ್ವಾದಗಳಿಗೆ ಮಾನವರು ಪಾತ್ರರಾಗಿ ಪ್ರಕೃತಿಯ ಪ್ರಲೋಭನೆಯಿಂದ ದೂರರಾಗಿ ಅದರ ಪರಿಣಾಮವೆನಿಸಿದ ದೇಹವನ್ನು ಶಿವಮಯವನ್ನಾಗಿ ಮಾಡಿಕೊಂಡು, ವ್ಯವಹಾರಗಳನ್ನು ನಿರ್ಲಿಪ್ತತೆಯಿಂದ ನಡೆಸುತ್ತ ವಿಷಯ ಸುಖಗಳನ್ನು ಶಿವಪ್ರಸಾದ ರೂಪವಾಗಿ ಅನುಭವಿಸುತ್ತ ತೃಪ್ತಿ ಶಾಂತಿಗಳನ್ನು ಪಡೆಯಲೆಂದು **ಶ್ರೀ ಶಿವಯೋಗೀಶ್ವರರು** ಸದ್ಭಕ್ತರೆಲ್ಲರನ್ನೂ ದಿವ್ಯದೃಷ್ಟಿಯಿಂದ ಅನುಗ್ರಹಿಸಿ, ಪ್ರಕೃತಿಯ ಸೆಳೆತದಿಂದ ಪಾರಗಾಣಿಸಲೆಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸಲಾಗಿದೆ.

---

ಜಗವೆಲ್ಲ ನಗುತಿರಲಿ, ಜಗದಳುವು ನನಗಿರಲಿ.
ನಾನಳಲು ಜಗವೆನ್ನನೆತ್ತಿಕೊಳದೆ ?
ನಾನಕ್ಕು ಜಗವಳಲು ನೋಡಬಹುದೆ ?

—ಶ್ರೀ ಈಶ್ವರ ಸಣಕಲ್ಲ.

# ಅವಿಕೃತ ಪರಿಣಾಮವಾದ

ವಿದ್ವಾನ್, **ಡಾ|| ಹೆಚ್. ಪಿ. ಮಲ್ಲೇದೇವರು,** ಎಂ. ಎ., ಪಿ.ಎಚ್.ಡಿ.
ಡಿಪ್ಲೊಮಾ ಇನ್ ಇಂಡಾಲಜಿ, ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ

ವೈವಿಧ್ಯ ಪೂರ್ಣವಾದ ಜಗತ್ತು ಹೇಗೆ ಉಗಮಹೊಂದಿತು? ಜೀವಿ ಹೇಗುದಿಸಿದ? ಜೀವಿಗೂ ಜಗತ್ತಿಗೂ ಇರುವ ಸಂಬಂಧವೇನು? ಜಗತ್ತಿನಲ್ಲಿರುವ ಚರಾಚರ ವಸ್ತುಗಳೆಲ್ಲ ನಿಯಮಿತ ನಿರ್ದಿಷ್ಟ ಕ್ರಮದಲ್ಲಿ ನಡೆಯಬೇಕಾದರೆ ಇವನ್ನೆಲ್ಲ ನಿಯಂತ್ರಿಸುವವಾರು? ಈ ನಿಯಂತ್ರಕನ ಸ್ವರೂಪವೇನು? — ಈ ಅಂಶಗಳು ತತ್ತ್ವಜ್ಞಾನಿಗಳ ಗಮನ ಸೆಳೆದಿವೆ. ಭಾರತೀಯ ತತ್ತ್ವಜ್ಞಾನಿಗಳು ವಿಶ್ವದ ಮೂಲ ಮತ್ತು ಸೃಷ್ಟಿಯ ಬಗೆಗೆ ತಮ್ಮ ವಿಚಾರವನ್ನು ಈ ರೀತಿಯಾಗಿ ವ್ಯಕ್ತಮಾಡಿರುವರು.

ನ್ಯಾಯವೈಶೇಷಿಕರು. ಜಗತ್ತು ಅಣುಗಳ ಸಂಯೋಗದಿಂದಾಗಿದೆ–ಎಂದು ಹೇಳುವರು. ಇದರ ಯೋಜಕ, 'ಅದೃಷ್ಟ'–ಶಕ್ತಿ ಅಥವಾ 'ದೇವರು', ಆತನೇ 'ಪರಮಾತ್ಮ'–ವಿಭು. ಕುಂಬಾರನು ಮಣ್ಣಿನಿಂದ ಮಡಕೆಯನ್ನು ನಿರ್ಮಿಸುವಂತೆ, ಪರಮಾತ್ಮನು ಅಣುಗಳಿಂದ ಜಗತ್ತನ್ನು ಸೃಜಿಸುವನು. ಮಡಕೆ ಮೊದಲು ಇರಲಿಲ್ಲ. ಮೊದಲಿಲ್ಲದ ಮಡಕೆ ಈಗತಾನೇ ಮಣ್ಣಿನಿಂದ ಹೊಸದಾಗಿ ಉತ್ಪತ್ತಿಯಾದುದರಿಂದ ಈ ವಾದಕ್ಕೆ 'ಆರಂಭವಾದ' ವೆಂತಲೂ; ಕಾರಣ ರೂಪವಾದ ಮಣ್ಣಿನಲ್ಲಿ ಕಾರ್ಯರೂಪವಾದ ಮಡಕೆ ಉತ್ಪತ್ತಿಯಾಗುವುದರಿಂದ, ಅಂದರೆ ಕಾರಣದಲ್ಲಿ ಕಾರ್ಯವಿಲ್ಲದಿರುವುದರಿಂದ ಈ ವಾದಕ್ಕೆ 'ಅಸತ್ಕಾರ್ಯವಾದ' ವೆಂದೂ ಹೆಸರು.

ಕೆಲವು ದಾರ್ಶನಿಕರು ನ್ಯಾಯವೈಶೇಷಿಕರ ಈ ವಾದವನ್ನು ಅತಿಗಳೆದು, ಕಾರಣದಲ್ಲಿ ಕಾರ್ಯವು ಇದ್ದೇ ಇರುವುದು, ಆದರೆ ಅದು ಸೂಕ್ಷ್ಮಾವಸ್ಥೆಯಲ್ಲಿರುವುದರಿಂದ ನಮ್ಮ ದೃಷ್ಟಿಗೆ ಗೋಚರವಾಗದೆ ಅವ್ಯಕ್ತ ಸ್ಥಿತಿಯಲ್ಲಿರುವುದು. ಸೂಕ್ಷ್ಮಾವಸ್ಥೆಯಲ್ಲಿರುವ ವಸ್ತು ನಮ್ಮ ಕಣ್ಣಿಗೆ ಕಾಣದಿದ್ದರೆ ವಸ್ತುವೇ ಇಲ್ಲವೆಂದು ಹೇಳುವುದು ಸರಿಯಲ್ಲ. ಕಾರಣದಲ್ಲಿ ಕಾರ್ಯವು ಅವ್ಯಕ್ತಾವಸ್ಥೆಯಲ್ಲಿರುವುದು. ಈ ತೆರನಾದ ವಿಚಾರಧಾರೆಯನ್ನು ಹೊಂದಿರುವವರಿಗೆ 'ಸತ್ಕಾರ್ಯವಾದಿಗಳೆ' ಂದು ಹೆಸರು. ಉದಾಹರಣೆಯಿಂದ ಈ ಅಭಿಪ್ರಾಯವು ಸ್ಪಷ್ಟವಾಗುವುದು. ಹಲಸಿನ ಬೀಜದಿಂದ ಹಲಸಿನ ಮರವು ಹುಟ್ಟುವುದು. ಅಂದರೆ ಬೀಜದಲ್ಲಿ ವೃಕ್ಷವು ಸೂಕ್ಷ್ಮವೂ, ಗುಪ್ತವೂ ಆಗಿ ಅವ್ಯಕ್ತಸ್ಥಿತಿಯಲ್ಲಿರುವುದು. ಪ್ರಾಪ್ತ ಸನ್ನಿವೇಶ ಲಭಿಸಿದೊಡನೆ ಅದು ಸಹಜವಾಗಿ ಮರವಾಗುವುದು. ಅಂದರೆ ಅವ್ಯಕ್ತಸ್ಥಿತಿಯಲ್ಲಿದ್ದುದು ವ್ಯಕ್ತಸ್ಥಿತಿಯನ್ನು

ಹೊಂದುವುದು. ಆದುದರಿಂದ ಕಾರಣ ಕಾರ್ಯಗಳು ಒಂದೇ ವಸ್ತುವಿನ ಅವ್ಯಕ್ತ ಮತ್ತು ವ್ಯಕ್ತ ಸ್ಥಿತಿಯೆನ್ನಬಹುದು. ನೂಲಿನಿಂದ ಬಟ್ಟೆಯಾಗುವುದು; ನೂಲು ಕಾರಣ, ಬಟ್ಟೆಕಾರ್ಯ–ಈ ನಿದರ್ಶನಗಳಿಂದ ಕಾರಣದಲ್ಲಿ ಕಾರ್ಯವು ಸೂಕ್ಷ್ಮ ರೂಪದಲ್ಲಿರುವುದು ಎಂದು ಸಿದ್ಧವಾಗುವುದು. ಒಂದು ವೇಳೆ ಕಾರಣದಲ್ಲಿ ಕಾರ್ಯವಿರುವುದಿಲ್ಲವೆಂದು ಭಾವಿಸುವುದಾದರೆ, ಹತ್ತಿಯ ಬೀಜದಿಂದ ಯಾವುದಾದರೂ ಸಸಿ ಹುಟ್ಟಬೇಕಾದೀತು? ಆದರೆ ಲೋಕದಲ್ಲಿ ಹೀಗೆ ಒಂದು ಬೀಜದಿಂದ ಅದಕ್ಕೆ ವ್ಯತಿರಿಕ್ತವಾದ ಸಸಿಯು ಹುಟ್ಟುವುದು ಅಸಂಭವ. ಆದುದರಿಂದ ಕಾರಣದಲ್ಲಿ ಕಾರ್ಯವು ಅವ್ಯಕ್ತ ಸ್ಥಿತಿಯಲ್ಲಿ ಇದ್ದೇ ಇರುವುದೆಂದು ಸಿದ್ಧವಾಗುವುದು. ಈ ವಾದಕ್ಕೆ 'ಸತ್ಕಾರ್ಯವಾದ' ವೆಂದು ಹೆಸರು.

ಕಪಿಲ ಋಷಿಯಿಂದ ನಿರೂಪಿತವಾದ ಸಾಂಖ್ಯದರ್ಶನವು ಸತ್ಕಾರ್ಯವಾದದ ಮೂಲಕ ಜಗತ್ತು ವಿಕಾಸಹೊಂದಿದೆಯೆಂದು ಪ್ರತಿಪಾದಿಸುವುದು. ಪ್ರಕೃತಿ ಮತ್ತು ಪುರುಷರೇ ಈ ಜಗತ್ತಿನ ಉಗಮಕ್ಕೆ ಕಾರಣ. ಜಡವಾಗಿ ತ್ರಿಗುಣಗಳ ಸಾಮ್ಯಾವಸ್ಥೆಯಲ್ಲಿದ್ದ (Equili brium State) ಪ್ರಕೃತಿಯು ಚೇತನರೂಪಿ ಪುರುಷನ ಸಾನ್ನಿಧ್ಯದಿಂದ ಪಲ್ಲಟಗೊಂಡು ಜಗತ್ತು ಉದಿಸುವುದು. ಹಾಲು ಮೊಸರಾಗುವಂತೆ ಪ್ರಕೃತಿಯು ನಿಜವಾದ ಜಗತ್ತಾಗಿ ಪರಿಣಮಿಸುವುದರಿಂದ ಇದಕ್ಕೆ 'ಪರಿಣಾಮವಾದ' ವೆಂದೂ ಹೆಸರು.

ಅದ್ವೈತಿಗಳು ಜಗತ್ತಿನ ಬಗೆಗೆ ಹೀಗೆ ಹೇಳಿರುವರು. "ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ" ಬ್ರಹ್ಮವೊಂದೇ ಸತ್ಯ, ಜಗತು ಮಿಥ್ಯವೆಂಬುದು ಅದ್ವೈತಿಗಳ ಅಭಿಮತ. ಈ ದರ್ಶನದಲ್ಲಿ ಬ್ರಹ್ಮವು ನಿರವಯವ ಮತ್ತು ವಿಕಾರ ರಹಿತ ಜಗತ್ತು ಬ್ರಹ್ಮದ ವಿವರ್ತ. ಅಂದರೆ ತೋರ್ಕೆ. ಬ್ರಹ್ಮವು ಜಗತ್ತಿನಂತೆ ಕಾಣುವುದೇ ಅಧ್ಯಾಸ. ಸತ್ಯವಾದ ಬ್ರಹ್ಮವು ಜಡ ಜಂಗಮಾತ್ಮಕವಾದ ಜಗತ್ತಾಗಿ ಕಾಣುವುದೆಂಬ ತಿಳಿವಳಿಕೆಯೇ ಅಧ್ಯಾಸ. ನಿದರ್ಶನಕ್ಕೆ ಸಂಜೆಯ ನಸುಗತ್ತಲಲ್ಲಿ ಹಗ್ಗವೊಂದು ಹಾವಿನಂತೆ ಕಂಡು ನಮ್ಮಲ್ಲಿ ಭೀತಿ ಹುಟ್ಟಿಸುವುದು. ಆಗ ಬೆಳಕಿನ ನೆರವಿನಿಂದ ಅದನ್ನು ನಾವು ಅವಲೋಕಿಸಿದರೆ, ಹಗ್ಗವು ಹಾವಿನಂತೆ ಭಾಸವಾಯಿತೇ ವಿನಾ ಅಲ್ಲಿ ನಿಜವಾದ ಹಾವು ಇಲ್ಲವೆಂದು ವ್ಯಕ್ತವಾಗುವುದು. ಹಗ್ಗವು ಹಾವಿನಂತೆ ಕಂಡುದೇ ವಿವರ್ತ. ಅಂತೆಯೇ ಬ್ರಹ್ಮವು ಜಗತ್ತಿನಂತೆ ಕಂಡುದೇ ವಿವರ್ತ. ಬೆಳಕಿನ ಮೂಲಕ ಹಗ್ಗವು ಹಾವಲ್ಲ ಎಂಬ ಸತ್ಯದ ಅರಿವಾಗುವಂತೆ ನಿಜ ಜ್ಞಾನದ ಮೂಲಕ ತೋರಿಕೆಯ ಜಗತ್ತು ಇಲ್ಲದಂತಾಗಿ ಕೊನೆಗೆ ಬ್ರಹ್ಮದ ಅರಿವಾಗುವುದು. ಈ ವಿಚಾರಧಾರೆಗೆ 'ವಿವರ್ತವಾದ'-ಎಂದು ಹೆಸರು.

ವೀರಶೈವ ದಾರ್ಶನಿಕರು ಮತ್ತು ಶರಣರು ಜಗತ್ತಿನ ವಿಕಾಸವನ್ನು ಅವಿಕೃತ ಪರಿಣಾಮವಾದದ ಮೂಲಕ ಪ್ರತಿಪಾದಿಸಿರುವರು. ಶಿವನ ಶಕ್ತಿಯಿಂದ ಪ್ರಕಟವಾದ

ಜಗತ್ತು ಶಿವನಿಂದ ಅನ್ಯವಲ್ಲ. ಶಿವನಿಂದ ಭಿನ್ನವಲ್ಲದಿರುವ ಜಗತ್ತು ಶಿವನಂತೆಯೇ ಸತ್ಯ. ಈಗ ಶಿವ-ಶಕ್ತಿಯರ ಸ್ವರೂಪ, ಅವರುಗಳಿಗಿರುವ ಸಂಬಂಧ ಮತ್ತು ಶಿವ-ಶಕ್ತಿಯರಿಂದ ಜಗತ್ತು ಉಗಮ ಹೊಂದಿರುವುದರ ಬಗೆಗೆ ಪರಿಶೀಲಿಸೋಣ.

ಸೃಷ್ಟಿಯ ಬಗೆಗೆ ಶರಣರು ತಮ್ಮದೇ ಆದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಈ ಲೇಖನದಲ್ಲಿ 'ಅವಿಕೃತ ಪರಿಣಾಮವಾದ' ದ ಬಗೆಗೆ ಮಾತ್ರ ಗಮನ ಕೊಡಲಾಗಿದೆ.

"ಆದಿ ಅನಾದಿ ಇಲ್ಲದಂದು, ಶೂನ್ಯ ನಿಶ್ಶೂನ್ಯಗಳಿಲ್ಲದಂದು,
ಪಮ್ಮು ಬಿಮ್ಮುಗಳಿಲ್ಲದಂದು, ಸುರಾಳ ನಿರಾಳವಿಲ್ಲದಂದು,
ಸಚರಾಚರವೆಲ್ಲ ರಚನೆಗೆ ಬಾರದಂದು
ಗುಹೇಶ್ವರ ನೀನೊಬ್ಬನೇ ಇದ್ದೆಯಲ್ಲ ಇಲ್ಲದಂತೆ"

ಈ ರೀತಿಯಾಗಿ 'ಆದಿ ಅನಾದಿಗಳು, ಶೂನ್ಯ ನಿಶ್ಶೂನ್ಯಗಳು, ಸಚರಾಚರಗಳು ಅಸ್ತಿತ್ವಕ್ಕೆ ಬಾರದ ಮುನ್ನ ಇದ್ದು ಇಲ್ಲದಂತೆ ಇದ್ದುದು ಏಕಮೇವಾದ್ವಿತೀಯವಾದ ಆ ಪರವಸ್ತುವೊಂದೇ' ಎಂದು ಪ್ರಭುದೇವರು ಹೇಳಿರುವರು. ಇದೇ ಭಾವವನ್ನು ಶಿವಯೋಗಿ ಲಲಾಮರಾದ ತೋಂಟದ ಸಿದ್ಧಲಿಂಗ ಶಿವಯೋಗಿಗಳು ಹೀಗೆ ವ್ಯಕ್ತ ಮಾಡಿರುವರು :

ಆದಿ ಮಧ್ಯಾವಸಾನವಿಲ್ಲದಂದು, ನಾದಬಿಂದು ಕಳೆಗಳಿಲ್ಲದಂದು,
ಸಾವಯವ ನಿರವಯವಿಲ್ಲದಂದು,
ತತ್ತ್ವ ಬ್ರಹ್ಮಾಂಡಾದಿ ಲೋಕಾದಿ ಲೋಕಂಗಳೇನೂ ಇಲ್ಲದಂದು,
ನಿತ್ಯನಿರಂಜನ ಪರವಸ್ತು ನೀನೊಬ್ಬನೇ ಇದ್ದೆಯಲ್ಲ
ಮಹಾ ಲಿಂಗಗುರುಶಿವಸಿದ್ಧೇಶ್ವರ ಪ್ರಭುವೇ"

ಒಟ್ಟಿನಲ್ಲಿ, ತತ್ತ್ವ ಬ್ರಹ್ಮಾಂಡಾದಿ ಲೋಕಂಗಳಿಲ್ಲದಂದು, ರೂಪ-ನಿರೂಪವಿಲ್ಲದಂದು ಇದ್ದುದು ಆ ಪರವಸ್ತುವೊಂದೇ ಎಂದು ಸಿದ್ಧವಾಗುವುದು. ಅತಿಸೂಕ್ಷ್ಮವಾಗಿ ಗ್ರಹಿಸಿ, ಆ ಪರವಸ್ತುವಿನ ಕ್ರಮ ಕ್ರಮ ಅವಸ್ಥೆಗಳನ್ನು ತೋಂಟದ ಸಿದ್ಧಲಿಂಗೇಶ್ವರರು 'ಸರ್ವಶೂನ್ಯ, ನಿರಾಲಂಬ', 'ಶೂನ್ಯಲಿಂಗ' ಮತ್ತು 'ನಿಃಕಲ ಲಿಂಗ' ಎಂಬುದಾಗಿ ಅರುಹಿರುವರು. ಋಗ್ವೇದದ ನಾಸದೀಯ ಸೂಕ್ತವೂ ಕೂಡ—

"ನ ಅಸತ್ ಆಸೀತ್, ನಸತ್ ಆಸೀತ್, ತದಾನೀಂ, ನಾಸೀದ್ ರಜೋ,
—ನೋ ವ್ಯೋಮಾ ಪರೋಯತ್।
ಆನೀದವಾತಂ ಸ್ವಧಯಾ ತದೇಕಂ ತಸ್ಮಾತ್ ಅನ್ಯತ್ ನಪರಃ ಕಿಂಚನಾಸ ॥"

—ಸತ್ ಅಸತ್‌ಗಳಾಗಲಿ, ಹಗಲು ರಾತ್ರಿಗಳಾಗಲಿ, ಆಕಾಶ ಅಂತರಿಕ್ಷಗಳಾಗಲಿ, ಇವಾವುವೂ ಇಲ್ಲದಂದು ಇದ್ದುದು ಪರಬ್ರಹ್ಮವೊಂದೇ. ಅದು 'ಸ್ವಧಯಾ' ಎಂದರೆ ಸ್ವಶಕ್ತಿಯಿಂದ ಕೂಡಿದ್ದುದು ಎಂಬುದು ವ್ಯಕ್ತವಾಗುವುದು. ಇದೇ ಭಾವವನ್ನು ಇನ್ನೂ ಹೆಚ್ಚು ಅರ್ಥಪೂರ್ಣವಾಗಿ ಸ್ವತಂತ್ರಸಿದ್ಧಲಿಂಗೇಶ್ವರರು ಹೀಗೆ ವ್ಯಕ್ತಮಾಡಿರುವರು:

"ಧರೆ–ಜಲ–ಅಗ್ನಿ–ವಾಯು–ಅಂಬರವಿಲ್ಲದಂದು, ಅಂತರ ಹದಿನಾಲ್ಕು ಭುವನ ನೆಲೆಗೊಳ್ಳದಂದು; ದಿವಾ, ರಾತ್ರಿ. ಚಂದ್ರ, ಸೂರ್ಯ, ನಕ್ಷತ್ರ, ಗ್ರಹ ರಾಶಿಗಳಿಲ್ಲದಂದು, ಅಷ್ಟದಿಕ್ಕು ಅಷ್ಟಕುಲ ಪರ್ವತಗಳಿಲ್ಲದಂದು, ಸಪ್ತಸಮುದ್ರಂಗಳು, ಸಪ್ತದ್ವೀಪಂಗಳಿಲ್ಲದಂದು, ಮಹಾ ಮೇರು, ನವಖಂಡ ಪೃಥ್ವಿ ಮಧ್ಯದಲ್ಲಿ ಸ್ಥಾಪಿಸದಂದು ಸಿಡಿಲು ಮಿಂಚು ಚಳಿಮಳೆಗಳಿಲ್ಲದಂದು. ನರಸುರ ತಿರ್ಯಗ್ಜಾತಿಗಳು, ಸ್ಥಾವರ ಜಂಗಮಾತ್ಮಕವಾದ ಸಮಸ್ತ ಪ್ರಪಂಚ ಪ್ರಸರಿಸದಂದು ನೀನೊಬ್ಬನೇ ಇದ್ದೆಯಲ್ಲ ನಿಜ ಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ"

ಪರಬ್ರಹ್ಮವೇ ಶಿವನೆಂಬುದು 'ಶ್ವೇತಾಶ್ವತರೋಪನಿಷತ್ತಿ'ನ–

"ಯದಾತಮಃ ತತ್ ನ ದಿವಾ ನ ರಾತ್ರಿಃ ।
ನ ಸತ್ ನ ಚ ಅಸತ್ ಶಿವ ಏವ ಕೇವಲಃ "॥

—ಎಂಬ ಮಾತಿನಿಂದ ವ್ಯಕ್ತವಾಗುವುದು. ಶಿವ–ಶಕ್ತಿಯರು, ಚಂದ್ರ–ಚಂದ್ರಿಕೆ, ಪುಷ್ಪ–ಸುಗಂಧ ಇವುಗಳಿಗೆ ಇರುವ ಸಂಬಂಧದಂತೆ ಬಿಚ್ಚಿ ಬೇರಾಗದ ಸಂಬಂಧದಿಂದ ಕೂಡಿರುವರು. ಇದನ್ನು 'ಸಿದ್ಧಾಂತ ಶಿಖಾಮಣಿ' ಯು—

"ಯಥಾ ಚಂದ್ರೇ ಸ್ಥಿರಾ ಜ್ಯೋತ್ಸ್ನಾ ವಿಶ್ವವಸ್ತು ಪ್ರಕಾಶಿನೀ ।
ತಥಾ ಶಕ್ತಿರ್ವಿಮರ್ಶಾಖ್ಯಾ ಪ್ರಕಾಶೇ ಬ್ರಹ್ಮಣಿ ಸ್ಥಿರಾ ॥"

—ಎಂದು ಹೇಳಿರುವುದು. ಈ ಭಾವವನ್ನೇ ಮರಿತೋಂಟದಾರ್ಯರು

ಸುಸ್ಪಷ್ಟವಾದ ಮಾತಿನಿಂದ "ಶಿವನನ್ನು ಬಿಟ್ಟು ಶಕ್ತಿಯಿಲ್ಲ, ಶಕ್ತಿಯನ್ನು ಬಿಟ್ಟು ಶಿವನಿಲ್ಲ" ಎಂಬುದನ್ನು—

"ನ ಶಿವೇನ ವಿನಾಃ ಶಕ್ತಿಃ ನ ಶಕ್ತಿರಹಿತಶ್ಶಿವಃ"

—ಎಂಬುದಾಗಿ 'ವೀರಶೈವಾನಂದ ಚಂದ್ರಿಕೆ' ಯಲ್ಲಿ ಹೇಳಿರುವರು.

"ಶಿವಶಕ್ತಿ ಸಂಪುಟವೆಂಬುದೆಂತು ಹೇಳಿರಣ್ಣ.
ಶಿವನೇ ಚೈತನ್ಯಾತ್ಮಕನು, ಶಕ್ತಿಯೇ ಚಿತ್ತು,
ಇಂತೀ ಚೈತನ್ಯಾತ್ಮಕನೇ ಚಿತ್ ಸ್ವರೂಪನಾದ ಆತನೇ
—ಶರಣ ಗುಹೇಶ್ವರಾ"

—ಹೀಗೆ ಶಿವ-ಶಕ್ತಿಯರು ಬೆರೆಸಿ ಬೇರಿಲ್ಲದಂತೆ ಒಡವೆರೆದು ಒಂದಾಗಿ ಏಕೀಭವಿಸಿದಂತೆ ಇರುವುದನ್ನು ನಿಜಗುಣ ಶಿವಯೋಗಿಗಳು 'ಅರವತ್ತು ಮೂರು ಮಂದಿ ಪುರಾತನರ ಸ್ತೋತ್ರ' ದಲ್ಲಿ ಬಹುಸೊಗಸಾಗಿ ನಿರೂಪಿಸಿದ್ದಾರೆ.

"ಇಂಗಡಲೊಳಿಂಪು ಬೆಳದಿಂಗಳೊಳು ತಂಪು, ಕುಸು
ಮಂಗಳೊಳು ಕಂಪು ಬೆರೆದಂತೆ। ಪರಮನೊಳು
ಪಿಂಗದಗಸುತೆಗೆ ನತನಪ್ಪೆಂ॥"

—ಶಕ್ತಿಯು ಸನಾತನಿಯಾಗಿ ಶಿವನಿಷ್ಠವಾಗಿದೆ. ಈ ವಿಮರ್ಶ ಶಕ್ತಿಯು ಚಿತ್, ಆನಂದ, ಇಚ್ಛಾ, ಜ್ಞಾನ, ಕ್ರಿಯಾಶಕ್ತಿಗಳಿಂದ ಕೂಡಿರುವುದೆಂದೂ ಮರಿತೋಂಟದಾರ್ಯರು 'ಸಿದ್ಧಾಂತ ಶಿಖಾಮಣಿ'ಯ ವ್ಯಾಖ್ಯಾನದಲ್ಲಿ ಹೇಳಿರುವರು. ಚಿತ್ ಆನಂದಗಳಿಂದ ಕೂಡಿದುದು 'ಅವಿಭಾಗ ಪರಾಮರ್ಶ ಶಕ್ತಿ'—ಎಂದೂ, ಇಚ್ಛಾ ಜ್ಞಾನ, ಕ್ರಿಯೆಗಳಿಂದ ಕೂಡಿದುದೇ 'ವಿಭಾಗ ಪರಾಮರ್ಶ ಶಕ್ತಿ' ಎಂದೂ, ಈ ಶಕ್ತಿಯೇ ಅನಂತ ಶಕ್ತಿಯ ವೈವಿಧ್ಯದಿಂದ ಗುಣತ್ರಯಾತ್ಮಕವಾಗಿ ಪರಿಣಾಮಗೊಂಡು ಸೃಷ್ಟಿಯ ವೈಚಿತ್ರ್ಯಕ್ಕೆ ಕಾರಣವಾಗಿದೆ. ಧ್ಯಾನಯೋಗದಿಂದ ಋಷಿಗಳು ದೇವಾತ್ಮನಲ್ಲಿ ನಿಗೂಢವಾಗಿಯೂ ಗುಣಾತ್ಮಕವಾಗಿಯೂ ಇರುವ ಈ ಶಕ್ತಿಯನ್ನು ಕಂಡುದು 'ಶ್ವೇತಾಶ್ವತರ ಉಪನಿಷತ್ತಿ'ನ—

"ತೇ ಧ್ಯಾನಯೋಗಾನುಗತಾ ಅಪಶ್ಯನ್ !
ದೇವಾತ್ಮ ಶಕ್ತಿಂ ಸ್ವಗುಣೈಃ ನಿಗೂಢಾಂ ॥

ಎಂಬ ಮಾತಿನಿಂದ ತಿಳಿದು ಬರುವುದು.

ಗೂಳೂರು ಸಿದ್ಧವೀರಣ್ಣೊಡೆಯರು 'ಶೂನ್ಯಸಂಪಾದನೆ'ಯಲ್ಲಿ ಸೃಷ್ಟಿಯ ಬಗೆಗೆ ಈ ರೀತಿ ಹೇಳಿದ್ದಾರೆ:

"ಪ್ರಥಮದಲ್ಲಿ ಅಖಂಡಾದ್ವಯ ಅನುಪಮ ನಿರವಯ ನಿರಂಜನ ಸರ್ವಶೂನ್ಯವನ್ನೊಳಕೊಂಡ ಸಚ್ಚಿದಾನಂದ ನಿತ್ಯ ಪರಿಪೂರ್ಣ ನಿಃಕಲ ಲಿಂಗವು ಧ್ಯಾನ ಪೂಜೆಗಳಿಲ್ಲದೆ ನಿರವಯದಲ್ಲಿ ಬಯಲಿಗನಾಗಿ ಇರಬಾರದೆಂದು ತನ್ನ ಸ್ವೇಚ್ಛಾಲೀಲಾ ವಿಲಾಸದ ನೆನಹಿನಿಂದ ತನ್ನ ಚಿತ್ಪ್ರಭಾ ಸಾಮರ್ಥ್ಯ ಶಕ್ತಿಯ ಮುಂದುಗೊಂಡು ಅನಂತ ಕೋಟಿ ಬ್ರಹ್ಮಾಂಡಗಳನ್ನು ಅಣುಕೋಟಿ ಆತ್ಮರುಗಳನ್ನು ತನ್ನಲ್ಲಿಯೇ ಪುಟ್ಟಿಸಿ, ಆ ಆತ್ಮರುಗಳಿಗೆ ಪಂಚವಿಂಶತಿ ತತ್ತ್ವಂಗಳ ಸಂಬಂಧಿಸಿದಲ್ಲಿ, ಆ ಆತ್ಮರುಗಳು ದೇಹೋಹಮೆಂಬ ಜಾತಿವರ್ಣಾಶ್ರಮ, ಕುಲಗೋತ್ರ ನಾಮ ಸೀಮೆ ಸುಖ-ದುಃಖ ಬಂಧಮೋಕ್ಷಕ್ಕೊಳಗಾಗಿ, ತಮ್ಮ ನಿಜಸ್ವರೂಪವ ಮರೆದ ಆತ್ಮರುಗಳ ಕಾಲ ಕಾಮರಿಗೆ ವಶವ ಮಾಡಿ, ಅವರ ಸುಖ - ದುಃಖ ಬಂಧಮೋಕ್ಷಂಗಳ ಹೊದ್ದದೆ ಯಂತ್ರವಾಹಕನಾಗಿ ಆಡಿಸುತ್ತಿರ್ಪನಾ ಪರಶಿವಲಿಂಗವು."

ಈ ಚಿತ್ಪ್ರಭಾ ಸಾಮರ್ಥ್ಯ ಶಕ್ತಿಯನ್ನು "ನಿಮ್ಮ ನೆನಹೇ ನಿಮಗೆ ಸಂಕಲ್ಪ ಶಕ್ತಿಯಾಯಿತ್ತಲ್ಲ" ಎಂದು ಶರಣರು ಮತ್ತು "ನಿಃಕಲ ಶಿವತತ್ತ್ವದಲ್ಲಿ ಜ್ಞಾನ ಚಿತ್ ಉದಯವಾಯಿತು. ಮತ್ತು ಆ ಚಿತ್‌ನ ಚಿನ್ನಾದವೇ 'ಬ'ಕಾರ, ಚಿದ್ಬಿಂದುವೇ 'ಸ'ಕಾರ ಚಿತ್ ಕಳೆಯೇ 'ವ'ಕಾರ. ಆ ಚಿನ್ನಾದ ಚಿದ್ಬಿಂದು, ಚಿತ್ಕಳೆ ಮೂಲ ಚಿತ್ ಎಂಬ ಚತುರ್ವಿಧವು ಗಟ್ಟಿಗೊಂಡು ಅಖಂಡ ಗೋಳಕಾರ ಮಹಾಲಿಂಗ ವಾಯಿತ್ತು ಎಂಬುದಾಗಿ ತೋಂಟದ ಸಿದ್ಧಲಿಂಗೇಶ್ವರರು ವರ್ಣಿಸಿರುವರು.

ಸಂಕಲ್ಪ, ನೆನಹು' ಲೀಲೆ, ವಿನೋದ–ಇವು ವಚನಶಾಸ್ತ್ರದಲ್ಲಿ ಬಹು ಅರ್ಥ ಪೂರ್ಣವಾದುವುಗಳು ಮತ್ತು ಸೃಷ್ಟಿ ಹೇಗಾಯಿತೆಂಬುದನ್ನು ತಿಳಿಯಲು ನೆರ ವಾಗುವುವು.

ಏನೆಂದೆನಲಿಲ್ಲದ ಮಹಾಘನಲಿಂಗವು ತನ್ನ ಲೀಲೆಯಿಂದ
ತಾನೇ ಸ್ವಯಂಭು ಲಿಂಗವಾಯಿತ್ತು. ಆ ಲಿಂಗದಿಂದಾಯಿತ್ತು.
ಶಿವಶಕ್ತ್ಯಾತ್ಮಕ. ಆ ಶಿವಶಕ್ತ್ಯಾತ್ಮಕದಿಂದಾದುದು ಆತ್ಮ.
ಆತ್ಮನಿಂದಾದುದು–ಆಕಾಶ.

ಆಕಾಶದಿಂದಾದುದು ವಾಯು. ವಾಯುವಿನಿಂದಾದುದು ಅಗ್ನಿ.
ಅಗ್ನಿಯಿಂದಾದುದು ಅಪ್ಪು. ಅಪ್ಪುವಿನಿಂದಾದುದು ಪೃಥ್ವಿ.
ಪೃಥ್ವಿಯಿಂದಾದುದು ಸಕಲ ಜೀವರೆಲ್ಲ. ಇವೆಲ್ಲ ನಿಮ್ಮ ನೆನಹು
ಮಾತ್ರದಿಂದಾದುವು ಚಿಮ್ಮಲಿಗೆಯ ಚೆನ್ನರಾಮಾ.
"ವಸ್ತುವೊಂದೇ ತನ್ನ ಲೀಲೆಯಿಂದ ಎರಡಾಗಬಲ್ಲುದುದೊಂದೇ"

ಎಂಬ ಚಂದಿಮರಸರ ನುಡಿಯಲ್ಲಿಯೂ,

"ತನ್ನ ವಿನೋದಕ್ಕೆ ತಾನೇ ಸೃಜಿಸಿದ ಸಕಲ ಪ್ರಪಂಚವನು,
ತನ್ನ ವಿನೋದಕ್ಕೆ ತಾನೇ ತಿರುಗಿಸಿದ ಅನಂತ ದುಃಖಂಗಳಲಿ.
ಇಂತೆನ್ನ ಚನ್ನಮಲ್ಲಿಕಾರ್ಜುನನೆಂಬ ಪರಶಿವನು
ತನ್ನ ಜಗದ್ವಿಲಾಸ ಸಾಕಾದಡೆ ಮತ್ತೆ ತಾನೇ ಪರಿವನದರ
ಮಾಯಾ ಪಾಶವನು."

—ಎಂಬ ಅಕ್ಕಮಹಾದೇವಿಯವರ ವಚನದಲ್ಲಿಯೂ,

"ಶಿವ ತನ್ನ ವಿನೋದಕ್ಕೆ ರಚಿಸಿದನು ಅನಂತ ವಿಶ್ವವನು. ರಚಿಸಿದವನು ವಿಶ್ವಕ್ಕೆ ಹೊರಗಾಗಿರ್ದನೆ? ಇಲ್ಲ-ವಿಶ್ವಮಯ ತಾನಾದನು. ವಿಶ್ವವೆಲ್ಲವೂ ತಾನಾ ದೊಡೆ ವಿಶ್ವದುತ್ಪತ್ತಿ ಸ್ಥಿತಿ ಲಯಕ್ಕೊಳಗಾದನೆ? ಇಲ್ಲ. ಅದೇನು ಕಾರಣವೆಂದೊಡೆ, ಅಜಾತನಾಗಿ ಉತ್ಪತ್ತಿ ಇಲ್ಲ. ಕರ್ಮರಹಿತನಾಗಿ ಸ್ಥಿತಿಗೊಳಗಲ್ಲ. ಮರಣರಹಿತ ನಾಗಿ ಲಯಕ್ಕೊಳಗಲ್ಲ. ಇಂತೀ ಗುಣತ್ರಯಂಗಳ ಹೊದ್ದಲರಿಯ. ತಾನಲ್ಲದೆ

ವಿಶ್ವಕ್ಕಾಧಾರವಿಲ್ಲಾಗಿ ದೂರಸ್ಥನಲ್ಲ. ತನ್ನಲ್ಲಿ ತಾನಲ್ಲದೆ ಅನ್ಯವು ತೋರಲರಿಯದಾಗಿ ಇದಿರಿಲ್ಲ. ಇದಿರಿಲ್ಲಾಗಿ ವಿಶ್ವಮಯ ತಾನಾದುದೇ ಸತ್ಯ. ಅರಸು ಆಳಾಗಬಲ್ಲ. ತನ್ನ ವಿನೋದಕ್ಕೆ, ಮರಳಿ ಅರಸಾಗಬಲ್ಲ. ನಮ್ಮ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರನು ಜಗವಾಗಲೂ ಬಲ್ಲ. ಜಗವಾಗದಿರಲೂ ಬಲ್ಲನಯ್ಯಾ"
—ಎಂಬ ಉರಿಲಿಂಗ ಪೆದ್ದಿಗಳ ಮಾತಿನಲ್ಲಿಯೂ.

"ಮಹಾಕರ್ತನು ತನ್ನ ವಿನೋದಕ್ಕೆ ಜಗವ ನಿರ್ಮಿಸಿದ ಅನಂತ
ಲೋಕಂಗಳನು, ಚಂದ್ರ-ಸೂರ್ಯ-ನಕ್ಷತ್ರ-ಸಿಡಿಲು-ಮಿಂಚುಗಳನು,
ತತ್ತ್ವ ವಿತತ್ವ ಕಾಲಕರ್ಮ ಪ್ರಳಯಂಗಳನು, ಹೆಣ್ಣು ಗಂಡು ಜಾತಿ
ವಿಜಾತಿಗಳಾದ ನರಸುರ ತಿರ್ಯಗ್ಜಾತಿ ಸ್ಥಲಭೋಗ ಆಯುಷ್ಯ
ನಿದ್ರೆ ಮೊದಲಾದ ಸಮಸ್ತ ಪ್ರಪಂಚಗಳನು, ಎಂಭತ್ತುನಾಲ್ಕು ಲಕ್ಷ
ಜೀವರಾಶಿಗಳನು, ಹುಟ್ಟಿಸಿದ ತನ್ನ ವಿನೋದಕ್ಕೆ;
ಯಂತ್ರ-ವಾಹಕನು ಮಾಡಿದ ಕಟ್ಟಳೆಯನ್ನಾರಿಗೂ ತಿಳಿಯಬಾರದು ನೋಡಾ.
ಸರ್ವಾತ್ಮರು ಬಂಧಿಸಿಕೊಂಬ ಪಶುಗಳಾದರು,
ತಾ ಪಶುಪತಿಯಾದ ನಮ್ಮ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರ."

—ಎಂಬ ಸ್ವತಂತ್ರ ಸಿದ್ಧಲಿಂಗೇಶ್ವರರ ವಾಣಿಯಲ್ಲಿಯೂ,

"ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ
ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು.
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ ಕೂಡಲಸಂಗಮದೇವಾ''

—ಎಂಬ ಅಣ್ಣನವರ ನುಡಿಮುತ್ತಿನಲ್ಲಿಯೂ,

"ಮರದೊಳಗಣ ಪತ್ರೆ ಫಲಂಗಳು ಮರಕಾಲ ವಶದಲ್ಲಿ ತೋರುವಂತೆ
ಹರನೊಳಗಣ ಲೀಲಾ ಪ್ರಕೃತಿ ಸ್ವಭಾವಂಗಳು ಹರ ಲೀಲಾವಶದಲ್ಲಿ
ತೋರುವುವು.
ಲೀಲೆಯಾದಡುಮಾಪತಿ. ಲೀಲೆ ನಿಂದಡೆ ಸ್ವಯಂಭು ನಮ್ಮ
ಗುಹೇಶ್ವರಲಿಂಗವು.''

—ಎಂಬ ಪ್ರಭುದೇವರ ಜ್ಯೋತಿರ್ಲಿಂಗ ಸದೃಶವಾದ ಸೊಲ್ನುಡಿಯಲ್ಲಿಯೂ ಸೃಷ್ಟಿ ಹೇಗಾಯಿತೆಂಬುದು ಸುವ್ಯಕ್ತವಾಗುವುದು. ಶಿವನ ಪರಾಮರ್ಶ ಶಕ್ತಿ, ಲೀಲೆ, ನೆನಹು, ಸಂಕಲ್ಪ, ವಿನೋದ, ಇಚ್ಛೆ—ಇವುಗಳಿಂದ ಉದಿಸಿದ ಜಗತ್ತು ಶಿವನಿಂದ ಅನ್ಯವಲ್ಲ. ಜಗತ್ತು ಶಿವನಂತೆಯೇ ಸತ್ಯವೆಂಬುದನ್ನು ಶರಣರು ದೃಷ್ಟಾಂತಪೂರ್ವಕವಾಗಿ ಪ್ರತಿಪಾದಿಸಿರುವರು.

"ಸಮುದ್ರದೊಳಗೆ ತೆರೆನೊರೆಗಳು ನೆಗಳ್ದವೆಂದರೆ,
ಸಮುದ್ರದಿಂದನ್ಯವಪ್ಪುವೆ?
ನಿರ್ವಿಕಾರ ನಿತ್ಯ ನಿರಂಜನ ನಿರ್ಗುಣ ಪರಿಪೂರ್ಣ ನಿರ್ವಿಕಲ್ಪ
ಪರಬ್ರಹ್ಮ ಶಿವನಿಂದ ಜಗತ್ತು ಉದಯಿಸಿತ್ತೆಂದಡೆ
ಶಿವನಿಂದನ್ಯವೆನ್ನಬಹುದೆ !
ಇಂತಪ್ಪ ಅರಿವಕೊಟ್ಟು ಸಮ್ಯಕ್ ಜ್ಞಾನ ಕಂದೆರೆದಿಪ್ಪುದಯ್ಯಾ
ಗುಹೇಶ್ವರಾ."

"ಘನಗಂಭೀರ ವಾರಿಧಿಯೊಳಗೆ ಫೇನ ತರಂಗ ಬದ್ಬುಧ
ಶೀಕರಾದಿಗಳಂ ತೋರಿದಡೆ
ಆ ಸಾಗರ ಹೊರಗಾಗಿ ತೋರಬಲ್ಲವೆ?
ಆ ಪರಶಿವ ಸಾಗರದಲ್ಲಿ ತೃಣಾದಿ ಬ್ರಹ್ಮಾಂತವಾದ ದೇಹಿಗಳು
ಉತ್ಪತ್ತಿಯಾಗಿ ಮತ್ತಲ್ಲಿಯೇ ಅಡಗುತ್ತಿಪ್ಪರು ನೋಡಾ.
ಇದು ಕಾರಣ, ಲಿಂಗ ನಿರ್ಮಿತದಿಂದ ಜಗತ್ತಾಯಿತೆಂದೆ ಕಾಣಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ" ॥

—ಅಲ್ಲಮಪ್ರಭು ಮತ್ತು ತೋಂಟದ ಸಿದ್ಧಲಿಂಗೇಶ್ವರರ ನುಡಿಗಳಿಂದ ಸಾಗರದಲ್ಲಿ ಉದಿಸಿದ ನೊರೆತೆರೆ ನಾಮರೂಪಗಳಿಂದ ಸಾಗರದಿಂದ ಭಿನ್ನವಾಗಿ ಕಂಡರೂ ಮೂಲ ಸಾಗರದಿಂದ ಅನ್ಯವಲ್ಲದಿರುವಂತೆ, ಶಿವನಿಂದುದಿಸಿದ ಜಗತ್ತು ಶಿವನಿಂದ ಅನ್ಯವಲ್ಲ. ಶಿವನಂತೆಯೇ ಸತ್ಯ. ಚಂದಿಮರಸರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಹೇಳುತ್ತಾರೆ.

"ಪರಶಿವನೆಂಬ ಅಂಬುಧಿಯಲ್ಲಿ ಸಕಲ ಬ್ರಹ್ಮಾಂಡಗಳಾದುವಲ್ಲದೆ
ಬೇರಾಗ ಬಲ್ಲವೆ?
ಇದ ಬೇರೆಂಬ ಅರೆಮರುಳರ ನಾನೇನೆಂಬೆ?
ವಿಶ್ವವ ತಿಳಿದು ನೋಡಲು ಚಿಮ್ಮಲಿಗೆಯ ಚೆನ್ನರಾಮನೆಂಬ
ಲಿಂಗವು ತಾನೇ"

'ಜಗತ್ತು ಶಿವನಿಂದ ಭಿನ್ನ' ಎಂಬುವವರನ್ನು ಚಂದಿಮರಸರು 'ಅರೆಮರುಳರು' ಎಂದಿದ್ದಾರೆ.

'ಮಯೂರಾಂಡರಸನ್ಯಾಯ,' 'ಸುವರ್ಣಕುಂಡಲನ್ಯಾಯ' ಇವುಗಳಿಂದ ಶರಣರು ಜಗತ್ತು ಸತ್ಯವೆಂಬುದನ್ನು ಪ್ರತಿಪಾದಿಸಿದ್ದಾರೆ. ನವಿಲಿನ ತತ್ತಿಯ ರಸದಲ್ಲಿ ಮುಂದುದಿಸಲಿರುವ ನವಿಲು, ಅದರ ವೈವಿಧ್ಯಪೂರ್ಣವಾದ ಆಕಾರ, ವರ್ಣವಿನ್ಯಾಸ ದಿಂದ ಕೂಡಿದ ಗರಿ—ಕಾರ್ಯರೂಪವಾದ ಇವುಗಳು; ಕಾರಣರೂಪವಾದ ನವಿಲಿನ

ತತಿ ಯು ರಸದಲ್ಲಿ ಹುದುಗಿರುವಂತೆ; ಕಾರ್ಯರೂಪವಾದ ಕುಂಡಲ, ಓಲೆ, ಉಂಗುರ ಇತ್ಯಾದಿ ಆಭರಣಗಳು ಕಾರಣರೂಪವಾದ ಸುವರ್ಣದಿಂದಾಗುವಂತೆ; ಕಾರ್ಯ ರೂಪವಾದ ಜಗತ್ತು ಕಾರಣರೂಪನಾದ ಶಿವನಿಂದ ಉದಿಸಿರುವುದು.

"ಮೃತ್ತಿಕೆ ಒಂದರಲಾದ ಭಾಂಡದಂತೆ,
ಚಿನ್ನ ಒಂದರಲಾದ ಭಂಗಾರದಂತೆ,
ಉದಕ ಒಂದರಲಾದ ವಾರಿಕಲ್ಲಂತೆ,
ಬ್ರಹ್ಮದಿಂದಲಾದ ಜಗವು ಭಿನ್ನವೆಲ್ಲಿಯದು ಸಕಲೇಶ್ವರಯ್ಯ"

ಕುಂಬಾರನು ಮಣ್ಣಿನಿಂದ ಗಡಿಗೆ, ಕೊಡ, ಮೊದಲಾದುವುಗಳನ್ನು ಮಾಡು ವನು. ಅಂತೆಯೇ ಸುವರ್ಣದಿಂದ ನಾನಾ ಬಗೆಯ ಆಭರಣಗಳನ್ನು ಮಾಡಿ ಅವುಗಳ ನಾಮ, ರೂಪ, ಆಕೃತಿ ಇವುಗಳಿಗೆ ಅನುಗುಣವಾಗಿ ಬೇರೆ ಬೇರೆ ಹೆಸರು ಗಳನ್ನು ಕೊಡುವೆವು. ಆದರೆ ಮಣ್ಣು ಮತ್ತು ಸುವರ್ಣ ಈ ರೀತಿಯಾಗಿ ಪರಿಣಾಮ ಹೊಂದಿದಾಗ್ಯೂ ಅವು ಮೂಲಭೂತವಾದ ಮಣ್ಣು ಮತ್ತು ಸುವರ್ಣದಿಂದ ಬೇರಾಗು ವುದಿಲ್ಲ. ಹಾಲು ಮೊಸರಾಗಿ ಪರಿಣಾಮ ಹೊಂದಿದಾಗ ಹಾಲಿನ ಸ್ವರೂಪ ನಾಶ ವಾಗುವುದು. ಈ ರೀತಿಯಾಗಿ ಹಾಲಿನಂತೆ ಮೊದಲಿನ ಸ್ವರೂಪ ಕಳೆದುಕೊಳ್ಳುವ ಪರಿಣಾಮಕ್ಕೆ 'ವಿಕೃತಪರಿಣಾಮವಾದ'ವೆಂತಲೂ; ಮೂಲ ಬಂಗಾರ ಅಥವಾ ಮಣ್ಣಿನಂತೆ ಸ್ವರೂಪವನ್ನು ಕಳೆದುಕೊಳ್ಳದೇ ತನ್ನ ಅಸ್ತಿತ್ವವನ್ನು ಉಳಿಸಿಕೊಂಡೇ ಪರಿಣಾಮ ಹೊಂದುವುದಕ್ಕೆ 'ಅವಿಕೃತ ಪರಿಣಾಮವಾದ'ವೆಂತಲೂ ಹೆಸರು. ಒಟ್ಟಿ ನಲ್ಲಿ ಸ್ವರೂಪವನ್ನು ಕಳೆದುಕೊಂಡು ಪರಿಣಾಮ ಹೊಂದುವ ಸಾಂಖ್ಯ ದರ್ಶನದ ಪರಿಣಾಮಕ್ಕೆ ವಿಕೃತ ಪರಿಣಾಮವೆಂದೂ, ಪರಿಣಾಮ ಹೊಂದಿದರೂ ಸ್ವರೂಪ ನಾಶವಾಗದೇ ತನ್ನ ಅಸ್ತಿತ್ವದ ಸ್ವರೂಪವನ್ನುಳಿಸಿಕೊಳ್ಳುವ ಶಿವಾದ್ವೈತಿಗಳ ಪರಿ ಣಾಮಕ್ಕೆ 'ಅವಿಕೃತ ಪರಿಣಾಮವಾದ'ವೆಂದೂ ಹೆಸರು.

"ಆತ್ಮಶಕ್ತಿ ವಿಕಾಸೇನ ಶಿವೋ ವಿಶ್ವಾತ್ಮನಾ ಸ್ಥಿತಃ''
—ಎಂಬ ಶಿವಾದ್ವೈತಿಗಳ ಪ್ರಸಿದ್ಧವಾದ ನುಡಿ,

"ಸ್ವಶಕ್ತಿ ಪ್ರಚಯೋ ಅಸ್ಯ ವಿಶ್ವಂ''
—ಎಂಬ ಕಾಶ್ಮೀರ ಶಿವಾದ್ವೈತಿಗಳ ನುಡಿ, ಈ ಅಭಿಪ್ರಾಯವನ್ನೇ ಸ್ಪಷ್ಟವಾಗಿ ಸಮರ್ಥಿಸುವುವು.

ಕುಂಬಾರ ಮಡಕೆಯನ್ನು ಮಾಡುವಾಗ ತನಗಿಂತ ಅನ್ಯವಾದ ಮಣ್ಣನ್ನು ಉಪಯೋಗಿಸುವನು. ಕುಂಬಾರನು ನಿಮಿತ್ತ ಕಾರಣ, ಮಣ್ಣು ಉಪಾದಾನ ಕಾರಣ. ಆದರೆ ಶಿವನು ಜಗತ್ತನ್ನು ಸೃಜಿಸುವಾಗ ತನ್ನಿಂದನ್ಯವಾದ ಮತ್ತಾವುದೂ ವಸ್ತುವಿನ

ನೆರವಿಲ್ಲದೆ ಸೃಜಿಸುವುದರಿಂದ ಜಗತ್ತಿನುದಯಕ್ಕೆ ಶಿವನು ಅಭಿನ್ನನಿಮಿತ್ತೋಪಾದಾನ ಕಾರಣನಾಗುವನು.

"ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ....
ತಥಾಽಕ್ಷರಾತ್ ಸಂಭವತೀಹ ವಿಶ್ವಂ" ॥

ಎಂಬ 'ಮುಂಡಕೋಪನಿಷತ್ತಿ'ನ ಉಕ್ತಿಯು, ಜೇಡರ ಹುಳುವಿನ ದೃಷ್ಟಾಂತದ ಮೂಲಕ ಈ ಅಭಿಪ್ರಾಯವನ್ನೇ ಸಮರ್ಥಿಸುವುದು. ಯಾವ ರೀತಿಯಾಗಿ ಜೇಡರ ಹುಳುವು ಮತ್ತೊಂದು ವಸ್ತುವಿನ ನೆರವಿಲ್ಲದೆ, ಅಂದರೆ, ಉಪಾದಾನ ಕಾರಣದ ನೆರವಿಲ್ಲದೆ ತಾನೇ ಎಳೆಯನ್ನು ಹೇಗೆ ಸೃಜಿಸುವುದೋ ಹಾಗೆಯೇ ಪರಶಿವನು ತನ್ನಿಂದನ್ಯವಾದ ಯಾವ ವಸ್ತುವಿನ ನೆರವಿಲ್ಲದೆ ಈ ಜಗತ್ತನ್ನು ಸೃಜಿಸುವನು.

ವೀರಶೈವ ದರ್ಶನದ ಪ್ರಕಾರ ಜಗತ್ತು ಶಿವಮಯ. ಶಿವನು ಹೀಗೆ ಜಗತ್ತನ್ನು ಸೃಜಿಸಿದರೂ ಅಪರಿಮಿತ ಶಕ್ತಿಯಿಂದ ಒಡಗೂಡಿದ ಶಿವನು ಆವ ಪರಿಣಾಮವನ್ನೂ ಹೊಂದದೆ ತಾನೇ ತಾನಾಗಿರಬಲ್ಲನು. ಶಿವ ಜಗವಾಗಲೂ ಬಲ್ಲ. ಜಗವಾಗದಿರಲೂ ಬಲ್ಲ–ಎಂಬ ಶರಣರ ಮಾತು, ವಿಶ್ವೇಶ್ವರನು ವಿಶ್ವದೊಳಗೆ ಹೊದ್ದಿಯೂ ಹೊದ್ದದಿರಬಲ್ಲ, ವಿಶ್ವಾಧಿಪತಿಯಾಗಲೂ ಬಲ್ಲ"—ಎಂಬ ಉರಿಲಿಂಗ ಪೆದ್ದಿಗಳ ನುಡಿ ಮೇಲಿನ ಭಾವವನ್ನು ಸಮರ್ಥಿಸುವುದು.

ನ್ಯಾಯ ವೈಶೇಷಿಕರ ಆರಂಭವಾದವನ್ನೂ, ಅದ್ವೈತಿಗಳ ವಿವರ್ತವಾದವನ್ನೂ ಸಾಂಖ್ಯರ ಪರಿಣಾಮವಾದವನ್ನೂ ಅಂಗೀಕರಿಸದೆ ವೀರಶೈವ ದಾರ್ಶನಿಕರು 'ಅವಿಕೃತ ಪರಿಣಾಮವಾದ'ದ ಮೂಲಕ ಜಗತ್ತಿನ ಸೃಷ್ಟಿಯನ್ನು ಪ್ರತಿಪಾದಿಸಿರುವರು.

———

ಎನ್ನ ಕಷ್ಟಕುಲದಸೂತಕ ನಿಮ್ಮ ಹಸ್ತ ಮುಟ್ಟಿದಲ್ಲಿ ಬಯಲಾಯಿತು.
ಶುಕ್ಲ ಶೋಣಿತದಿಂದಾದ ಸೂತಕ ಲಿಂಗ ಮುಟ್ಟಲೊಡನೆ ಬಯಲಾಯಿತ್ತು.
ತಟ್ಟಿದ ಮುಟ್ಟಿದ ಸುಖಂಗಳ ಲಿಂಗ ಮುಖಕ್ಕೆ ಅರ್ಪಿಸಿದೆನಾಗಿ
ಎನ್ನ ಪಂಚೇಂದ್ರಿಯಂಗಳು ಬಯಲಾಯಿತ್ತು.
ಎನ್ನಂತರಂಗದಲ್ಲಿ ಜ್ಞಾನಜ್ಯೋತಿ ಎಡೆಗೊಂಡಿತ್ತಾಗಿ, ಒಳಗೂ
ಬಯಲಾಯಿತ್ತು.
ಸಂಸಾರಸಂಗವಾದ ಅವಸ್ಥೆ ಮೀರಿದ ಕ್ರೀಯಲ್ಲಿ ತರಹರವಾಯಿತ್ತಾಗಿ,
ಬಹಿರಂಗ ಬಯಲಾಯಿತ್ತು, ಅಭಿನವ ಮಲ್ಲಿಕಾರ್ಜುನಾ,
ನಿಮ್ಮ ಮುಟ್ಟಿದ ಕಾರಣ ನಾನು ಬಯಲಾದೆನು.

# ಶರಣಧರ್ಮ ಸಂದೇಶ

---

● ಡಾ॥ ಎಲ್. ತಿಪ್ಪೇರುದ್ರಸ್ವಾಮಿ, ಎಂ. ಎ., ಪಿ ಎಚ್. ಡಿ.
ಮೈಸೂರು ವಿಶ್ವವಿದ್ಯಾನಿಲಯ

ಜೀವನದ ಪೂರ್ಣತೆಗೆ ಧರ್ಮ ಅನಿವಾರ್ಯ. ಆದರೆ ಧರ್ಮದ ಸ್ವರೂಪ ಇಲ್ಲಿ ಅತ್ಯಂತ ವ್ಯಾಪಕವಾಗಬೇಕಾಗುತ್ತದೆ. ಕೇವಲ ಭಾವುಕವಾದ ಆಚಾರಗಳ ಸಮುದಾಯವಲ್ಲ; ಅವಿಚಾರಿತ ಶ್ರದ್ಧೆಯಲ್ಲ. ಬುದ್ಧಿ ಹೃದಯಗಳ ಸಮತೋಲನದ ಬೆಳವಣಿಗೆಗೆ ಸಹಾಯಕವಾಗಬಲ್ಲಂತಹುದೇ ಪೂರ್ಣ ಧರ್ಮ. ನಿಜವಾದ ಧರ್ಮ, ಆಚಾರದ ಒರೆಗಲ್ಲಿಗೆ ಉಜ್ಜಿದಷ್ಟೂ ಹೆಚ್ಚು ಹೊಳಪನ್ನು ಕೊಡುತ್ತದೆ; ವೈಜ್ಞಾನಿಕ ಆವಿಷ್ಕಾರಗಳ ಹಿನ್ನೆಲೆಯಲ್ಲಿ ವಿವೇಚಿಸಿದಷ್ಟೂ ಹೆಚ್ಚು ವ್ಯಾಪಕವಾಗುತ್ತದೆ, ಶಕ್ತಿಪೂರ್ಣವಾಗುತ್ತದೆ. ಅಂತಹ ಸನಾತನ ತತ್ತ್ವಗಳು ಮಾತ್ರ ಚಿರಂತನವಾದ ಧಾರ್ಮಿಕ ಸಂದೇಶವನ್ನು ಕೊಡಬಲ್ಲವು. ಬಸವಾದಿ ಶರಣರು ಆಚರಿಸಿ ತೋರಿಸಿದ ಧರ್ಮ ಅಂತಹ ಸನಾತನ ಶಾಶ್ವತ ತತ್ತ್ವಗಳ ತಳಹದಿಯ ಮೇಲೆ ಬೆಳೆದು ಬಂದದ್ದು.

ಶರಣರ ಧಾರ್ಮಿಕ ವಿವೇಚನೆಯಲ್ಲಿ ಆಧುನಿಕ ಮನೋಧರ್ಮಕ್ಕೆ ಅತ್ಯಂತ ಮೆಚ್ಚುಗೆಯಾಗುವ ಅಂಶವೆಂದರೆ ಸ್ವತಂತ್ರ ವಿಚಾರಶೀಲತೆ. ಅಂಧ ಶ್ರದ್ಧೆಗೆ ಅವರೆಂದೂ ಪುರಸ್ಕಾರ ಕೊಟ್ಟವರಲ್ಲ. "ಸತ್ಯವನೂ ಅಸತ್ಯವನೂ ಪ್ರತ್ಯಕ್ಷ ಪ್ರಮಾಣಿಸಿಯಲ್ಲದೆ ನಿಶ್ಚಯವನರಿಯಬಾರದು. ಗುರುವಾದಡೂ ಲಿಂಗವಾದಡೂ ಜಂಗಮವಾದಡೂ ಪರೀಕ್ಷಿಸಿ ಹಿಡಿಯದವನ ಭಕ್ತಿ ವಿರಕ್ತಿ, ತೂತು ಕುಂಭದಲ್ಲಿಯ ನೀರು, ಸೂತ್ರ; ತಪ್ಪಿದ ಬೊಂಬೆ" ಎನ್ನುತ್ತಾರೆ ಶರಣರು. ನೇರವಾಗಿ ತಮ್ಮ ಅರಿವಿಗೆ ಮತ್ತು ಅನುಭವಕ್ಕೆ ಬಾರದುದನ್ನು ಅವರು ಒಪ್ಪಲಿಲ್ಲ.

ಯಾವುದೇ ಗ್ರಂಥದಲ್ಲಿ ಹೇಳಿದೆಯೆಂಬ ಮಾತ್ರಕ್ಕೆ ಯಾವುದನ್ನೂ ನಾವು ಪ್ರಮಾಣವಾದುದೆಂದು ಹೇಳಬೇಕಾಗಿಲ್ಲ. ಇಂದು ನಮ್ಮ ಅನುಭವದ ಹಿನ್ನೆಲೆಯಲ್ಲಿ ಉಜ್ಜಿ ನೋಡಿದಾಗಲೂ ಅವು ಹೊಳೆದು ತೋರಬೇಕು. ಉಳಿಯುವಂತಿರಬೇಕು. ಅಂತಹವು ಮಾತ್ರ ಮಾನ್ಯವಾಗುತ್ತವೆ. ಸನಾತನ ತತ್ತ್ವಗಳಿಗೆ ಪ್ರಾಚೀನತೆಯೊಂದೇ ಆಧಾರವಲ್ಲ. ಸತ್ಯಸಾಧನೆಗೆ ಶಾಶ್ವತವಾದ ಮಾರ್ಗದರ್ಶನ ಮಾಡಿಸುವಂತಹ ತತ್ತ್ವಗಳು ಮಾತ್ರ ಸನಾತನವಾದುವು—ಎಂಬ ದೃಷ್ಟಿಯನ್ನು ಶರಣರು ತಮ್ಮ ಧಾರ್ಮಿಕ

ವಿವೇಚನೆಯಲ್ಲಿ ವ್ಯಕ್ತಪಡಿಸಿದರು. ಆದುದರಿಂದಲೇ ಅನೇಕ ವೇಳೆ ಅವರು ಧರ್ಮದ ಹೆಸರಿನಲ್ಲಿ ಬೆಳೆದುಬಂದ ವ್ಯರ್ಥ ಆಚಾರಗಳನ್ನೂ ಸಂಪ್ರದಾಯಗಳನ್ನೂ ಅವುಗಳನ್ನು ಎತ್ತಿ ಹಿಡಿದಿರುವ ಗ್ರಂಥಗಳನ್ನೂ ಕಟುವಾಗಿ ಖಂಡಿಸಿದ್ದಾರೆ.

"ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ.
ತರ್ಕದ ಬೆನ್ನ ಬಾರನೆತ್ತುವೆ,
ಆಗಮದ ಮೂಗ ಕೊಯ್ಯುವೆ ನೋಡಯ್ಯ
ಮಹಾದಾನಿ ಕೂಡಲ ಸಂಗಮದೇವಾ
ಮಾದಾರ ಚನ್ನಯ್ಯನ ಮನೆಯ ಮಗ ನಾನಯ್ಯ"

ಇತ್ಯಾದಿ ಅನೇಕ ಮಾತುಗಳನ್ನು ಉದಾಹರಿಸಬಹುದು. ಇಲ್ಲಿ ಖಂಡನೆ ಮುಖ್ಯವಲ್ಲ. ಬಸವಣ್ಣನವರು ವೇದ ಶಾಸ್ತ್ರ ಆಗಮಾದಿಗಳ ನಿಂದಕರಲ್ಲ. ಆದರೆ ಅವುಗಳ ಹೆಸರಿನಿಂದ ಬೆಳೆದುಬಂದ ಅನೇಕ ಸಂಪ್ರದಾಯಗಳನ್ನು ತೊಡೆದುಹಾಕಲು ಪ್ರಯತ್ನಿಸಿದರು. ಯಾವುದೇ ಧರ್ಮಗ್ರಂಥಗಳಾಗಲೀ ಅವುಗಳಿಂದ ಶಾಶ್ವತವಾದ ಸನಾತನ ತತ್ವಗಳನ್ನು ವಿವೇಚನೆಯಿಂದ ಅರಿತು ಅಳವಡಿಸಿಕೊಳ್ಳಬೇಕೇ ಹೊರತು, ಕಾಲದ ಪರಿಮಿತಿಗೆ ಒಳಗಾಗಿರುವ ಯುಗ ಧರ್ಮಗಳನ್ನೇ ಅತಿಯಾಗಿ ಬೆಳಸಿ ವಿಕೃತಾಚರಣೆಗೆ ಕಾರಣರಾಗಬಾರದೆಂಬುದು ಈ ಖಂಡನೆಯ ಹಿಂದಿರುವ ಮನೋಧರ್ಮ. ವೇದಗಳ ಕರ್ಮಕಾಂಡವನ್ನು ಬಿಟ್ಟು ಮುಂದೆ ಹೋದ ಉಪನಿಷತ್ತುಗಳೂ ಇದೇ ಮನೋಧರ್ಮವನ್ನು ವ್ಯಕ್ತಪಡಿಸಿವೆ. "ತ್ರೈಗುಣ್ಯ ವಿಷಯಾ ವೇದಾ ನಿಸ್ತ್ರೈಗುಣ್ಯೋಭವಾರ್ಜುನ" ಎಂದು ಗೀತೆಯಲ್ಲಿ ಹೇಳಿದ ಕೃಷ್ಣನದೂ ಇದೇ ದೃಷ್ಟಿ. ಶರಣರ ಮಾತುಗಳೂ ಸಹ ಇದೇ ಮಾರ್ಗದಲ್ಲಿ ನಡೆದು ಸ್ವತಂತ್ರ ವಿಚಾರಶಕ್ತಿ ಪ್ರಚೋದಕವಾದುವು.

ವಿಚಾರದಷ್ಟೇ ಮಹತ್ವವನ್ನು ಶರಣರು ಆಚಾರಕ್ಕೂ ಕೊಟ್ಟರು. ವಿಚಾರ, ಸಾರ್ಥಕವಾಗುವುದು ಆಚಾರದಲ್ಲಿ ಅಳವಟ್ಟಾಗ ಮಾತ್ರ. ಅಂತೆಯೇ ಶರಣರ ವಿಚಾರ, ಕೇವಲ ಬೌದ್ಧಿಕ ತರ್ಕ ಜಿಜ್ಞಾಸೆಯಲ್ಲಿ ಉಳಿಯಲಿಲ್ಲ; ಆಚಾರದಲ್ಲಿ ಪರ್ಯವಸಾನವಾಯಿತು. ಯಾವುದನ್ನು ನುಡಿಯಲ್ಲಿ ಹೇಳಿದರೋ ಅದನ್ನು ನಡೆಯಲ್ಲಿತಂದು ತೋರಿಸಿದರು. ಬಸವಣ್ಣನವರು ತಮ್ಮ ಸಾಧನೆಯನ್ನು ಕುರಿತು ಹೇಳಿರುವ ಮಾತುಗಳನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. "ವಿಚಾರವೆಂಬ ಹೂವಾಯಿತ್ತು, ಆಚಾರವೆಂಬ ಕಾಯಾಯಿತ್ತು, ನಿಷ್ಪತ್ತಿ ಎಂಬ ಹಣ್ಣಾಯಿತ್ತು. ಆ ಹಣ್ಣು ತೊಟ್ಟು ಕಳಚಿ ಬೀಳುವಲ್ಲಿ ಕೂಡಲ ಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ" ಈ ಮಾತುಗಳು ತುಂಬಾ ಅರ್ಥವತ್ತಾದುವು. ವಿಚಾರ ಆಚಾರಗಳ ಸಮನ್ವಯದಿಂದ ಅಂತರಂಗದ ಅರಿವು ಪರಿಪಕ್ವವಾಗಬೇಕಾಗುತ್ತದೆ. ಸಾಧಕನ ಜೀವನ ಆಗ ನಿಷ್ಪತ್ತಿ ಎಂಬ ಹಣ್ಣಾಗುತ್ತದೆ, ಕೂಡಲ ಸಂಗನನ್ನು ಸೇರುತ್ತದೆ.

ಧರ್ಮ ಈ ನಿಲುವಿಗೆ ನಮ್ಮನ್ನು ಕೊಂಡೊಯ್ಯಬೇಕಾದರೆ ವಿಚಾರದಲ್ಲಿ ಸ್ವತಂತ್ರಶೀಲತೆ ಇರುವಂತೆ ಆಚಾರದಲ್ಲಿ ಏಕೈಕ ನಿಷ್ಠೆ ಬೇಕು. ಮುಕ್ತ ಮನಸ್ಸಿನ ವಿಚಾರದಿಂದ ಒಂದು ನಿರ್ಧಾರಕ್ಕೆ ಬಂದ ಮೇಲೆ ಅದನ್ನು ಅಚಲವಾಗಿ ಹಿಡಿದು ನಿರ್ವಹಿಸುವ ನಿಷ್ಠೆ ಇಲ್ಲದಿದ್ದರೆ ಏನನ್ನೂ ಸಾಧಿಸಲಾಗುವುದಿಲ್ಲ. ಈ ದೃಷ್ಟಿಯಿಂದ ಶರಣರು ನಿಷ್ಠೆಗೆ ಮಹತ್ವದ ಸ್ಥಾನವನ್ನು ಕೊಟ್ಟರು:

"ಎನಿಸೆಂದೊಡೆ ನಾ ಧೃತಿಗೆಡೆನಯ್ಯಾ;
ಎಲುದೋರಿದರೆ, ನರಹರಿದರೆ, ಕರುಳು ಕುಪ್ಪಳಿಸಿದರೆ
ನಾ ಧೃತಿಗೆಡೆನಯ್ಯಾ.
ಸಿರ ಹರಿದು ಅಟ್ಟೆ ನೆಲಕ್ಕೆ ಬಿದ್ದರೆ
ನಾಲಿಗೆ 'ಕೂಡಲಸಂಗ ಶರಣು,' ಎನ್ನುತ್ತಿದ್ದಿತಯ್ಯ"

ಎಂಬಂತಹ ಕಠೋರ ನಿಷ್ಠೆಯ ನೂರಾರು ಮಾತುಗಳನ್ನು ಅಂತಹ ಸನ್ನಿವೇಶಗಳಲ್ಲಿ ಹಾಗೆಯೇ ನಡೆದುಕೊಂಡ ಆಚರಣೆಯನ್ನು ಶರಣರಲ್ಲಿ ಕಾಣುತ್ತೇವೆ.

ಹೀಗೆ ಶರಣರ ಧಾರ್ಮಿಕ ಸಾಧನೆಯಲ್ಲಿ ಮುಖ್ಯವಾದ ಮೂರು ಅಂಶಗಳನ್ನು ಗುರುತಿಸಬಹುದು. ಸ್ವತಂತ್ರ ವಿಚಾರ ಮಾರ್ಗದಿಂದ ಮೊದಲು ಗುರಿಯೇನೆಂಬುದನ್ನು ವಿವೇಚಿಸಬೇಕು; ಅಂಗೀಕರಿಸಿದ ಅಂಶಗಳನ್ನು ಆಚರಣೆಗೆ ತರಬೇಕು; ಮತ್ತು ಆಚರಣೆಯ ಮಾರ್ಗದಲ್ಲಿ ಒದಗುವ ಕಷ್ಟ ನಿಷ್ಠುರಗಳನ್ನು ಎದುರಿಸಿ ಗೆಲ್ಲಬೇಕು.— ಎಂಬ ಈ ಮೂರು ತತ್ತ್ವಗಳು ಮುಪ್ಪುರಿಗೊಂಡವು. ವಿಚಾರ ಆಚಾರನಿಷ್ಠೆ ಇವು ಬಹುಶಃ ಎಲ್ಲ ಕಾಲಕ್ಕೂ ಎಲ್ಲ ದೇಶಕ್ಕೂ ಅನ್ವಯವಾಗುವ ಶಾಶ್ವತ ತತ್ತ್ವಗಳು. ಈ ಮೂರರಲ್ಲಿಯೂ ಶರಣರು ತಮ್ಮ ಸಾಧನೆಯಿಂದ ಅಪೂರ್ವವಾದುದನ್ನು ಸಾಧಿಸಿದರು.

ಶರಣರ ವಿಚಾರಶೀಲತೆ, ಧರ್ಮಕ್ಕೊಂದು ಹೊಸ ಚೈತನ್ಯವನ್ನು ತಂದು ಕೊಟ್ಟಿತು. ಸೃಷ್ಟಿನಿರ್ಮಾಣ, ಸೃಷ್ಟಿಕರ್ತ, ಸೃಷ್ಟಿಗೆ ಕಾರಣ— ಈ ಮೊದಲಾದುವನ್ನು ಕುರಿತು ಅವರು ವಿವೇಚಿಸಿದ್ದರೂ ಅವೇ ಧರ್ಮದ ಸರ್ವಸ್ವವೆಂಬಂತೆ ಅವಕ್ಕೆ ಅತಿಯಾದ ಮಹತ್ವಕೊಡಲಿಲ್ಲ. ತಮ್ಮ ಜೀವನ ಮೀಮಾಂಸೆಗೆ ಶಕ್ತಿಪೂರ್ಣವಾದ ಹಿನ್ನೆಲೆಯನ್ನಾಗಿ ಮಾತ್ರ ಅದನ್ನು ರೂಪಿಸಿಕೊಂಡುದು ಅವರ ಗಮನಾರ್ಹ ಸಾಧನೆಯಾಗಿದೆ.

ಈ ಜಗತ್ತು ತ್ಯಾಜ್ಯವಾದುದಲ್ಲ. ಈ ಜೀವನ ಒಂದು ಕನಸೆಂದು ಹೇಗೂ ಬಾಳುವಂತಿಲ್ಲ. ಇದು ಪವಿತ್ರವಾದದ್ದು. ಅರಿವನ್ನು ಪಡೆಯಲು ಈ ಮಾನವ ಜನ್ಮ ಅನಿವಾರ್ಯವಾದ ಸಾಧನ. ಹಾಗಾಗುವಂತೆ ಬಳಸಿಕೊಂಡಾಗಲೇ ಇದರ ಸಾರ್ಥಕತೆ— ಇದು ಶರಣರು ಜೀವನವನ್ನು ಕಂಡ ಮೂಲಭೂತವಾದ ದೃಷ್ಟಿ.

ಇಹ–ಪರಗಳೆರಡಕ್ಕೂ ಇದ್ದ ಅಂತರವನ್ನು ಶರಣರು ತೊಡೆದು ಹಾಕಿದರು.

"ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ,
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ;
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ
ಕೂಡಲ ಸಂಗಮದೇವಾ"

ಎಂಬುದು ಬಸವಣ್ಣನವರ ಪ್ರಸಿದ್ಧವಾದ ಮಾತು; ಬಹಳ ಅರ್ಥವತ್ತಾದುದೂ ಹೌದು. ಇಲ್ಲಿ ಚಲಾವಣೆಯಲ್ಲಿಲ್ಲದ ನಾಣ್ಯ ಪರಲೋಕದಲ್ಲಿಯೂ ಚಲಾವಣೆಯಲ್ಲಿ ಬರಲಾರದು. ಅಂದರೆ ಇಲ್ಲಿ ಬಾಳಲಾರದವನು ಅಲ್ಲಿಯೂ ಬಾಳಲಾರ.–ಹೀಗೆ ಶರಣಧರ್ಮ ಸಂಸಾರವನ್ನು ತಿರಸ್ಕರಿಸದೆ ಅದನ್ನು ಪವಿತ್ರವೆಂದು ಭಾವಿಸಿತು. ಸಂಸಾರದ ಸುಖಗಳಾವುವೂ ತ್ಯಾಜ್ಯವಲ್ಲ. "ಭಕ್ತನ ಮನ ಹೆಣ್ಣಿನೊಳಗಾದರೆ ವಿವಾಹವಾಗಿ ಕೂಡುವುದು; ಭಕ್ತನ ಮನ ಮಣ್ಣಿನೊಳಗಾದರೆ ಕೊಂಡು ಆಲಯವ ಮಾಡುವುದು"– ಎಂದು ಮುಂತಾಗಿ ಧರ್ಮಬದ್ಧವಾಗಿ ಅವುಗಳನ್ನು ಪಡೆಯಬೇಕೆನ್ನುತ್ತಾರೆ. ಅಸಹಜ ವೈರಾಗ್ಯ ಎಂದಿದ್ದರೂ ಅಪಾಯಕಾರಿ. "ಇಂದ್ರಿಯ ನಿಗ್ರಹವ ಮಾಡಿದರೆ ಹೊಂದುವುವು ದೋಷಂಗಳು" ಎಂದು ಬಸವಣ್ಣ ಹೇಳಿರುವುದು ಈ ಅರ್ಥದಲ್ಲಿಯೇ. ಇಂದ್ರಿಯಗಳನ್ನು ಬಳಲಿಸದೆ ಲೌಕಿಕ ಸುಖದ ಮಿತಿಯನ್ನು ಅವು ಕಂಡುಕೊಳ್ಳುವಂತೆ ಮಾಡಿ, ಅವುಗಳ ಬಯಕೆಯನ್ನು ಉದಾತ್ತೀಕರಣಗೊಳಿಸಬೇಕೆಂಬುದು ಶರಣ ಧರ್ಮದ ಸಂದೇಶ.

ಇಹ ಪರಗಳ ಸಮನ್ವಯದಂತೆ ವ್ಯಷ್ಟಿ ಸಮಷ್ಟಿಗಳ ಸಾಮರಸ್ಯವನ್ನೂ ಶರಣರು ಸಾಧಿಸಿದರು. ವ್ಯಕ್ತಿ ಮತ್ತು ಸಮಾಜ ಬೇರೆ ಬೇರೆಯಲ್ಲ. ಇವೆರಡೂ ಪರಸ್ಪರ ಅವಲಂಬಿಗಳು. ಇವೆರಡರ ಹಿತವನ್ನು ಸಾಧಿಸುವುದೇ ಪೂರ್ಣಧರ್ಮ. ವ್ಯಕ್ತಿ ಕೇವಲ ತನ್ನ ಉದ್ಧಾರವನ್ನು ಮಾತ್ರ ಪರಿಗಣಿಸಿ ಸಮಾಜವನ್ನು ಕಡೆಗಣಿಸಿದರೆ ಅಷ್ಟರ ಮಟ್ಟಿಗೆ ಆತ ಅಪೂರ್ಣ. ಸಮಾಜದ ಹಿತವೇ ಮುಖ್ಯವೆಂದು ತನ್ನ ವಿಕಾಸವನ್ನೇ ಮರೆತರೆ ಇದೂ ಕೈತಪ್ಪುತ್ತದೆ; ಅದೂ ಕೈಸೇರುವುದಿಲ್ಲ. ಸಮಾಜ ಮತ್ತು ವ್ಯಕ್ತಿ ಇವೆರಡೂ ಜೊತೆಜೊತೆಯಲ್ಲಿಯೇ ಬೆಳೆಯಬೇಕೆಂಬ ಪೂರ್ಣ ದೃಷ್ಟಿಯ ಮಾರ್ಗವನ್ನು ಶರಣರು ಸಾಧಿಸಿ ತೋರಿಸಿದರು. ಆದುದರಿಂದಲೇ ಶರಣರ ಧಾರ್ಮಿಕ ಸಂದೇಶ, ಆಧ್ಯಾತ್ಮಿಕ ಲೌಕಿಕ ಜಗತ್ತುಗಳೆರಡನ್ನೂ ವ್ಯಾಪಿಸಿತು.

ಧರ್ಮದ ಹೆಸರಿನಲ್ಲಿ ನಿರ್ಮಿತವಾದ ಕುಲ ಜಾತಿ ವರ್ಣಾದಿ ವಿಭೇದಗಳನ್ನು ಶರಣರು ಒಪ್ಪಲಿಲ್ಲ. ಗಂಡು ಹೆಣ್ಣು ಎಂಬ ತಾರತಮ್ಯವನ್ನು ತೊಡೆದುಹಾಕಿದರು. ಹುಟ್ಟಿನಿಂದ ಜಾತಿ ಬರುವುದಿಲ್ಲ; ಗುಣದಿಂದ ಅದು ಸಿದ್ಧವಾಗುತ್ತದೆ. "ಕೊಲ್ಲುವನೆ ಮಾದಿಗ, ಹೊಲಸು ತಿಂಬುವನೆ ಹೊಲೆಯ'' ಎಂಬುದು ಬಸವಣ್ಣ

ನವರ ಘೋಷಣೆ. "ಸಕಲ ಜೀವಾತ್ಮರಿಗೆ ಲೇಸನು ಬಯಸುವ ಶರಣರೇ ಕುಲಜರು" ಎಂಬುದು ಅವರ ಸೂತ್ರ. ಜಾತಿ ಮತಗಳನ್ನಳಿಯುವ ಏಕೈಕ ಸೂತ್ರವಾಗಿ ಎಂದೆಂದಿಗೂ ಉಳಿಯಬಲ್ಲುದು. ಇದನ್ನು ಪ್ರತಿಪಾದಿಸಿದುದು ಮಾತ್ರವಲ್ಲದೆ ಆಚರಣೆಗೂ ತಂದರು. ಮಾದಿಗರ ಹರಳಯ್ಯನ ಮಗನಿಗೆ ಬ್ರಾಹ್ಮಣ ಮಧುವರಸನ ಮಗಳನ್ನು ಕೊಟ್ಟು ಮದುವೆ ಮಾಡಿಸಿದರು. ಅಂದಿನ ಸಮಾಜ ಇದನ್ನು ಅರಗಿಸಿಕೊಳ್ಳಲಾರದೇ ಹೋಯಿತು. ಕ್ರಾಂತಿಯಲ್ಲಿ ಅದು ಪರ್ಯವಸಾನವಾಯಿತು. ಸರ್ವಸಮಾನತೆ ಸರ್ವೋದಯಗಳೇ 'ಯುಗ ಮನೋಧರ್ಮ'ವಾಗಿರುವ ಈ ಆಧುನಿಕ ಯುಗ, ಬಸವಣ್ಣನವರ ಆಶಯವನ್ನು ಹೆಚ್ಚು ಸಮಂಜಸವಾಗಿ ಅರ್ಥಮಾಡಿಕೊಳ್ಳಬಹುದು.

ಸಮಾಜದಲ್ಲಿ ರೂಢಮೂಲವಾಗಿದ್ದ ಮೇಲುಕೀಳುಗಳನ್ನು ತೊಡೆದು ಹಾಕಿ ಎಲ್ಲರಿಗೂ ಉದ್ಧಾರಕ್ಕೆ ಕಾರಣವಾಗುವ ಮಾರ್ಗವನ್ನು ರೂಪಿಸಬೇಕೆಂಬುದೇ ಬಸವಾದಿ ಶರಣರ ಮಹೋದ್ದೇಶವಾಗಿತ್ತು. ಅದಕ್ಕಾಗಿ ಅವರು ಉದ್ಯೋಗದಲ್ಲಿ ಶ್ರದ್ಧೆಯನ್ನೂ ಸಮಾನ ಗೌರವವನ್ನೂ ಮೂಡಿಸಿದರು. ದೈಹಿಕ ಶ್ರಮದಿಂದ ದುಡಿಯದೆ ಬದುಕುವ ಹಕ್ಕು ಯಾರಿಗೂ ಇಲ್ಲ. ಈ ದುಡಿಮೆಯ ಜೊತೆಗೆ ತನ್ನ ಸ್ವರೂಪವನ್ನು ಕಂಡುಕೊಳ್ಳುವ ಆತ್ಮಸಾಧನೆಯತ್ತಲೂ ಆತ ನಡೆಯಬೇಕು. ದುಡಿಮೆ ಮತ್ತು ಆರಾಧನೆ ಪ್ರತಿಯೊಬ್ಬ ವ್ಯಕ್ತಿಗೂ ಅಗತ್ಯ. ಇವುಗಳಿಂದ ತನ್ನ ವಿಕಾಸವನ್ನು ತಾನೇ ಸಾಧಿಸಿಕೊಳ್ಳಬೇಕು.

ದುಡಿಮೆ ಮತ್ತು ಆರಾಧನೆ ಈ ಎರಡರ ಸಮನ್ವಯವನ್ನೇ ಶರಣರು 'ಕಾಯಕ' ಎಂದು ಕರೆದರು. ತನುವ ಬಳಲಿಸಿ ದುಡಿಯಬೇಕು; ಆ ದುಡಿಮೆಯಿಂದ ಬಂದದ್ದನ್ನು ಗುರು, ಲಿಂಗ, ಜಂಗಮ ಈ ತ್ರಿವಿಧ ದಾಸೋಹಕ್ಕೆ ಅರ್ಪಿಸಬೇಕು. ಹೀಗೆ ದಾಸೋಹಭಾವದಿಂದ ಅರ್ಪಿಸಿದಾಗಲೇ ದುಡಿಮೆ ಕಾಯಕವಾಗುತ್ತದೆ. ಈ 'ಕಾಯಕ' ಎಂಬ ಮಾತಿಗೆ ಶರಣರು ತಮ್ಮ ಆಚಾರ ವಿಚಾರಗಳಿಂದ ಅಪಾರವಾದ ಅರ್ಥವ್ಯಾಪ್ತಿಯನ್ನು ತಂದುಕೊಟ್ಟರು. ಶರಣಧರ್ಮದ ಸಂದೇಶವನ್ನೆಲ್ಲಾ ಈ ಒಂದು ಮಾತಿನಲ್ಲಿ ಅಡಕಗೊಳಿಸಬಹುದು. ವ್ಯಕ್ತಿ, ಸಮಾಜ ಮತ್ತು ಅವುಗಳ ಪರಸ್ಪರ ಸಂಬಂಧದಿಂದ ಸಾಧಿಸುವ ವಿಕಾಸ–ಇವುಗಳನ್ನಳೆಯುವ ಮತ್ತು ಬೆಳೆಯುವ ತ್ರಿವಿಕ್ರಮನಾಗಿ ಪರಿಣಮಿಸಿತು ಮೂರಕ್ಷರಗಳ ಈ ಪದ.

ಒಟ್ಟಿನಲ್ಲಿ ಶರಣರು ಸಾರಿದ್ದು ಆಧುನಿಕಯುಗಕ್ಕೆ ಅನುಗುಣವಾದ ಸಮತಾ ಮಾರ್ಗ; ಸಮನ್ವಯ ಮಾರ್ಗ. ಆಚಾರ ವಿಚಾರಗಳ ಸಮನ್ವಯ; ಭಕ್ತಿಜ್ಞಾನ ಕರ್ಮಗಳ ಸಮನ್ವಯ; ಭೇದ ಅಭೇದಗಳ ಸಮನ್ವಯ; ವ್ಯಕ್ತಿಸಮಾಜಗಳಲ್ಲಿ ಸಮನ್ವಯ: ಹೀಗೆ ಎಲ್ಲವನ್ನೂ ಸಮಗ್ರ ದೃಷ್ಟಿಯಿಂದ ನೋಡಿದ ಶರಣರು ವ್ಯಕ್ತಿಯ ಮತ್ತು

ಸಮಾಜದ ಜೀವನದಲ್ಲಿ ಪೂರ್ಣತೆಯನ್ನು ಸಾಧಿಸುವ ಮಾರ್ಗವನ್ನು ರೂಪಿಸಿದರು. ಅವರ ವಚನಗಳಲ್ಲಿ ಹೊರಹೊಮ್ಮಿರುವ ಸಂದೇಶ ಬತ್ತದಿಹ ಒರತೆಯಂತೆ. ಮೊಗೆದಷ್ಟೂ ಅದರಿಂದ ಹೊಸ ಹೊಸ ಅರ್ಥ, ನಮ್ಮ ಕಾಲಕ್ಕೆ ಮತ್ತು ನಮ್ಮ ಅನುಭವಕ್ಕೆ ಅನುಗುಣವಾಗಿ ಲಭಿಸುತ್ತದೆ.

---

## ಬಸವ ಹಾಡಿದ ಹಾಡು

ಅಯ್ಯಾ ನೀನು ಅಯ್ಯಾ ನೀನು
ನಾದಬಿಂದು ಕಳಾತೀತ ನಂತೆ ॥

ವೇದ ಮಂತ್ರಕು ನಿಲುಕದ ನಂತೆ
ನಿಗಮಾಗಮಕೂ ಸಿಲುಕದನಂತೆ
ಧ್ಯಾನ ಸಮಾಧಿಗ ಗೋಚರನಂತೆ
ಭಕ್ತಿಯ ಪಾಶಕೆ ಬಂಧಿತನಂತೆ ॥ ೧ ॥

ಅಣುವಿನೊಳಣುವಂತೆ ಘನದೊಳು ಘನವಂತೆ
ತೇಜವು ನೀನಂತೆ ತಾಮಸ ರೂಹಂತೆ !
ಜಲದಲು ಬಯಲಲು ಚೇತನ ಶ್ರೀಯಂತೆ
ಸಚರಾಚರದಲೂ ಚಿನುಮಯನಂತೆ ॥ ೨ ॥

ಓಂಕಾರಮಯನಂತೆ ಝೇಂಕಾರದೊಲವಂತೆ
ನಿಷ್ಕಲ ಪರತತ್ತ್ವ ಸಾಕಾರನಂತೆ
ವಿಶ್ವೇಶ್ವರನಂತೆ ವಿಶ್ವವೆ ನೀನಂತೆ
ನಿತ್ಯನಿರಂಜನ ನಿರ್ಗುಣನಂತೆ ॥ ೩ ॥

ಭೂಮಿಗೆ ಬಲವಂತೆ ಆಗಸದರಹಂತೆ
ನೀರೊಳು ತಂಪಂತೆ ಗಾಳಿಗೆ ಜವವಂತೆ
ದೀಪವು ನೀನಂತೆ ದೀಪ್ತಿಯು ನೀನಂತೆ
ಭಕ್ತಜನಪ್ರಿಯ ಕೂಡಲ ಸಂಗಯ್ಯ ॥ ೪ ॥

**—ಡಾ॥ ಸಾ. ಶಿ. ಮರುಳಯ್ಯ**

# "ಶಿವಯೋಗ ಸಂದೇಶ"

● ಹೆಚ್. ಗಂಗಾಧರನ್, ಎಂ. ಎ., ಬಿ. ಎಲ್.
ಅಡ್ವೊಕೇಟ್, ಮೈಸೂರು

ಕೆಲವರ ನುಡಿ ನಮಗೆ ಸಂದೇಶ, ಕೆಲವರ ನಡೆಸಂದೇಶ ಮತ್ತೆ ಕೆಲವರ ಮನವು ನಮಗೆ ಸಂದೇಶವಾಗುತ್ತದೆ. ಸಂದೇಶವೆಂದರೆ ಶ್ರವಣತೃಪ್ತಿಯ ನುಡಿಗಳಲ್ಲ. ನಮ್ಮನ್ನು ಆಜ್ಞಾಬದ್ಧರನ್ನಾಗಿ ಮಾಡಿ ಸನ್ಮಾರ್ಗ ಪ್ರವೃತ್ತರಾಗಿ ಮಾಡುವ ಸತ್ವ ಪೂರ್ಣವಾಣಿ ಮಾತ್ರ ಸಂದೇಶವಾಗಬಲ್ಲುದು. ಒಮ್ಮೆ ನೀಡಿದ ಸಂದೇಶ ನಮ್ಮ ಗುರಿ ಮುಟ್ಟುವವರೆಗೆ ಬಿಡದೆ ಕೈ ಹಿಡಿದು ನಡೆಸಬಲ್ಲ ಸಮರ್ಥಶಾಲಿವಾಣಿ ನಿಜವಾದ ಸಂದೇಶ. ಜಗತ್ತಿನ ಧರ್ಮದರ್ಶನ ಶಾಸ್ತ್ರ ಕೃತಿಗಳೆಲ್ಲಾ ಇಂತಹ ಸಂದೇಶವನ್ನು ನೀಡುತ್ತವೆ. ಅಂತೆಯೇ ಶಿವಯೋಗವೂ ನಮಗೆ ಮಹತ್ವದ ಸಂದೇಶವನ್ನು ನೀಡುತ್ತದೆ.

ಶಿವಯೋಗ ಸರ್ವ ಯೋಗಗಳ ಸಾರಾಮೃತ. ಅದು ನೀಡುವ ಸಂದೇಶ ಇಹಪರದ ಸಾಧನೆಗೆ ನೆರವಾಗುವ ಸೂಕ್ತ ಮಾರ್ಗದರ್ಶನ. ಶಿವಯೋಗ ಮಾನವ ಜೀವನದಲ್ಲಿ ದಿನದಿನದ ವ್ಯವಹಾರದಲ್ಲಿ ಅಳವಡುವ ಪರಮಸಿದ್ಧಿ. ಶಿವಯೋಗ ಸಾಧನೆಗೆ ನಾವು ನಿತ್ಯ ಜೀವನದ ದಿಶೆಯಿಂದೆ ಭಿನ್ನವಾದ ಮಾರ್ಗವನ್ನು ಅವಲಂಬಿಸುವ ಅಗತ್ಯವಿಲ್ಲ. ಯೋಗಶಾಸ್ತ್ರ ಭಾರತದ ಜೀವನದಲ್ಲಿ ಅತ್ಯಂತ ಪ್ರಾಚೀನ ಸಾಧನಾಸಂಪತ್ತು. ವೇದೋಪನಿಷತ್ತುಗಳಲ್ಲಿರುವ ಯೋಗ ದರ್ಶನವು ಪಾತಂಜಲ ಮಹರ್ಷಿಗಳಿಂದ ಸೂತ್ರ ರೂಪವನ್ನು ಹೊಂದಿ ವ್ಯಾಖ್ಯಾನ ಬದ್ಧವಾಗಿ ಬೆಳೆಯಿತ್ತು. ಅವರಲ್ಲಿ ಹಠಯೋಗ ಲಯಯೋಗ ಮಂತ್ರಯೋಗ ಮುಂತಾದ ನಾನಾ ಪ್ರಭೇದಗಳು ಬೆಳೆದುವು.

" ಬಳಿಕೀಶ್ವರನಲ್ಲಿ ಚಿತ್ತವೇಕತ್ವವೇ ಲಕ್ಷಣವಾದ ಯೋಗದ ಮಂತ್ರ, ಲಯ, ಹಠ, ರಾಜವೆಂಬ ನಾಲ್ಕು ಯೋಗ ಭೇದಂಗಳು ". ಎಂದು ನಿಜಗುಣಶಿವಯೋಗಿಗಳು ವಿವೇಕಚಿಂತಾಮಣಿಯಲ್ಲಿ ಹೇಳಿದ್ದಾರೆ. ಈ ಯೋಗಗಳ ಸಾಧನೆಯಲ್ಲಿ ನಿರ್ದಿಷ್ಟ ಮಾರ್ಗಗಳನ್ನು ಅವಲಂಬಿಸಬೇಕಾಗುತ್ತದೆ. ದೇಹ ದಂಡನೆ, ಪ್ರವೃತ್ತಿಗಳ ಖಂಡನೆ ಇತ್ಯಾದಿ ನಿಯಮಗಳ ಪಾಲನೆ ಅತ್ಯಗತ್ಯ. ಶಿವಯೋಗವು ಇವೆಲ್ಲಕ್ಕಿಂತಲೂ ಹಿರಿದಾದಯೋಗ. ನಮಗೆ ಅರಿವಿಲ್ಲದಂತೆ ದೊರೆಯುವ ಯೋಗ. ಶಿವಯೋಗಿಗಳ

ದರ್ಶನ, ಆಶೀರ್ವಾದ ಮತ್ತು ಅನುಗ್ರಹಗಳಿಂದ ಪ್ರಾಪ್ತವಾಗುವ ಸಿದ್ಧಿಯೇ ಶಿವಯೋಗವೆಂದು ಹೇಳಬಹುದು. ನಾವು ನಿತ್ಯಜೀವನದ ವ್ಯವಹಾರದಲ್ಲಿ ನಿರತ ರಾಗಿದ್ದರೂ ನಮ್ಮ ಕರ್ತವ್ಯದಲ್ಲಿ ಕೆಲವು ಉದಾತ್ತ ತತ್ತ್ವಗಳನ್ನು ಅಳವಡಿಸಿ ಕೊಂಡರೆ ಈ ಯೋಗದ ಸಿದ್ಧಿಯು ನಮಗೆ ಲಭ್ಯವಾಗುತ್ತದೆ.

ಹನ್ನೆರಡನೆಯ ಶತಮಾನದ ಕಲ್ಯಾಣದ ಶಿವಶರಣರು ಮಾನವ ಕೋಟಿಗೆ ಕೊಟ್ಟ ಅಮೂಲ್ಯ ಕಾಣಿಕೆಯೇ ಶಿವಯೋಗದ ದಿವ್ಯ ಸಂದೇಶ. ಶರಣರಲ್ಲಿ ಮತ ಅಭಿಮತಗಳ ಭಿನ್ನತೆಯಾಗಲಿ, ಕುಲಸೀಮೆಗಳ ಕೋಟಲೆಯಾಗಲಿ, ಲಿಂಗ ವರ್ಣಾ ರಂತರವಾಗಲಿ ಪರಿಗಣಿಸದೆ ಶಿವತತ್ತ್ವನಿಷ್ಠರಾಗಿ ತತ್ತ್ವಾನುಷ್ಠಾನ ಗೈದವರೆಲ್ಲರ ಅಮೃತಸಂದೇಶವನ್ನು ನಿರೂಪಿಸಿ ನಮಗೆ ಅನುದಾನ ಮಾಡಿದ ರಹಸ್ಯವೇ ಶಿವ ಯೋಗವೆನ್ನಬಹುದು. ಪಂಡಿತ ಪಾಮರರೆಲ್ಲರೂ ಶಿವಯೋಗ ಸಿದ್ಧಿಯನ್ನು ಪಡೆ ಯಲು ಸುಲಭ ಮಾರ್ಗದರ್ಶನವನ್ನು ಶರಣರು ಮಾಡಿಕೊಟ್ಟರು. ಅನ್ಯ ದರ್ಶನಗ ಳಂತೆ ಕೇವಲ ಬೌದ್ಧಿಕ ಚೌಕಟ್ಟಿನಲ್ಲಿ ದರ್ಶನವನ್ನಿಡದೆ ಅದನ್ನು ದೈನಂದಿನ ವ್ಯವ ಹಾರದಲ್ಲಿ ಅಳವಡಿಸಿದರು. ಈ ದಿಶೆಯಲ್ಲಿ ಶರಣರು ಕೈಗೊಂಡ ವಿಚಾರಧಾರೆ ಮಹತ್ವಪೂರ್ಣವಾಗಿದೆ.

ಸರ್ವ ಜೀವರಾಶಿಗಳಲ್ಲಿ ಮಾನವ ಪ್ರಾಣಿ ಅತ್ಯಂತ ಶ್ರೇಷ್ಠವೆಂಬುದು ಎಲ್ಲ ದಾರ್ಶನಿಕರ ಮತ. ಆದರೆ ಮನುಷ್ಯ ಅಂದರೆ ಯಾರು? ನಾವು ಒಬ್ಬರನ್ನೊಬ್ಬರು ನೋಡಿ ಮನುಷ್ಯ ಅನ್ನುತ್ತೇವೆ. ಅದು ನಮಗೆ ದೈವದತ್ತವಾದ ನೇತ್ರದ ಫಲ. ನೇತ್ರಕ್ಕೆ ಕಾಣುವುದು ಸ್ವರೂಪಮಾತ್ರ. ಮನುಷ್ಯ ಸೃಷ್ಟಿಸಿದ ಸ್ವರೂಪವನ್ನು ಕಂಡು ನಾವು ಮನುಷ್ಯರೆನ್ನುವುದಿಲ್ಲ. ಮನುಷ್ಯರಂತೆ ಪ್ರಾಣಿಗಳು ಚಲಿಸುತ್ತವೆ. ಚಲನೆ ಮನುಷ್ಯತ್ವವನ್ನು ಕೊಡುವುದಿಲ್ಲ. ಸ್ವರೂಪವನ್ನು ಕುರಿತು ಶರಣರು ಹೇಳಿದಮಾತು ಅರ್ಥವತ್ತಾಗಿದೆ.

"ಎಲುವಿನಪಂಜರ, ಕರುಳಿನಜಾಳಿಗೆ, ಅಮೇಧ್ಯದ ಹುತ್ತು, ಮೂತ್ರದ ಭಾವಿ, ಶ್ಲೇಷ್ಮದ ಕೆಸರು, ಕೀವಿನ ಸೋನೆ, ನೆತ್ತರ ಮಡು, ನಾಡಿಗಳ ಸುತ್ತುವಳಿ, ನೆರವಿನ ನೆಣಜಂತ್ರ, ಮಾಂಸದ ಪುಟ್ಟಿಯು ತೆಪ್ಪ, ಕಿಸುಕುಳದ ಹೇಸಿಗೆ; ಅತಿಹೇಯದಮಲಿನ, ಅಸ್ಥಿರೋಮ ತೊಗಲ ಪಾಕುಳ, ಕ್ರಿಮಿಯ ಸಂಕುಳ, ಉತ್ಪತ್ತಿ ಸ್ಥಿತಿಲಯದ ಬೀಜ, ರೇತರಜಸ್ಸಿನಲ್ಲಿ ಜನಿತ, ಆಧಿವ್ಯಾಧಿಯ ತವರುಮನೆ, ವಿಷಯದ ಭಯ, ದುಃಖ ದಾಗರ, ಮೋಹದ ಬಲೆ, ತೋರಿಕೆಡುವತನು ಇದು ನೀನೆಂದು ನಿನ್ನದೆಂದು, ಮಾಡ ಬಾರದ ಪಾಪವ ಮಾಡಿ, ಮುಚ್ಚಿ ಹೂಸಿ, ಹೊದಿಸಿ ಈದೇಹಂಗೊಂಡು ಮರುಗುವೆ. ಅಘೋರ ನರಕದಲ್ಲಿಕ್ಕುವಾಗ ಅಡ್ಡಬಪ್ಪರಾರೋ ? ಅಹಂ ಮಮತೆಯ ಬಿಟ್ಟು ಸೋಹಂ ಬ್ರಹ್ಮಾಸ್ಮಿ ಎಂದು ಕೇಡಿಲ್ಲದ ಪದವಿಯ ಮಾಡಿಕೊಳ್ಳಾ ಮರುಳೇ ! ಬೇಡ

ಕೆಡುವೆ, ನಿನ್ನನೀ ತಿಳಿದು ನೋಡಾ ಚೆಮ್ಮುಲಿಗೆಯ ಚೆನ್ನರಾಮನಾ” ಎಂದಿದ್ದಾರೆ. ಸ್ವರೂಪದ ಅಂತರಾರ್ಥವನ್ನೆಲ್ಲಾ ವಿವರಿಸಿದ ಶರಣರು ಈ ಸ್ವರೂಪದ ಸ್ಥಿತಿಗತಿಗಳನ್ನೆಲ್ಲಾ ವಿಮರ್ಶಿಸಿದರು. ಅವರ ಸಾರ್ಥಕತೆಗೆ ಮಾನವನ ಸಾಧನೆಯೇನೆಂಬುದನ್ನು ಸೂಚಿಸಿದರು. ಮಾನವರನ್ನು ಅನ್ಯಪ್ರಾಣಿಗಳಿಂದ ಭಿನ್ನವೆನ್ನುವುದಕ್ಕೆ ವಿಶೇಷಕಾರಣವೇನೆಂದು ದಾರ್ಶನಿಕರು ಅರಸಿದರು. ಮಾನವರಿಗಿರುವ ಎಲ್ಲಾ ಅಂಗಾಂಗಗಳ ಅವಸ್ಥೆ ವ್ಯವಸ್ಥೆಗಳೂ ಇತರ ಪ್ರಾಣಿಗಳಿಗಿವೆ. ಆದರೆ ಅರಿವಿಗೆ ಆಧಾರವಾದ ಬುದ್ಧಿ, ಮಾನವನಿಗೆ ವಿಶಿಷ್ಟವಾದ ಕೊಡುಗೆಯೆಂದರು. ಆದರೆ ಪ್ರಾಣಿಗಳಿಗೆ ಬುದ್ಧಿಯೆಂಬುದಿಲ್ಲವೆ? ವನಸ್ಪತಿಗಳಲ್ಲಿ ಒಂದು ಗಿಡವನ್ನು ನೋಡಿ ಆಡುಮುಟ್ಟದ ಸೊಪ್ಪು ಎನ್ನುತ್ತೇವೆ. ಆಡು ಎಷ್ಟೇ ಹಸಿದು ಬಳಲಿದ್ದರೂ ಅದನ್ನು ತಿನ್ನುವುದಿಲ್ಲ. ಆನೆ ತನ್ನ ಪ್ರಕೃತಿಗೆ ವಿರುದ್ಧ ನಡೆಯುವ ಮನುಷ್ಯನನ್ನೂ ಪ್ರಾಣಿಗಳನ್ನೂ ಕೊಂದುಹಾಕುತ್ತದೆ. ಆದರೆ ಅದು ಮಾಂಸವನ್ನು ತಿನ್ನುವುದಿಲ್ಲ. ಇವೆಲ್ಲವೂ ಬುದ್ಧಿಶಕ್ತಿಯ ಪರಿಣಾಮವಲ್ಲವೆ ? ಅಂದರೆ ಪ್ರಾಣಿಗಳಿಗೂ ಬುದ್ಧಿಯಿದೆ ಎಂಬುದನ್ನು ನಾವು ಒಪ್ಪಬೇಕಾಗುತ್ತದೆ. ಆದರೆ ಈ ಬುದ್ಧಿಯ ಬಳಕೆ ಪ್ರಾಣಿಗಳಿಗೆ ಸಂಸರ್ಗದಿಂದ ಉಂಟಾಗುತ್ತದೆ. ಅಭ್ಯಾಸವನ್ನು ಅವಲಂಬಿಸಿರುತ್ತದೆ. ಆದರೆ ಮಾನವನ ಬುದ್ಧಿಶಕ್ತಿ ಸಂಸರ್ಗದಿಂದ ಮಾತ್ರ ಬರುವುದಲ್ಲ. ಬಳಸುವ ರೀತಿ ನೀತಿಗಳು ಅವನ ಅಭಿಮತದಂತೆ ರೂಪುಗೊಳ್ಳುತ್ತವೆ. ಮನುಷ್ಯತ್ವದ ಸಾಧನೆಗೆ ಸರಿಯಾಗಿ ಮಾರ್ಗವನ್ನು ರೂಪಿಸುವುದೇ ಜೀವನದ ಗುರಿ. ಅದೊಂದು ವಿಶಿಷ್ಟಶಕ್ತಿ ಮಾನವನಿಗೆ ಪ್ರದತ್ತವಾಗಿದೆ. ಈ ಆಧಾರದ ಮೇಲೆ ನಮ್ಮನ್ನು ಕುರಿತು ನಾವೇ ಪ್ರಶ್ನೆಮಾಡಿಕೊಂಡರೆ ನಮ್ಮಲ್ಲಿ ಎಷ್ಟು ಜನರು ಮನುಷ್ಯರಾಗಿದ್ದಾರೆ ಎಂಬುದು ವಿವೇಚನಾಸ್ಪದವಾಗಿ ಉಳಿಯುತ್ತದೆ. ಹಣಕ್ಕಾಗಿ, ಹೆಣ್ಣಿಗಾಗಿ, ಮಣ್ಣಿಗಾಗಿ ನರಮೇಧವೇ ನಡೆಯುತ್ತಿದೆ. ಅಧಿಕಾರ ಲಾಲಸೆಯಲ್ಲಿ ಜನಸಮುದಾಯದ ಪ್ರಾಣ ಮಾನಗಳ ಅಪಹರಣವಾಗುತ್ತಿದೆ. ಅನ್ನ ಬಟ್ಟೆಗಳಿಲ್ಲದೆ ಬೀದಿಯಲ್ಲಿ ಚಳಿಮಳೆಯಲ್ಲಿ ನರಳುವವರನ್ನು ಕಂಡಾಗ ಕಣ್ಣೀರಿಡದವರು ಮಾನವರೆ ? ಒಂದೇ ರೀತಿಯ ರಕ್ತ ಮಾಂಸ ಮೂಳೆಗಳಿಂದ ಮಾಡಿದದೇಹ ಒಂದು ಕಾಲದಲ್ಲಿ ಅಳಿದು ಮತ್ತೆ ಮಣ್ಣುಪಾಲಾಗುತ್ತಿರುವುದನ್ನು ಅರಿತೂ ಕೀಳು ಮೇಲೆಂದೆಣಿಸುವುದು ಮಾನವತ್ವವೆ ? ತನ್ನಂತೆ ಪರರ ಬಗೆಯದೆ ತನ್ನದೇ ವೈಶಿಷ್ಟ್ಯವೆಂದೆಂಬ ಬೆಡಗು ಮಾನವತ್ವವೆ ? ಇಂತಹ ನೂರಾರು ಪ್ರಶ್ನೆಗಳು ಇಂದಿನ ಜನಜೀವನವನ್ನು ನೋಡಿದಾಗ ನಮ್ಮ ಮುಂದೆ ತಲೆಯೆತ್ತಿ ನಿಲ್ಲುತ್ತವೆ ಈ ಪ್ರಶ್ನೆಗಳನ್ನು ಉತ್ತರಿಸಿ ಬಗೆಹರಿಸುವುದಕ್ಕಾಗಿ ಲೋಕದಲ್ಲಿ ಮಹಾನುಭಾವರು ಅವತರಿಸಿದ್ದಾರೆ. ಅವರ ವಾಣಿ ನಮಗೆ ದರ್ಶನವಾಗಿದೆ. ಅವರ ನಡೆ ನಮಗೆ ದಾರಿದೀಪವಾಗಿದೆ. ಅಂತೆಯೇ ಜಗತ್ತಿನಲ್ಲಿ ನೂರಾರು ಧರ್ಮ ದರ್ಶನಗಳು ಬೆಳೆದುಬಂದಿವೆ. ಅಂತಹ ಹಲವು ದರ್ಶನಗಳಲ್ಲಿ ಶಿವಯೋಗ ದರ್ಶನವು ಒಂದಾದರೂ ಅವರಲ್ಲಿ ಮಾನವೀಯತೆಯನ್ನು ರೂಪಿಸುವ ಅಮೂಲ್ಯ ದರ್ಶನವಿದೆ.

ಶಿವ ಎಂದರೆ ಮಂಗಳ ಎಂದೂ ಯೋಗ ಎಂದರೆ ಕೂಡುವುದು ಎಂದೂ ಸಾಮಾನ್ಯ ಅರ್ಥ. ಜೀವನ ಮಂಗಳಮಯವಾಗುವುದೇ ಶಿವಯೋಗದ ಅಂತ ರಾರ್ಥ. ಜೀವನವೆಲ್ಲಾ ಮಂಗಳಮಯವಾಗುವುದು ಹೇಗೆ? ಅನ್ಯ ದರ್ಶನಗಳಲ್ಲಿ ಜೀವನವನ್ನೆಲ್ಲಾ ಸಾಧನಾ ಕ್ಷೇತ್ರವಾಗಿಸಿ ಅಂತ್ಯದಲ್ಲಿ ಮಂಗಳತ್ವ ಪ್ರಾಪ್ತಿಯಾಗುವು ದನ್ನು ಬೋಧಿಸುತ್ತವೆ. ಐಹಿಕವ್ಯವಹಾರವೆಲ್ಲಾ ಮುಗಿದಮೇಲೆ ಅಂದರೆ ದೇಹ ಅಳಿದ ಮೇಲೆ ಜೀವನು ಶಿವನೊಡಗೂಡುವುದನ್ನೇ ಮಂಗಳವೆಂದೂ, ಮುಕ್ತಿ ಅಥವ ಮೋಕ್ಷವೆಂದೂ ಶಾಸ್ತ್ರಗಳಲ್ಲಿ ವ್ಯಾಖ್ಯಾಯಿಸಿದೆ. ಆದರೆ ಕಲ್ಯಾಣದ ಶರಣರ ದೃಷ್ಟಿ ಯಲ್ಲಿ ಇಂತಹ ಮಂಗಳತ್ವದ ಬಯಕೆ ಮೂಡಿಬರಲಿಲ್ಲ. ಜೀವನದ ಆದಿಯಿಂದ ಅಂತ್ಯದ ವರೆಗೂ ಎಲ್ಲ ವ್ಯವಹಾರದಲ್ಲೂ ಮಂಗಳತ್ವವೇ ಮೂಡಿಸಿರಬೇಕೆಂದು ಬಯಸಿದರು. ಅದಕ್ಕಾಗಿ ದರ್ಶನವನ್ನು ಅರಸಿದರು. ಅನುಭವಿಸಿದರು. ಅದನ್ನೇ ಮಾನವ ಕೋಟಿಯ ಕಲ್ಯಾಣಕ್ಕಾಗಿ ಅನುಗ್ರಹಿಸಿದರು.

ಮನುಷ್ಯತ್ವಕ್ಕೆ ಅಂಗ ಅಥವಾ ದೇಹ ಒಂದು ಸಂಕೇತ. ಅದೇ ದೇಹ ಮನುಷ್ಯನಲ್ಲಿ ಮನುಷ್ಯತ್ವವನ್ನೋ ಅಥವಾ ರಾಕ್ಷಸತ್ವವನ್ನೋ ರೂಪಿಸಲು ಕಾರಣ ವಾಗುತ್ತದೆ. ಆದುದರಿಂದ ಶರಣರ ತತ್ತ್ವದರ್ಶನ ಅಂಗವನ್ನೆ ಮೊದಲು ಅವಲಂಬಿ ಸಿದೆ. ಬಿದ್ದುಹೋಗುವದೇಹವೆಂದು ಅಂಗವನ್ನು ಕಡೆಗಣಿಸಲಿಲ್ಲ. ಕೂಡಲ ಸಂಗನ ಒಲಿಸಲು ಬಂದ ಪ್ರಸಾದ ಕಾಯುವ ಕೆಡಿಸದಿರಿ. ಎಂದು ಶರಣರು ಎಚ್ಚರಿಸಿ ದರು. ಅಷ್ಟೇಕೆ, ಕಾಯವನ್ನೇಕೈಲಾಸವೆಂದರು. ಅನಂತಶಾಸ್ತ್ರಗಳ ಪಾಂಡಿತ್ಯ ಪ್ರದರ್ಶನದಿಂದ ಪ್ರಖ್ಯಾತಿ ಹೊಂದಿದ ಶಂಕರಭಗವತ್ಪಾದರು ಅಂತ್ಯದಲ್ಲಿ 'ದೇಹೋ ದೇವಾಲಯಃ ಪ್ರೋಕ್ತಾ ಜೀವೋದೇವಸ್ಸನಾತನಃ' ಎಂದರು. ಶರಣರು "ತನುವ ತೋಟವ ಮಾಡಿ ಮನವ ಗುದ್ದಲಿಯ ಮಾಡಿ ಅಗೆದು ಕಳದೆನಯ್ಯ ಭ್ರಾಂತಿನಬೇರ. ಒಡೆದು ಸಂಸಾರದ ಹೆಂಟೆಯ, ಬಗೆದು ಬಿತ್ತಿದೆನಯ್ಯ ಬ್ರಹ್ಮ ಬೀಜವ. ಅಖಂಡ ಮಂಡಲವೆಂಬ ಬಾವಿ, ಪವನವೆ ರಾಟಾಳ. ಸುಷುಮ್ನ ನಾಳದಿಂದ ಉದಕವತಿದ್ದಿ, ಬಸವಗಳೈವರು ಹಸಗೆಡಿಸಿಹವೆಂದು ಸಮತೆ ಸೈರಣೆಯೆಂಬ ಬೇಲಿಯನಿಕ್ಕಿ, ಆವಾಗಳೂ ಈ ತೋಟದಲ್ಲಿ ಜಾಗರವಿದ್ದು ಸಸಿಯ ಸಲಹಿದೆನು ಕಾಣಾ ಗೊಹೇ ಶ್ವರಾ" ಎಂದಿದ್ದಾರೆ. ಈ ದೇಹದಲ್ಲೇ ಎಲ್ಲ ಸಾಧನವೂ ಇದೆ. ಅದನ್ನು ಬಳಸಿ ಕೊಂಡು ಬ್ರಹ್ಮವೃಕ್ಷ ಬೆಳೆಸಬೇಕು. ಅದನ್ನು ಮಾಡಿದವರು ಶರಣರು. ಹಂಬಲಿ ಸುವ ಜನರನ್ನು ಕುರಿತು ಮತ್ತೆ ಮತ್ತೆ ಎಚ್ಚರಿಸಿದರು. ದೈವದತ್ತವಾದ ದಿವ್ಯ ದೇಹವನ್ನು ದಂಡಿಸಿ ಖಂಡಿಸಿ ಮೊಂಡುತನದ ವಿವೇಚನೆಯಲ್ಲಿ ಮುಳುಗಿ ದಾರಿ ಕಾಣ ದವರನ್ನು ಕಂಡು ಮರುಗಿದರು. ಅಂಗೈಯಲ್ಲಿರುವ ಅಮೃತವನ್ನರಿಯದೆ ಕೆರೆಯ ನೀರನ್ನರಸಿ ಬಡಬಡಿಸುವ ಮಾನವರನ್ನು ಹತ್ತಿರಕ್ಕೆ ಕರೆದು ತೋರಿಸಿದರು.

"ದೇವಲೋಕ ಮರ್ತ್ಯಲೋಕವೆಂಬುದು ಬೇರೆ ಮತ್ತುಂಟೆ ?

ಮತ್ತುಂಟೆ! ಈ ಲೋಕದೊಳಗೆ ಮತ್ತೆ ಅನಂತಲೋಕ!
ಶಿವಲೋಕ ಶಿವಾಚಾರವಯ್ಯಾ, ಭಕ್ತನಿರ್ಧಾರವೇ
ದೇವಲೋಕ. ಭಕ್ತನಂಗಳವೇ ವಾರಣಾಸಿ.
ಕಾಯ ವೇ ಕೈಲಾಸ! ಇದು ಸತ್ಯ ಕೂಡಲ ಸಂಗಮದೇವಾ''

ಎಂದಾರುಹಿದರು. ದೇಹ ಎಲ್ಲ ಸಾಧನೆಗೂ ಮೂಲ ಮತ್ತು ಪಡೆದ ಸಿದ್ಧಿಯ ಸವಿಯನ್ನು ದೇಹದಿಂದಲೇ ಅನುಭವಿಸಬೇಕು. ಸರ್ವ ಇಂದ್ರಿಯಗಳೂ ಭೋಗದ ಪ್ರೇರಕಗಳು. ಇಂದ್ರಿಯಗಳಿಂದಕೂಡಿದ ಈ ದೇಹ ಭೋಗರಹಿತವಾಗುವುದಾದರೂ ಹೇಗೆ? ಅದು ಅಸಾಧ್ಯವೆಂದು ಭೋಗವನ್ನೇ ಬಿಡುವುದಕ್ಕಾಗಿ ದೇಹದ ಮೇಲೆ ಪ್ರತೀಕಾರಮನೋಧರ್ಮ ಬೆಳೆದು ದೇಹವನ್ನೇ ಹೇಯವೆಂದು ಭಾವಿಸುವುದು ಯುಕ್ತವಲ್ಲ. ದೇಹವನ್ನು ಭೋಗಾನುಭವದ ಭೂಮಿಕೆಯಾಗಿ ಮಾಡಿಕೊಳ್ಳಬೇಕೆಂದು ಶರಣರು ಸಾರಿದರು. ಒಂದೇ ದೇಹದಲ್ಲಿ ಮೂರು ದೇಹವನ್ನು ತೋರಿ ಅದರ ಸಾಧನೆಯ ಸುಲಭೋಪಾಯವನ್ನು ವಿವರಿಸಿದರು.

"ತನುಗುಣವಳಿದಲ್ಲಿ ತ್ಯಾಗಾಂಗ, ಲಿಂಗದೊಡನೆ ಸಕಲ ಸುಖಂಗಳ ಭೋಗಿಸುವಲ್ಲಿ ಭೋಗಾಂಗ, ನಿಜದಲ್ಲಿ ಬೆರೆಯಲು ಯೋಗಾಂಗ, ಇಂತೀ ತ್ರಿವಿಧದಲ್ಲಿಯೂ ಯೋಗಾಂಗ. ಇದಲ್ಲದನ್ಯ ಯೋಗಂಗಳೆಲ್ಲ ವಿಯೋಗವಯ್ಯಾ ಸೌರಾಷ್ಟ್ರ ಸೋಮೇಶ್ವರಾ.''

ಇದು ಮೂರು ದೇಹದ ವಿವರಣೆ. ಅದರಲ್ಲೆ ಮೂರೂ ಒಂದೇ ಆಗಿರಬೇಕೆಂಬ ಸೂಚನೆಯೂ ಇದೆ. ತ್ಯಾಗ, ಭೋಗ, ಯೋಗವೆಂಬ ಮುಬ್ಬಗೆಯ ದೇಹಗಳು. ಅವು ಒಂದಾಗುವುದು ಹೇಗೆ? ಒಂದಕ್ಕೊಂದು ವಿರೋಧ ಪ್ರವೃತ್ತಿಗಳಾಗಿ ಕಾಣುತ್ತವೆ. ಒಂದೆಂಬುದನ್ನು ಚಿತ್ರಿಸಿದ್ದೇ ಶರಣರ ದರ್ಶನ ವೈಶಿಷ್ಟ್ಯ. ತನುಗುಣವಳಿವಲ್ಲಿ ಈ ದೇಹವೇ ತ್ಯಾಗಾಂಗ ತನುಗುಣಗಳಾಗುವುವು?

"ಬಯಸಿ ಬಂದುದು ಅಂಗಭೋಗ. ಬಯಸದೆ ಬಂದುದು
ಲಿಂಗಭೋಗ, ಅಂಗಭೋಗವನರ್ಪಿತ. ಲಿಂಗಭೋಗ ಪ್ರಸಾದವಯ್ಯಾ,
ಬೇಕೆಂಬುದು ಕಾಯದ ಗುಣ, ಬೇಡೆಂಬುದು ವೈರಾಗ್ಯ.
ಬೇಕೆಂಬುವನಲ್ಲ, ಬೇಡೆಂಬುವನಲ್ಲ, ಈ
ಉಭಯವನತಿಗಳೆದು ಭೋಗಿಸಬಲ್ಲದೆ
ಕೂಡಲ ಚೆನ್ನಸಂಗಾ, ನಿಮ್ಮ ಶರಣೆಂಬೆನು''

ಎಂಬ ಒಂದು ವಚನದಲ್ಲಿ, ಬೇಕೆಂಬುದು ಅಂದರೆ ಅಪೇಕ್ಷೆ ಕಾಯದ ಗುಣವೆಂದು ಸೂಚಿಸಿದೆ. ಈ ಒಂದು ವಾಕ್ಯದಿಂದ ತನುಗುಣದ ವಿವರಣೆ ಸ್ಪಷ್ಟವಾಗ

ದಿದ್ದರೂ ದೇಹ ಎಲ್ಲವನ್ನೂ ಬಯಸುವ ಬಳಸುವ ಗುಣವುಳ್ಳದ್ದೆಂದು ಅಭಿಪ್ರಾಯ ವಾಗುತ್ತದೆ.

"ಅಂಗದಿಚ್ಛೆಗೆ ಮದ್ಯ ಮಾಂಸವ ತಿಂಬರು
ಕಂಗಳಿಚ್ಛೆಗೆ ಪರ ವಧುವ ನೆನೆವರು''

ಎಂದು ಬಸವಣ್ಣನವರು ಹೇಳಿದ್ದಾರೆ. ನೀಚತನಕ್ಕೆ, ದುಷ್ಟ ಪ್ರವೃತ್ತಿಗೆ ಎಳೆಸುವುದೇ ತನುವಿನ ಗುಣ, ಮೊದಲು ಉಳಿವಿಗಾಗಿ ಆಹಾರದ ಬಯಕೆ. ಅನಂತರ ಅದರಲ್ಲಿ ರುಚಿಯು ಅಪೇಕ್ಷೆ. ರುಚಿಯಾದರೆ ಅದನ್ನೇ ಬಳಸುವ ಬಯಕೆ. ಬಳಕೆಯ ಪರಿಣಾಮವೇ ಕೇಡಿಗೆ ದಾರಿ. ಇಂತಹ ಸ್ವಭಾವದಿಂದ ಕೂಡಿದ ತನುವಿನ ಪರಿಶುದ್ಧತೆಯಾದರೆ ಅದು ತ್ಯಾಗಾಂಗ. ನಮ್ಮ ಜೀವನ ಎಲ್ಲ ಅಪೇಕ್ಷೆಗಳಿಗೆ ದೇಹದ ಪ್ರವೃತ್ತಿ ಕಾರಣ. ಎಲ್ಲವನ್ನೂ ಬೇಕೆನ್ನುವುದೇ ಅದರ ಸ್ವಭಾವ. ಯಾವುದು ಬೇಕು, ಯಾವುದು ಬೇಡ ಎಂಬುದರ ಪರಿವೆ ಅದಕ್ಕಿಲ್ಲ. ಇಲ್ಲದುದನ್ನು ಪಡೆಯು ವುದಕ್ಕೆ ಮನವನ್ನು ತೊಡಗಿಸುತ್ತದೆ. ಮನವು ದೇಹವನ್ನು ಅಪ್ರಾಪ್ಯ ಪ್ರಾಪ್ತಿಗೆ ಹೆಣಗುವಂತೆ ಕ್ರಿಯಾ ಪ್ರವೃತ್ತವಾಗಿ ಮಾಡುತ್ತದೆ. ಅದರಿಂದ ಅನಂತ ಕೋಟಲೆಗಳಲ್ಲಿ ಮಾನವ ಸಿಗುತ್ತಾನೆ. ನರಳುತ್ತಾನೆ. ಮನುಷ್ಯತ್ವದಿಂದ ಹಿಂದುಳಿ ಯುತ್ತಾನೆ. ಆದುದರಿಂದ ಮನುಷ್ಯತ್ವವನ್ನು ತ್ಯಾಗಮಾಡಿ ಯೋಗಿಯಾಗುವು ದಿಲ್ಲ. ತನುವಿನ ಪ್ರಾಕೃತಿಕ ಗುಣಗಳನ್ನು ಜಯಿಸಿ ಮಾನವತ್ವದ ಸಾಧನೆಗೆ ಮುನ್ನಡಿಯಿಡಬೇಕೆಂದು ಶರಣರು ನುಡಿದಿದ್ದಾರೆ.

ತನುಗುಣಗಳನ್ನು ತ್ಯಾಗ ಮಾಡುವುದಕ್ಕೆ ತ್ಯಾಗಾಂಗವೆಂದು ಶರಣರು ಸೂಚಿಸಿ ದರು. ತನುಗುಣವನ್ನು ಗೆಲ್ಲುವುದಕ್ಕಾಗಿಯೇ ಅನೇಕ ಮಹಾನುಭಾವರು ಹಠ ಯೋಗ, ಲಯಯೋಗ, ರಾಜಯೋಗ ಮುಂತಾದ ಮಾರ್ಗಗಳನ್ನು ಅವಲಂಬಿಸಿ ದರು. ಅದು ಸಾಧ್ಯವಾಗದವರು ದೇಹವನ್ನು ಅನ್ಯರೀತಿಯಿಂದ ದಂಡನೆಗೆ ಖಂಡ ನೆಗೆ ಗುರಿ ಮಾಡಿದರು. ಶರಣರಿಗೆ ಈ ಮಾರ್ಗಗಳು ಸೂಕ್ತವೆನಿಸಲಿಲ್ಲ. ಏಕೆಂದರೆ ಜೀವನವನ್ನೆಲ್ಲಾ ಇದೊಂದು ಸಾಧನೆಗಾಗಿ ವಿನಿಯೋಗಿಸುವುದು ಸೂಕ್ತವಲ್ಲವೆಂದು ಅವರು ಭಾವಿಸಿದರು. ಮಾನವ ಸಂಸಾರಿಯಾಗಲೀ ಸನ್ಯಾಸಿಯಾಗಲೀ ಸಮಾಜ ಜೀವಿಯಾಗಿ ಬಾಳಬೇಕು—ಸಮಾಜಕ್ಕಾಗಿ ಬದುಕಬೇಕು. ಸಮಾಜದ ಸಂರಕ್ಷಣೆಯೂ ತನ್ನ ಹೊಣೆ ಎಂದರಿತು ಬದುಕುವುದಾದರೆ ದೇಹವನ್ನು ತುಚ್ಛವೆಂದಾಗಲಿ ವ್ಯರ್ಥ ವೆಂದಾಗಲೀ ಭಾವಿಸಬಾರದು. ಕಾಯ ಗುಣಗಳನ್ನು ಜಯಿಸಿ ಕಾಯ‍ವನ್ನೇ ಕೈಲಾಸ ಮಾಡಬೇಕು. ಹಾಗಾದರೆ ಮನುಷ್ಯ ಏನುಮಾಡಬೇಕು ? ಎಂಬ ಪ್ರಶ್ನೆ ಉದಿಸು ತ್ತದೆ. ಅದಕ್ಕೆ ಉತ್ತರ ಅವನು ಮೊದಲು ಭಕ್ತನಾಗಬೇಕು. ಭಕ್ತಿ ಸಾಧನಾಮಾರ್ಗ ಗಳಲ್ಲಿ ಅತ್ಯಂತ ಶ್ರೇಷ್ಠವಾದುದು. ಜ್ಞಾನಯೋಗ ಪ್ರತಿಪಾದಕರಾದ ಶ್ರೀ ಶಂಕರಾ

ಆಚಾರ್ಯರೂ ಸಹ "ಮೋಕ್ಷ ಸಾಧನ ಸಾಮಗ್ರ್ಯಾಂ ಭಕ್ತಿ ಏವಗರೀಯಸಿ" ಎಂದಿದ್ದಾರೆ. ಭಕ್ತಿ ಜಗತ್ತಿನಲ್ಲಿ ಬೆಳೆದುಬಂದ ಅತ್ಯಂತ ಪ್ರಾಚೀನ ಮಾರ್ಗ. ಕಾಲಕ್ರಮದಲ್ಲಿ ನಾನಾರೀತಿಯ ಮಾರ್ಪಾಡುಗಳನ್ನು ನಾವು ಕಾಣುತ್ತೇವೆ. ಭಕ್ತಿಯನ್ನೊಪ್ಪದ ದರ್ಶನ ಜಗತ್ತಿನಲ್ಲಿ ಯಾವುದೂ ಇಲ್ಲವೆಂದೇ ಹೇಳಬಹುದು. ಆದರೆ ಬಾಹ್ಯ ಪೂಜಾಕ್ರಮವನ್ನೇ ಭಕ್ತಿಯೆಂದು ತಿಳಿದವರೂ ಜಗತ್ತಿನಲ್ಲಿದ್ದಾರೆ. ಬಾಹ್ಯಕ್ರಿಯೆಗಳೆಲ್ಲಾ ಭಕ್ತಿಯನ್ನು ಸೃಜಿಸುವುದಕ್ಕೆ ನೆರವಾಗುವ ಸಾಧನಗಳು. ಕ್ರಿಯೆ ಯಾವುದಾದರಾಗಲಿ ಮನುಷ್ಯನಲ್ಲಿ ಭಕ್ತಿ ಸಂಪತ್ತು ಬೆಳೆಯಬೇಕೆಂದು ಮಹಾನುಭಾವರು ಬಯಸಿದರು. ಬಾಹ್ಯಾಡಂಬರದ ವರ್ತನೆಗಳೆಲ್ಲಾ ಮಾನವನನ್ನು ಭಕ್ತನನ್ನಾಗಿ ಮಾಡುವುದಿಲ್ಲ. ಸದಾ ಪೂಜೆ, ಧ್ಯಾನ ಇತ್ಯಾದಿ ವ್ಯವಹಾರ ಭರಿತರಾದ ಮಾತ್ರಕ್ಕೆ ಮಾನವರು ಭಕ್ತರೆನಿಸುವುದಿಲ್ಲ. ಭಕ್ತನ ಸ್ವರೂಪವನ್ನು ಶರಣರು ಅರ್ಥವತ್ತಾಗಿ ಚಿತ್ರಿಸಿದ್ದಾರೆ.

"ಭಕ್ತನು ಶಾಂತನಾಗಿರಬೇಕು. ತನ್ನ ಕುರಿತು ಬಂದ ಠಾವಿನಲ್ಲಿ ಸತ್ಯವಾಗಿರಬೇಕು. ಭೂತಹಿತ ವಚನ ನುಡಿಯಬೇಕು. ಲಿಂಗ ಜಂಗಮದಲ್ಲಿ ಕುಂದು ನಿಂದೆಗಳಿಲ್ಲದಿರಬೇಕು. ಸಕಲ ಪ್ರಾಣಿಗಳ ತನ್ನಂತೆ ಭಾವಿಸಬೇಕು. ತನು, ಮನ, ಧನವ ಗುರುಲಿಂಗ ಜಂಗಮಕ್ಕೆ ಸಮರ್ಪಿಸಬೇಕು. ಅಪಾತ್ರ ದಾನಗೆಯ್ಯದಿರಬೇಕು. ಸಕಲ ಇಂದ್ರಿಯಗಳೂ ತನ್ನ ವಶಗತವಾಗಿರಬೇಕು. ಇದೇ ಮೊದಲಲ್ಲಿ ಬೇಹಶೌಚ ನೋಡಾ. ಲಿಂಗವ ಪೂಜಿಸಿ ಪ್ರಸಾದವ ಪಡೆವಡೆ ಎನಗಿದೆ ಸಾಧನವು ನೋಡಾ ಕೂಡಲ ಸಂಗಮದೇವಾ."

ಇದೊಂದು ವಚನದಲ್ಲಿ ಭಕ್ತನಾಗುವವನ ಅರ್ಹತೆಯನ್ನೆಲ್ಲಾ ವಿವರಿಸಿದೆ. ಭಕ್ತಿ ಎಂದರೆ ಬಾಹ್ಯದಲ್ಲಿ ಮಾಡುವ ಧೂಪ ದೀಪ ನೈವೇದ್ಯಗಳ ಸೇವೆ ಮಾತ್ರವೆಂದು ಭಾವಿಸಿದವರುಂಟು. ಶರಣರು ಇಂತಪ್ಪ ಡಾಂಭಿಕ ಭಕ್ತಿಯನ್ನು ಒಪ್ಪಿದವರಲ್ಲ. ಮತ್ತೊಬ್ಬ ಶರಣರು ಇನ್ನೂ ಸ್ಪಷ್ಟವಾಗಿ ಭಕ್ತನ ಲಕ್ಷಣಗಳನ್ನು ಹೇಳಿದ್ದಾರೆ.

"ಭಕ್ತನಾದರೆ ಬಾಳೆಯ ಹಣ್ಣಿನಂತಿರಬೇಕು. ಭಕ್ತನಾದರೆ ಬೆಲ್ಲದ ಕುಳಿಯಂತಿರಬೇಕು. ಭಕ್ತನಾದರೆ ಮಾವಿನ ಫಲದಂತಿರಬೇಕು. ಇಂತಪ್ಪಾತನೆ ಸದ್ಭಕ್ತ. ಕಾಡಿನೊಳಗಾದ ಶಂಕರಪ್ರಿಯ ಚೆನ್ನಕದಂಬಲಿಂಗ ನಿರ್ಮಾಯ ಪ್ರಭುವೇ". ಭಕ್ತಿ ಮಾನವನ ಅಂತರಂಗ ಬಹಿರಂಗವನ್ನೆಲ್ಲಾ ಪರಿಶುದ್ಧಿಗೊಳಿಸುತ್ತದೆ. ಅವನಿಗೆ ಜಗತ್ತಿನ ಎಲ್ಲ ವ್ಯವಹಾರದಲ್ಲೂ ಜಯ ಲಭಿಸುತ್ತದೆ. ಆದುದರಿಂದ ಭಕ್ತನು ಇಹ ಪರಗಳೆರಡರಲ್ಲೂ ಸುಖವನ್ನೇ ಅನುಭವಿಸುತ್ತಾನೆ. ಅವನು ಭಗವಂತನ ಒಲುಮೆಗೆ ಪಾತ್ರನಾಗುತ್ತಾನೆ. ಅದನ್ನು ಗೀತೆಯಲ್ಲಿ ಹೇಳಿರುವ ರೀತಿ ಮನೋಜ್ಞವಾಗಿದೆ.

ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ॥
ನಿರ್ಮಮೋ ನಿರಹಂಕಾರಃಸ್ಸಮ ದುಃಖ ಸುಖಃಕ್ಷಮೀ॥
ಸಂತುಷ್ಟಃಸತತಂ ಯೋಗೀಯತಾತ್ಮಾದೃಢನಿಶ್ಚಯಃ।
ಮಯ್ಯರ್ಪಿತಮನೋಬುದ್ಧಿರ್ಯೋಮದ್ಭಕ್ತಸ ಮೇ ಪ್ರಿಯಃ॥
(ಅ.೧೨. ಶ್ಲೋ.೧೩–೧೪)

ದ್ವೇಷರಹಿತ, ಸರ್ವರಲ್ಲಿ ವಿಶ್ವಾಸಿ, ಕರಣಾಮಯಿ, ಮಮಕಾರ, ಅಹಂಕಾರಗಳಿಲ್ಲದವನು, ಸುಖ ದುಃಖಗಳಲ್ಲಿ ಸಮಾನ ಭಾವನೆಯುಳ್ಳವನು, ಕ್ಷಮಾಶೀಲ, ಯಾವಾಗಲೂ ಸಂತುಷ್ಟನಾಗಿರುವವನು, ಯೋಗ ಯುಕ್ತನು, ದೃಢ ಮನೋಧರ್ಮವುಳ್ಳವನಾಗಿ ತನ್ನಮನಸ್ಸು ಮತ್ತು ಬುದ್ಧಿಯನ್ನು ನನಗೆ ಅರ್ಪಣ ಮಾಡಿದ ಭಕ್ತನು ತನಗೆ ಪ್ರಿಯನೆಂದು ಪರಮಾತ್ಮನು ಹೇಳಿದಂತೆ ಗೀತೆಯಲ್ಲಿ ಹೇಳಿದೆ. ಶರಣರೂ ಸಹ ಭಕ್ತನ ಲಕ್ಷಣಗಳನ್ನು ಇದೇ ರೀತಿಯಲ್ಲಿ ವರ್ಣಿಸಿದ್ದಾರೆ. ಈ ಎಲ್ಲ ಗುಣಗಳೂ ಅಳವಡಲು ದೇಹವೇ ಆಧಾರ. ಅಂಗದಲ್ಲಿ ಈ ಎಲ್ಲ ಕ್ರಿಯೆಗಳೂ ನಡೆಯಬೇಕು. ಸ್ವಾಭಾವಿಕವಾಗಿ ಅಂಗ ಈ ಎಲ್ಲ ಗುಣಗಳಿಗೆ ವಿರೋಧವಾದ ಪ್ರಕೃತಿಯನ್ನು ಹೊಂದಿರುತ್ತದೆ. ಸ್ವಾಭಾವಕ ಪ್ರಕೃತಿಗಳಲ್ಲಿ ಅನಾಸಕ್ತಿ ಬೆಳೆದು ಅಪ್ರವೃತ್ತಿಗಳನ್ನು ತ್ಯಜಿಸಲು ಭಕ್ತಿ ಸಹಕಾರಿಯಾಗುತ್ತದೆ. ಮನುಷ್ಯತ್ವ ಸಾಧನೆಯಲ್ಲಿ ಭಕ್ತಿ ಮೊದಲ ಮೆಟ್ಟಿಲು. ಶರಣ ಸಾಹಿತ್ಯದಲ್ಲಿ ಭಕ್ತಿಸ್ಥಲವೆಂದು ಕರೆದಿದೆ. ಮಾನವನಲ್ಲಿ ಭಕ್ತಿಯ ಲಕ್ಷಣಗಳು ಅಳವಟ್ಟಮೇಲೆ ಅವನ ಅಂತರಂಗದಲ್ಲಿ ನವಚೇತನ ಉದಿಸುತ್ತದೆ. ಜಗದ ಕೋಟಲೆಗಳು ಅವನನ್ನು ಕಾಡುವುದಿಲ್ಲ. ತಾನು ಜಗದ ವ್ಯಾಪಾರದಲ್ಲಿ ಸಿಲುಕಿ ಗಾಳಿ ಬಂದಂತೆ ತೂರಿಕೊಳ್ಳುವುದಿಲ್ಲ. ಜಗತ್ತನ್ನೇ ತನ್ನಂತೆ ತಿರುಗಿಸುವುದನ್ನೇ ಜೀವನದ ತಪಸ್ಸಾಗಿ ಮಾಡಿಕೊಳ್ಳುತ್ತಾನೆ. ಇಂತಹ ಸಾಧನೆಯಲ್ಲಿ ದೃಢ ನಿಶ್ಚಯವುಳ್ಳವನಾಗಿ ಮುನ್ನಡೆಯುತ್ತಾನೆ. ಶರಣರ ಶಬ್ದದಲ್ಲಿ ಅವನಿಗೆ ಮಹೇಶ್ವರನೆಂದು ಹೆಸರು.

ಭಕ್ತಿ ಲಕ್ಷಣಗಳು ಜೀವಿಗೆ ಅಳವಟ್ಟ ಮೇಲೆ ಅವನು ಯಾವ ಕಾರಣದಿಂದಲೂ ಅದರಿಂದ ಹಿಂದಾಗನು. ಅವನು ಸಂಕಲ್ಪಸಾಧಕನೂ ದೃಢಚಿತ್ತನೂ ಆಗುತ್ತಾನೆ. ಅವನ ಜೀವನದ ಪ್ರವೃತ್ತಿಗಳೇ ಬೇರೆಯಾಗುತ್ತವೆ. ಶರಣರು

"ನುಡಿಯಲ್ಲಿ ಎರಡು ನುಡಿಯನು, ನಡೆಯಲ್ಲಿ ಎರಡು ನಡೆಯನು,
ನುಡಿವಂತೆ ನಡೆಯ ವಿಸ್ತರಿಸುವ. ನಡೆಯಂತೆ ನುಡಿಯ ವಿಸ್ತರಿಸುವ,
ಹಿಡಿವನು ಗುರುಲಿಂಗ ಜಂಗಮ ದಾಸೋಹವ.
ಬಿಡುವನು ಹೊನ್ನು ಹೆಣ್ಣು ಮಣ್ಣೆಂಬ ತ್ರಿಮಲದಾಸೆಯನು,
ಇಂತಪ್ಪ ವೀರಮಾಹೇಶ್ವರನನೇನೆಂಬೆನಯ್ಯಾ ಅಖಂಡೇಶ್ವರಾ ?"

ಎಂದು ಮಾಹೇಶ್ವರನ ಲಕ್ಷಣವನ್ನು ವಿವರಿಸಿದ್ದಾರೆ. ಮಾನವನು ನಿಷ್ಠಾವಂತ ಭಕ್ತನಾದರೆ ಐಹಿಕ ವಸ್ತುಗಳು ಅವನಿಗೆ ತೃಣವಾಗುತ್ತವೆ. ಮಹತ್ತೆ ಕರಗತವಾದ

ಮೇಲೆ ಅಣುವಿನಿಂದೇನು ಪ್ರಯೋಜನ ? ಸರ್ವಜ್ಞನೂ, ಸರ್ವಶಕ್ತನೂ ಸರ್ವಾಂತರ್ಯಾಮಿಯೂ ಆದವನೇ ವಶವರ್ತಿಯಾದ ಮೇಲೆ ಮತ್ತೇನುಬೇಕು ? ಅದನ್ನೇ ಉಪನಿಷತ್ತಿನಲ್ಲಿ "ಯೋವೈ ಭೂಮಾ ತತ್ಸುಖಂ ನ ಅಲ್ಪೇಸುಖಮಸ್ತಿ" ಎಂದು ಹೇಳಿದೆ. ಕ್ಷಣಿಕ ಸುಖಕ್ಕೆ ಕಾರಣವಾದ ವಸ್ತುಗಳ ತ್ಯಾಗ ಮನೋಭಾವವನ್ನು ಬೆಳೆಸುವುದು ಭಕ್ತಿ. ಭಕ್ತಿಯ ಅನುಭವವಾಗಿ ತ್ಯಾಗದ ಆಚರಣೆಯಲ್ಲಿ ನಿರತನಾದ ಮಾನವ ಮಹೇಶ್ವರ. ಇದನ್ನು ಶರಣ ತತ್ತ್ವದಲ್ಲಿ ತ್ಯಾಗಾಂಗವೆಂದು ಪ್ರತಿಪಾದಿಸಿದೆ.

ಶರಣರ ದೃಷ್ಟಿಯಲ್ಲಿ ತ್ಯಾಗವೆಂದರೆ ಎಲ್ಲವನ್ನು ಬಿಟ್ಟು ಸಾವುದೆಂದು ಅರ್ಥವಲ್ಲ. ಎಲ್ಲವನ್ನೂ ಬಿಟ್ಟು ಬದುಕಬೇಕೆಂಬುದೇ ಅವರ ಆಶಯ. ದೇಹದ ಚೇತನಾತ್ಮಕ ಪ್ರತಿಕ್ರಿಯೆಗೆ ಭೌತಿಕವಾದ ಕೆಲವು ವಸ್ತುಗಳ ಅವಶ್ಯಕವಿದೆ. ಅವುಗಳನ್ನು ಭೋಗಿಸಲೇ ಬೇಕು. ಅವುಗಳ ಭೋಗಾನುಭವ ದೇಹಕ್ಕೆ ಆದಾಗ ಅದು ಭೋಗಾಂಗವೆನಿಸುತ್ತದೆ. ತ್ಯಾಗ ಭೋಗದ ಅರ್ಥ ವಿವರಣೆಯನ್ನು ಈ ವಚನದಲ್ಲಿ ನೋಡಬಹುದು. "ಲಿಂಗದೊಡನೆ ಸಕಲ ಸುಖಂಗಳ ಭೋಗಿಸುವಲ್ಲಿ ಭೋಗಾಂಗ'' ಎಂದು ಹಿಂದಿನ ವಚನದಲ್ಲಿ ಹೇಳಿದೆಯಷ್ಟೆ! ಭೋಗಿಸುವುದು ಹೇಗೆ?

ಶಿವಭಕ್ತಿಯುಳ್ಳವಂಗೆ ಕಾಮಬೇಡ, ಕ್ರೋಧ ಬೇಡ, ಲೋಭ ಬೇಡ, ಮೋಹ ಬೇಡ, ಮದ ಬೇಡ, ಮತ್ಸರ ಬೇಡ, ಶಿವಭಕ್ತಿಯುಳ್ಳವಂಗೆ ಕಾಮ ಬೇಕು, ಕ್ರೋಧ ಬೇಕು, ಲೋಭ ಬೇಕು, ಮೋಹ ಬೇಕು, ಮದ ಬೇಕು, ಮತ್ಸರಬೇಕು. ಬೇಕೆಂಬುದಕ್ಕಾವಗುಣ ಬೇಡೆಂಬುದಕ್ಕಾವಗುಣ? ಕಾಮ ಬೇಕು ಲಿಂಗದಲ್ಲಿ. ಕ್ರೋಧಬೇಕು ಕರಣಂಗಳಲ್ಲಿ, ಲೋಭ ಬೇಕು ಪಾದೋದಕ ಪ್ರಸಾದಂಗಳಲ್ಲಿ. ಮೋಹ ಬೇಕು ಗುರುಲಿಂಗ ಜಂಗಮದಲ್ಲಿ, ಮದ ಬೇಕು ಶಿವಾಚಾರ ಘನವೆಂಬಲ್ಲಿ, ಮತ್ಸರಬೇಕು ಹೊನ್ನು ಹೆಣ್ಣು ಮಣ್ಣಿನಲ್ಲಿ. ಇಂತೀ ಷಡ್ಗುಣವಿರಬೇಕು. ಬೇಡೆಂಬುದಕ್ಕಾವ ಗುಣ? ಕಾಮ ಬೇಡ ಪರಸ್ತ್ರೀಯರಲ್ಲಿ. ಮದ ಬೇಡ ಶಿವಭಕ್ತರಲ್ಲಿ. ಕ್ರೋಧ ಬೇಡ ಗುರುವಿನಲ್ಲಿ. ಲೋಭ ಬೇಡ ತನುಮನದಲ್ಲಿ, ಮೋಹ ಬೇಡ ಸಂಸಾರದಲ್ಲಿ ಮತ್ಸರ ಬೇಡ ಸಕಲ ಪ್ರಾಣಿಗಳಲ್ಲಿ. ಇಂತೀ ಷಡ್ವಿಧ ಗುಣವನರಿದು ಮರೆಯಬಲ್ಲದೆ ಆತನೇ ಸದ್ಭಕ್ತ ಕಾಣಾ ಕೂಡಲ ಚೆನ್ನ ಸಂಗಮದೇವಾ''. ಶರಣ ಸಾಹಿತ್ಯದಲ್ಲಿ ಶರಣರ ದರ್ಶನದ ಸ್ವರೂಪವನ್ನು ವಿವರಿಸುವ ಅತಿ ಸುಂದರ ವಚನ. ಷಡ್ಗುಣಗಳು ದೇಹದೊಡನೆ ಬೆಳೆದು ಬರುತ್ತವೆ. ಆದರೆ ಭಕ್ತ ಅವುಗಳನ್ನು ಬಳಸಿಕೊಳ್ಳುವ ರೀತಿಯನ್ನರಿತು ಮಹೇಶನಾಗಬೇಕೆಂದು ಈ ವಚನದಲ್ಲಿ ವಿವರಿಸಿದೆ.

ಲೋಭ ಬೇಕು ಪಾದೋದಕ ಪ್ರಸಾದಂಗಳಲ್ಲಿ ! ಈ ಮಾತಿನಲ್ಲಿ ಆರ್ಥಿಕ, ಸಾಮಾಜಿಕ, ಧಾರ್ಮಿಕ ವಿಚಾರವೆಲ್ಲಾ ಅಡಗಿದೆ. ಅದನ್ನರಿತರೆ ಜಗತ್ತಿನ ಅನಂತ

ಸಮಸ್ಯೆಗಳು ಬಗೆಹರಿಯುತ್ತವೆ. ಅಂತೆಯೇ ಷಡ್ಗುಣಗಳು ಹಿಂದಿನ ವಚನದಂತೆ ಮಾನವತ್ವದಲ್ಲಿ ಬಳಕೆಯಾದರೆ ಜಗತ್ತು ಜಗದೀಶನಾಲಯವಾಗುತ್ತದೆ. ಮಾನವ ಜೀವಂತನಾಗಿರುವಾಗಲೇ ಎಲ್ಲವನ್ನೂ ಸಾಧಿಸಬೇಕು. ತ್ಯಾಗ ಮಾಡುವುದನ್ನು ತ್ಯಾಗ ಮಾಡಿ ಭೋಗಿಸಬೇಕಾದುದನ್ನು ಅನುಭೋಗಿಸಬೇಕು. ಪ್ರಾಣದ ಇರುವಿಕೆಗೆ ಅನ್ನೋದಕಗಳು ಅಗತ್ಯ. ಅವನ್ನು ಅನುಭವಿಸುವ ರೀತಿಯು ಅರಿವು ಸಮಗಾಗಬೇಕು. ಅದನ್ನೇ ಶರಣರು:

"ಘನವಪ್ಪ ಬೋನವನು ಒಂದನುವಿನ ಪರಿಯಾಣದಲ್ಲಿ ಹಿಡಿದು,
ಗುರುಲಿಂಗವಾರೋಗಣೆಯ ಮಾಡಿ ಮಿಕ್ಕುದು ಪ್ರಸಾದ.
ಈ ತೆರೆದ ಘನವಪ್ಪ ಲಿಂಗವನು ಒಂದನುವಿನಲ್ಲಿ ತಂದಿರಿಸಿ,
ಘನವಪ ಬೋನವನು ಲಿಂಗಾವರೋಗಣೆಯ ಮಾಡಿ,
ಮಿಕ್ಕುದ ಕೊಳಬಲ್ಲಡೆ ಪ್ರಸಾದಿ. ಇಂತೀ ತೆರನ
ಬೆಸಗೊಳ ಬಲ್ಲಡೆ ಎನ್ನ ಬೆಸಗೊಳ್ಳಿ ಗೊಹೇಶ್ವರಾ"

ಎಂದಿದ್ದಾರೆ.

ಆಹಾರ ಸೇವನೆಯಲ್ಲಿ ಹಿತಮಿತಗಳ ಪ್ರಜ್ಞೆಯಿರಬೇಕು. ಗುರುಲಿಂಗಜಂಗಮಕ್ಕೆ ಸಮರ್ಪಿಸಿ ಉಳಿದುದನ್ನು ಪ್ರಸಾದರೂಪದಲ್ಲಿ ತಾನು ಸ್ವೀಕರಿಸಬೇಕು. ಅಲ್ಲದೆ ತನ್ನ ಕಣ್ಣೆದುರಿನಲ್ಲಿ ತನಗಿಂತ ಹಸಿವಿನಿಂದ ನರಳುವವರಿದ್ದಾಗ ಅವರಿಗೆ ನೀಡಬೇಕು. ಜಿಹ್ವಾಚಾಪಲ್ಯದಿಂದ ಭುಜಿಸುವ ಭಾವನೆ ಇರಲಾರದು. ಮೊಗ್ಗೆಯ ಮಾಯಿದೇವರು ಶತಕತ್ರಯದಲ್ಲಿ:

ಲಿಂಗಮುಖಾರ್ಪಣೀಯವಹ ಸರ್ವವಿಶುದ್ಧ ಪದಾರ್ಥಜಾತಮಂ ।
ಸ್ವಾಂಗವಚೋ ಮನಃಕರಣ ಕಾಯಿಕ ವಾಚಿಕ ಮಾನಸಕ್ರಿಯಾ ।
ಸಂಗತ ಸಾವಧಾನ ಸುವಿವೇಕದಿನರ್ಪಿಸಿ ತತ್ಪ್ರಸಾದಮಂ ।
ಸಿಂಗದೆ ಭೋಗಿಪಲ್ಲಿ ಬಳಿಕಾಸ್ಥಲ ಸಿದ್ಧಿದಿಟಂ ಶಿವಾಧವಾ ॥

ಎಂದಿದ್ದಾರೆ. ಅನ್ಯರಿಗೆ ಹೊರೆಯಾಗದೆ ಹೊಣೆಯಾಗದೆ ತನ್ನ ಸುಖಕ್ಕಾಗಿ ಅನ್ಯರನ್ನು ಹಿಂಸಿಸದೆ ತನ್ನ ದುಡಿಮೆಯಿಂದ ಬಂದುದರಲ್ಲಿ ಅವರನ್ನು ತೃಪ್ತಿಪಡಿಸಿ ಪ್ರಸಾದವನ್ನಿತ್ತು ಪರಮಾತ್ಮನನ್ನು ಸ್ಮರಿಸಿ ಭೋಗಿಸುವುದು ಪ್ರಸಾದಿಯ ಲಕ್ಷಣ. ಇದು ನಿಜವಾದ ಭೋಗ. ಇಂತಹ ಪ್ರಸಾದವನ್ನು ಭೋಗಿಸಿದರೆ ಅದಕ್ಕನುಗುಣವಾದ ಪ್ರವೃತ್ತಿಗಳು ಮೂಡುತ್ತವೆ.

ಕುಕ್ಷೌತಿಷ್ಠತಿ ಯಸ್ಯಾನ್ನಂ ತಸ್ಯ ಬುದ್ಧಿಃ ಪ್ರಜಾಯತೆ ॥

ಎಂದು ಮಹಾಭಾರತದಲ್ಲೂ

"ಆಹಾರ ಶುದ್ಧೌ ಸತ್ವಶುದ್ಧಿಃ ಸತ್ವ ಶುದ್ಧೇ ಧೃವಾಸ್ಮೃತೀಃ ।
ಸ್ಮೃತಿರ್ಲಬ್ಧೌ ಸರ್ವ ಗ್ರಂಥೀ ನಾಂ ವಿಪ್ರಮೋಕ್ಷಃ ॥

ಎಂದು ಉಪನಿಷತ್ತಿನಲ್ಲೂ ಹೇಳಿದೆ. ಪ್ರಸಾದ ಭೋಗದಿಂದ ಪರಿಶುದ್ಧವಾದ ಮಾನವ ಪರಮಾತ್ಮನ ಒಲುಮೆಗೆ ಪಾತ್ರನಾಗುತ್ತಾನೆ.

ಪ್ರಸಾದಿಯಾದ ಮಾನವ ತನ್ನ ಎಲ್ಲ ವ್ಯವಹಾರವನ್ನು ಪರಮಾತ್ಮನಿಗೆ ಅರ್ಪಿಸುತ್ತಾನೆ. ತನ್ನ ಬದುಕೆಲ್ಲಾ ದೈವಮಯವಾಗುತ್ತದೆ. ತನ್ನ ಎಲ್ಲ ವ್ಯವಹಾರಗಳಿಗೆ ಚೇತನವಾಗಿರುವ ಪ್ರಾಣದ ಬಗೆಗೆ ಭಕ್ತಿ ವಾತ್ಸಲ್ಯಗಳು ತುಂಬಿರುತ್ತವೆ. ತನ್ನ ಎಲ್ಲ ಚಟುವಟಿಕೆಗಳಲ್ಲಿ ಪರಮಾತ್ಮನ ಒಲವು ತುಂಬಿಬರುತ್ತದೆ. ಇದೇ ಪ್ರಾಣವೇ ಲಿಂಗವಾದ ಪ್ರಾಣಲಿಂಗಿಯ ಅವಸ್ಥೆ. ಅವನಿಗೆ ಜನ್ಮಾಂತರದ ಪಾಪ ಶೇಷಗಳ ಬಂಧನವಿರುವುದಿಲ್ಲ. ಮೊಗ್ಗೆಯ ಮಾಯಿದೇವರು:

ಆಣವ ಮಾಯ ಕಾರ್ಮಿಕ ಮಲತ್ರಯ ಸಂಗತಿ ದೂರವಾಗಿ ನಿ
ರ್ವಾಣ ಪದೈ್ಕಕ ಹೇತುವಹ ಸದ್ಗುರುನಾಥ ನಿಜೋಪದೇಶದಿಂ
ಪ್ರಾಣದ ಲಿಂಗದ ಸ್ಥಿತಿ ಸಮಂಜಸವಾಗಿ ಸುಸಾಧ್ಯಮಾದೊಡಾ
ಪ್ರಾಣವೆ ಲಿಂಗವಾದ ಪರಮಸ್ಥಳ ಸಿದ್ಧಿ ಕಣಾ ಶಿವಾಧವಾ ॥

ಎಂದು ಪ್ರಾಣಲಿಂಗಿಯ ಸ್ವರೂಪವನ್ನು ಚಿತ್ರಿಸಿದ್ದಾರೆ. ಇಲ್ಲಿ ಜೀವಕ್ಕೂ ಜೀವಿಗೂ ಭಿನ್ನತೆ ಇರುವುದಿಲ್ಲ. ಬಾಳಿನಲ್ಲಿ ಭಗವಂತನ ತನ್ಮಯತೆ ತುಂಬಿದ ಭೋಗದ ಅನುಭವ ಮಾನವನಿಗಾಗುತ್ತದೆ. ಇದೇ ಭೋಗಾಂಗ. ದೇಹ ಪ್ರಾಣಗಳ ಸಾರ್ಥಕತೆಗೆ ಯಾವುದರ ಭೋಗವಿರಬೇಕೆಂಬುದನ್ನು ಈ ಎರಡು ಹಂತದಲ್ಲಿ ಶರಣರು ಬಿತ್ತರಿಸಿದ್ದಾರೆ. ಪ್ರಾಣಲಿಂಗಿಸ್ಥಲದಲ್ಲಿ ಜೀವಿ ಶಿವನೊಡನಾಡುವ ಅನುಭವವಾಗುತ್ತದೆ. ಸಕಲ ಜೀವರಾಶಿಗಳಲ್ಲಿ ಸಕಲ ವಸ್ತುಗಳಲ್ಲಿ ಪರಮಾತ್ಮನ ಇರುವಿಕೆಯ ಅರಿವಾಗುತ್ತದೆ. ಆದರೂ ತನಗೂ ಪರಮಾತ್ಮನಿಗೂ ಪ್ರತ್ಯಕ್ಷತೆಯ ಅನುಭವವಾಗುತ್ತಿರುತ್ತದೆ. ಇಲ್ಲಿಗೆ ಮನುಷ್ಯತ್ವದ ಸಾಧನೆ ಪೂರ್ಣವಾಗುವುದಿಲ್ಲ.

ತ್ಯಾಗ ಮತ್ತು ಭೋಗದ ಅನುಭವವಾದ ಮೇಲೆ ದೇಹದಲ್ಲಿರುವ ಚೈತನ್ಯ ಅದೃಶ್ಯವಾದ ವಿಶ್ವಚೇತನವನ್ನು ಸೇರಲು ಹಂಬಲಿಸುತ್ತದೆ. ಅದೂ ಅಂಗದಲ್ಲಿಯೇ ಆಗಬೇಕು. ಆದುದರಿಂದ ಈ ಅವಸ್ಥೆಯನ್ನು ಶರಣ ತತ್ತ್ವದಲ್ಲಿ ಯೋಗಾಂಗ ಎಂದು ಕರೆದಿದೆ. ಯೋಗಾಂಗದಲ್ಲಿ ಶರಣತ್ವ ಮೊದಲ ಹಂತ. ನಾಲ್ಕು ಅವಸ್ಥೆಗಳಲ್ಲಿ ಗಳಿಸಿದ ತ್ಯಾಗಭೋಗದ ಭಾಗ್ಯ. ಸಾಧಕನಲ್ಲಿ ನಿಶ್ಚಲನಾಗಿ ನೆಲೆಗೊಂಡಿರಬೇಕು. ಅವನಿಗೆ ತಾನು ಶಿವನಿಂದ ಅನ್ಯನೆಂಬ ಭಿನ್ನಭಾವ ಅಳಿದಿರಬೇಕು. ಶಿವನೊಲುಮೆಯನ್ನು ಮರೆತು ತನ್ನಸಾಮರ್ಥ್ಯದಿಂದ ಯಾವುದನ್ನಾದರೂ ಸಾಧಿಸಬಲ್ಲೆ

ನೆಂಬ ಭಾವ ಮೂಡಬಾರದು. ತನ್ನೆಲ್ಲ ವ್ಯವಹಾರ ಶಿವನಿರ್ದೇಶಿತವೆಂಬ ಪೂರ್ಣ ಭಾವ ತುಂಬಿ ಬರಬೇಕು. ಪ್ರಭುದೇವರು ಹೇಳುವಂತೆ ತನ್ನ ತಾನರಿದು ತಾನು ತಾನಾದವನು ಶರಣ. ಶರಣನ ಪರಿಯನ್ನು ಶರಣರ ನುಡಿಯಲ್ಲೇ ಸವಿಯ ಬೇಕು:

"ಭಕ್ತಿ ಜ್ಞಾನ ವೈರಾಗ್ಯ ತಪ್ಪದೆ, ಷಟ್‌ಸ್ಥಲ ಮಾರ್ಗದಿರವು ತಪ್ಪದೆ, ಜ್ಞಾನಕ್ರಿಯೆಗಳಲ್ಲಿ ಪ್ರೇಮ ತಪ್ಪದೆ, ಶರಣಸತಿ ಲಿಂಗಪತಿಯಾದ ಭಾವ ತಪ್ಪದೆ, ಷಡ್ವಿಧ ಲಿಂಗಗಳಲ್ಲಿ ಅರ್ಪಿತಾವಧಾನ ತಪ್ಪದೆ, ತೀರ್ಥ ಪ್ರಸಾದದಲ್ಲಿ ಎಚ್ಚರ ತಪ್ಪದೆ, ಮಂತ್ರಾಂಗಳ ಬಡವರೆದು ಲಿಂಗ ಸಂಧಾನ ತಪ್ಪದೆ, ಹಿಡಿದ ವ್ರತ ನೇಮಂಗ ಳಲ್ಲಿ ನಿಷ್ಠೆ ತಪ್ಪದೆ, ನಡೆದಂತೆ ನುಡಿದು ನುಡಿದಂತೆ ನಡೆದ ಭಾಷೆ ತಪ್ಪದೆ, ದ್ವೈತಾ ದ್ವೈತವ ನೂಂಕಿ, ಬರಿಯವೈರಾಗ್ಯವ ನೊಪ್ಪುಗೊಳ್ಳದೆ, ನಿಜವಿರಕ್ತಿಯ ಹೊಲಬು ತಪ್ಪದೆ, ಪಂಚೈವರೊಂದಾಗಿ ಸದ್ಯೋನ್ಮುಕ್ತಿಗೆ ಮನವಿಟ್ಟು ಅರ್ಥಿಯಿಂದ ಆಚರಿಸು ವರಯ್ಯ ನಿಮ್ಮ ಶರಣರು, ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನಾ"

ಈ ಒಂದು ವಚನ ಶರಣತ್ವದ ಸ್ವರೂಪವನ್ನು ಸುಂದರವಾಗಿ ಚಿತ್ರಿಸುತ್ತವೆ. ಶರಣರಲ್ಲಿರಬೇಕಾದ ನಡೆ ನುಡಿ ತನುಮನದ ಭಾವವನ್ನೆಲ್ಲಾ ವಿವರಿಸಿದೆ. ಈ ವಚನ ದಲ್ಲಿ ಶರಣತ್ವದ ಮೆಟ್ಟಲನ್ನೇರಲು ಮಾನವನು ಸಾಧಿಸಬೇಕಾದ ಎಲ್ಲಾ ತತ್ತ್ವದ ವಿವರಣೆಯನ್ನು ನೀಡಿದೆ. ಮತ್ತೊಬ್ಬ ಶರಣರು ಈ ಸ್ಥಲವನ್ನು ಮತ್ತೂ ಮಾರ್ಮಿಕ ವಾಗಿ ಹೇಳಿದ್ದಾರೆ.

"ನಾವು ಶರಣರೆಂದು ಒಪ್ಪವಿಟ್ಟು ನುಡಿವ ಅಣ್ಣಗಳಿರಾ, ನೀವು ಶರಣರಾದ ಭೇದವ ಹೇಳಿರಿ. ಅರಿಯದಿರ್ದಡೆ ಕೇಳಿರಿ. ತನುವಿನಕಾಂಕ್ಷೆಯ ಸುಟ್ಟುರುಹಿ, ಮನದ ಲಜ್ಜೆಯ ಮುರಿದು, ಭಾವದ ಕ್ರಿಯೆಯ ಹೊಟ್ಟು ಮಾಡಿ ತೂರಿ, ಸದ್ಭಕ್ತಿಯ ನಿಜ ನೈಷ್ಠೆಯ ತಿಳಿದು, ಸತಿಸುತಂಗೆ ಸದಾಚಾರ ಸನ್ಮಾರ್ಗವ ತೋರಿ, ನಿರ್ವಂಚಕದಿಂದ ಅರಿದಾಚರಿಸಬಲ್ಲಾತನೇ ಅಚ್ಚ ಶರಣ ನೋಡಾ ಕಲಿದೇವರದೇವಾ"

ಇಲ್ಲಿ ಶರಣನಾಗುವವನು ಸನ್ಯಾಸಿಯಾಗಬೇಕೆಂಬ ಕಟ್ಟಳೆಯಿಲ್ಲ. ಸಂಸಾರಿಯು ಶರಣನಾಗಬಹುದು. ತನ್ನ ದಿನನಿತ್ಯದ ಕಾಯಕದಲ್ಲಿ ನಿರತನಾದವನು ಶರಣತ್ವ ವನ್ನು ಪಡೆಯಬಹುದೆಂಬುದನ್ನು ವಿವರಿಸಿದೆ. ಶರಣನಾದ ಮೇಲೆ ತನ್ನ ನಡೆನುಡಿ ಯಲ್ಲಿ ಶಿವನಾದೇಶದಂತೆ ನಡೆಯುತ್ತವೆ. ಇವುಗಳಲ್ಲಿ ತನ್ನದೆಂಬ ಭಾವನೆಯೇ ಉಳಿ ಯುವುದಿಲ್ಲ. ತಾನು ಶಿವನೆಂಬ ಭಾವನೆ ಅಳಿಯುವುದಿಲ್ಲ. ಅಂದರೆ ಜೀವನದ ಎಲ್ಲ ವ್ಯವಹಾರಗಳಲ್ಲೂ ಶಿವನೊಡಗೂಡಿದ ಭಾವ ಬಲಿಷ್ಠವಾಗಿರುತ್ತವೆ. ಉರಿ ಬರಲಿ ಸಿರಿ ಬರಲಿ ಬೇಕು ಬೇಡೆನ್ನದೆ ಶಿವನೊಡನೆಲ್ಲವನ್ನೂ ಅನುಭವಿಸುವ ಆನಂದವೇ

ತುಂಬಿರುತ್ತಾನೆ. ಅಂತಹವರ ಸ್ಥಿತಿಯನ್ನು ಪ್ರಭುದೇವರು ಅಭಿಮಾನದಿಂದ ಹೀಗೆ ಹೇಳುತ್ತಾರೆ :

"ಅಹಂಕಾರವನೆ ಮರೆದು ದೇಹಗುಣಂಗಳನೆ ಜರಿದು ಇಹಪರವೂ ತಾನೆಂಬರಿದ ಕಾರಣ, ಸೋಹಂಭಾವಸ್ಥಿರವಾಯಿತ್ತು. ಸಹಜದುದಯದ ನಿಲವಿಂಗೆ ಮಹಾಘನಲಿಂಗದ ಬೆಳಗು ಸ್ವಾಯುತವಾದ ಕಾರಣ ಗೊಹೇಶ್ವರಾ ನಿಮ್ಮ ಶರಣನುಪಮಾತೀತನು"

ಪ್ರಭುದೇವರ ದೃಷ್ಟಿಯಲ್ಲಿ ಶರಣ ಪುರುಷೋತ್ತಮನಾಗುತ್ತಾನೆ. ಅವನೆಲ್ಲ ಅಂಗಗಳೂ ಪರುಷ ಶಕ್ತಿಯನ್ನು ಹೊಂದುತ್ತವೆ. ಅವನೆಲ್ಲಾ ವ್ಯವಹಾರಗಳು ದೇವನಿಗಾಗಿ ದೇವನಿಂದಲೇ ದೇವನೇ ಮಾಡಿದಂತಾಗುತ್ತದೆ. ಶಿವದೇವರ ಅನಿರ್ಭಾದಿತ ಬೆಸುಗೆಯನ್ನು ಇಲ್ಲಿ ನಾವು ಕಾಣಬಹುದು. ಶರಣತ್ವವನ್ನು ಅರಿಯಲು ಭಗವದ್ಗೀತೆಯಲ್ಲಿ ಪುರುಷೋತ್ತಮ ಯೋಗದಲ್ಲಿ ಹೇಳಿರುವುದನ್ನು ಇಲ್ಲಿ ನೋಡಬಹುದು. ನಿರ್ಮಾನ ಮೋಹಾ ಜಿತ ಸಂಗದೋಷಾ

ಅಧ್ಯಾತ್ಮ ನಿತ್ಯಾ ವಿನಿವೃತ್ತಕಾಮಾಃ ।
ದ್ವಂದ್ವೈರ್ವಿಮುಕ್ತಾಸುಖದುಃಖಸಂಜ್ಞೈಃ
ಗಚ್ಛಂತ್ಯ ಮೂಢಾಃ ಪದಮವ್ಯಯಂತತ್ ॥

ಮಾನ ಮೋಹಗಳನ್ನು ತ್ಯಾಗಮಾಡಿ ಆಸಕ್ತಿಯಿಂದುಂಟಾಗುವ ದೋಷಗಳನ್ನು ದೂರಗೊಳಿಸಿ ನಿತ್ಯವೂ ಆತ್ಮಚಿಂತನ ಮಗ್ನನಾದ ವಿಷಯದಾಶೆಗಳನ್ನು ಅಳಿಸಿದ ಸುಖದುಃಖದ್ವಯಗಳಿಂದ ಮುಕ್ತನಾದ ಜ್ಞಾನಿಯು ಪರಮ ಪದವಿಯನ್ನು ಹೊಂದುತ್ತಾನೆಂಬುದು ಗೀತಾ ಸಂದೇಶ. ಶರಣತ್ವವೂ ಇದೇ ರೀತಿಯಲ್ಲಿ ಐಹಿಕದಲ್ಲಿಯೂ ಪರಮ ಪದವಿಯನ್ನು ದೊರಕಿಸಿ ಕೊಡುತ್ತದೆ. ಇದರಿಂದಲೂ ಜೀವಿ ತನ್ನ ಸಾಧನೆ ಮುಗಿಯಿತೆಂದು ಭಾವಿಸುವುದಿಲ್ಲ. ಜೀವ ಶಿವನೊಡನೆ ಹೂಡಿ ಆಡುತ್ತಿದ್ದರೂ ಮಹಾಂತವನ್ನು ಮುಟ್ಟಿದ ತೃಪ್ತಿ ಬಂದಿರುವುದಿಲ್ಲ. ಶಿವಜೀವರಲ್ಲಿ ಅಭಿನ್ನ ಅಭೇದ್ಯ ಪರಿಸ್ಥಿತಿಯುಂಟಾಗಲೆಂಬ ಬಯಕೆ ಇದ್ದೇ ಇರುತ್ತದೆ.

ಶಿವನು ಜೀವನೊಡನಾಡಿಯಾದ ಮೇಲೆ ಬಹುಕಾಲ ಪ್ರತ್ಯೇಕತೆಯನ್ನು ಅನುಭವಿಸಬೇಕೆಂಬ ಅಪೇಕ್ಷೆ ದೇವರಲ್ಲಿ ಉಳಿಯುವುದಿಲ್ಲ. ನದಿಯೊಳಗೆ ನದಿ ಬೆರೆತು ಒಂದಾದಂತೆ ದೀಪದ ಬೆಳಕು ರವಿಪ್ರಕಾಶದಲ್ಲಿ ತನ್ಮಯವಾಗುವಂತೆ ಜೀವ ಶಿವನಲ್ಲಿ ಸಮರಸವಾಗುವುದನ್ನು ಅಪೇಕ್ಷಿಸುತ್ತದೆ. ಜೀವ ಶಿವನೊಂದಾಗಿ ಜೀವತ್ವದ ಅರಿವು ನಹಾಗಿಲ್ಲವಾಗುತ್ತದೆ. ಈ ಅವಸ್ಥೆಯನ್ನು ಚಿತ್ರಿಸುವಲ್ಲಿ ಪ್ರಭುದೇವರು ಕೊಡುವ ನಿದರ್ಶನ ಮನೋಜ್ಞವಾಗಿದೆ.

"ಕರ್ಪೂರದ ಗಿರಿಯು ಉರಿಹಿಡಿವಡೆ ಇದ್ದಲುಂಟೆ ?
ಮಂಜಿನ ಶಿವಾಲಯಕ್ಕೆ ಬಿಸಿಲ ಕಳಸವುಂಟೆ ?
ಕೆಂಡದ ಗಿರಿಯನರಗಿನ ಬಾಣದಲೆಚ್ಚಡೆ,
ಮರಳಿ ಬಾಣವನರಸಲುಂಟೆ ?
ಗೊಹೇಶ್ವರನೆಂಬ ಲಿಂಗವನರಿದು ಮರಳಿ ನೆನೆಯಲುಂಟೆ ?

ಈ ಎರಡರಲ್ಲಿ ಒಂದಿದ್ದರೆ ಮತ್ತೊಂದು ಉಳಿಯುವಂತಿಲ್ಲ. ಜೀವನ ಜೀವತ್ವ ಇರುವವರೆಗೆ ಶಿವತ್ವದ ಸಾಕ್ಷಾತ್ಕಾರವಾಗುವುದಿಲ್ಲ. ಶಿವನಲ್ಲಿ ಜೀವತ್ವ ಸಮರಸಗೊಂಡ ಸ್ಥಿತಿಯನ್ನು ಶರಣರು ಐಕ್ಯಸ್ಥಲವೆಂದು ಕರೆದಿದ್ದಾರೆ. ಶಿವಜೀವರ ಏಕತ್ವವೇ ಶಿವಯೋಗ. ಇದನ್ನು ಲಿಂಗಾಂಗ ಸಾಮರಸ್ಯವೆಂದೂ ಕರೆದಿದ್ದಾರೆ. ತನ್ನ ತಾನು ಅರಿತು ತಾನು ಶಿವನೆಂಬ ಭಾವ ಬೆಳಗಿದ ಸ್ಥಿತಿಗೆ ಶಿವಯೋಗವೆನ್ನಬಹುದು. ಅಂದು ಬಾಹ್ಯ ಜಗತ್ತಿನ ಹಗರಣವನ್ನು ಜೀವ ತೊರೆದಿರುತ್ತದೆ. ನಾನು-ನೀನು ಅಂಗ-ಲಿಂಗ ಎಂಬ ದ್ವಂದ್ವ ಅಳಿದು ಸರ್ವವೂ ಶಿವಮಯವಾಗುತ್ತದೆ. ಅದನ್ನೇ ಶರಣರು:—

ಸಾಕಯ್ಯ, ಲೋಕದ ಹಂಗು ಹರಿಯಿತ್ತು.
ತನುವಿನಾಸೆ ಬಿಟ್ಟಿತ್ತು. ಮನದ ಸಂಚಲ ನಿಂದಿತ್ತು.
ನುಡಿಯಗಡಣ ಹಿಂಗಿತ್ತು. ಘನವ ಬೆರೆಯಿತ್ತು.
ಬೆಳಗ ಕಂಡಿತ್ತು. ಬಯಲೊಳಗೋಲಾಡಿ ಸುಖಿಯಾದೆನಯ್ಯ,
ಅಪ್ಪಣ್ಣಪ್ರಿಯ ಚೆನ್ನಬಸವಣ್ಣಾ" ಎಂದಿದ್ದಾರೆ.

ಶಿವಯೋಗದ ಪರಿಣಾಮವನ್ನು ಈ ವಚನದಲ್ಲಿ ಸ್ಪಷ್ಟವಾಗಿ ಹೇಳಿದೆ. ಇಲ್ಲಿ ದೇಹ ಅಳಿದಿರುವುದಿಲ್ಲ. ತನುವಿನಾಸೆ ಬಿಟ್ಟಿತ್ತು. ತನುವು ದೇವಾಲಯವಾಗಿರುತ್ತದೆ. ಅಂದರೆ ಬದುಕಿನಲ್ಲಿ ದಿವ್ಯತೆಯು ಪ್ರಾಪ್ತವಾಗುತ್ತದೆ. ಇದೇ ಶಿವಯೋಗದ ರಹಸ್ಯ. ಮಾನವರು ಇಂತಾಗಬೇಕೆಂಬುದೇ ಯೋಗಾಂಗದ ಗುರಿ. ಇದೇ ಶಿವಯೋಗದ ಸಂದೇಶ.

ಯೋಗಾಂಗದ ಅನುಭವವನ್ನು ಹೊಂದಿ ಶಿವಸಾಮರಸ್ಯವನ್ನು ಪಡೆಯಬಲ್ಲವರು ಶಿವಯೋಗಿಗಳೆನಿಸುತ್ತಾರೆ. ತ್ಯಾಗ ಭೋಗ ಮತ್ತು ಯೋಗಾಂಗದ ಸಾಧನೆಯಲ್ಲಿ ಮಾನವನ ವೃತ್ತಿ ಪ್ರವೃತ್ತಿಗಳನ್ನು ಇದುವರೆಗೆ ವಿವರಿಸಿದೆ. ಈ ಪರಿಸರದಲ್ಲಿ ನಿಲ್ಲಬಲ್ಲ ಮಾನವರು ಇಂದು ದೊರೆಯುವುದು ದುರ್ಲಭ. ಆದರೂ ಜಗತ್ತು ಬರಡಾಗಿಲ್ಲ, ಅಲ್ಲಲ್ಲಿ ಅಗೋಚರವಾಗಿ ಅಂತಹ ಮಹಾನುಭಾವರು ಬಾಳಿ ಬೆಳಗುತ್ತಾರೆ. ಅಂತಹ ಮಹಾ ಶಿವಯೋಗಿಗಳಲ್ಲಿ ಶ್ರೀ ದೇಗುಲ ಮಠದ ಅಧ್ಯಕ್ಷರಾಗಿದ್ದು ಶಿವಸಾಯುಜ್ಯವನ್ನು ಹೊಂದಿದ ಶ್ರೀಮನ್ನಿರಂಜನ ನಿರ್ವಾಣ ಮಹಾ

ಸ್ವಾಮಿಗಳವರು ಒಬ್ಬರೆನ್ನಬಹುದು ಅವರ ಜೀವನವನ್ನು ಆಳವಾಗಿ ಗಮನಿಸಿದವರಿಗೆ ಅವರು ಅಂಗತ್ರಯಸಿದ್ಧಿಯನ್ನು ಪಡೆದ ಶಿವಯೋಗಿಗಳೆಂಬುದು ಅರಿವಾಗುತ್ತಿತ್ತು. ಅವರನ್ನು ಅರಿಯುವ ಅವಕಾಶಗಳು ನನಗೆ ಲಭ್ಯವಾದದ್ದು ಅತ್ಯಲ್ಪ. ಒಂದೆರಡು ಪ್ರತ್ಯಕ್ಷ ಅನುಭವಗಳು ಅವರು ಶಿವಯೋಗಿಗಳೆಂಬುದನ್ನು ಸ್ಪಷ್ಟಪಡಿಸಿದುವು. ಯಾರ ಮನಸ್ಸನ್ನು ಯಾವ ಕಾರಣಕ್ಕಾಗಿಯೂ ನೋಯಿಸಿದವರಲ್ಲ. ತಮ್ಮ ನೋವನ್ನು ಸಂತೋಷದಿಂದ ಅನುಭವಿಸುತ್ತಾ ಅನ್ಯರ ಸಂತೋಷವನ್ನೇ ಬಯಸಿದ ಮಹಾನುಭಾವರು. ಮಾನವರಲ್ಲಿ ಮಾತ್ರವೇ ಅಲ್ಲದೆ ಸಕಲ ಪ್ರಾಣಿಗಳಲ್ಲೂ ಅದೇ ಸೌಹಾರ್ದ. ಅದೇ ವಾತ್ಸಲ್ಯ; ಶ್ರೀ ಮಠದ ಹಸುವಿನ ಕರುಗಳು ಶ್ರೀಗಳವರು ನಿದ್ರಿಸುವ ಸಮಯದಲ್ಲಿ ಬಳಿಗೆ ಬಂದು ತಮ್ಮ ಹಾಸಿಗೆಯ ಮೇಲೆ ಮಲಗಲು ಅಪೇಕ್ಷಿಸಿದರೆ ಅದಕ್ಕೆ ಅವಕಾಶವನ್ನು ಕೊಟ್ಟು ತಾವು ನಿದ್ರೆಯನ್ನು ತ್ಯಜಿಸಿ ಆ ಪ್ರಾಣಿಗೆ ವಾತ್ಸಲ್ಯದ ಉಪಚಾರವನ್ನೆಸಗುತ್ತಿದ್ದ ಸಂದರ್ಭಗಳು ಅವರ ಜೀವನದಲ್ಲಿ ಅಪಾರ. ಯಾವ ಪ್ರಾಣಿ ಯಾವ ಕಾಲಕ್ಕೆ ಹಸಿದಿದೆ ಎಂಬುದು ಅವರಿಗೆ ಹೇಗೋ ಅರಿವಾಗುತ್ತಿತ್ತು. ಮಾನವರಿಗಾಗಿ ತಯಾರಿಸಿದ ಆಹಾರವೂ ಸಹ ಇತರರಿಗೆ ತಿಳಿಯದ ರೀತಿಯಲ್ಲಿ ಗೋವುಗಳ ಪಾಲಾಗುತ್ತಿತ್ತು.

ಶಿಷ್ಯರು ಶ್ರೀಗಳವರೇ ತಮ್ಮಲ್ಲಿಗೆಬರಬೇಕೆಂದು ಅಪೇಕ್ಷಿಸಿದರೆ, ತಮ್ಮ ವೇದನೆಯನ್ನು ಪರಿಶ್ರಮವನ್ನೂ ಗಮನಿಸದೆ ಆಗಮಿಸಿ ಅವರನ್ನು ಹರಸುತ್ತಿದ್ದರು. ಶ್ರೀಗಳವರನ್ನು ಆಹ್ವಾನಿಸಿದವರು ಅವರಿಗೆ ಪ್ರಿಯವಾದ ಭಕ್ಷ್ಯಗಳನ್ನು ತಯಾರಿಸಿ ನೆರೆಹೊರೆಯುವರನ್ನೆಲ್ಲಾ ಶ್ರೀಗಳವರ ಅನುಗ್ರಹಕ್ಕೆ ಆಹ್ವಾನಿಸುವುದು ಸಾಮಾನ್ಯ ವಾಡಿಕೆ. ಹಾಗೆ ಶ್ರೀಗಳವರ ಸನ್ನಿಧಿಯಲ್ಲಿ ಗಣಾರಾಧನೆ ನಡೆಯುವಾಗ ತಮಗೆ ಪ್ರಿಯವಾದ ಭಕ್ಷ್ಯವೇ ಮುಗಿದು ಹೋಗಿರುವ ಸಂದರ್ಭವೊಂದಿತ್ತು. ಕರೆದವರು ಸಭೆಯಲ್ಲಿ ಈ ವಿಷಯವನ್ನು ನಿವೇದಿಸಿಕೊಳ್ಳಲು ಸಂಕೋಚಪಡುತ್ತಿದ್ದರು. ಶ್ರೀಗಳವರಲ್ಲಿ ಈ ವಿಷಯವನ್ನು ನಿವೇದಿಸಿಕೊಳ್ಳುವುದು ಅವರಿಗೆ ಅವಮಾನದ ಸಂಗತಿಯೆನಿಸಿತ್ತು. ಶ್ರೀಗಳವರಿಗೆ ಹೇಗೆ ಅರಿವಾಯಿತೋ ಅದು ಆಶ್ಚರ್ಯ! ಮತ್ತೊಮ್ಮೆ ಅದೇ ಭಕ್ಷ್ಯವನ್ನು ನೀಡುವ ಅವಕಾಶವಿಲ್ಲದಂತೆ ಗಣಾರಾಧನೆಯನ್ನು ಮುಗಿಸಿದ್ದರು. ಭಕ್ತ ಹೇಳಿಕೊಳ್ಳದಿದ್ದರೂ ಅವನ ಮನವನ್ನು ಅರ್ಥಮಾಡಿಕೊಳ್ಳುವ ಆತ್ಮಶಕ್ತಿ ಅವರಲ್ಲಿತ್ತೆಂಬುದಕ್ಕೆ ಅನೇಕ ನಿದರ್ಶನಗಳಿವೆ.

ಸ್ವಷ್ಟ ಅನುಭವದ ಮತ್ತೊಂದುಘಟನೆ ಅವರ ಶಿವಯೋಗಸಿದ್ಧಿಯನ್ನು ದೃಢಪಡಿಸುತ್ತದೆ. ಒಮ್ಮೆ ನೀವು ಕೆಲವು ಮಂದಿ ಓರಿಯರೊಡನೆ ಶ್ರೀ ರೇವಣಸಿದ್ಧೇಶ್ವರ ಗಿರಿಗೆ ಯಾತ್ರಾರ್ಥಿಗಳಾಗಿ ಹೋಗಿದ್ದೆವು. ಒಂದಿನ ರಾತ್ರಿ ಶ್ರೀಮಠದಲ್ಲಿದ್ದು ಮಾರನೇದಿನ ಪ್ರಾತಃಕಾಲ ಗಿರಿಗೆ ತೆರಳಿದವು. ಅಲ್ಲಿಗೆ ಹೋಗುವ ಮುನ್ನ ಸ್ವಾಮಿಯ ದರ್ಶನ ಸೇವೆಯನ್ನು ಮುಗಿಸಿ ಪ್ರಸಾದಕ್ಕಾಗಿ ಸಕಾಲಕ್ಕೆ ಶ್ರೀಮಠಕ್ಕೆ ಬರಬೇಕೆಂದು

ಶ್ರೀಗಳವರು ಅಪ್ಪಣೆ ಮಾಡಿದ್ದರು. ನಮ್ಮ ಸೇವಾಕೈಂಕರ್ಯ ಮುಗಿಯುವುದರಲ್ಲಿ ಮಧ್ಯಾಹ್ನ ಎರಡು ಘಂಟೆಯಾಗಿತ್ತು. ನಮಗಾಗಲೇ ಹಸಿವು ಹೆಚ್ಚಿತ್ತು. ಶ್ರೀಮಠದ ಪ್ರಸಾದದ ಕರೆ ನಮ್ಮ ಗತಿಯನ್ನೂ ತೀವ್ರಗೊಳಿಸಿತ್ತು. ಆದರೆ ಗಿರಿಯನ್ನು ಇಳಿದು ಬರುವಾಗ ಶ್ರೀ ರೇವಣ ಸಿದ್ಧೇಶ್ವರರ ಭಕ್ತರೊಬ್ಬರು ಗಿರಿಯ ಬಳಿಯಲ್ಲಿ ಗಣಾರಾಧನೆ ಯನ್ನು ಏರ್ಪಡಿಸಿ ಹೋಳಿಗೆಯ ಊಟವನ್ನು ತಯಾರಿಸಿ ಗಣಂಗಳಿಗಾಗಿ ನಿರೀಕ್ಷಿಸು ತ್ತಿದ್ದರು. ಗಿರಿಯಿಂದ ಇಳಿದು ಬರುತ್ತಿದ್ದ ನಮಗೆ ಅಲ್ಲಿನ ಪ್ರಸಾದವನ್ನು ಸ್ವೀಕರಿ ಸುವುದು ಅನಿವಾರ್ಯವಾಯಿತು. ಹಸಿದ ಸಮಯ. ದೊರೆತ ಪ್ರಸಾದ ತೃಪ್ತಿಯ ಭೋಜನವಾಯಿತು. ನಮ್ಮ ಜೊತೆಯಲ್ಲಿದ್ದವರೊಬ್ಬರು ತಮ್ಮ ಶಕ್ತಿಮೀರಿ ಪ್ರಸಾದವನ್ನು ಸ್ವೀಕರಿಸಿದರು. ನಂತರ ನಾವೆಲ್ಲಾ ಶ್ರೀಮಠಕ್ಕೆ ಆಗಮಿಸಿದೆವು. ಶ್ರೀಗಳವರ ಅಪ್ಪಣೆಯಂತೆ ಅಲ್ಲಿ ವಿಶೇಷ ಭಕ್ಷ್ಯ ಭೋಜ್ಯಗಳ ಪ್ರಸಾದ ಸಿದ್ಧ ವಾಗಿತ್ತು. ಹಸಿವಿನ ಕೋಟಲೆ ನಮಗಿರಲಿಲ್ಲ. ಆದರೆ ಪ್ರಸಾದವನ್ನು ಸ್ವೀಕರಿಸದೆ ಬಿಡುವಂತಿಲ್ಲ. ಎಲ್ಲರೂ ಅವರ ಅಪ್ಪಣೆಯಂತೆ ಪ್ರಸಾದ ಸ್ವೀಕರಿಸಿದೆವು. ಶ್ರೀಗಿರಿ ಯಲ್ಲಿ ಶಕ್ತಿಮೀರಿ ಪ್ರಸಾದ ಪಡೆದವರು ಶ್ರೀಮಠಕ್ಕೆ ಬಂದು ಆಯಾಸದಿಂದ ನಿದ್ರೆ ಹೋದರು. ನಾವೆಲ್ಲಾ ಪ್ರಸಾದ ಸ್ವೀಕರಿಸುವಾಗ ಅವರನ್ನೂ ಬರುವಂತೆ ಶ್ರೀಗಳವರು ಆಹ್ವಾನಿಸಿದರು. ಅವರು ತಮ್ಮ ಅಸಾಧ್ಯತೆಯನ್ನು ತಿಳಿಸಿದಾಗ ಶ್ರೀಗಳವರೇ ಸ್ವತಃ ಸ್ವಲ್ಪ ಭಕ್ಷ್ಯವನ್ನು ತಂದಿಟ್ಟು ಫಲಹಾರವಾಗಿ ಸ್ವೀಕರಿಸುವಂತೆ ಅಪ್ಪಣೆ ಮಾಡಿದರು. ಹಸಿದ ವೇಳೆಯಲ್ಲಿ ರುಚಿಯಾದ ಊಟವನ್ನು ಅತಿಯಾಗಿ ಸ್ವೀಕರಿಸಿದ್ದ ನಮ್ಮ ಸ್ನೇಹಿತರಿಗೆ ಶ್ರೀಮಠದ ಪ್ರಸಾದವನ್ನು ಸ್ವೀಕರಿಸಲಾಗಲಿಲ್ಲ. ಶ್ರೀಗಳವರು ತಾವೇ ತಂದುಕೊಟ್ಟ ಪ್ರಸಾದವನ್ನು ಬದಿಯಲ್ಲಿಟ್ಟು ನಿದ್ರೆ ಮಾಡಿ ದರು. ಸಂಜೆಯ ವೇಳೆಗೆ ನಾವೆಲ್ಲರೂ ಶ್ರೀಗಳವರಿಗೆ ನಮಿಸಿ ಪ್ರಯಾಣ ಮಾಡಿ ದೆವು. ನಮಗಾಗಿಯೇ ಕೊಟ್ಟಿದ್ದ ಪ್ರತ್ಯೇಕವಾದ ಕೋಣೆಯಲ್ಲಿಟ್ಟಿದ್ದವನ್ನು ನಮ್ಮ ವಸ್ತುಗಳನ್ನೆಲ್ಲಾ ತೆಗೆದುಕೊಂಡು ಹೊರಟೆವು. ಮಳವಳ್ಳಿ ತಲುಪಿದಾಗ ರಾತ್ರಿ ಒಂಭತ್ತು ಘಂಟೆಯಾಗಿತ್ತು. ಆಕಸ್ಮಿಕವಾಗಿ ಅಲ್ಲಿ ಕಾರನ್ನು ನಿಲ್ಲಿಸಿ ನೋಡಿದಾಗ ನಮ್ಮ ಸ್ನೇಹಿತರು ತಮ್ಮ ಬೆಲೆ ಬಾಳುವ ಉಡುಪುಗಳನ್ನೆಲ್ಲಾ ಶ್ರೀಮಠದಲ್ಲೇ ಬಿಟ್ಟು ಬಂದಿದ್ದರು. ಅವರು ಮಳವಳ್ಳಿಯಲ್ಲೇ ಉಳಿದು ಮರುದಿನ ಶ್ರೀಮಠಕ್ಕೆ ತಮ್ಮ ಉಡುಪಿಗಾಗಿ ತೆರಳಿದರು. ಶ್ರೀಗಳವರು ಶ್ರೀಮಠದ ಬಾಗಿಲಿನಲ್ಲಿ ನಮ್ಮ ಸ್ನೇಹಿತನ ಬರವನ್ನೇ ನಿರೀಕ್ಷಿಸುತ್ತಿದ್ದರು. ಶ್ರೀಗಳವರು ಬಾಗಿಲಲ್ಲಿ ನಿಂತಿರುವುದು ಏಕೆಂದು ಯಾರಿಗೂ ತಿಳಿಯದು. ನಮ್ಮ ಮಿತ್ರರು ಅಲ್ಲಿಗೆ ಹೋದ ಕೂಡಲೇ ನಗುತ್ತಲೇ ಪ್ರಸಾದ ಬಿಟ್ಟು ಹೋಗುವಂತಿಲ್ಲ. ಅದಕ್ಕಾಗಿ ನಿನಗಾಗಿಯೇ ಕಾಯು ತ್ತಿದ್ದೇನೆ ಎಂದು ಶ್ರೀಗಳವರು ಹೇಳಿದೊಡನೆಯೇ ನಮ್ಮ ಸ್ನೇಹಿತರು ಭಯ ಚಕಿತರಾದರು. ಕಣ್ಣೀರಿನಲ್ಲಿ ಅವರ ಪಾದಗಳನ್ನು ಅಭಿಷೇಕಿಸಿ ಕ್ಷಮಾಪಣೆ ಕೇಳಿದರು. ಇದೊಂದು ಆಕಸ್ಮಿಕ ಘಟನೆಯೆಂದು ಆಧುನಿಕರು ಹೇಳಬಹುದು. ಆದರೆ ಇದನ್ನು

ಸ್ವತಃ ಅನುಭವಿಸಿದವರಿಗೆ ವಸ್ತುಸ್ಥಿತಿಯನ್ನು ಪರಿಶೀಲಿಸಿದವರಿಗೆ ಶ್ರೀಗಳವರು ದಿವ್ಯ ಜ್ಞಾನಿಗಳಾದ ಶಿವಯೋಗಿಗಳೆಂಬುದು ಸ್ಪಷ್ಟವಾಗುತ್ತಿತ್ತು.

ಒಮ್ಮೆ ಯಾರದಾದರೂ ಪರಿಚಯವಾದರೆ ಮರೆಯದೆ ಎಷ್ಟೋ ವರ್ಷಗಳಾದರೂ ಅವರ ಯೋಗಕ್ಷೇಮವನ್ನು ವಿಚಾರಿಸುವ ವಿಶ್ವ ಕುಟುಂಬಿಗಳಾಗಿದ್ದರು; ಯಾರಾದರೂ ತಮ್ಮ ಲೌಕಿಕ ಕಷ್ಟ ಪರಂಪರೆಗಳನ್ನು ಅವರಲ್ಲಿ ನಿವೇದಿಸಿಕೊಂಡರೆ ಒಳ್ಳೆಯದಾಗುತ್ತೆ. ಅಂಜಬೇಡ ಎಂದು ಆಶೀರ್ವದಿಸುತ್ತಿದ್ದರು. ಯಾರ ಮನಸ್ಸು ಶುದ್ಧವಿಲ್ಲವೋ ಅವರು ಏನನ್ನಾದರೂ ಹೇಳಿದರೆ ಪ್ರತ್ಯುತ್ತರವನ್ನು ನೀಡದೆ ಮೌನವಾಗಿರುತ್ತಿದ್ದರು. ಯಾರಿಗಾದರೂ ಏನಾದರೊಂದು ಮಾತನ್ನು ಹೇಳಿದರೆ ಅವರು ಅದರಂತೆ ನಡೆಯುತ್ತಿದ್ದರು. ಅದಕ್ಕೆ ಮೀರಿದವರು ಅದರ ದುಷ್ಫಲವನ್ನು ಅನುಭವಿಸುತ್ತಿದ್ದ ನಿದರ್ಶನಗಳೂ ದೊರೆಯುತ್ತವೆ.

ಸುಪ್ರಸಿದ್ಧ ವಿದ್ವನ್ಮಣಿಗಳಾಗಿದ್ದ ಮೈಸೂರಿನ ಅರಮನೆ ಪಂಚಗವೀಮಠಾಧ್ಯಕ್ಷರಾಗಿದ್ದ ಪರಮ ಪೂಜ್ಯ ಶ್ರೀಗೌರೀಶಂಕರ ಮಹಾಸ್ವಾಮಿಗಳವರಿಗೆ ಶ್ರೀ ನಿರ್ವಾಣ ಸ್ವಾಮಿಗಳವರನ್ನು ಕಂಡರೆ ತನ್ನ ಮಾತಾಪಿತೃಗಳನ್ನು ಕಂಡಷ್ಟು ವಾತ್ಸಲ್ಯ. ಪರಮಾತ್ಮನನ್ನು ಕಂಡಷ್ಟು ಭಕ್ತಿ. ತಮ್ಮ ದೇಹಕ್ಕೆ ಶ್ರೀಗಳವರ ಪಾದಸ್ಪರ್ಶದಿಂದ ಧನ್ಯತೆಯುಂಟಾಗಬೇಕೆಂದು ಅವರೇ ಶ್ರೀಗಳವರನ್ನು ಅನೇಕ ಬಾರಿ ಪ್ರಾರ್ಥಿಸಿದ್ದರು. ಶ್ರೀಗೌರೀಶಂಕರ ಸ್ವಾಮಿಗಳವರು ಶ್ರೀಗಳವರಿಗಿಂತಲೂ ವಯಸ್ಸಿನಲ್ಲಿ ಕಿರಿಯರಾದರೂ ತಮ್ಮ ಯಾತ್ರೆಯ ಕಾಲವನ್ನು ನಿಶ್ಚಯಿಸಿಕೊಂಡಿದ್ದವರು. ಅವರ ಮನಸ್ಸಿಗೆ ಏನಾದರೂ ಬೇಸರ ಬಂದರೆ ಶ್ರೀಗಳವರು ಆಗಮಿಸಿ ಶ್ರೀ ಗವೀಮಠದಲ್ಲಿ ಪೂಜೆ ಮಾಡಿದರೆ ಅವರಿಗೆ ಅಪಾರ ಭಾಗ್ಯ ದೊರೆತಷ್ಟು ಸಂತೋಷವಾಗುತ್ತಿತ್ತು. ಅನೇಕ ಜನ ಸಂಸಾರಿಗಳು ಶ್ರೀಗಳವರ ದರ್ಶನ ಮಾತ್ರದಿಂದಲೇ ಪುನೀತರಾಗುತ್ತಿದ್ದರು. ತಮ್ಮ ಮನದ ಕ್ಲೇಶಗಳನ್ನೆಲ್ಲಾ ಪರಿಹರಿಸಿಕೊಳ್ಳುತ್ತಿದ್ದರು. ಇಂತಹ ಪೂಜ್ಯರು ಶತಾಯುಷಿಗಳಾಗಿ ನಾಡಿನ ಬೆಳಕಾಗಿ ಬಾಳಿ ಮಹಾ ಬೆಳಗಿನಲ್ಲಿ ಕೂಡಿಕೊಂಡರು. ಶಿವಯೋಗಿಯೆನಿಸಿ ಅಂಗಲಿಂಗ ಒಂದಾಗಿ ಶಿವಸಾಯುಜ್ಯವನ್ನು ಹೊಂದಿದರು. ಅವರ ನಡೆ ನುಡಿಯೆಲ್ಲಾ ಶಿವಯೋಗ ಸಾಧಕರಿಗೆ ದಿವ್ಯ ದೀಪ್ತಿಯಾಗಿ ಉಳಿದಿವೆ. ಅವರು ನೆಲೆಸಿದ್ದ ತಾಣವೆಲ್ಲ ಶಿವಕ್ಷೇತ್ರವಾಗಿದೆ. ಅವರ ತಪಃಶ್ಶಕ್ತಿ ನಮ್ಮನ್ನು ಅನುಗ್ರಹಿಸಲೆಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

———

# ಶರಣರ ವಿಚಾರಕ್ರಾಂತಿ

● ಕಲ್ಯಾಣಪ್ಪ ಬ್ಯಾಳಿ
ಹುನಗುಂದ

ಶರಣರು ಸ್ವಯಂ ಧೀರರು. ಸರ್ವತಂತ್ರ ಸ್ವತಂತ್ರರು. ಅವರು ಸ್ವತಂತ್ರವಾಗಿ ವಿಚಾರಿಸುವರು, ಸ್ವತಂತ್ರವಾಗಿ ಆಚರಿಸುವರು, ಸ್ವತಂತ್ರವಾಗಿ ಉಚ್ಚರಿಸುವರು. ಅವರ ಆಚಾರ, ವಿಚಾರ, ಉಚ್ಚಾರಗಳಿಗೆ ಅವರ ಹೃದಯವೇ ಪ್ರಮಾಣ. ಸ್ಮೃತಿ ಶಾಸ್ತ್ರಪುರಾಣಗಳಾಗಲಿ, ವೇದಾಗಮಗಳಾಗಲಿ ಅವರಿಗೆ ಪ್ರಮಾಣವಲ್ಲ. ತಮ್ಮ ವಿಚಾರ ಸರಣಿಗೆ ವೇದಾಗಮಗಳಾಗಲಿ; ಶ್ರುತಿ–ಸ್ಮೃತಿಗಳಾಗಲಿ ಅಡ್ಡ ಬಂದಾಗ ಅವುಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದ್ದಾರೆ. ಸಾಂಪ್ರದಾಯವು ಹೀಗೆ ಹೇಳುತ್ತದೆ. ಹಾಗೆ ಹೇಳುತ್ತದೆ. ಕಾರಣ ಅದರಂತೆ ನಡೆಯಬೇಕೆಂಬ ಕಟ್ಟಳೆಗೆ ಅವರು ಬದ್ಧರಲ್ಲ. ಸಾಂಪ್ರದಾಯದಲ್ಲಿ ಅಡಗಿದ ಸ್ವಾರ್ಥ, ದುರಹಂಕಾರ ಮೂಢಭಾವನೆಗಳನ್ನು ಧೈರ್ಯವಾಗಿ ಎದುರಿಸಲು ಅವರು ಸನ್ನದ್ಧರಾಗಿರುತ್ತಿದ್ದರು. ಇದರಿಂದ ಅವರು ಸ್ವೈರ ವೃತ್ತಿಯವರಿದ್ದರೆಂದು ವೃಥಾ ಭಾವಿಸಕೂಡದು.

ಶರಣನು ನುಡಿದುದೇ ವೇದವಾಕ್ಯ, ನಡೆದುದೇ ಮೋಕ್ಷಪಥ. ಶರಣರು ಆತ್ಮ ಪ್ರತಿಷ್ಠೆ ಬೆಳೆಯಿಸಿಕೊಳ್ಳಲು ಅಣಿಮಾದ್ಯಷ್ಟ ಸಿದ್ಧಿಗಳ ಮರೆ ಹೊಗಲಿಲ್ಲ. ಅವೇ ಅವರನ್ನು ಹುಡುಕಿಕೊಂಡು ಬಂದು ಅವರ ಸೇವೆಗೆ ಸದಾ ಕೈಕೊಂಡು ನಿಲ್ಲುತ್ತಿದ್ದವು. "ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ" ಎಂಬ ನಾಣ್ನುಡಿಯಂತೆ ಅವರ ಮನಸ್ಸು, ಮಾತು, ಕೃತಿಗಳು ಒಂದೇ ರೀತಿಯಾಗಿದ್ದವು. ಶರಣರು ಹೇಗೆ ವಿಚಾರಿಸುವರೋ ಹಾಗೆ ಉಚ್ಚರಿಸುವರು, ಹೇಗೆ ಉಚ್ಚರಿಸುವರೋ ಹಾಗೆ ಆಚರಿಸುವರು. ಶರಣರು ಇಂಥ ಅಸದೃಶವಾದ ವ್ಯಕ್ತಿತ್ವವುಳ್ಳವರಾಗಿದ್ದರು.

ಬಸವಾದಿ ಪ್ರಥಮರ ಕಾಲದಲ್ಲಿ ಅನಂತ ಶರಣರು ಉದಯವಾಗಿ ಎರಡೆಂಭತ್ತು ಕೋಟಿ ವಚನಗಳನ್ನು ರಚಿಸಿದರೆಂದು ಪ್ರತೀತಿಯಿದೆ. ಆದಾಗ್ಯೂ ಅವರ ವಿಚಾರ ಕ್ರಾಂತಿಯಲ್ಲಿ ಏಕರೂಪತೆಯಿದ್ದಿತೇ ಹೊರತು ಭಿನ್ನತೆಯಿರಲಿಲ್ಲ. ಅವರು ಪ್ರತಿಪಾದಿಸಿದ ಧಾರ್ಮಿಕ, ನೈತಿಕ, ಸಾಮಾಜಿಕ, ಆರ್ಥಿಕ ವಿಷಯಗಳೆಲ್ಲ ಬಹುಶಃ ಒಂದೇ ಮಾದರಿಯವಾಗಿರುತ್ತವೆ. ಹೀಗಾಗಲಿಕ್ಕೆ ಕಾರಣವೇನೆಂದರೆ ಅವರು ಕಲ್ಯಾಣದ ಶಿವಾನುಭವ ಮಂಟಪದಲ್ಲಿ ಅನೇಕ ಆಧ್ಯಾತ್ಮಿಕ–ಹಾಗೂ ಐಹಿಕ–ವಿಷಯಗಳನ್ನು

ಮಥಿಸಿ ಒಂದು ಸಮಂಜಸವಾದ ಮತ್ತು ಸಯುಕ್ತಿತವಾದ ಕೊನೆಯ ಮಟ್ಟಕ್ಕೆ ಬಂದು ನಿಲ್ಲುತ್ತಿದ್ದರು. ಆ ಮಟ್ಟದಲ್ಲಿ ನಿಂತು ಅವರು ವಚನಗಳನ್ನು ರಚಿಸಿದರು. ಅವರು ತಮ್ಮ ವಿಚಾರಗಳನ್ನು ವಚನ ರೂಪದಲ್ಲಿ ರಚಿಸಿದ್ದುದು ದೊಡ್ಡ ಕ್ರಾಂತಿಯು. ಅವರ ತತ್ತ್ವಗಳು ಕರ್ನಾಟಕವನ್ನಷ್ಟೇ ಅಲ್ಲ, ಇಡೀ ಭಾರತವನ್ನೇ, ಅಷ್ಟೇಕೆ, ಸಮಸ್ತ ವಿಶ್ವವನ್ನೇ ಬೆರಗುಗೊಳಿಸುವಂಥವುಗಳಾಗಿವೆ. ವಿಶ್ವದ ಪ್ರಾಕೃತಿಕ ಸ್ವಭಾವವನ್ನು ಪರಿವರ್ತನಗೊಳಿಸಲು ಸಹ ಸಮರ್ಥವಾಗಿವೆ.

ಶರಣರು ಶಿವಾನುಭವ ಮಂಟಪದಲ್ಲಿ ಮಥಿಸಿ ತೆಗೆದ ವಿಚಾರಗಳ ಕ್ರಾಂತಿಯು ಯಾವುದೆಂಬುದರ ಬಗೆಗೆ ನಾವು ಇದರಡಿಯಲ್ಲಿ ವಿವೇಚಿಸೋಣ. ಅವರು ಮಾಡಿದ ಕ್ರಾಂತಿಯನ್ನು ನಾವು ಧಾರ್ಮಿಕ, ಸಾಮಾಜಿಕ–ಹಾಗೂ ಸಾಹಿತ್ಯಕವೆಂದು ಮೂರು ವಿಧವಾಗಿ ವಿಂಗಡಿಸಬಹುದು.

ಶರಣರು ಮಾಡಿದ ಧಾರ್ಮಿಕ-ಕ್ರಾಂತಿಯು ಸ್ವಾರ್ಥದ ಎಲ್ಲೆ ಮೀರಿದ್ದ ವರ್ಣಾಶ್ರಮ ಧರ್ಮದ ವಿರುದ್ಧವಾಗಿರುತ್ತದೆ. ಸ್ಮೃತಿಕಾರರು ಮಾನವರನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳಲ್ಲಿ ವಿಭಾಗಿಸಿ "ವರ್ಣಾನಾಂ ಬ್ರಾಹ್ಮಣಃ ಶ್ರೇಷ್ಠಃ" ಎಂಬುದನ್ನು ಬಹುಕಾಲದಿಂದ ಸಾಧಿಸುತ್ತ ಬಂದರು. ಅವರು ಸಂಸ್ಕೃತ ಭಾಷೆಯನ್ನು ಕಲಿತು ಸಂಸ್ಕೃತ ಅನೇಕ ಗ್ರಂಥಗಳನ್ನು ತಾವೇ ಅಧ್ಯಯನ ಮಾಡಿ ಆನಂದಿಸುತ್ತಿದ್ದರು. ಅನ್ಯರಿಗೆ ಅವುಗನ್ನೋದಿ ತಿಳಿದು ಕೊಳ್ಳಲು ಅವಕಾಶವನ್ನೇ ಕೊಡುತ್ತಿರಲಿಲ್ಲ. ಇದರಿಂದ ಸಮಾಜದಲ್ಲಿ ಕಲಿತವರು ಜಾಣರು, ಕಲಿಯುದವರು ಅಜ್ಞರು ಎಂಬೆರಡು ದೊಡ್ಡ ಭಾಗಗಳುಂಟಾದವು.

ಇದಲ್ಲದೆ ಉಚ್ಚ ವರ್ಣದವರೆನಿಸಿಕೊಳ್ಳುವವರು ಸ್ತ್ರೀಯರನ್ನೂ ಬಹುಕೀಳಾಗಿ ಕಂಡರು. "ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ" ಅಂದರೆ ಹೆಂಗಸರಿಗೆ ಸ್ವಾತಂತ್ರ್ಯತರ ವಲ್ಲ "ನಾರೀ ಪ್ರತ್ಯಕ್ಷ ರಾಕ್ಷಸೀ" ಅಂದರೆ ನಾರಿಯು ಪ್ರತ್ಯಕ್ಷ ರಾಕ್ಷಸಿಯಾಗಿದ್ದಾಳೆ. ಹೀಗೆಂದು ಹೆಂಗಸರನ್ನು ಕೇವಲ ತಮ್ಮ ಭೋಗದ ವಸ್ತುಗಳನ್ನಾಗಿ ಮಾಡಿಕೊಂಡಿದ್ದ ರಲ್ಲದೆ ಅವರಿಗೆ ಧಾರ್ಮಿಕ ಹಾಗೂ ಸಾಂಸ್ಕೃತಿಕ ಸ್ವಾತಂತ್ರ್ಯಕ್ಕೆಡೆಗೊಡಲಿಲ್ಲ. ಈ ಪದ್ಧತಿಗಳನ್ನು ಪ್ರತಿಭಟಿಸಿ ವೈದಿಕ ಧರ್ಮದ ವಿರುದ್ಧ ಬೌದ್ಧ ಹಾಗೂ ಜೈನಮತ ಗಳು ಉದಯವಾಗಿದ್ದವು.

ಇದಲ್ಲದೆ ಬ್ರಾಹ್ಮಣರ ವರ್ಣಭೇದಕ್ಕನುಸರಿಸಿ ದೇಶದಲ್ಲಿ ಅನೇಕ ಜಾತಿ ಪಂಥ ಗಳು ಹುಟ್ಟಿ ತಮ್ಮ ತಮ್ಮ ಶ್ರೇಷ್ಠತೆಯನ್ನು ಪ್ರಸ್ಥಾಪಿಸಲು ಪರಸ್ಪರ ಹೋರಾಡ ಹತ್ತಿದ್ದವು, ಅವರು ಅನೇಕ ದೇವರುಗಳ ಆರಾಧನೆಗ ಆಸ್ಪದವಿತ್ತುದರಿಂದ ನನ್ನ ದೇವರು ಹೆಚ್ಚು ತನ್ನ ದೇವರು ಹೆಚ್ಚೆಂಬ ಬಗ್ಗೆ ಮೇಲಿಂದ ಮೇಲೆ ವಾಗ್ಯುದ್ಧಗಳೂ ಹೊಡೆದಾಟಗಳೂ ಏಳುತ್ತಿದ್ದವು. ಇದರಿಂದ ದೇಶದಲ್ಲಿ ಜಾತಿಭೇದ, ದೇವಭೇದಗಳ ಮೂಲಕ ಅರಾಜಕತೆಯೂ ನೆಲಸಿದ್ದಿತು.

ವಸ್ತುಸ್ಥಿತಿಯು ಹೀಗಿರುವಾಗ ಶರಣರು ಅವತರಿಸಿ ವರ್ಣಾಶ್ರಮ ಧರ್ಮ ದಲ್ಲಿ ಕಂಡು ಬರುವ ವಿಷಮತೆಗಳ ವಿರುದ್ಧ ಕ್ರಾಂತಿ ಹೂಡಿದರು. ಅಸ್ಪೃಶ್ಯತೆಯನ್ನು ಯಜ್ಞಯಾಗಾದಿಗಳಲ್ಲಾಗುವ ಮೂಕ ಪ್ರಾಣಿಗಳ ಹಿಂಸೆಯನ್ನು ಸ್ತ್ರೀಯರ ದಾಸತ್ವ ವನ್ನು, ಪರಸ್ಪರರಲ್ಲಿರುವ ಜಾತಿಭೇದಗಳನ್ನು ಅನೇಕ ದೇವರ ಆರಾಧನೆಯನ್ನು ಮಾನವರಲ್ಲಿ ಆರೋಪಿತವಾದ ಅಸಮಾನತೆಗಳನ್ನು ಹೊಡೆದೋಡಿಸಿ ವೈಚಾರಿಕವಾದ ಸಮತಾವಾದವನ್ನು ಅವರು ಬಳಕೆಯಲ್ಲಿ ತಂದರು. ದೇವನೊಬ್ಬ ನಾಮ ಹಲವು ಎಂಬ ತತ್ತ್ವವನ್ನು ಪ್ರಚಾರಪಡಿಸಿದರು. ವಿಗ್ರಹಾರಾಧನೆಯನ್ನು ಕಿರುಕುಳ ದೈವಂಗಳ ಪೂಜೆಯನ್ನು ವಿರೋಧಿಸಿದರು.

ಇದಲ್ಲದೆ ದೇವರು ಹೊರಗೆ ಇದ್ದಾನೆಂದು ಗುಡಿ ಗುಡಾರಗಳಲ್ಲಿ ಹುಡುಕಲಿಕ್ಕೆ ಹಚ್ಚದೆ ತೀರ್ಥಯಾತ್ರೆಗಳನ್ನು ಮಾಡಗೊಡದೆ ನಮ್ಮೊಳಗೇ ದೇವರಿದ್ದಾನೆಂದು ಸಾರಿ ಮನುಷ್ಯನು ಅಂತರ್ಮುಖಿಯಾಗುವಂತೆ ಮಾಡಿದರು. " ತನ್ನ ಬಿಟ್ಟು ದೇವರಿಲ್ಲ, ಮಣ್ಣು ಬಿಟ್ಟು ಮಡಕೆಯಿಲ್ಲ" ಎಂದು ಹೇಳಿ ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳ ಹಚ್ಚಿ ದರು. ನಮ್ಮ ಮಸ್ತಕದಲ್ಲಿ ಅಡಗಿರುವ ಪರಮಾತ್ಮನ ಚಿತ್ಕಳೆಯನ್ನು ಯೋಗಬಲ ದಿಂದ ಶ್ರೀ ಗುರುವು ಗಟ್ಟಿಗೊಳಿಸಿ ಭಾವದಿಂದ ಹೃದಯಕ್ಕೆ, ಹೃದಯದಿಂದ ಕರಕ್ಕೆ ಕರುಣಿಸಿಕೊಟ್ಟು ಅದಕ್ಕೆ ಇಷ್ಟಲಿಂಗವೆಂದು ಹೆಸರಿಟ್ಟು ಭಕ್ತಿಮಾಡಹಚ್ಚಿದನು. ವೈದಿ ಕರ ದೇವರುಗಳಂತೆ ಇಷ್ಟಲಿಂಗವು ವಿಗ್ರಹವಲ್ಲ. ಅದು ನಿರಾಕಾರವಾದ ಪರವಸ್ತುವಿನ ಸಾಕಾರ ಕುರುಹಾಗಿದೆ. ಕರದಲ್ಲಿಟ್ಟು ಪೂಜಿಸುವಾಗ ಅದು ಇಷ್ಟಲಿಂಗವೆನಿಸಿದೆ, ಉರ ದಲ್ಲಿ ಧ್ಯಾನಿಸುವಾಗ ಪ್ರಾಣಲಿಂಗವೆನಿಸಿದೆ, ಭಾವದಲ್ಲಿ ಬೆರೆದು ಮೈಮರೆದಾಗ ಅದು ಭಾವಲಿಂಗವೆನಿಸಿದೆ. ಈ ಪ್ರಕಾರ ಇಷ್ಟಲಿಂಗಪೂಜೆ ಪ್ರಾಣಲಿಂಗಾನುಸಂಧಾನ ಭಾವ ಲಿಂಗ ಸಾಮರಸ್ಯಗಳು ಕೂಡಿಕೊಂಡು ನಡೆದರೆ ಅದಕ್ಕೆ ಶಿವಯೋಗವೆನ್ನುತ್ತಾರೆ. ಇಷ್ಟಲಿಂಗದಿಂದ ತನು ಸಂಸ್ಕಾರ, ಪ್ರಾಣಲಿಂಗದಿಂದ ಮನ ಸಂಸ್ಕಾರ ಭಾವಲಿಂಗ ದಿಂದ ಭಾವಸಂಸ್ಕಾರಗಳಾಗಿ ಭಕ್ತನಲ್ಲಿ ವ್ಯಕ್ತಿ ವಿಕಾಸ, ಸಮಾಜ ವಿಕಾಸ ಹಾಗೂ ವಿಶ್ವ ವಿಕಾಸದ ಗುಣಗಳು ಅಳವಡುತ್ತವೆಂದು ಶರಣ ಧರ್ಮವು ಸಾರುತ್ತದೆ. ಇದು ಧರ್ಮದಲ್ಲಿ ಅವರು ಮಾಡಿದ ದೊಡ್ಡ ಕ್ರಾಂತಿಯು. ಅದು ಓದಿ ತಿಳಿದುಕೊಳ್ಳುವ ಶುಷ್ಕ ವೇದಾಂತವಲ್ಲ ; ತಿಳಿದು ಆಚರಿಸಿ ಆನಂದಪಡುವ ಸರಸ ಸಿದ್ಧಾಂತವಾಗಿದೆ.

ವೀರಶೈವರು ಶಿವನೆಂದು ಕರೆಯುವ ಶಬ್ದವು ಪರವಸ್ತುವಿನ (ಪರಮಾತ್ಮನ) ಹೆಸರಾಗಿದೆ. ಆದರೆ ಆರ್ಯರು ಹೆಸರಿಸಿದ ಬ್ರಹ್ಮ ವಿಷ್ಣು ಮಹೇಶ್ವರರಲ್ಲಿ, ಶಿವನು ಆ ಮಹೇಶ್ವರನಲ್ಲ. ವೀರಶೈವರ ಶಿವನು ಕೇವಲ ಲಯಕರ್ತನಲ್ಲ. ಸೃಷ್ಟಿ, ಸ್ಥಿತಿ, ಲಯಗಳನ್ನು ಆತನೇ ಮಾಡುತ್ತಾನೆ. ಬ್ರಹ್ಮ ವಿಷ್ಣು ಮಹೇಶ್ವರರಿಗೆ ಅಂಥ ಶಕ್ತಿಯನ್ನು ಕೊಟ್ಟವನು ಪರಶಿವನಾಗಿದ್ದಾನೆ. ಶಿವಶರಣರು ತಮ್ಮ ತಮ್ಮ ಶಿವನ ಹೆಸರಿನ ಮುದ್ರಿಕೆಗಳನ್ನಿಟ್ಟುಕೊಂಡು ವಚನಗಳನ್ನು ರಚಿಸಿರುವುದರಿಂದ ಅವರು

ನ್ನು ಮೂರ್ತಿಪೂಜಕರಿದ್ದರೆಂದು ಹೇಳಲಿಕ್ಕಾಗದು. ವೀರಶೈವರ ಶಿವನು ವಿಗ್ರಹವಲ್ಲ, ನಿರಾಕಾರ ಪರಬ್ರಹ್ಮನು. ಹೀಗೆ ಮೂರ್ತಿ ಪೂಜೆಯನ್ನು ಖಂಡಿಸಿ ತಮ್ಮ ದೇಹದಲ್ಲಿ ರುವ ಆತ್ಮನ ಕಡೆಗೆ ಜನರ ಒಲವನ್ನು ತಿರುಗಿಸಿದ್ದುದು ದೊಡ್ಡ ಕ್ರಾಂತಿಯೇ ಸರಿ. ಇದರಿಂದ ದೇವರು ಒಬ್ಬನೇ ಇರುವನೆಂಬ ಕಲ್ಪನೆಯು ದೃಢವಾಗಿ ಬೇರೆ ಬೇರೆ ದೇವರುಗಳ ತಾಕಲಾಟ–ತೊಳಲಾಟಗಳು ಎಷ್ಟೋ ಕಡಿಮೆಯಾದವು.

ವೀರಶೈವರಿಗೆ ಶಿವನೊಬ್ಬನೇ ಅರ್ಥಾತ್ ಇಷ್ಟಲಿಂಗವೊಂದೇ ದೇವರಾಗಿದ್ದರೂ ಕ್ರಿಯಾಭೇದದಿಂದ ಆತನು ಗುರು ಲಿಂಗಜಂಗಮವೆಂದು ಮೂರು ರೂಪು ತಾಳಿರುವನೆಂದೂ ಅವರಲ್ಲಿ ಭೇದವೆಣಿಸದೆ ಮೂವರೂ ಸರಿಸಮಾನರಾಗಿರುವರೆಂದೂ ವೀರಶೈವರು ಭಾವಿಸಿದ್ದಾರೆ. ಗುರುವು ಲಿಂಗವನ್ನು ಕೊಡುತ್ತಾನೆ, ಲಿಂಗವು ಅಂಗೈಯಲ್ಲಿ ಪೂಜೆಗೊಳ್ಳುತ್ತಿದೆ, ಜಂಗಮನು ಲಿಂಗಪೂಜೆಯ ಫಲವೇ ತಾನಾಗಿದ್ದಾನೆ, ಅಂತೆಯೇ "ಏಕೋ ದೇವಸ್ತ್ರಯೋರ್ಭೇದಾ ಗುರುರ್ಲಿಂಗಂತು ಜಂಗಮಾಃ" ಅಂದರೆ ದೇವನೊಬ್ಬನೇ ಇದ್ದು ಗುರು ಲಿಂಗ ಜಂಗಮವೆಂದು ಭೇದಗಳನ್ನು ತಳೆದಿದ್ದಾನೆಂದು ಹೇಳುವರು. ಇದರಿಂದ ಬರೇ ನಿರ್ಜೀವವಾದ ಆಕಾರವನ್ನು ನಂಬಿ ಮೂಢನಂಬುಗೆಯಿಂದ ನಡೆಯಲು ಅವಕಾಶ ದೊರೆಯದೆ ಸಜೀವವಾದ ಗುರು ಜಂಗಮರನ್ನೂ ನಂಬಿ ಜ್ಞಾನ ವೈರಾಗ್ಯಗಳನ್ನು ಬೆಳೆಯಿಸಿಕೊಳ್ಳಲು ಅವಕಾಶವನ್ನು ಕಲ್ಪಿಸಿಕೊಟ್ಟಂತಾಗಿದೆ. ಇದೊಂದು ದೊಡ್ಡ ಧಾರ್ಮಿಕ ಕ್ರಾಂತಿಯೇ ಸರಿ.

ವೀರಶೈವರಿಗೆ ಭಕ್ತಿಯೇ ಮುಖ್ಯ. ಭಕ್ತಿಯಿಂದಲೇ ಕ್ರಿಯೆಗೆ, ಭಕ್ತಿಯಿಂದಲೇ ಜ್ಞಾನಕ್ಕೆ, ಭಕ್ತಿಯಿಂದಲೇ ವೈರಾಗ್ಯಕ್ಕೆ ಕಳೆಬರುತ್ತದೆಂದು ಅವರು ನಂಬಿ ಭಕ್ತಿಯನ್ನು ಪಂಚಮ ಪುರುಷಾರ್ಥವೆಂದು ಕರೆದಿದ್ದಾರೆ. ಚತುರ್ಥ ಪುರುಷಾರ್ಥವಾದ ಮೋಕ್ಷಕ್ಕಿಂತಲೂ ವೀರಶೈವರ ಭಕ್ತಿಯು ಹೆಚ್ಚಿನದಾಗಿದೆ. ಅದು ಕ್ರಿಯಾ ಜ್ಞಾನ ವೈರಾಗ್ಯ ಸಂಪನ್ನವಾಗಿದೆ. ಈ ತರಹದ ವಿಚಾರ ಸರಣಿಯು ವೈದಿಕ ಧರ್ಮಕ್ಕೆ ಭಿನ್ನವಾಗಿದ್ದಂತೆ ಕಂಡು ಬರುತ್ತಿದೆ.

ಶರಣರು ಸ್ವರ್ಗ, ಮರ್ತ್ಯ, ಪಾತಾಳ ಲೋಕಗಳು ಬೇರೆ ಬೇರೆ ಇರುತ್ತವೆಂಬುದನ್ನು ನಂಬುವುದಿಲ್ಲ. ಅವರಿಗೆ ಸತ್ಯವ ನುಡಿವುದೇ ದೇವಲೋಕ' ಮಿಥ್ಯವ ನುಡಿವುದೇ ಮರ್ತ್ಯಲೋಕ, ಆಚಾರವೇ ಸ್ವರ್ಗ, ಅನಾಚಾರವೇ ನರಕ. ಈ ಲೋಕದಲ್ಲಿಯೇ ಸ್ವರ್ಗ ನರಕಗಳೂ ಪಾಪ ಪುಣ್ಯಗಳೂ ಇರುತ್ತವೆಂದು ಸಾರಿದರು, ಅಲ್ಲದೆ ಹಿಂದಿನ ಜನ್ಮದೇನಾದರಾಗಲಿ ಅವರವರ ಪಾಪ ಪುಣ್ಯಗಳ ಫಲ ಅವರ ಕೈಯಮೇಲೆ ಎಂದು ಸಾರಿ ಜನರು ದೈವವನ್ನು ನಂಬಿ ಕುಳಿತಿರದೆ ಪೌರುಷಕ್ಕಂಜಿಕೊಳ್ಳುವಂತೆಯೂ ಮಾಡಿದರು. ಮುಂದಿನ ಜನ್ಮದಲ್ಲಿ ಅನುಭವಿಸುವ ಪಾಪಪುಣ್ಯಗಳನ್ನು ನಿರಾಕರಿಸಿ ಇಹಜನ್ಮದ ಪಾಪಪುಣ್ಯಗಳ ಫಲವನ್ನು ಇಲ್ಲಿಯೇ ಅನುಭವಿಸುವರೆಂದು ಹೇಳಿ ನಂಬಲಾಗದ ಪುನರ್ಜನ್ಮದ ಕಡೆಗೆ ವಿಶೇಷ ಗಮನ ಕೊಡದಂತೆ ಮಾಡಿ ಜನತೆಯ

ಮಟ್ಟವನ್ನು ವೈಚಾರಿಕವಾಗಿ ಎತ್ತರಿಸಿದರು. ಇದು ಅವರು ಮಾಡಿದ ಮಹಾ ಕ್ರಾಂತಿಯೆಂದು ಹೇಳಬಹುದು.

ಇದರಂತೆ ಶರಣರ ಪಾರಿಭಾಷಿಕ ಶಬ್ದಗಳಾದ ಅಷ್ಟಾವರಣ, ಪಂಚಾಚಾರ ಷಟ್‌ಸ್ಥಲಗಳು ವೀರಶೈವ ಪುರುಷನ ಅಂಗ, ಪ್ರಾಣ, ಆತ್ಮವಾಗಿವೆಯೆಂದು ವಿವೇಚನೆ ಮಾಡಿದರು; ಅಲ್ಲದೆ ಷಟ್‌ಸ್ಥಲವು ಮೋಕ್ಷ ಮಾರ್ಗದ ನವೀನ ಪಂಥವಾಗಿದೆ. ಇದು ಭಾರತೀಯ ಸಂಸ್ಕೃತಿಗೆ ಹೊಸತೆಂಬಂತೆ ಭಾಸವಾಗುತ್ತದೆ. ಇದರಲ್ಲಿ ಭಕ್ತ ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಡಂಗಗಳು ಶ್ರದ್ಧಾ, ನಿಷ್ಠಾ, ಅವಧಾನ. ಅನುಭವ, ಆನಂದ ಸಮರಸಗಳೆಂಬ ಷಡ್ವಿಧಭಕ್ತಿಯಿಂದ ಆಚಾರಲಿಂಗ. ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗಳಲ್ಲಿ ಕ್ರಮವಾಗಿ ಬೆರೆದು ಬಯಲಾಗುವ ಪ್ರತಿಪಾದನೆಯು ವೈದಿಕ ಧರ್ಮದಿಂದ ಭಿನ್ನವಾಗಿದ್ದು ಇದೊಂದು ದೊಡ್ಡ ಕ್ರಾಂತಿಯೇ ಸರಿ.

ಶರಣರಿಗೆ ಬ್ರಹ್ಮಚರ್ಯ, ಗೃಹಸ್ಥ. ವಾನಪ್ರಸ್ಥ. ಸನ್ಯಾಸ ಎಂಬ ಆಶ್ರಮಗಳು ಮಾನ್ಯವಲ್ಲದಿದ್ದರೂ ವಿಶೇಷತಃ ಜಂಗಮರು ಬ್ರಹ್ಮಚಾರಿಗಳಾದದ್ದುಂಟು. ಭಕ್ತರೆಲ್ಲರೂ ಬಹುಶಃ ಗೃಹಸ್ಥಾಶ್ರಮಿಗಳೇ ಆಗಿದ್ದಾರೆ. ವಾನಪ್ರಸ್ಥ ಸನ್ಯಾಸಾಶ್ರಮಗಳಂತೂ ಶರಣರಲ್ಲಿಲ್ಲವೇ ಇಲ್ಲ. ಸನ್ಯಾಸಿಗಳು ಅರಣ್ಯಕ್ಕೆ ಹೋಗಿ ಅಲ್ಲಿ ವಾಸ ಮಾಡಿ ಈಶ್ವರ ಚಿಂತನೆಯಿಂದ ಮೋಕ್ಷ ಪಡೆಯಬೇಕೆಂಬುದು ಸ್ಮೃತಿಕಾರರ ಮತ. ಆದರೆ ಶಿವಶರಣರೆಗೆ ಲಿಂಗವಿದ್ದಲ್ಲಿಯೇ ಮೋಕ್ಷ, ಕಾಯಕವೇ ಕೈಲಾಸ, ಜಂಗಮರೆಂಬುವವರು ಸನ್ಯಾಸಿ ಕರ್ಮಯೋಗಿಗಳು ಅ ಥಾ ರ್ ತ್ ಲೋಕ ಸಂಗ್ರಹ ಮಾಡುವಂಥವರು. ಈ ರೀತಿಯಾದ ವಿಚಾರ ಸರಣಿಯು ವೈದಿಕ ಧರ್ಮಕ್ಕೆ ಭಿನ್ನವಾಗಿದ್ದು ಇದೊಂದು ಶರಣರ ವಿಚಾರ ಕ್ರಾಂತಿಯೆಂದೇ ಹೇಳಬಹುದು.

ಒಟ್ಟಿನಲ್ಲಿ ಧಾರ್ಮಿಕ ದೃಷ್ಟಿಯಿಂದ ಶರಣರು ವರ್ಣಾಶ್ರಮಗಳ ಹಾಗೂ ಸ್ಮೃತಿಕಾರರ ವಿರುದ್ಧ ಕ್ರಾಂತಿಯನ್ನು ಹೂಡಿದರು. ಅನೇಕ ದೇವರುಗಳ ವಿಗ್ರಹಾರಾಧನೆಗಳನ್ನು ಖಂಡಿಸಿದರು. ಹಿಂಸಾತ್ಮಕವಾದ ಯಜ್ಞಯಾಗಾದಿಗಳನ್ನು ನಿಷೇಧಿಸಿದರು. ವರ್ಣಾಶ್ರಮ ಧರ್ಮಗಳಿಂದುಂಟಾದ ಜಾತಿ ಕೋತಿಗಳನ್ನು, ಅಸ್ಪೃಶ್ಯತೆಯನ್ನು, ತರತಮ ಭಾವನೆಗಳನ್ನೂ ತೊಡೆದು ಹಾಕಿದರು. ಈ ರೀತಿಯಾಗಿ ಶರಣರು ಸಮತಾವಾದದ ಹೊಸ ಧಾರ್ಮಿಕ ಪಂಥವನ್ನೇ ನಿರ್ಮಿಸಿ ಕ್ರಾಂತಿಮಾಡಿದ್ದಾರೆ.

ಇನ್ನು ಸಾಮಾಜಿಕ ದೃಷ್ಟಿಯಿಂದ ಅವರು ಯೋಜಿಸಿದ ಅತ್ಯಂತ ಮಹತ್ವದ ಕ್ರಾಂತಿಯೆಂದರೆ ಕಾಯಕ ದಾಸೋಹಗಳನ್ನು ಬಳಕೆಯಲ್ಲಿ ತಂದು ಸಮಾಜವನ್ನು ಸರ್ವಾಂಗ ಸುಂದರವಾಗಿ ಮಾಡಿದುದಾಗಿದೆ. ಕಾಯಕವೆಂದರೆ ಸತ್ಯ ಶುದ್ಧವಾದ

ಪ್ರಾಮಾಣಿಕ ವ್ಯವಸಾಯ. ದಾಸೋಹವೆಂದರೆ ದುಡಿದದ್ದನ್ನೆಲ್ಲ ಜಂಗಮಕ್ಕೆ ಸಲ್ಲಿಸುವದು. ಎಲ್ಲರೂ ಒಂದಿಲ್ಲೊಂದು ಕಾಯಕವನ್ನು ಕೈಕೊಂಡು ದುಡಿಯಲೇ ಬೇಕು. ಕಾಯಕವು ಕಪಟ, ಮೈಗಳ್ಳತನದಿಂದ ಕೂಡಿರಬಾರದು. ಕಾಯಕದಿಂದ ಮನುಷ್ಯನು ಬೇಕಾದಷ್ಟು ಧನ ಧಾನ್ಯಗಳನ್ನು ಗಳಿಸಬಹುದು. ಆದರೆ ಅದನ್ನು ತನಗಾಗಿ ಅಥವಾ ತನ್ನ ಕುಟುಂಬಕ್ಕಾಗಿ ಸಂಗ್ರಹಿಸಿಟ್ಟುಕೊಳ್ಳದೆ ಜಂಗಮಕ್ಕೆ ಅರ್ಥಾತ್ ಲೋಕ ಹಿತಕ್ಕೆ ಅರ್ಪಿಸಿ ಜಂಗಮವು ಬಿಟ್ಟು ಕೊಟ್ಟ ಮಿಕ್ಕುಳಿದುದನ್ನು ತಾನು ಹೆಂಡತಿ ಮಕ್ಕಳೊಡನೆ ಸೇವಿಸಬೇಕು. ಈ ಯೋಜನೆಯಿಂದ ಯಾರ ಬಳಿಯಲ್ಲಿಯೂ ಧನ ಧಾನ್ಯಗಳು ಸಂಗ್ರಹವಾಗದೆ ಎಲ್ಲರಲ್ಲಿಯೂ ಹರಿದು ಹಂಚಿ ಹೋಗಿ ಸುಖ ಶಾಂತಿಯಿಂದ ಬಾಳ್ವೆ ಮಾಡಿಕೊಂಡಿರಲು ಅನುಕೂಲವಾಗುತ್ತಿತ್ತು. ಇದಲ್ಲದೆ ಶ್ರೀಮಂತ ಬಡವ ಎಂಬ ತಾರತಮ್ಯಗಳಳಿದು ಆರ್ಥಿಕ ಸಮತಾವಾದವು ತಾನಾಗಿಯೇ ತಲೆಯೆತ್ತಿ ನಿಂತಿತು. ಭಾರತದಲ್ಲಿ ಈಗ ಇಂಥ ಕಾಯಕ ದಾಸೋಹಗಳು ಆಚರಣೆಯಲ್ಲಿ ಬಂದರೆ ಆಹಾರ ಸಮಸ್ಯೆಯು ಸುಲಭವಾಗಿ ಬಿಟ್ಟೀತು. ಆರ್ಥಿಕ ಸಮಾನತೆಯು ಸಹಜವಾಗಿ ನೆಲೆಗೊಂಡೀತು. ಅತಿ ಪ್ರಸರಣ, ಶೋಷಣೆಗಳಿಗೆ ಆಸ್ಪದವೇ ಉಳಿಯಲಿಕ್ಕಿಲ್ಲ. ಕುಟುಂಬ ಯೋಜನೆಯ ವಿಚಾರವು ತೀಕ್ಷ್ಣವಾಗಿ ನಡೆಯಲಿಕ್ಕಿಲ್ಲ. ಎಲ್ಲರೂ ಸುಖಶಾಂತಿಯಿಂದ ಕಾಲ ಕಳೆಯಬಹುದಾಗಿದೆ.

ಸಾಮಾಜಿಕ ದೃಷ್ಟಿಯಿಂದ ಶರಣರು ಕೈಗೊಂಡ ಇನ್ನೊಂದು ಮಹತ್ವದ ಯೋಜನೆಯೆಂದರೆ ಅಸ್ಪೃಶ್ಯತಾ ನಿವಾರಣೆ. ಮನುಷ್ಯನು ಮನುಷ್ಯನನ್ನು ಮುಟ್ಟದಿರುವ ಈ ದುಷ್ಟ ಸಂಪ್ರದಾಯವು ಭಾರತವನ್ನು ಬಿಟ್ಟರೆ ಜಗತ್ತಿನ ಬೇರಾವ ಭಾಗದಲ್ಲಿಯೂ ಕಂಡುಬರುವುದಿಲ್ಲ. ದೇಶಕ್ಕೆ ಇದೊಂದು ದೊಡ್ಡ ಕಳಂಕವು. ಈ ಕಳಂಕದಿಂದಲೇ ದೇಶಕ್ಕೆ ಅಧೋಗತಿಯುಂಟಾಗಿದೆ. ಶರಣರು ಅಸ್ಪೃಶ್ಯರನ್ನು ಹಿಂದುಳಿದವರನ್ನು ಎತ್ತಿ ಹಿಡಿದರು. ಅವರ ದುರಾಚಾರಗಳನ್ನು ಬಿಡಿಸಿ ಅವರಿಗೆ ಲಿಂಗಧಾರಣ ಮಾಡಿ ತಮ್ಮೊಳಗೆ ಕೂಡಿಸಿಕೊಂಡು ಸ್ವಚ್ಛತೆ, ಸದಾಚಾರ, ಸದ್ಭಕ್ತಿಗಳಿಂದ ಅವರ ಮಟ್ಟವನ್ನು ಎತ್ತರಿಸಿದರು. ಸಮಾಜದಲ್ಲಿ ಸಮಾನತೆ ಕೊಟ್ಟು ಅವರನ್ನು ಕೂಡಿಕೊಂಡು ಅನ್ನಪಾನಾದಿಗಳನ್ನು ಮಾಡಿದರು. ಅಷ್ಟೇ ಏಕೆ, ಲಿಂಗಧಾರಿಯಾದ ಸದಾಚಾರಿಯಾದ ಹೊಲೆಯನ ಮಗನಿಗೆ ಲಿಂಗಧಾರಿಯಾದ ಸದಾಚಾರಿಯಾದ ಬ್ರಾಹ್ಮಣನ ಮಗಳನ್ನು ಕೊಡಿಸಿ ಲಗ್ನಮಾಡಿದರು. ಅಸ್ಪೃಶ್ಯರನ್ನು ಸಹ ತಮ್ಮಂತೆ ಶಿವಶರಣರನ್ನಾಗಿ ಮಾರ್ಪಡಿಸಿದ ಶ್ರೇಯಸ್ಸು ಶರಣರದೇ ಆಗಿದೆ.

ಇಂಥ ಅಸ್ಪೃಶ್ಯತಾ ನಿವಾರಣೆಯು ಭಾರತಕ್ಕೆ ಬೇಕಾಗಿದೆ. ಈ ಎದೆಗಾರಿಕೆಯು ಯಾವ ವರ್ಣಾಶ್ರಮಿಗೂ ಎಂದಿಗೂ ಹೊಳೆದಿರಲಿಲ್ಲ; ಎಂದೆಂದಿಗೂ ಹೊಳೆಯುವುದೇ ಇಲ್ಲ. ಈ ತರಹದ ಶರಣರ ಅಸ್ಪೃಶ್ಯತಾ ನಿವಾರಣಾಕ್ರಾಂತಿಯು ಅಪ್ರತಿಮವಾಗಿದೆ.

ಶರಣರು ಮಾಡಿದ ಇನ್ನೊಂದು ಸಾಮಾಜಿಕ ಸುಧಾರಣೆಯೆಂದರೆ ಸ್ತ್ರೀಯರ ಆಧ್ಯಾತ್ಮಿಕಮಟ್ಟವನ್ನು ಏರಿಸಿದ್ದುದು, ಅವರು ಸ್ತ್ರೀಯರಿಗೂ ಲಿಂಗ ಧರಿಸಿ ಲಿಂಗಾಂಗ ಸಾಮರಸ್ಯ ಪಡೆಯಲು ಪುರುಷರ ಸಮಾನರನ್ನಾಗಿ ಮಾಡಿದರಲ್ಲದೆ ಪುರುಷ ರಂತೆ ಲಿಂಗಪೂಜೆ ಮಾಡಿ ಆನಂದ ಪಡೆಯ ಹಚ್ಚಿದರು. ಸ್ತ್ರೀಯರಿಗೆ ಧಾರ್ಮಿಕ ವಿಷಯದಲ್ಲಿ ಅನುಭವ ಮಂಟಪದೊಳಗೆ ಚರ್ಚಿಸಲಿಕ್ಕೆಸ್ವಾತಂತ್ರ್ಯವನ್ನು ನೀಡಿದರು. ಅವರ ನೈತಿಕ ಬಲವನ್ನು ಬೆಳೆಸಿದರು. ಶರಣೆಯು ಶರಣನ ಗುಲಾಮಳಾಗದೆ ಸಹ ಚಾರಣಿಯಾಗಿ ಆತನೊಡನೆ ಸಹಕರಿಸಿ, ಧಾರ್ಮಿಕ, ಸಾಮಾಜಿಕ ಸೇವೆ ಮಾಡಲು ಮುಂದೆ ಬಂದಳು. ಬುದ್ಧಿ ಮತ್ತು ಜ್ಞಾನ ಮತ್ತು ಅನುಭವದಿಂದ ಸಾಹಿತ್ಯ ಕ್ಷೇತ್ರ ದಲ್ಲಿ ದುಡಿಯಲಿಕ್ಕೂ ವಚನ ಕವನಗಳನ್ನು ರಚಿಸಲಿಕ್ಕೂ ಸ್ತ್ರೀಯರಿಗೆ ಬೇಕಾದಷ್ಟು ಸ್ವಾತಂತ್ರ್ಯ ಸಿಕ್ಕಿತು. ವರ್ಣಾಶ್ರಮ ಧರ್ಮದಲ್ಲಿ ಸ್ತ್ರೀಯಳು ಶೂದ್ರಳೆಂದು ಗಣಿಸ ಲ್ಪಟ್ಟು ತನ್ನ ಸ್ವಾಭಾವಿಕವಾದ ಸ್ವಾತಂತ್ರ್ಯವನ್ನು ಕಳೆದುಕೊಂಡಿರುತ್ತಾಳೆ. ಶಿವಾನು ಭವ ಮಂಟಪದಲ್ಲಿ ಅಕ್ಕಮಹಾದೇವಿ, ನಾಗಮ್ಮ, ನೀಲಮ್ಮ, ಮಹಾದೇವಮ್ಮ, ಲಕುಮಮ್ಮ, ಲಿಂಗಮ್ಮಾದಿ ಶರಣೆಯರು ಬಿಚ್ಚುಮನಸ್ಸಿನಿಂದ ಉದಾತ್ತವಾದ ಆಧ್ಯಾತ್ಮಿಕ ತತ್ತ್ವಗಳನ್ನು ಶರಣರೊಡನೆ ಚರ್ಚಿಸಿದ್ದುಂಟು. ಇದೊಂದು ಶರಣರು ಮಾಡಿದ ಮಹಾಕ್ರಾಂತಿಯೆಂದೇ ಹೇಳಬಹುದು. ಭಾರತದ ಇತಿಹಾಸದಲ್ಲಿಯೇ, ಅದೇಕೆ. ವಿಶ್ವದ ಇತಿಹಾಸದಲ್ಲಿಯೇ ಇದು ಹೊಸದು.

ಇದಲ್ಲದೆ ಶರಣರು ಸಾಮಾಜಿಕ ದೃಷ್ಟಿಯಿಂದ ಮಾಡಿದ ಮತ್ತೊಂದು ಕ್ರಾಂತಿ ಯೆಂದರೆ ಜನಸಾಮಾನ್ಯರಲ್ಲಿ ರೂಢವಾಗಿದ್ದ ಅಜ್ಞಾನ, ಹೊಲಸುತನ, ಸರೆಗುಡಕತನ ಮಾಂಸ ಭಕ್ಷಣ, ಬಲಿದಾನ, ನೂರೆಂಟು ಕಿರುಕುಳ ದೇವರಪೂಜೆ, ಮೂಢಭಾವನೆ ಗಳನ್ನು ಬಹುಮಟ್ಟಿಗೆ ತಗ್ಗಿಸಿದ್ದುದು. ಸಾಮಾನ್ಯ ಜನತೆಯ ಅಜ್ಞಾನ ಮೂಢ ಭಾವನೆಗಳ ದುರುಪಯೋಗ ಮಾಡಿಕೊಂಡು ಅವರ ಸುಲಿಗೆ ನಡೆಯಿಸಿದ ಉಚ್ಚ ವರ್ಣದವರ ಹೀನಕೃತಿಗಳನ್ನು ಬೈಲಿಗೆಳೆದು ಜನರಲ್ಲಿ ಎಚ್ಚರವನ್ನುಂಟು ಮಾಡಿದರು ಜನರಲ್ಲಿ ಸದಾಚಾರ ಸದ್ಭಕ್ತಿಗಳು ಹೆಚ್ಚಿದವು. ಜನತೆಗೆ ಶಿಕ್ಷಣ ಕೊಡಲು ಅಯ್ಯನವರ ಶಾಲೆಗಳು ಸಿದ್ಧವಾಗಿ ನಿಂತವು. ಇದರಿಂದ ಸಾಕ್ಷರತೆಯು ಬೆಳೆಯಿತು.

ಶರಣರು ಸಾಹಿತ್ಯ ಕ್ಷೇತ್ರದಲ್ಲಿ ಮಾಡಿದ ಕ್ರಾಂತಿಯೆಂದರೆ ಕನ್ನಡ ವಚನಗಳ ನಿರ್ಮಾಣ. ಅವರು ಸಂಸ್ಕೃತವನ್ನೋದಿ ವೇದಾಗಮೋಪನಿಷತ್ತುಗಳ ಕಡೆಗೆ ವಿಶೇಷ ಗಮನಿಸದೆ ಅಯ್ಯನವರ ಮಠದಲ್ಲಿ ಕನ್ನಡ ಕಲಿತು ವಚನ ರಚಿಸಲು ಸಮರ್ಥರಾಗಿ ದ್ದರು. ಅವರು ರಚಿಸಿದ ವಚನಗಳು ಕನ್ನಡ ಉಪನಿಷತ್ತುಗಳೆಂದು ಕರೆಯಿಸಿಕೊಳ್ಳಲು ಅರ್ಹವಾಗಿವೆ. ಎಷ್ಟೋ ವಚನಗಳು ಆಗಮೋಪನಿಷತ್ತುಗಳನ್ನು ಸಹ ಮೀರಿ ಹೋಗಿವೆ. ಎರಡೆಂಬತ್ತುಕೋಟಿ ವಚನ ಸಾಹಿತ್ಯವನ್ನು ಪೆತ್ತ ಕನ್ನಡ ಮಾತೆಯೂ ನಿಜವಾಗಿಯೂ ಧನ್ಯಳೇ ಸರಿ. ಜೈನರಂತೆ ಪಂಡಿತರನ್ನು ಬೆರಗುಗೊಳಿಸಲು ಕ್ಲಿಷ್ಟ

ವಾದ ಚಂಪೂ ಕಾವ್ಯಗಳನ್ನು ಶರಣರು ಬರೆಯಲಿಲ್ಲ. ರಾಜಮನ್ನಣೆ ಪಡೆಯಲು ಯಾವ ರಾಜನನ್ನೂ ಇಂದ್ರ ಚಂದ್ರನೆಂದು ಹೊಗಳಲಿಕ್ಕೆ ಹೋಗಲಿಲ್ಲ. ಕಾವ್ಯದ ಹದಿನೆಂಟು ಪ್ರಕಾರದ ವರ್ಣನೆಗಳನ್ನೆಂದಿಗೂ ಇವರು ಬಳಸಿಕೊಳ್ಳಲಿಲ್ಲ. ಒಂದೆ ಎಂದೂ ಆಗದ ವಚನ ನಿರ್ಮಾಣ ಕ್ರಾಂತಿಯೂ ಚಿರನೂತನವಾದುದಾಗಿದೆ. ಈ ವಚನಗಳು ಮುಂದೆ ಬರುವ ಹರಿಹರ, ರಾಘವಾಂಕ, ಕೆರೆಯ ಪದ್ಮರಸ ಮೊದಲಾದ ಪ್ರೌಢ ಕವಿಗಳ ಮನಸ್ಸಿನ ಮೇಲೆ ಒಳ್ಳೆ ಪ್ರಭಾವವನ್ನು ಬೀರಿದ್ದರಿಂದ ಅವರು ವಚನದ ವಿಚಾರಗಳನ್ನು ತಮ್ಮ ನೂತನವಾದ ಷಟ್ಪದಿ, ರಗಳೆ, ಸಾಂಗತ್ಯಾದಿ ಛಂದಸ್ಸುಗಳಲ್ಲಿ ಪ್ರಚಾರ ಪಡಿಸಿದರು. ಅಲ್ಲದೆ ಶರಣರ ವಚನಗಳ ಪ್ರಭಾವದಿಂದಲೇ ನಿಜಗುಣ ಶಿವಯೋಗಿ ಸರ್ಪಭೂಷಣ ಶಿವಯೋಗಿ ಮುಪ್ಪಿನ ಷಡಕ್ಷರಿಸ್ವಾಮಿ, ಬಾಲಲೀಲಾಮಹಂತ ಶಿವಯೋಗಿ, ಸರ್ವಜ್ಞ ಮೊದಲಾದವರು ಶರಣರ ದಿವ್ಯತತ್ತ್ವಗಳನ್ನು ಪದಗಳ ರೂಪದಲ್ಲಿ ಹಾಡಿ ಕೈವಲ್ಯಗಳನ್ನು ರಚಿಸಿದರು. ಈ ವಚನಗಳ ಬೆಳಕಿನಿಂದಲೇ ೧೫ನೆಯ ಶತಮಾನದಲ್ಲಿ ಪ್ರಭಾವಿತರಾದ ಲಕ್ಕಣ್ಣದಂಡೇಶ, ಜಕ್ಕಣಾಚಾರ್ಯ, ತೋಂಟದ ಸಿದ್ಧಲಿಂಗ, ಚಾಮರಸ, ಮಗ್ಗೆ ಮಾಯಿದೇವ ಹಾಗೂ ನೂರೊಂದು ವಿರಕ್ತರು ಅನೇಕ ಸಂಸ್ಕೃತ ಗ್ರಂಥಗಳನ್ನು ಶಾಸ್ತ್ರಬದ್ಧವಾದ ಕನ್ನಡ ವಚನ ಗ್ರಂಥಗಳನ್ನು ಬರೆದು ಅಜರಾಮರವಾದ ಕೀರ್ತಿಯನ್ನು ಗಳಿಸಿದರು. ಈ ಪ್ರಕಾರ ಶರಣರ ವಚನ ಸಾಹಿತ್ಯವು ಅಮರವಾಗಿದೆ, ಜ್ಯೋತಿರ್ಮಯವಾಗಿದೆ, ಸ್ಫೂರ್ತಿದಾಯಕವಾಗಿದೆ, ಚಿರನೂತನವಾಗಿದೆ.

ಈ ರೀತಿಯಾಗಿ ಶರಣರ ವಿಚಾರ ಕ್ರಾಂತಿಯು ಧಾರ್ಮಿಕ, ಸಾಮಾಜಿಕ, ಹಾಗೂ ಸಾಹಿತ್ಯದ ಕ್ಷೇತ್ರಗಳಲ್ಲಿ ಚಿರಸ್ಮರಣೀಯವಾದ ಸುಧಾರಣೆಗಳನ್ನು ನೆಲೆಗೊಳಿಸಿತೆಂದು ಧಾರಾಳವಾಗಿ ಹೇಳಬಹುದು.

---

ಸತ್ಯಂವಚ್ಮಿ ಹಿತಂವಚ್ಮಿ ಸಾರಂವಚ್ಮಿ ಪುನಃ ಪುನಃ ।
ಲಿಂಗಮಧ್ಯೇ ಮಹಾದೇವಃ ಸಾಕ್ಷಾತ್ ದೇವೋಽಪ್ಯವಸ್ಥಿತಃ ।
ಅನುಗ್ರಹಾಯ ಲೋಕಾನಾಂ ತಸ್ಮಾತ್ ಲಿಂಗಂ ಪ್ರಪೂಜಯೇತ್ ॥

ಸತ್ಯವೂ ಹಿತವೂ ಮತ್ತು ನಾದವೂ ಆದ ಮಾತನ್ನೇ ಮೇಲೆ ಮೇಲೆ ಹೇಳುತ್ತೇನೆ. ಮಾನವರ ಅನುಗ್ರಹಕ್ಕಾಗಿಯೇ ಪ್ರಕಾಶ ಮಾನನಾದ ಮಹಾದೇವರು ಲಿಂಗ ಮಧ್ಯದಲ್ಲಿ ನೆಲೆಸಿರುವನು. ಆದುದರಿಂದ ಶಿವಲಿಂಗವನ್ನು ಚೆನ್ನಾಗಿ ಪೂಜಿಸಬೇಕು.

**— ವೀರಶೈವಾಚಾರ ಪ್ರದೀಪಿಕೆ**

# ಶೂನ್ಯಸಂಪಾದನೆ*

● ಚ. ಸುಂದರೇಶನ್, ಎಂ. ಎ.,
ಕನ್ನಡ ಅಧ್ಯಾಪಕರು
ಸರಕಾರಿ ಆರ್ಟ್ಸ್ ಕಾಲೇಜ್, ಬೆಂಗಳೂರು

ಉನ್ನತವಾದ ಸಾಹಿತ್ಯಕೃತಿ ಅರ್ಥದ ಮೇರೆಯನ್ನು ಮೀರಿ ಧ್ವನಿಪೂರ್ಣವಾಗಿ ಭಾವಸ್ಪಂದನವನ್ನುಂಟುಮಾಡುತ್ತದೆ. ಅಂತೆಯೇ ಶೂನ್ಯಸಂಪಾದನೆಯೂ ಕೇವಲ ಬುದ್ಧಿಗೆ ನಿಲುಕದ ಕೃತಿಯಾಗಿ, ಅಧ್ಯಾತ್ಮಿಕಭಾವಗೋಚರವಾದ ವಿಶಿಷ್ಟಾರ್ಥದ ನೆಲೆಯಿಂದ ಕೂಡಿದೆ. ನಿಜಾನುಭಾವದ ವ್ಯಾಖ್ಯಾನಕ್ಕೆ ತಕ್ಕುದಾದ ಕೃತಿಯಿದು. ಕನ್ನಡ ನುಡಿಗೆ ಕೀರ್ತಿಯನ್ನು ತರುವ, ತಂದಿರುವ ಕೃತಿಯಿದು.

ಹದಿನೈದನೆಯ ಶತಮಾನ ವಚನಸಾಹಿತ್ಯದ ಪುನರುಜ್ಜೀವನದ ಕಾಲ. ವಚನ ಸಂಕಲನ, ಸಂಪಾದನ, ವ್ಯಾಖ್ಯಾನ ಹಾಗೂ ನೂತನ ವಚನಗಳ ನಿರ್ಮಾಣದ ಯುಗ. ಶೂನ್ಯಸಂಪಾದನೆ ಈ ಕಾಲದ ಸಾಹಿತ್ಯ ಧರ್ಮವನ್ನು ಪ್ರತಿನಿಧಿಸುವ ಶ್ರೇಷ್ಠಕೃತಿ. ಪ್ಲೇಟೋನ ರಿಪಬ್ಲಿಕ್ ಗ್ರಂಥದಂತೆ ಸಂವಾದ ಶೈಲಿ ಇದರಲ್ಲಿದೆ. ಭಾರತೀಯ ತತ್ತ್ವವೇತ್ತರಿಗೆ, ಕವಿಗಳಿಗೆ ಈ ಸಂವಾದ ಪದ್ಧತಿ ಪ್ರಿಯ ಹಾಗೂ ಉಚಿತವೆನಿಸಿದೆ; ಉಪನಿಷತ್ತು ಭಗವದ್ಗೀತೆಗಳಂತಹ ದಾರ್ಶನಿಕ ಗ್ರಂಥಗಳಲ್ಲೂ ಈ ಬಗೆಯ ಶೈಲಿ ಕಂಡುಬಂದಿದೆ. ಸಪ್ತಕಾವ್ಯಕರ್ತೃ ಗುರುಬಸವನೂ ಈ ಸಂವಾದ ಶೈಲಿಯನ್ನು ಅಳವಡಿಸಿಕೊಂಡಿರುವನು.

## ಪರಮಾನುಭಾವಬೋಧೆಯ ಕೃತಿ

"ಶೂನ್ಯಸಂಪಾದನೆ" ವಿಶ್ವದ ಅನುಭಾವ ಸಾಹಿತ್ಯಕ್ಕೆ ವೀರಶೈವರ ವಿಶಿಷ್ಟ ಕಾಣಿಕೆ. ಇದು ಮತೀಯ ಗ್ರಂಥವಲ್ಲ, ಅಂತರಂಗವನ್ನು ಅರಳಿಸುವ ಅನುಭವ ಗ್ರಂಥ. ಅಲ್ಲಮಪ್ರಭುರಾಯನ ಪರಮಾನುಭಾವಬೋಧೆಯ ಕೃತಿ. ಪರಮರಾಜ ಯೋಗಸಾಧ್ಯ ಸಂಪಾದನ. ಗೂಳೂರ ಸಿದ್ಧವೀರಣ್ಣೊಡೆಯರು ಶರಣಜನರ ಕಿವಿಗೆ ಇನಿದೆನಿಸುವಂತೆ ಶಿವಶರಣರ ವಚನಗಳಿಂದಲೇ ಪವಣಿಸಿರುವ ಮುತ್ತಿನ ಹಾರ; ನಿರಾಳ—ಸಹಜತತ್ತ್ವದ ಸಾರ.

---

* 12-9-1967 ರಂದು ಬೆಂಗಳೂರಿನ ಶ್ರೀ ಜಗದ್ಗುರು ನಿಡುಮಾಮಿಡಿ ನಿವಾಸದಲ್ಲಿ ಜರುಗಿದ ಶೂನ್ಯಸಂಪಾದನೆಯ ಪ್ರವಚನ ಸಮಾರೋಪ ಸಮಾರಂಭದಲ್ಲಿ ಮಾಡಿದ ಭಾಷಣದ ಒಂದು ರೂಪ.

## ಲಿಂಗಾಂಗಸಮರಸ; ಪೂರ್ಣಯೋಗ

ನೂರೊಂದು ಸ್ಥಲಗಳಲ್ಲಿ ಶೀಲಸಂಪಾದನೆ ಎಂಬುದಿದೆ, ಇದು ಮಹತ್ವದ ವಿಷಯ. ಲೌಕಿಕರ ಸಂಪಾದನೆ ಸಾಧಾರಣವಾಗಿ ಕಾಮಪ್ರೇರಿತ; ಮೋಹಭರಿತ. ಶರಣರ ಸಂಪಾದನೆ ಶೀಲಭರಿತ; ಪರಿಣಾಮಪೂರ್ಣ. ಶೀಲಸಂಪಾದನೆಯಿಲ್ಲದೆ ಶೂನ್ಯಸಂಪಾದನೆಯಿಲ್ಲ. ಶೀಲದ ಸಕೀಲವನರಿತವನೆ ಪರವನೊಳಕೊಂಡ ಪರಿಣಾಮಿ ಬಯಲುಭರಿತ. 'ಶೂನ್ಯಸಂಪಾದನೆ'— ಎಂಬುದಂತೂ ಶಿವಶರಣರ ಭಾವ—ಅನುಭಾವವೆಲ್ಲವನ್ನೂ ಇಂಬಿಟ್ಟುಕೊಂಡುದಾಗಿದೆ. ಈ ಬಗೆಗ ಪೂಜ್ಯ ಕುಮಾರಸ್ವಾಮಿಜಿ ಅವರು ಹೀಗೆ ವಿವರಿಸಿದ್ದಾರೆ :

At the outset the word shunya appears to have a Buddhistic origin but in Virashaiva Philosophy it has a different connat ation. Shunya means reducing the ego and its desire to zero point; with the reduction of lower self or ego the energy of the higher self is released for new purposes. This higher self or Anga, as it is called in Virashaivism, is the real individual soul of which ego is only a mask. sampa dana–means accomplishment; accomplishment of what ? At one-ment of the individual soul or Anga with the universal soul or linga. It is not loss of the individual in the universal but possession of the universal. *

ಶೂನ್ಯ ಸಂಪಾದನೆಯನ್ನು ಕುರಿತು ಪೂಜ್ಯ ಶ್ರೀ ಜ. ಚ. ನಿ. ಸನ್ನಿಧಿಗಳವರು ಅರ್ಥವಿಸಿರುವ ಅನುಕ್ರಮ ಇಂತಿದೆ ;

ಶೂನ್ಯ–ಎಂದರೆ ಪೂರ್ಣ; ಸಂಪಾದನೆ–ಎಂದರೆ ಯೋಗ. ಶೂನ್ಯ ಸಂಪಾದನೆ ಎಂದರೆ ಪೂರ್ಣಯೋಗ. ಈ ಹೆಸರು ನಮಗೆ ಹೊಸದಲ್ಲ. ಅರವಿಂದರಿಂದ ಏನು ಬಂದುದಲ್ಲ. ಶಿವಶರಣರು ಪೂರ್ಣಯೋಗವೆಂಬ ಹೆಸರನ್ನು ಧ್ವನಿಪೂರ್ವಕವಾಗಿ ಮೊದಲೇ ಬಳಸಿದ್ದಾರೆ. ವಿಶಿಷ್ಟತತ್ತ್ವವನ್ನು ಅರುಹಿದ್ದಾರೆ.*೧

ಪೂಜ್ಯರ ಈ ನಿರೂಪಣೆಗಳು ಪ್ರಸ್ತುತ ವಿಚಾರದ ಸುತ್ತ ಬೆಳಕನ್ನು ಸಮುದರ್ಶನವನ್ನು ಒದವಿಸುತ್ತಿವೆ.

ಪ್ರಭುದೇವರೇ ಶೂನ್ಯ ಸಂಪಾದನೆಯ ಕೇಂದ್ರವ್ಯಕ್ತಿ. ಮತ್ತೆ ಉಳಿದ ಶರಣರ ದೃಷ್ಟಿ, ಅನುಭವ ಪ್ರಭುಕಾರುಣ್ಯದಿಂದ ಉದ್ಧಾರವಾದ ಆ ಶರಣರ ಜೀವನದ

* Buddha and Basava, Page 63

*೧ ಶೂನ್ಯಸಂಪಾದನೆಯ ಪ್ರವಚನ ಸಂದರ್ಭದಲ್ಲಿ ಹೊಮ್ಮಿ ಬಂದ ವಿವರಣೆ.

ಬಿನ್ನಣದ ನೆಲೆಗಳೂ ಶೂನ್ಯಸಂಪಾದನೆಯಲ್ಲಿ ಸುವ್ಯಕ್ತವಾಗಿವೆ. ನಿದರ್ಶನವಾಗಿ ಮುಕ್ತಾಯಕ್ಕ ಸಿದ್ಧರಾಮಯ್ಯಗಳ ಸಂಪಾದನೆಯನ್ನು ಅನುಸರಿಸಿ ಒಂದೆರೆಡು ಮಹತ್ವದ ವಿಷಯಗಳನ್ನು ಸೂಚಿಸುವುದು ನನ್ನ ಉದ್ದೇಶವಾಗಿದೆ. ಈ ಎರಡು ಸಂಪಾದನೆಗಳಲ್ಲಿಯೆ ಅಂಗ-ಅಂಗತತ್ತ್ವ ಅರುಹು-ಕುರುಹಿನ ತತ್ತ್ವ, ಗುರು-ಶಿಷ್ಯ ತತ್ತ್ವಯೋಗದ ಹೊಲಬು ಕಾಯಜೀವದ ಹೊಲಿಗೆ, ಸರವುಂಡ ಶಬುದ, ನಿಜ ಪದದ ನಿಲವು-ಈ ಬಗೆಯ ದಿವ್ಯಭಾವಗಳು ತುಂಬಿ ಬಂದಿದೆ.

## ಮುಕ್ತಾಯಕ್ಕಗಳ ಸಂಪಾದನೆ

ಆತ್ಮಾನುಭೂತಿಯನ್ನು ಪಡೆದ ಮುಕ್ತಾಯಕ್ಕನಿಗೂ ಮರೆವು ಆವರಿಸಿದಾಗ ಪ್ರಭುದೇವರು ನಿಜದರಿವನ್ನು ಮೂಡಿಸಿದ ಒಂದು ಸಂದರ್ಭ:

ಓರ್ವ ಗಣಾಧೀಶ್ವರನು ಜಗದ್ಧಿತಾರ್ಥವಾಗಿ ಮರ್ತ್ಯಕ್ಕವತರಸಿ ಅಜಗಣ್ಣನೆಂಬ ಅಭಿಧಾನದಿಂ ಗುಪ್ತಭಕ್ತಿಯಿಂದಿರ್ದು, ತಮ್ಮ ನಿರವಯಪದದೊಳು ನಿಜವನೈದಲು, ಅಲ್ಲಿ ಮುಕ್ತಾಯಕ್ಕ ಅಜಗಣ್ಣನನು ಅಗಲ್ದ ವಿಯೋಗಾವಸ್ಥೆಯಿಂ ಪ್ರಲಾಪಿಸುತ್ತಿರಲು, ಪ್ರಭುದೇವರು ನುಡಿಸುವ ಪ್ರಸ್ತಾವದ ವಚನ:-

"ಅಂಗೈಯೊಳಗೊಂದು ಅರಳ್ದ ತಲೆಯ ಹಿಡಿದುಕೊಂಡು ಕಂಗಳ ಮುತ್ತ
ಪವಣಿಸುವಾಕೆ ನೀನಾರು? ಹೇಳಾ.
ಸಂದ ಸಂಪಗೆಯರಳ ತುಂಬಿ ಬಂಡುಂಬ ಭೇದವನರಿಯದೆ
ಹಂಬಲಿಸುವ ಪರಿತಾಪವೇನು? ಹೇಳಾ.
ಒಂದೆಂಬೆನೆ, ಎರಡಾಗಿದೆ: ಎರಡೆಂಬೆನೆ, ಒಂದಾಗಿದೆ.
ಅರಿವಿನೊಳಗಣ ಮರಹಿದೇನು? ಹೇಳಾ"

ಹೃದಯಸ್ಪರ್ಶಿಯೂ ಸಂಕೇತಪೂರ್ಣವೂ ಆದ ವಚನವಿದು. ಅಣ್ಣನ ಅಗಲಿಕೆಗಾಗಿ ಮುಕ್ತಾಯಕ್ಕ ಪ್ರಲಾಪಿಸುತ್ತಿದ್ದಾಳೆ. ಅಜಗಣ್ಣನ ಐಕ್ಯದ ರಹಸ್ಯಜ್ಞಾನ ತನಗೆ ಒದಗದೆ ಇರಲು ಅತೀವವಾದ ದುಃಖವಾಗಿದೆ ಮುಕ್ತಾಯಕ್ಕನಿಗೆ. ಅಂಗೈ ಪೂರ್ಣ ಕ್ರಿಯೆಯ, ಅರಳ್ದ ತಲೆ ಪೂರ್ಣ ಪ್ರತಿಜ್ಞೆಯ ಸೂಚಕವಾಗಿ ಸುಂದರ ಶೈಲಿಯ ಸಂಕೇತವಾಗಿದೆ. ಸ್ವಾನುಭೂತಿಯ ಸತ್ಯಸಾಕ್ಷಿಯಾಗಿದೆ.ಮುತ್ತುಪವಣಿಸಿದಂತೆ ಆಕೆಯ ಹನಿಗಳು ತೋರುತ್ತಿವೆಯಂತೆ ! ಮಾಯಾಚಂಪಕಕ್ಕೆ ಜೀವಭ್ರಮರ ಭ್ರಮಿಸಿ ಪರಿತಾಪಗೊಂಡ ಚಿತ್ರವು ಸೂಚಿತವಾಗಿವೆ. ಎರಡಿಲ್ಲದೆ ಒಂದಾದ ಅಜಗಣ್ಣ ತನ್ನ ತಾನರಿತವ! ಶಿವಜ್ಞಾನಿ ಎಂಬುದನ್ನು ಪ್ರಭುದೇವರು ಮಾರ್ಮಿಕವಾಗಿ ಮನಗಾಣಿಸಿದ್ದಾರೆ. ಅಲ್ಲಮರ ಸ್ವಾನುಭಾವ ಶಕ್ತಿಯನ್ನು ಸುಮಧುರ ಉಕ್ತಿ ಪ್ರಯೋಗ ಪರಿಣತಿಯನ್ನು ಈ ವಚನದಿಂದ ತಿಳಿಯಬಹುದು.

ಮುಂದೆ ಎನ್ನ ಮನದೊಳಗೆ ಘನವನು ಅನುಗೊಳಿಸಿ ತೋರುವರಿಲ್ಲದ ಕಾರಣ, ಅಜಗಣ್ಣನಿಕ್ಕಿದ ಸಮಸ್ಯೆಗೆ ಬೆರಗಾದೆನೆಂದು ಮುಕ್ತಾಯಕ್ಕನವರು ಬಿನ್ನವಿಸಲು ಪ್ರಭುದೇವರು ನೀಡಿದ ಉಪದೇಶವಿದು:

"ತೆರಹಿಲ್ಲದ ಘನವು ಕುರುಹಿಂಗೆ ಬಾರದ ಮುನ್ನ
"ತೋರಿದವರಾರು ಹೇಳಾ ಮಹಾಲಿಂಗೈಕ್ಯವನು ?
ಆರೂಢಿಯ ಕೂಟದಲ್ಲಿ ನಾನಾರನೂ ಸಾಕ್ಷಿಯ ಕಾಣೆ.
ಬೇರೆ ಮಾಡಿ ನುಡಿಯಬಹುದೆ ಪ್ರಾಣಲಿಂಗವನು?
ಅರಿವು ಸ್ವಯವಾಗಿ ಮರಹು ನಷ್ಟವಾದರೆ
ಗುಹೇಶ್ವರನೆಂಬ ಲಿಂಗವು ತಾನೆ ನೋಡಾ.....

ಸರ್ವವ್ಯಾಪಿಯಾದ ಪರವಸ್ತುವು ಇಷ್ಟಲಿಂಗರೂಪವಾಗಿ ಬರುವುದಕ್ಕೆ ಮೊದಲು ಲಿಂಗಸಮರಸವನ್ನು ಯಾರು ತೋರಿಸುತ್ತಾರೆ? ಅಂಗವಾಗಿ ಬಂದರೆ ಸಮರಸ ತೋರಿಸಲು ಸಾಧ್ಯ. ಸಮರಸದ ಸ್ಥಿತಿಯಲ್ಲಿ ನಾನು ಯಾರನ್ನೂ ಕಾಣೆನು ! ಪ್ರಾಣದಿಂದ ಬೇರೆ ಇದೆ ಎಂದು ಹೇಳಲಾಗುವುದೇ? ಒಳಗಿನ ಜ್ಯೋತಿರ್ಲಿಂಗವೆ ಕರಸ್ಥಲದ ಲಿಂಗವಾಗಿ ಬಂದಿದೆ. ಇಷ್ಟಲಿಂಗದ ರೂಪಿನಲ್ಲಿಯೇ ಪ್ರಾಣಲಿಂಗವಿದೆ. ಕುರುಹಿನಲ್ಲಿಯೆ ಅರುಹಿದೆ. ಅರುಹಿನಲ್ಲಿಯೆ ಕುರುಹಿದೆ. ಅರುಹು ಸ್ವಯವಾಗದೆ ಸಮರಸದ ಪರಿಣಾಮ ಪ್ರಜ್ಞೆಯುಂಟಾಗದು. ಕುರುಹಿನಲ್ಲಿ ತೋರಿಕೆಯುಂಟು. ಅರಿಕೆಯುಂಟು. ಅಂಗವಾದಲ್ಲಿ ಲಿಂಗೈಕ್ಯದ ಸಾರಾಯ ಸುಖವುಂಟು. ತೋರುವ ತೆರನುಂಟು ಅರಿವ ಅಳವುಂಟು. ಕುರುಹೆ ಪ್ರಾಣವಾಗಿ ಕುರುಹಿನ ಅರುಹೇ ಲಿಂಗವಾಗಿ ಕೂಟ ಸಮರಸದಲ್ಲಿ ಅಂದರೆ ಪ್ರಾಣ ಲಿಂಗದಲ್ಲಿ ಪರವಶವಾದಲ್ಲಿ ಅದನ್ನು ಹೇಳಲು ಬೇರೆ ಸಾಕ್ಷಿಯಿಲ್ಲ; ಅದನ್ನು ನೋಡಲು ಬೇರೆ ಅಕ್ಷಿಯಿಲ್ಲ. ಜ್ಞಾನವು ತನ್ನಲ್ಲಿ ಲೀನವಾಗಿ ಬೇರೆ ಮತ್ತೊಂದಿದೆ ಎಂಬ ಮರಹು ನಷ್ಟವಾದರೆ, ತಾನೇ ಗುಹೇಶ್ವರಲಿಂಗ ಎಂದಿದ್ದಾರೆ ಪ್ರಭು.

**ಸಿದ್ಧರಾಮಯ್ಯಗಳ ಸಂಪಾದನೆ**

ಇಷ್ಟಲಿಂಗವಿಡಿದು ನಿಜಲಿಂಗೈಕ್ಯವ ಕಾಣುವ ಪರಿ ಹೇಗೆಂದು ಬೆಸಗೊಂಬ ಪ್ರಸ್ತಾಪದ ವಚನ ಸಿದ್ಧರಾಮಯ್ಯಗಳ ಸಂಪಾದನೆಯಲ್ಲಿ ಮಹತ್ತರವಾದುದು.

"ಕಾಯವೇ ಪೀಠಿಕೆ, ಪ್ರಾಣವೆ ಲಿಂಗವಾಗಿರಲು,
ಬೇರೆ ಮತ್ತೆ ಕುರುಹೇಕಯ್ಯಾ?
ಕುರುಹುವಿಡಿದು ಕೊಡುವ ನಿರವಯವುಂಟೆ ಜಗದೊಳಗೆ?
ಅಜ್ಞಾನ ಕೈಯಲ್ಲಿ ಹಿಡಿದು ದೃಷ್ಟವ ಕಂಡೆವೆಂದರೆ
ಕಪಿಲಸಿದ್ಧಮಲ್ಲಿನಾಥಯ್ಯನು
ಸಾಧ್ಯವಹ ಪರಿಯ ಹೇಳಾ ಪ್ರಭುವೆ?"

—ಇಷ್ಟಲಿಂಗವಿಡಿದು ನಿಜಲಿಂಗವನ್ನು ಕೂಡುವ ಬಗೆ ಹೇಗೆ ಎಂಬ ಸಿದ್ಧರಾಮನ ಪ್ರಶ್ನೆ ವಿಶೇಷ ಜ್ಞಾನಪೂರ್ಣವೂ ಕುತೂಹಲಕಾರಿಯೂ ಆದುದು.

'ಗುಹೇಶ್ವರ ಲಿಂಗದಲ್ಲಿ ನಿಜವನೆಯ್ದಿಹೆನೆಂದರೆ, ಕುರುಹುವಿಡಿದು ಕುರುಹು ಗೆಡಬೇಕು ಸಿದ್ಧರಾಮಯ್ಯ' ಎಂದು ಇಷ್ಟಲಿಂಗದ ಮಹತ್ವವನ್ನು ಮನದಟ್ಟು ಮಾಡಿಸಿ, ಕರಸ್ಥಲದ ಅನುವನ್ನು ಬಲ್ಲ ಬಸವಣ್ಣನವರ ಬಳಿಗೆ "ಬೆಸಗೊಂಬೆ ಬಾರಾ ಸಿದ್ಧರಾಮಯ್ಯ" ಎಂದು ಪ್ರಭು ಕರೆದಿರುವುದಂತೂ ಪ್ರಭಾವಪೂರ್ಣವಾಗಿದೆ.*

ಹೀಗೆ ಶೂನ್ಯ ಸಂಪಾದನೆಯಲ್ಲಿ ಅನುಭಾವದ ವಿಚಾರ ಆತ್ಮೀಯ ಶೈಲಿಯಲ್ಲಿ ಪರಿಸ್ಫುಟವಾಗಿದೆ. ವಾದ-ಸಂವಾದ ಸಂಗ್ರಹದ ವೈಶಿಷ್ಟ್ಯವಾಗಿದೆ. ಸಹಜ ತತ್ವಾನು ಭವ ವಚನಬೋಧೆಯ ಗುರಿಯಾಗಿದೆ.

### ಮುತ್ತಿನಂತಹ ಮಾತು

'ತನ್ನ ತಾನರಿದವಂಗೆ ಅರಿವೆ ಗುರು'
'ಮಾತೆಂಬುದು ಜ್ಯೋತಿರ್ಲಿಂಗ, ಸ್ವರವೆಂಬುದು ಪರತತ್ವ'
'ಶರಣ ನಡೆದರೆ ನಿರ್ಗಮನ, ನುಡಿದರೆ ನಿಶ್ಶಬ್ದ'
'ಚಿನ್ನವನೊರೆಯಬಹುದಲ್ಲದೆ, ಬಣ್ಣವನೊರೆಯಬಹುದೆ?'
'ಕುರುಹು ನಷ್ಟವಾದಲ್ಲದೆ ಮಾಯೆ ಹಿಂಗದು'
'ಉಂಟು, ಇಲ್ಲಾ ಎಂಬ ಸಂದೇಹ ನಿಂದಲ್ಲಿ ಗುಹೇಶ್ವರಲಿಂಗವು ತಾನೇ'

—ಚೈತನ್ಯವನ್ನು ಅರಳಿಸುವ ಈ ಬಗೆಯ ಮುತ್ತಿನಂತಹ ಮಾತುಗಳು ಶೂನ್ಯ ಸಂಪಾದನೆಯಲ್ಲಿ ಸಾಂದ್ರವಾಗಿವೆ. ಅಂತರಾತ್ಮನಿಂದಲೇ ಪ್ರೇರಿತವಾದ ವಾಣಿ ಅಂತ ರಂಗಕ್ಕೆ ಬಾರದಿರುವುದೇ ! ಲಿಂಗಸಂಗವನ್ನು ತಾರದಿರುವುದೇ !

### ಉಪಮೆ

'ಗಾಳಿಯೊಳು ಸುಳಿಗಾಳಿ ಬೆರೆದಂತೆ'
'ಸ್ಫಟಿಕದ ಘಟದಂತೆ'
'ಶಿಶು ಕಂಡ ಕನಸಿನಂತೆ'
'ಶರೀರದೊಳಡಗಿದ ಚೈತನ್ಯದಂತೆ'
'ಆಕಾಶದೊಳಡಗಿದ ಮಿಂಚಿನಂತೆ'
'ಕಬ್ಬುನ ಉಂಡ ನೀರಿನಂತೆ'
'ಅರಲುಗೊಂಡ ಕೆರೆಗೆ ತೊರೆ ಬಂದು ಹಾಯಿದಂತೆ'
'ಶಬ್ದದೊಳಗಣ ನಿಶ್ಶಬ್ದದಂತೆ'

---

* ಅರುಹಿನ ಕುರುಹು : ಚ. ಸುಂದರೇಶನ್, ಎಂ. ಎ. (ಬಸವತತ್ತ್ವ ಪರಿಮಳ)

ಈ ಬಗೆಯ ಉಪಮೆ ಕೆಲವೊಮ್ಮೆ ಮಾಲೆಮಾಲೆಯಾಗಿ ವಚನಗಳಲ್ಲಿ ಸುಳಿದಿವೆ. ಭಾವ ಪುಷ್ಟಿ ತಂದಿವೆ.

**ಬೆಡಗು**

ಬೆಡಗಿನ ವಚನಗಳಂತೂ ಸಂಕೇತ–ಪ್ರತಿಮೆಗಳ ಲೋಕವಾಗಿದೆ. ನಿದರ್ಶನಕ್ಕೆ:

"ಕೆಂಡದ ಗಿರಿಯ ಮೇಲೊಂದು ಅರಗಿನ ಕಂಭವಿದ್ದುದ ಕಂಡೆ.
ಅರಗಿನ ಕಂಬದ ಮೇಲೊಂದು ಹಂಸೆ ಇದ್ದುದ ಕಂಡೆ.
ಕಂಬ ಬೆಂದು ಹಂಸೆ ಹಾರಿತ್ತು ಗುಹೇಶ್ವರಾ"

ಜ್ಞಾನಾಗ್ನಿಶೈಲವೇ ಕೆಂಡದ ಗಿರಿ. ಕಾಯಭಾವವೇ ಅರಗಿನ ಕಂಬ. ಹಂಸೆ ಆತ್ಮದ ಸಂಕೇತ. ಜ್ಞಾನದಿಂದ ದೇಹಭಾವ ಅಳಿಸಿಕೊಂಡು ದ್ವೈತೀಭಾವ ತಳೆದಾಗಲೇ ಆತ್ಮ ದಿವ್ಯಾತ್ಮನನ್ನು ಸೇರಬಲ್ಲದು—ಎಂಬುದು ಈ ಬೆಡಗಿನ ವಚನದ ಪರಮಾರ್ಥ. ಲೋಕ–ಅಲೋಕಗಳ ಸಂಗತಿಗಳನ್ನು ಚಿತ್ರಮಯವಾಗಿ ಚಿತ್ತಕ್ಕೆ ತಂದಿದೆ ಈ ಬೆಡಗಿನ ವಚನ.

**ನುಡಿಯ ನುಣ್ಪು**

'ಹೂವ ಮುಡಿಯಬಹುದಲ್ಲದೆ ಗಂಧವ ಮುಡಿಯಬಹುದೆ'
'ಎನ್ನ ಮನದ ಕೊನೆಯ ಮೇಲೆ ಅಂಗವಿಲ್ಲದ ರೂಪನ ಕಂಡು ಬೆರಗಾದೆ,

**ಗಂಭೀರ ಭಾವ**

'ಸಚರಾಚರವೆಲ್ಲ ರಚನೆಗೆ ಬಾರದಂದು'
'ಗುಹೇಶ್ವರಾ, ಶರಣನುದಯಿಸಿದನಂದು'

**ಪ್ರಾಸವಿಲಾಸ**

'ಅಂಬರದಲಾಡುವ ತುಂಬಿಯು ಬಿಂಬದ ಕಂಬನಿಯೊಳಗಣ
'ರತ್ನದ ಬಯಕೆಯನು ಏನೆಂಬೆನಯ್ಯ'

—ಹೀಗೆ ಸಾಹಿತ್ಯಸೌಂದರ್ಯದ ಸಿರಿಚ್ಚಳ ಅನುಭವ ಶೂನ್ಯಸಂಪಾದನೆಯ ಅಧ್ಯಯನದಿಂದ ನಮಗೆ ಲಭ್ಯವಾಗುತ್ತಿದೆ.

**ಗದ್ಯದ ತುಣುಕುಗಳು***

ಶೂನ್ಯಸಂಪಾದನೆಯ ವಚನಗಳ ಅನುಭಾವದತ್ತ ಲಕ್ಷ್ಯವಿಡುವಾಗ, ಆ ವಚನಗಳ ನಡುವೆ ಸುಳಿದು ಬಂದಿರುವ ಸಂಪಾದನಕಾರರ ಗದ್ಯದ ತುಣುಕುಗಳನ್ನು ನಾವು

---

* ಈ ಸಂದರ್ಭದಲ್ಲಿಯೇ ಪ್ರತ್ಯೇಕವಾಗಿ ಸಿದ್ಧಪಡಿಸಿರುವ 'ಶೂನ್ಯ ಸಂಪಾದನೆಯ ಗದ್ಯದ ತುಣುಕುಗಳು,' ಎಂಬ ನನ್ನ ಲೇಖನದಲ್ಲಿ ಹೆಚ್ಚಿನ ಸಂಗತಿಗಳನ್ನು ತಿಳಿಸಲಾಗಿದೆ — ಲೇಖಕ.

ಸಾಮಾನ್ಯವಾಗಿ ಮರೆತು ಬಿಡುತ್ತೇವೆ. ಹಾಗೆ ಮರೆಯಬಾರದು ಎಂದು ನನ್ನ ಗ್ರಹಿಕೆ. ಚಂಪೂಕಾವ್ಯದ ನಡುವೆ ಗದ್ಯ ಸುಳಿ ತೆಗೆದಂತೆ, ವಚನಗಳಿಂದಲೇ ರೂಪಿತವಾದ ಈ ಗ್ರಂಥದಲ್ಲಿ ಗದ್ಯ ತನ್ನದೇ ಆದ ಗುಣವಿಶೇಷದಿಂದ ಬಳಕೆಯಾಗಿದೆ. ವಚನಗಳ ಹಿನ್ನೆಲೆ ಮುನ್ನೆಲೆಯ ಅರಿವಿಗೆ ಮಾತ್ರವಲ್ಲ, ಅಂದಂದಿನ ಸಾಮಾಜಿಕ–ಧಾರ್ಮಿಕ–ನೈತಿಕ ಸಂಪ್ರದಾಯದ ಮೌಲ್ಯಗಳ ದೃಷ್ಟಿಯಿಂದಲೂ,ಶೈಲಿಯ ಸೌಷ್ಠವ, ಸಂಪಾದನಕಾರರ ಪ್ರಜ್ಞೆ, ಪ್ರತಿಭೆಯ ದೃಷ್ಟಿಯಿಂದಲೂ ಶೂನ್ಯ ಸಂಪಾದನೆಯ ಗದ್ಯದ ತುಣುಕುಗಳು ಮಹತ್ವದ್ದೇ ಆಗಿವೆ.

'ಕಲ್ಲ ಮನೆಯ ಮಾಡಿ, ಕಲ್ಲ ದೇವರ ಮಾಡಿ
'ಆ ಕಲ್ಲು ಕಲ್ಲ ಮೇಲೆ ಕಡೆದರೆ ದೇವರೆತ್ತಹೋದರೋ
'ಗುಹೇಶ್ವರಾ, ನೀನು ಕಲ್ಲಾದರೆ ನಾನೇನಪ್ಪೆನಯ್ಯಾ ?

—ಹೀಗೆ ಅಲ್ಲಲ್ಲಿ ಹಾಸ್ಯ ಸುಳಿದಿದೆ.

'ಕೆರೆಯ ಕಟ್ಟುವ ಗುಡ್ಡಗಳೊಡನೆ ಒಡ್ಡರಾಮಯ್ಯನಿದ್ದಹನೇ ಎಂದು ಬೆಸಗೊಂಬ' ಪ್ರಸ್ತಾವದ ಈ ವಚನದಲ್ಲಿ ವಿಡಂಬನೆ ಕಂಡು ಬಂದಿದೆ.'ಗುರುವಿನ ಚೈತನ್ಯ ಲಿಂಗದಲ್ಲಿ ಅಡಗಿತ್ತು. ಆ ಲಿಂಗವೆನ್ನ ಕರಸ್ಥಲಕ್ಕೆ ಬಂದಿತ್ತು. ಇಂತಹ ಘನಭಾವಗಳೂ ಈ ಗದ್ಯದಲ್ಲಿ ಹೊಮ್ಮಿ ಹೊಳೆದಿವೆ.

'ಬೆಸಗೊಂಬ ಪ್ರಸ್ತಾವದ ವಚನ, ಬಿನ್ನೈಸುತಿರ್ದ ಪ್ರಸ್ತಾವದ ವಚನ, ಉತ್ತರ, ಕೊಟ್ಟ ಪ್ರತ್ಯುತ್ತರ, ಬಿನ್ನಹ, ಪರಮಾರ್ಥ ಸೂಚಕವಾಗಿ ನಿರೂಪಿಸಿದ ಪ್ರಸ್ತಾವದ ವಚನ, ಮತ್ತಂ, ಪರಾಮರಿಕೆ, ಅದೆಂತೆಂದೊಡೆ, ಮಹಾನುಭಾವದ ವಾಕ್ಯವೆಂತಿದ್ದುದೆಂದರೆ ಇತ್ಯಾದಿ ರೂಪದಲ್ಲಿ ಗದ್ಯದ ಕೊಂಡಿಗಳು ಶೂನ್ಯ ಸಂಪಾದನೆಯಲ್ಲಿ ಕಾಣಿಸಿವೆ. ವಚನಗಳ ಸಂಬಂಧ ಕಲ್ಪನೆಗೆ, ಕಥಾಸಾಂಗತ್ಯಕ್ಕೆ ಇವು ಪೋಷಕವಾಗಿವೆ. ಸಂಕ್ಷಿಪ್ತತೆ, ಸಮಗ್ರತೆಯನ್ನು ಸಾಧಿಸಿವೆ. ವಿಶಿಷ್ಟ ದೃಷ್ಟಿಯಿಂದ ಅಧ್ಯಯನ ಮಾಡಿದಾಗ ಈ ಗದ್ಯದ ತುಣುಕುಗಳ ಬೆಲೆಯ ಅರಿವು ನಮಗೆ ಮನದಟ್ಟಾಗುತ್ತದೆ.

## ಬಯಲಿನೊಳಗಣ ಬಯಲಗಳಿಕೆ

[illegible] ಅದಕ್ಕೆ ಆಧಾರ ಏನೇನೂ ಇಲ್ಲದೆ ತಾನೇ ತಾನಾದ ನಿರಾಳ ಸಹಜ ಚೈತನ್ಯವಲ್ಲದೆ ಬೇರಿಲ್ಲ. ಆ ನಿರಾಲಂಬ ಚೈತನ್ಯವು

"ಭೂಮಿಯೊಳಗಿಲ್ಲ
ಆಕಾಶದೊಳಗಿಲ್ಲ
ಚತುರ್ದಶ ಭುವನದೊಳಗಿಲ್ಲ

ಹೊರಗಿಲ್ಲ
ಏನೆಂದರಿಯರು
ಎಂತೆಂದರಿಯರು ಹೇಳಯ್ಯ
ಕೃತಯುಗದಂದಿನ ಮಾತು ಬೇಡ.
ಗುಹೇಶ್ವರಾ, ಅಂದೂ ಇಲ್ಲ; ಇಂದೂ ಇಲ್ಲ.

"ಆದಿ ಅನಾದಿ ಇಲ್ಲದಂದು
ಹಮ್ಮು ಬಿಮ್ಮುಗಳಿಲ್ಲದಂದು
ಸುರಾಳ ನಿರಾಳವಿಲ್ಲದಂದು
ಶೂನ್ಯ ನಿಃಶೂನ್ಯವಿಲ್ಲದಂದು
ಸಚರಾಚರವೆಲ್ಲ ರಚನೆಗೆ ಬಾರದಂದು
ಗುಹೇಶ್ವರನೊಬ್ಬನೇ ಇದ್ದಿಯಲ್ಲ
ಇಲ್ಲದಂತೆ" —ಪ್ರಭುದೇವರು.

—ಆ ಪರಮೋಚ್ಚ ಸ್ಥಿತಿಯಲ್ಲಿ ಶಬ್ದಕ್ಕೆ ಇಂಬಿಲ್ಲ; ಅನ್ವೇಷಣೆಗೆ ಎಡೆಯಿಲ್ಲ.

"ಏನೆಂದಲಿಲ್ಲದ ಬಯಲು
ಅಲ್ಲಿ ಏನನೂ ಅರಸಲಿಲ್ಲ
ಇದಿರಿಲ್ಲ, ತಾನಿಲ್ಲ
ಚಿಕ್ಕಯ್ಯಪ್ರಿಯ ಸಿದ್ಧಲಿಂಗಾ
ಇಲ್ಲ, ಇಲ್ಲ —ಘಟ್ಟಿವಾಳಯ್ಯನವರು.

—ಮೂಲಚೈತನ್ಯವೊಂದು ಇದೆ; ಇರುವ ಚೈತನ್ಯದ ಅರಿವನ್ನು 'ಇಲ್ಲ' ಎಂಬುದರ ಮೂಲಕ ಶರಣರು ಧ್ವನಿಸಿದ್ದಾರೆ: ಬೆಡಗಿನಿಂದ ವಚನಿಸಿದ್ದಾರೆ.

ಶೂನ್ಯವೆಂದರೆ ಏನೂ ಇಲ್ಲ ಎನ್ನುವುದಲ್ಲ. ಎಲ್ಲವೂ ಸೇರಿಕೊಂಡಿದೆ ಎಂಬುದು. ವ್ಯಕ್ತವಾಗಿಲ್ಲ. ಅವ್ಯಕ್ತವಾಗಿ ಉಂಟು. ಅವ್ಯಕ್ತವನ್ನೂ ಮೀರಿ ಇನ್ನೊಂದು ಸನಾತನ ಅವ್ಯಕ್ತಭಾವವುಂಟು. ಸಮಸ್ತವು ನಾಶವಾದರೂ ಆ ಸನಾತನ ಅವ್ಯಕ್ತಭಾವಕ್ಕೆ ಚ್ಯುತಿ ಇಲ್ಲ.*

"ಉಂಟು" ಎಂಬುದರಲ್ಲಿ 'ಇಲ್ಲ' ಎನ್ನುವುದೂ ಇದೆ. ಜಡತ್ವವಿಲ್ಲ, ಚೇತನ ಉಂಟು ಎಂದರ್ಥ 'ಇಲ್ಲ' ಎಂಬುದರಲ್ಲಿ ಉಂಟಾದುದರ ಭಾವವಿದೆ. ಹಾಲಿನಲ್ಲಿ

---

* ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ ।
ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥
— ಭಗವದ್ಗೀತಾ. ಅಧ್ಯಾಯ ೮. ಶ್ಲೋಕ ೨೦

ತುಪ್ಪ ವ್ಯಕ್ತವಾಗಿಲ್ಲ. ಅವ್ಯಕ್ತವಾಗಿ ಉಂಟು. ದೃಷ್ಟಿಯಲ್ಲಿ ಇಲ್ಲ; ಕಾರಣ ನಿರಾಕಾರವಾಗಿಪ್ಪುದಾಗಿ ಅರಿವಿನ ದೃಷ್ಟಿಯಲ್ಲಿ ಉಂಟು. 'ಇಲ್ಲ'- ಎಂಬುದನ್ನೇ ಶೂನ್ಯ ಎಂದಿದ್ದಾರೆ ಶರಣರು ಅಖಂಡ ಪರವಸ್ತುವನ್ನು ನಿರ್ದೇಶಿಸಿದೆ ಈ ಶಬ್ದ. ಇದು ಶರಣರ ಹೊಸ ನೋಟ.

ಶೂನ್ಯಸಂಪಾದನೆ; ವಿಲಕ್ಷಣವಾದರೂ ವಿಶಿಷ್ಟಪದ ಇಲ್ಲದುದರ ಸಂಪಾದನೆ ಇದು ನಿಜಕ್ಕೂ ದೊಡ್ಡ ವಿಚಾರ. ಬೆರಗುಗೊಳಿಸುವ ಶರಣರ ಬೆಡಗಿನ ಬೆಳಗಿನ ಮಾತಿದು. ಶೂನ್ಯ ಎಂದರೆ ಅಭಾವವಲ್ಲ; ಸರ್ವವನ್ನೂ ಒಳಗೊಂಡ ಪರಿಪೂರ್ಣ ಭಾವ. ಅಖಂಡ—ಸಹಜದತ್ತಣ ಭಾವ. ಶೂನ್ಯಸಂಪಾದನೆ— ಎಂದರೆ ಶೂನ್ಯ ದಲ್ಲಿ ಅಡಗಿರುವ ನಿಜತತ್ತ್ವದ ಸಂಪಾದನೆ; ಬಯಲಿನೊಳಗಣ ಬಯಲಗಳಿಕೆ.

———

## ನಿರ್ವಾಣ ಶಿವಯೋಗಿ ನಮೋ ನಮೋ

ನಮೋ ನಮೋ ನಿರ್ವಾಣಶಿವಯೋಗಿ । ನಮೋ ನಮೋ ॥ ಪಲ್ಲವಿ ॥

ಶತಮೂರು ವರುಷಗಳು । ಹಿತದಿಂದ ಲೀಲೆಯೊಳಗೆ
ಸತತ ಭಕ್ತರ ಪೊರೆದ । ಯತಿ ವರ್ಯರೆ ॥
ಸಂತತವು ನಿಮ್ಮನುಡಿ । ನಡೆಗಳನೆ ಕರುಣಿಸುತೆ
ಕ್ಷಮೆಯು ತೋರಿದ ಪ್ರಭುವೆ । ನಮೋ ನಮೋ ॥

ಶಿವಭಕ್ತಿ ಮಾರ್ಗವನು । ಅನುದಿನದ ಕ್ರಿಯೆಗಳನು
ಶಿವಭಕ್ತರೆಲ್ಲರಲಿ । ಅನುನಯದಿ ತುಂಬಿ
ಶಿವ ತತ್ತ್ವದರಿವಿಂದ । ಲಿಂಗಾಂಗ ಸಮರಸವ
ಅತಿಶಯದಲರುಹಿದ । ಪ್ರಭುವೇ ನಮೋ ॥

ಭಕ್ತಿ ಜ್ಞಾನ ವೈರಾಗ್ಯ । ಚಿತ್ತದಲಿ ಅಳವಡಿಸಿ
ಇಚ್ಛೆಯರಿತು ಭಕುತರ । ಅನವರತವು
ಸಚ್ಚಿದಾನಂದದ ! ನಿಜ ಸುಖದ ಅರಿವನು
ನೆರೆತೋರಿ ಮೆರೆಸಿದ । ಪ್ರಭುವೆ ನಮೋ ॥

ಇಂತು ನಿನ್ನುತ್ಸವದ । ಸವಿನೋಟದಾನಂದ
ಕ್ಷಣ ಕ್ಷಣಕು ಮಿಗಿಲಾಗಿ । ಮುಟ್ಟುತಿರೆ ಗಗನ
ಕಾಯವಳಿದರು ಆತ್ಮ । ಜ್ಯೋತಿ ಬೆಳಗುತಲಿಹುದು
ನಿರ್ವಾಣ ಶಿವಯೋಗಿ । ನಮೋ ನಮೋ ॥

—**ಎನ್. ಚನ್ನಬಸಪ್ಪ,** ಬೆಂಗಳೂರು

# ಗುರು-ಶಿಷ್ಯ ಸಾಮರಸ್ಯ*

● **ಡಾ॥ ಸಾ. ಶಿ. ಮರುಳಯ್ಯ,** ಎಂ. ಎ., ಪಿ.ಎಚ್‌ಡಿ
ಬೆಂಗಳೂರು

ಅಣ್ಣನ ಸಾಧನೆಗಳು ಹಲವು; ಸಿದ್ಧಿಗಳು ಕೆಲವು, ಬಿತ್ತಿದ ಬೀಜವೆಲ್ಲಾ ಸಸ್ಯವಾಗಲು ಸಾಧ್ಯವಿಲ್ಲ: ಸಸ್ಯವಾದರೂ ಫಲಕೊಟ್ಟೀತೆಂಬ ಭರವಸೆಯೂ ಇಲ್ಲ. ಅದೇ ರೀತಿ, ಅಣ್ಣನಷ್ಟೇ ಏಕೆ, ಈ ವಿಶ್ವಜಗತ್ತಿನ ಯಾವ ಧರ್ಮ ಸಂಸ್ಥಾಪಕ, ಪ್ರಚಾರಕ, ಪ್ರವಾದಿಯೇ ಆಗಲಿ, ಆತನ ಎಲ್ಲ ಕನಸೂ ನನಸಾಗುವುದಿಲ್ಲ, ಆಗಬಾರದು. ಏಕೆಂದರೆ ಮುಂದಿನ ಅವತಾರ, ಆವಿರ್ಭಾವಗಳಿಗೆ ಅವಕಾಶವೇ ಇಲ್ಲದಂತಾಗುತ್ತದೆ! ಎಲ್ಲ ಕೊಳೆಯನ್ನೂ ಒಬ್ಬನೇ ತೊಳೆದರೆ ಮುಂದಿನ ಜಲಗಾರನಿಗೆ ಜಾಗವೆಲ್ಲಿ? ಜಗದ ಜಲಗಾರರಾಗಿ ಬರುವ ವಿಭೂತಿಗಳಿಗೆ ಕೆಲಸ ಇಲ್ಲದಂತಾಗಬಹುದು. ಕೊಳೆ ತುಂಬುವುದು ಈ ಜಗದ ಜಾಯಮಾನ, ಅದನ್ನು ತೊಳೆದು ತಾತ್ಕಾಲಿಕವಾಗಿಯಾದರೂ ಶುದ್ಧಗೈಯುವುದು ಆ ಜಗತ್ ಜಲಗಾರನ ಕರ್ತವ್ಯ. ಜೀವ-ದೇವರಿಗೆ ಈ ಬಾಂಧವ್ಯ ಬಲ್ಲವತ್ತರವಾಗಿರುವುದರಿಂದಲೇ

ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ"

—ಎಂಬ ಪರಮಾತ್ಮನ ಅಭಯವಾಣಿ ತನ್ನ ಆಶೀರ್ವಾದ ಮುದ್ರೆಯ ಹಸ್ತವನ್ನೆತ್ತಿ ಧೈರ್ಯ ತುಂಬುತ್ತಿರುವುದು, ಇರಲಿ.

ಸದಾ ಮಾನವಕೋಟಿಯ ಮಂಗಳವನ್ನೇ ಬಯಸಿ, ಅದಕ್ಕಾಗಿ ತನ್ನ ಬದುಕನ್ನೇ ಮುಡಿಪಿಟ್ಟ ಅಣ್ಣ, ತನ್ನ ಸಾಧನೆಯ ಸೋಪಾನದಲ್ಲಿ ಹತ್ತಿದ ಮೆಟ್ಟಿಲುಗಳೆಷ್ಟು ? ಅವರಿಂದಾಗಿ ಅವನ ವ್ಯರ್ಥ ಶ್ರಮ ಎಷ್ಟು ? ಅರ್ಥಸಿದ್ಧಿ ಎಷ್ಟು ? ಎಂಬುದನ್ನು ವಿವೇಚಿಸುವ ಅಗತ್ಯವಿದೆ ಇಂದು. ಕಾರಣ, ಬಾಪೂ, ಕ್ರಿ. ಶ. ೨೦ ನೆಯ ಶತಮಾನದಲ್ಲಿ ಕಂಡ ಕನಸನ್ನೇ, ಅಣ್ಣನೂ ಕಂಡಿದ್ದ ೧೨ರಶತಾಬ್ದಿಯಲ್ಲಿ. ಆದರೆ ಇಬ್ಬರಿಗೂ ಆದ ಸೋಲು ಹಲವು. ಗೆಲುವು ಕೆಲವು. ಮೊದಲೇ ತಿಳಿಸಿದಂತೆ ಈ ಸೋಲು ಅನಿವಾರ್ಯ; ಅತ್ಯಗತ್ಯ.

---

* ಡಾ॥ ಆರ್. ಸಿ. ಹಿರೇಮಠರವರು ಸಂಪಾದಿಸಿ ಕೊಟ್ಟ 'ಮುಕ್ತಿ ಕಂಠಾಭರಣ, ಕೃತಿಯ ಆಧಾರದಿಂದ

ಈ ದಿಸೆಯಲ್ಲಿ ಗಮನಿಸಿದಾಗ, ಅಣ್ಣ ಮಹತ್ತರ ಸಾಧನೆಯನ್ನೇ ಮಾಡಿತೋರಿರುವುದು ಕಂಡುಬರುತ್ತದೆ. 'ಲೋಕದ ಡೊಂಕ ನೀವೇಕೆ ತಿದ್ದುವಿರಿ ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ, ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ' ಎಂದು ಹೇಳಿಕೊಂಡೇ ಸಮಾಜ ಸುಧಾರಣೆಯ ಮಹಾ ಯಜ್ಞಕ್ಕೆ ಕೈಹಾಕಿದ್ದಾನೆ. ಸಮಾಜದಲ್ಲಿ ಸ್ತ್ರೀಗೆ ಸಮಾನತೆಯನ್ನು ದೊರಕಿಸಿಕೊಟ್ಟದ್ದು; ಅಂತೆಯೇ ಅವಳ ಆತ್ಮ ಪರಮಾತ್ಮನಲ್ಲಿ ಐಕ್ಯತೆ ಪಡೆಯಲು ಅರ್ಹವೆಂಬುದನ್ನು ತೋರಿಸಿಕೊಟ್ಟು, ಅವಳ ಮುಕ್ತಿಗೆ ಮಹಾ ಮಾರ್ಗವನ್ನು ಏರ್ಪಡಿಸಿದ್ದು; ಎರಡನೆಯದಾಗಿ ಸಮಾಜದಲ್ಲಿದ್ದ ಉಚ್ಚ ನೀಚ ಭಾವನೆಯ ಕೊಚ್ಚೆಯನ್ನು ತೊಡೆದುಹಾಕಹೊರಟದ್ದು; ಮೂರನೆಯದಾಗಿ, ಕಾಯಕದ ಮಹತ್ವವನ್ನು ಜನತೆಯ ಮುಂದಿಟ್ಟು, ದುಡಿಮೆಯನ್ನು ಕಲಿಸಿ, ಸ್ವಾವಲಂಬಿಗಳಾಗುವಂತೆ ಪ್ರೇರೇಪಿಸಿದ್ದು; ನಾಲ್ಕನೆಯದಾಗಿ, ಸತ್ಯ, ಧರ್ಮ, ದಯೆಗಳಿಂದ ಶಿವ ಸಾಕ್ಷಾತ್ಕಾರ ಪಡೆಯಲು ಸಾಧ್ಯ. ಅದಕ್ಕೆ ಭಕ್ತಿಯೆಂಬುದು ಅದ್ಭುತ, ಅಮೋಘಶಕ್ತಿ ಆ ಶಕ್ತಿಯನ್ನು ಸರ್ವರ ಸ್ವತ್ತಾಗಿಸಲು ಯತ್ನಿಸಿದ್ದು. ಇವುಗಳಿಗೆ ಆನುಷಂಗಿಕವಾಗಿ ಏಕದೇವೋಪಾಸನೆ, ಸಾಹಿತ್ಯಾರಾಧನೆ, ನುಡಿಶುದ್ಧಿ, ನಡೆಶುದ್ಧಿ ಇತ್ಯಾದಿಗಳೂ ಅನುಷ್ಠಾನಕ್ಕೆ ತರಲ್ಪಟ್ಟಿವೆ. ಆದರೆ ಇವೆಲ್ಲ ಸಾಧನೆಗಳಿಗೂ ಕಿರೀಟಪ್ರಾಯವಾದ ಸಾಧನೆಯೆಂದರೆ 'ಅನುಭವ ಮಂಟಪ' ದ ಪ್ರತಿಷ್ಠಾಪನೆ. ಅಣ್ಣ, ತನ್ನ ಕನಸಿನ ಕನ್ನಡಿಯಾಗಿದ್ದ ಕಲ್ಯಾಣದಲ್ಲಿ ಮಧುವನದ ಮಧ್ಯದಲ್ಲಿ ಒಂದು ಆಧ್ಯಾತ್ಮ 'ಅಕಾಡೆಮಿ' ಯನ್ನು ಆರಂಭಿಸಿದ. ಅದೇ 'ಅನುಭವ ಮಂಟಪ'. ಅನುಭಾವಿಗಳು, ಶರಣ ಶರಣೆಯರು ಒಂದೆಡೆ ಸೇರಿ ಆತ್ಮ-ಪರಮಾತ್ಮರ ಬಗೆಗೆ, ಬದುಕು ಬಯಲುಗಳ ಬಗೆಗೆ, ಸೃಷ್ಟಿ–ಸಂವರ್ಧನೆಗಳ ಬಗೆಗೆ, ನಿತ್ಯ ಜಿಜ್ಞಾಸೆ ನಡೆಯುವ ವೇದಿಕೆಯಾಯಿತು ಅನುಭವ ಮಂಟಪ. ಅಲ್ಲಿ ಸ್ಥಾಪಿತವಾದದ್ದು ಶೂನ್ಯ ಸಿಂಹಾಸನ. 'ಶೂನ್ಯ' ಎಂದರೆ ಏನೂ ಇಲ್ಲವೆಂದರ್ಥವಲ್ಲ, ಎಲ್ಲವನ್ನೂ ಒಳಗೊಂಡದ್ದು ಎಂದು. ಅದಕ್ಕೆ ಆತ್ಮ ವಿಕಾಸದ ಆರು ಮಜಲುಗಳೇ– ಅಂದರೆ ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಟ್‌ಸ್ಥಲಗಳೇ- ಸೋಪಾನಗಳು. ಅದರ ಮೇಲೆ ಮಂಡಿತನಾದ ಮಹಾಪುರುಷ, ಪರಮ ವೈರಾಗ್ಯನಿಧಿ, ವ್ಯೋಮ ಮೂರುತಿ, ಪರಶಿವನ ಪ್ರಾತಿಭ ಜ್ಯೋತಿಯ ಪ್ರತ್ಯಕ್ಷ ರೂಪ ಪ್ರಭುದೇವ. ಆ ಪ್ರಭುವಿನ ಪದ ತಲದಲ್ಲಿ ಅಸಂಖ್ಯಾತ ಶಿವಶರಣರು, ಶರಣೆಯರು. ಅಲ್ಲಿ ಹೆಣ್ಣು ಗಂಡೆಂಬ ಭೇದವಿಲ್ಲ, ದೀನ–ಧನಿಕನೆಂಬ ತಾರತಮ್ಯವಿಲ್ಲ, ಉತ್ತಮ-ಅಧಮ- ಎಂಬ ಜಾತಿ ಸೂತಕವಿಲ್ಲ, ಆಳು–ಅರಸ ಎಂಬ ಅಸಂಬದ್ಧಸ್ವರಗಳೂ ಇಲ್ಲ. ಸರ್ವರೂ ಸಮಾನರು; ಭಕ್ತಿ ಜ್ಞಾನ, ವೈರಾಗ್ಯ, ಮುಕ್ತಿ, ಮಾತು ಇವೆಲ್ಲವೂ ಸರ್ವರ ಸ್ವತ್ತುಗಳು, ಸರ್ವರೂ ಸ್ವತಂತ್ರರು. ತಮ್ಮ ಅಭಿಪ್ರಾಯನನ್ನು ನಿರ್ಭೀತರಾಗಿ ಮುಂದಿಡಬಹುದಿತ್ತು. ಅಲ್ಲಿ ನಡೆಯುತ್ತಿದ್ದ ನಿತ್ಯ ಸಂಭಾಷಣೆ ಒಂದು ಮಹಾ ಸಂಪುಟ. ಅದೇ ಶೂನ್ಯ ಸಂಪಾದನೆ. ಈ ಶೂನ್ಯ ಸಂಪಾದನೆಯ ಮತ್ತೊಂದು ರೂಪು

ಮುಕ್ತಿಕಂಠಾಭರಣ'. ಇವು ಮಹಾನುಭಾವಿಗಳು ಅಂದು ನಡೆಸಿದ ಗೋಷ್ಠಿಯ ಚರ್ಚೆ ಪ್ರತಿ ಚರ್ಚೆ, ವಿಚಾರವಿನಿಮಯ, ಸಮಸ್ಯೆಗಳ ಮಂಡನೆ, ಅವುಗಳಿಗೆ ಸೂಕ್ತ ಪರಿಹಾರ–ಇತ್ಯಾದಿ ಗೊತ್ತುವಳಿಗಳ ಮುಕ್ತಾವಳಿ ಈ ಬೃಹದ್ ಗ್ರಂಥಗಳು. ವಚನ ವಿನ್ಯಾಸದ ವಿಶಿಷ್ಟರೂಪ ಕೊಟ್ಟು, ನಮ್ಮ ಹೃದಯ ಪ್ರವೇಶ ಮಾಡಿಸಿ, ಅಲ್ಲಿ ಕಾಂತಿ ಬೆಳಗುವಂತೆಸಗಿದರು ನಮ್ಮ ಶರಣರು. ಆ ಶರಣ ವಾಣಿಯ ಮಹಾವಾರ್ಧಿಯಲ್ಲಿ ಮುಕ್ತಿಕಂಠಾಭರಣದ ಸಂವಾದ, ಸಂಭಾಷಣೆಗಳು ಒಂದು ಪುಟ್ಟ ಪ್ರತಿಕೆ. ಇದರಿಂದ ಆರಿಸಿ ತೆಗೆದ ಭಾಗ 'ಗುರು–ಶಿಷ್ಯ ಸಾಮರಸ್ಯ ! ಅನುಭವ ಮಂಟಪದ ಅಪಾರವಾರ್ಧಿಯಲ್ಲಿ, ಗುರು ಮತ್ತು ಶಿಷ್ಯ, ಇವರಿಗಿರುವ ಬಾಂಧವ್ಯ ಎಂಥದು ಎಂಬ ಚರ್ಚೆ ಒಂದು ಹನಿ. ಈ ಬಿಂದುವಿನಲ್ಲೇ ಸಿಂಧುವಿನಶಕ್ತಿ, ಸತ್ತ್ವಗಳು ಅಡಗಿರುವುದು ಸಹಜ. ಇದರ ಸ್ಥೂಲ ವಿವೇಚನೆ ಇಲ್ಲಿದೆ.

೨

ಮುಕ್ತಿಕಂಠಾಭರಣದ ಪ್ರಥಮ ಪ್ರಕರಣವೇ 'ಗುರುಪ್ರಶಂಸೆ' ಅನುಭವ ಮಂಟಪದಲ್ಲಿ ಶೂನ್ಯಸಿಂಹಾಸನಾಧೀಶನಾದ ಅಲ್ಲಮಪ್ರಭುವಿನ ಸಮ್ಮುಖದಲ್ಲಿ ಮೊದಲು ವಿಚಾರ ಮಂಡಿಸಿದವನು ಸಿದ್ಧರಾಮಯ್ಯ:

ಗುರುವೆ ಘನವೆಂದು, ಗುರುವಿನಿಂದಲೆ ಕೈವಲ್ಯವೆಂದು
ಸಾರುತ್ತೈದಾವೆ ನೋಡಾ, ಸಕಲಾಗಮ ನಿಗಮಂಗಳು.
ಗುರುವೆ ಪರಪಾತಕ ಪರಿಹಾರನು, ಗುರುವೆ ಪರಮಾನಂದದಾಯಕನು
ಗುರುವೆ ಶ್ರೀಗುರು ಕಪಿಲಸಿದ್ಧ ಮಲ್ಲಿಕಾರ್ಜುನ ಮಹಾಲಿಂಗವು
ಶ್ರೀಗುರುವೇ ನಮೋ ನಮಃ

ಗುರು ದೊಡ್ಡವನು; ಗುರುವೇ ಕೈಲಾಸ. ಅವನು ಗಂಗೆಯಂತೆ ಪಾವನ; ಅಗ್ನಿಯಷ್ಟು ಪರಿಶುದ್ಧ. ಅದ್ದರಿಂದಲೇ ತಾನು ಶುದ್ಧನಾಗಿ ಶಿಷ್ಯರನ್ನೂ ಶುದ್ಧಗೊಳಿಸಬಲ್ಲ: ತಾನೇ ಆನಂದ, ಅದರಿಂದಾಗಿ ಪರಮಾನಂದವನ್ನೀಯಬಲ್ಲ ತನ್ನ ಭಕ್ತ ಸಮೂಹಕ್ಕೆ. ಅಂತೆಯೇ ಅವನು ಕಪಿಲಸಿದ್ಧ ಮಲ್ಲಿಕಾರ್ಜುನ ! ಅಂದರೆ ಸಾಕ್ಷಾತ್ ಪರಶಿವನೇ ಆಗಿದ್ದಾನೆ. ಜಟ್ಟಿನಲ್ಲಿ ಗುರು ಹಿರಿಯ ವ್ಯಕ್ತಿ; ಆತನಿಂದಲೇ ಸಕಲ ಶುಭಗಳೂ ಸಾಧ್ಯ ಎಂಬುದು ಶಿವಯೋಗಿ ಸಿದ್ಧರಾಮನ ಅಭಿಮತ.

ಅದಕ್ಕೆ ಶೂನ್ಯ ಸಿಂಹಾಸನದ ಅಧ್ಯಕ್ಷ ಪೀಠದಿಂದ ಉತ್ತರ ಬಂತು—

ಶಿಷ್ಯನ ಭಾವ ಬಲಿದಲ್ಲದೆ ಗುರುವು ಘನವಾಗಲರಿಯ
ಶಿಷ್ಯನಾಸ್ಥೆಕೆ ಗುರುವಿನ ಗುರುತ್ವಕ್ಕೆ ಕಾರಣವೈಸೆ ?
ಅರಿತ ಶಿಷ್ಯನ ಘನತೆ ಘನವಲ್ಲದೆ.

ಗುರುವಿನ ವಿಸ್ತಾರವಾರನೊಳಕೊಂಬುದು
ಗುಹೇಶ್ವರ ಶರಣ ಸಿದ್ಧರಾಮಯ್ಯ ?

—ಗುರುವಿಗೆ ಗುರುತ್ವ ಉಂಟಾಗುವುದು ಶಿಷ್ಯನಿಂದ. ಶಿಷ್ಯನೇ ಇಲ್ಲದಿದ್ದಲ್ಲಿ 'ಗುರು' ಎಂಬ ಶಬ್ದವಾದರೂ ಜಗತ್ತಿನಲ್ಲಿರಲು ಸಾಧ್ಯವೆ ? ಶಿಷ್ಯನಲ್ಲಿ ಬೆಳೆದ ಭಕ್ತಿ ಭಾವ ಗುರುವಿಗೆ ಮಹತ್ವವನ್ನೀಯುವ ಅಜೇಯ ಶಕ್ತಿ. ಗುರುವಿನ ಆಶೀರ್ವಾದ ಶಿಷ್ಯನ ಶ್ರೇಯಸ್ಸಿಗೆ ಎಷ್ಟು ಮುಖ್ಯವೋ ಅಷ್ಟೇ ಮುಖ್ಯ ಶಿಷ್ಯನ ಆರೈಕೆ ಗುರುವಿನ ಗುರುತ್ವಕ್ಕೆ. ಶಿಷ್ಯ ಜ್ಞಾನಿಯಾದರೆ, ಕೀರ್ತಿವಂತನಾದರೆ ಅದರ ಶ್ರೇಯಸ್ಸು ಶ್ರೀಗುರುವಿಗೆ ಸೇರಿದ್ದು*

ಪ್ರಭುವಿನ ಈ ವಾದಕ್ಕೆ ಸಿದ್ಧರಾಮನ ಉತ್ತರ 'ಶಿಷ್ಯನ ಭಾವ ಬಲಿಯುವ ಕಾರ್ಯ ಗುರುವಿನುಪದೇಶದಿಂದಲ್ಲದೆ ತನ್ನ ತಾನರಿಯ' ಎಂದು. ಅಂದರೆ ಶಿಷ್ಯನ ಭಾವ ಬಲಿಯುವುದಕ್ಕೆ ಗುರೂಪದೇಶವೇ ಕಾರಣ. ನಿದರ್ಶನವಾಗಿ ಸಿದ್ಧರಾಮ ದೀಪ ಮತ್ತು ಜ್ಯೋತಿಗಳಿಗಿರುವ ಸಂಬಂಧವನ್ನು ಹೇಳುತ್ತಾನೆ.

ಉರಿಯುವುದು ದೀಪ, ಉರಿಸುವವನು ಪುರುಷ ಅಂದರೆ ಬೆಳಗುವವನು ಶಿಷ್ಯ ಬೆಳಗಿಸುವವನು ಗುರು. ಆದ್ದರಿಂದ ಗುರುವೇ ಮುಖ್ಯ ಎಂಬುದು ಸಿದ್ಧರಾಮನ ವಾದ. ಹೌದು; ಬೆಳಕು ನೀಡುವವನು ಗುರುವೇ ಆದರೂ ಆ ತೇಜವನ್ನು ಗ್ರಹಿಸಿ, ತನ್ನದನ್ನಾಗಿ ಮಾಡಿಕೊಂಡು, ತನ್ನತನವನ್ನು ಪ್ರಕಟಿಸುವ ಸಾಮರ್ಥ್ಯ ಇರುವುದು ಶಿಷ್ಯನಲ್ಲಿ ಅಂದ ಬಳಿಕ 'ಗುರು ಘನವಲ್ಲ' ಎಂಬ ತೀರ್ಪು ಪ್ರಭುವಿನದು.

ಪ್ರಭುವಿನ ಮಾತಿನಲ್ಲಿ ಮಹತ್ವದ ಅರ್ಥವಿದೆ. ಶಿಷ್ಯನೆಂಬುವನು ಒಂದು ಕಾವ್ಯ ಇದ್ದಂತೆ. ಕಾವ್ಯದ ಸ್ವರೂಪ–ನಮ್ಮ ಆಲಂಕಾರಿಕ ಮಮ್ಮಟ ಹೇಳುವಂತೆ– 'ಅನನ್ಯ ಪರತಂತ್ರ' ವಾದದ್ದು. ಶಿಷ್ಯನೂ ಅಷ್ಟೇ. ಗುರೂಪದೇಶ, ತಾನು ಪಡೆದ ಸಂಸ್ಕಾರ–ಸಂಸ್ಕೃತಿಗಳಿಗೆ ಋಣಿ. ಆದರೆ ಅವೆಲ್ಲವನ್ನೂ ತನ್ನವನ್ನಾಗಿಸಿ ಕೊಂಡ ಶಕ್ತಿ ಅವನದು. ನೀರು, ಗೊಬ್ಬರ, ಮಣ್ಣು ಎಲ್ಲದರ ಸಾರಹೀರಿ ಸಸ್ಯದಲ್ಲಿ

---

* ಒಂದು ವೇಳೆ ಶಿಷ್ಯ ದ್ರೋಹಿಯಾದರೆ, ಅವನ ಪಾಪದ ತಾಪ ತಟ್ಟುವುದು ಗುರುವನ್ನೇ ಹೊರತು ಶಿಷ್ಯನನ್ನಲ್ಲ, ಅವನ ಬಂಧುಮಿತ್ರರನ್ನೂ ಅಲ್ಲ. ಇದನ್ನೇ ಭಾಸ ಮಹಾಕವಿ ತನ್ನ ಪಂಚರಾತ್ರದಲ್ಲಿ, ಆಚಾರ್ಯ ದ್ರೋಣರ ಬಾಯಲ್ಲಿ ಶಿಷ್ಯನ ಗುಣ ದೋಷಗಳಿಗೆ ಗುರು ಹೇಗೆ ಭಾಗಿ ಎಂಬುದನ್ನು ತೋರಿಸಿ ಕೊಟ್ಟಿದ್ದಾನೆ.

ಅತೀತ್ಯ ಬಂಧೂನ್, ಅವಲಂಘ್ಯ ಮಿತ್ರಾಣಿ
ಆಚಾರ್ಯ ಮಾಗಚ್ಛತಿ ಶಿಷ್ಯದೋಷಃ ॥

(ಶಿಷ್ಯನ ದೋಷ ಅವನ ಬಂಧುಗಳಿಗಲ್ಲ, ಅವನ ಮಿತ್ರರಿಗಲ್ಲ. ಅವನಿಗೆ ಬೋಧೆಗೈದ ಗುರುವಿಗೆ ತಟ್ಟುತ್ತದೆ )

ಹೂವು ಹೂದುವಂತೆ! ಹೂವು ಗೊಬ್ಬರಕ್ಕೆ ಋಣಿ. ಆದರೂ ಅದರ ಸುಗಂಧ ಗೊಬ್ಬರದ ವಾಸನೆಯಲ್ಲ. ಅದೇ ರೀತಿ ಶಿಷ್ಯ ಗುರುವಿನಿಂದ ಪಡೆದ ಬೋಧೆಯಿಂದ ತನ್ನತನವನ್ನು ಬೆಳಸಿಕೊಂಡಿರುತ್ತಾನೆ. ಇದಕ್ಕೆ ಶಿಷ್ಯನ ಅಂತಃಶಕ್ತಿಯೇ ಪ್ರಮುಖವಾದುದು; ಗುರುವಿನ ಆಶೀರ್ವಾದವಲ್ಲ. ಇದು ಪ್ರಭುವಿನ ಅಭಿಮತ.

ಸಿದ್ಧರಾಮಯ್ಯ ಬಿಡುವುದಿಲ್ಲ. ಆಳು ಅರಸರ ಬಾಂಧವ್ಯವನ್ನೆತ್ತಿಕೊಳ್ಳುತ್ತಾನೆ. ರಾಜನಾದವನು 'ನಾನು ರಾಜ ನಾನು ರಾಜ' ಅಂದು ತಾನೇ ಹೇಳಿಕೊಂಡರೆ ಗೌರವ ಇಲ್ಲ. ಅದಕ್ಕೆ ಬದಲು 'ಇವರು ನಮ್ಮ ದೊರೆಗಳು' ಎಂದು ಬೇರೆಯುವರು ನುಡಿದಾಗ ತೋರಿದಾಗ, ದೊರೆಗೆ ದೊರೆತ ಗೌರವವೇ ಬೇರೆ. ಹೀಗಿದ್ದರೂ, ಅಧಿಕಾರದ ದೃಷ್ಟಿಯಿಂದ ನೋಡಿದಾಗ ಅರಸ ಅರಸನೇ ಆಳು ಆಳೇ. 'ಅಲ್ಲಿ ಅಧಿಕಾರದ ಕಲೆ ಅರಸಂಗಲ್ಲದೆ ಆಳಿಂಗಿಲ್ಲ ಕಾಣಾ ಕಪಿಲಸಿದ್ದ ಮಲ್ಲಿಕಾರ್ಜುನಾ'
ಇರಬಹುದು ಆದರೆ

ಆಳುಗಳಿಲ್ಲದಿರೆ ಅಧಿಕಾರದ ಕಲೆಯೆಲ್ಲಿ ?
ಆಳುಗಳಿಲ್ಲದಿರೆ ಕಾರ್ಯದ ಭಾಗಗಳೆಲ್ಲಿ ?
ಆಳುಗಳಿಲ್ಲದಿರೆ ಅರಸನ ಸೌಖ್ಯವೆಲ್ಲಿ ?
ಆಳುಗಳರಸರು ಅರಸರಾಳುಗಳು ?

ಇದು ಕಾರಣ:

ನಿಮ್ಮ ಗುರು ಆಳಲ್ಲದೆ
ಅರಸಲ್ಲ ಕಾಣಾ, ಗುಹೇಶ್ವರಾ,

ಸಿದ್ಧರಾಮಯ್ಯನಿಗೆ ಉತ್ತರ ಸಿಗುವುದಿಲ್ಲ ವಾದವನ್ನು ಬೇರೊಂದು ಪ್ರಣಾಳಿಕೆಯಲ್ಲಿ ಹರಿಸಲು ಯತ್ನಿಸುತ್ತಾನೆ.

**ಸಿದ್ಧರಾಮಯ್ಯ :**

ಆಳುಗಳರಸರ ವಾದವಿವಾದವಂತಿರಲಿ, ಶಿವನನಾದಿ, ಶಕ್ತಿ ಆದಿಯೆಂಬ ಸಿದ್ಧಾಂತ ಎಮ್ಮ ಗಣಂಗಳದಯ್ಯಾ. ಅಲ್ಲಿ ನಿಮ್ಮ ಸಿದ್ಧಾಂತವನರುಪಿವಡೆ ಗುರುಘನತೆ ತಾನೆ ಸಿದ್ಧ ಕಾಣಾ ಕಪಿಲಸಿದ್ದ ಮಲ್ಲಿಕಾರ್ಜುನ.

**ಪ್ರಭು:**

ಆಳುಗಳರಸರ ವಾದದಲ್ಲಿ ನಿನ್ನ ಬುದ್ಧಿ ಸ್ತಂಭವಾಯಿತೇ ಅಯ್ಯಾ?
ಶಿವನನಾದಿ, ಶಕ್ತಿ ಆದಿ, ಅನಾದಿ ಶಿವನ ಬಯಲಿಗೆ ತಂದ ಚದುರಿ ಆರು ?
ಗುಹೇಶ್ವರ ಲಿಂಗಕ್ಕರುಹಾ ಸಿದ್ಧರಾಮಯ್ಯ

ಸಿದ್ಧರಾಮಯ್ಯ:

ಆದಿಶಕ್ತಿಯಿಂದೀಶ ಪ್ರಸಿದ್ಧಿಗೆ ಬಂದನೆಂದು
ಶಕ್ತಿಯೇ ಘನವೆಂದಿರೆ ಅಯ್ಯಾ?
ಶಕ್ತಿ ಘನವಾದಡೆ ನೀವು ಬಿಡಲುಂಟೆ? ಶಕ್ತಿ ಘನವಲ್ಲ?

ಇದು ಕಾರಣ

ಇಲ್ಲಿ ಶಿಷ್ಯ ಘನವಲ್ಲ, ಶ್ರೀ ಗುರು ಮೂರ್ತಿಯೆ ಘನ ಕಾಣಾ ಪ್ರಭುವೇ

ಗುರು ಶಿಷ್ಯವಾದ ಶಿವ ಹೆಚ್ಚೋ ಶಕ್ತಿ ಹೆಚ್ಚೋ ಎಂಬ ಜಿಜ್ಞಾಸೆಗೆ ಅವಕಾಶ ಮಾಡಿಕೊಡುತ್ತದೆ. ಶಿವ ಶಕ್ತಿಯರಿಬ್ಬರೂ ಆದಿ ಅನಾದಿ. ಒಂದು ಮತ್ತೊಂದರಿಂದ ಪ್ರತ್ಯೇಕತೆಯನ್ನೇ ಪಡೆಯದ ಅಂಶಗಳು. ಇಂಥದೇ ಸಂಬಂಧ ಗುರು ಶಿಷ್ಯರದ್ದು. ಶರಣರೇ ಹೇಳಿದಂತೆ 'ದರ್ಪಣಕೆ ದರ್ಪಣವ ಹಿಡಿದಂತೆ' ಇಬ್ಬರೂ ಎರಡು ರಸಗನ್ನಡಿಗಳು. ಒಂದರ ಬಿಂಬ ಮತ್ತೊಂದರಲ್ಲಿ ಅನ್ಯೋನ್ಯ ಅರಿವೇ ಅಲ್ಲಿ ಸಿದ್ಧಿ.

ಅಂದು ನೆರೆದಿದ್ದ ಅನುಭವ ಮಂಟಪದ ಅನುಭಾವಿಗಳೆಲ್ಲರೂ ಈ ನಿರ್ಧಾರಕ್ಕೆ ಬರುತ್ತಾರೆ—

ಸಿದ್ಧರಾಮಯ್ಯ:—

ಲಿಂಗಸಂಗದಿಂದ ಪೀಠಲಿಂಗವಾದಂತೆ,
ಗುರುಸಂಗದಿಂದ ಶಿಷ್ಯಗುರುವೆಂಬ ಭಾವಸಿದ್ಧ
ಅಲ್ಲಿ ಲಿಂಗಸಂಗವಿರದಿರೆ ಆದಿ ಮಾಯೆಯೆನಿಸುವಳು,
ಆದಿ ಪ್ರಕೃತಿಯೆನಿಸುವಳು
ಇಲ್ಲಿ ಗುರು ಸಂಗವಿಲ್ಲದೆ ಶಿಷ್ಯ ಘನವೆಂದಡೆ
ಅದೆಂತು ಕಪಿಲಸಿದ್ಧ ಮಲ್ಲಿಕಾರ್ಜುನಾ?

ಪ್ರಭುದೇವ:—

ಪರುಷದ ಸಂಗದಿಂದ ಕಾಬ್ಬೊನ್ನು ಹೊನ್ನಾದಂತೆ,
ಕಸ್ತೂರಿಯ ಸಂಗದಿಂದ ಮೃತ್ತಿಕೆ ಪರಿಮಳವಾದಂತೆ,
ಜಲಸಂಗದಿಂದ ಪದ್ಮನಾಳ ಶೀತಲವಾದಂತೆ,
ಗುರುಸಂಗದಿಂದ ಶಿಷ್ಯ ಗುರುವಾದುದನರಿದ ಗುಹೇಶ್ವರನ ಶರಣ
ಪ್ರಮುದಿತ ಚಿತ್ತನಾದ ಕೇಳಾ, ಸಿದ್ಧರಾಮಯ್ಯಾ !

### ದಾಸಿಮಯ್ಯ:

ಉರಿವ ಕೆಂಡದ ಮೇಲೆ ತೃಣವ ತಂದಿರಿಸಿದಡೆ
ಆ ತೃಣವನು ಕೆಂಡ ನುಂಗುವಂತೆ
ಗುರು ಚರಣದ ಮೇಲೆ ತನುತೃಣವನಿರಿಸಿದಡೆ
ಆ ತನುವೆಲ್ಲ ಲಿಂಗಮಯ ಕಾಣಾ ರಾಮನಾಥಾ

### ಪ್ರಭುದೇವ

ಕಾಣದುದನರಸುವರಲ್ಲದೆ, ಕಂಡುದನರಸುವರೆ ?
ಘನಕೆ ಘನವಾದ ವಸ್ತು ತಾನೆ ಗುರುವಾದ, ತಾನೆ ಲಿಂಗವಾದ,
ತಾನೆ ಜಂಗಮವಾದ, ತಾನೆ ಮಂತ್ರವಾದ ತಾನೆ ತಂತ್ರವಾದ
ಇಂತಿವೆಲ್ಲವನೊಳಗೊಂಡು ಎನ್ನ ಕರಸ್ಥಲಕ್ಕೆ ಬಂದು
ಇನ್ನು ನಿರ್ವಿಕಾರ ತಾನೆ ಪ್ರಸಾದವಾದ ಕಾಣಾ ಗುಹೇಶ್ವರಾ

### ಬಸವಣ್ಣ

ಮಡಕೆಯ ಮಾಡುವಡೆ ಮಣ್ಣೆ ಮೊದಲು,
ತೊಡಿಗೆಯ ಮಾಡುವಡೆ ಹೊನ್ನೆ ಮೊದಲು,
ಶಿವಪಥವನರಿವಡೆ ಗುರುಪಥವೆ ಮೊದಲು,
ನಮ್ಮ ಕೂಡಲ ಸಂಗಮ ದೇವರನರಿವಡೆ
ಶರಣರ ಸಂಗವೇ ಮೊದಲು !

### ಚೆನ್ನಬಸವಣ್ಣ

ಚಂದನ ಚಂದನ ಬಾಧಿಸಿದಲ್ಲಿ
ಗಂಧ ಸೂಸುವುದಲ್ಲದೆ ಮೃತ್ತಿಕೆಯುಂಟೆ ?
ಕ್ಷೀರದಲ್ಲಿ ಬೆರೆದ ಹುಳಿ. ಪರಿಮಳ ಘೃತಕ್ಕೆ
ಕಾರಣವಲ್ಲದೆ ಅಸಾರವೆಂದೆನಲುಂಟೆ ?
ಪರಮಗುರು ಪ್ರಭುಗಳ ಪರಮಶಿಷ್ಯ ಸಿದ್ಧರಾಮಯ್ಯನ ಸಂವಾದ
ಸುಸಾಖ್ಯವಲ್ಲದೆ ವಿಸಾಖ್ಯವೆ ಕೂಡಲ ಚೆನ್ನಸಂಗಮದೇವಾ.

## ಮಡಿವಾಳಯ್ಯ

ಉಗ್ರ ಗಂಧದಿಂದ ಶಿರವೊಡೆದಂತೆ
ಅಯ್ಯನ ವಾದದಿಂದ ಪಶ್ಚಿಮ ದ್ವಾರದ ಕವಾಟ ಬಿಚ್ಚಿತ್ತಯ್ಯಾ !
ನವನವ ಕಸ್ತೂರೀ ಉಗ್ರ ಗಂಧದಿಂದ ನಾಸಿಕ ರಕ್ತಸೋರುವಂತೆ
ಅಯ್ಯನ ವಾದದಿಂದ ಪಶ್ಚಿಮ ಮೂರ್ತಿಯು
ಸುವಾಸ ಒಡೆ ಪಿಂಗಳೆಯಾಗಿ ಸೂಸಿತ್ತಯ್ಯಾ ।

### ಇದು ಕಾರಣ

ಪರಮ ಗುರುಗಳ ದಯದಿಂದ, ಪರಮ ಗುರುವ ಕಂಡು,
ಪರಮ ಶಿಷ್ಯ ನಾನಾದೆ, ಕಲಿದೇವರ ದೇವಾ.

## ಪ್ರಭುದೇವ

ಆಣವ ಮಲ, ಮಾಯಾ ಮಲ, ಕಾರ್ಮಿಕ ಮಲವೆಂಬ
ಮಲತ್ರಯಗಳ ಕಳೆದುಳಿದು ನಿರ್ಮಳವಾದ ಶಿಷ್ಯನು,
ಕಾಯ ಜೀವದ ಭ್ರಾಂತು ಸೂತಕವ ವಿವರಿಸಿ ಕಳೆದ ನಿಶ್ಶಂಕನಾದ ಗುರು.
ಉಭಯ ಭಾವದೊಳಗೆ ಆವುದು ಮುಂದು
ಆವುದು ಹಿಂದೆಂದು ಅರಿಯಬಹುದೆ ?
ಕರಸ್ಥಲಕ್ಕೆ ಕಾರುಣ್ಯವ ಮಾಡಿದಡೆ ಮನಸ್ಥಲಕ್ಕೆ ಹಂಗಿಲ್ಲ,
ಗುರುಸ್ಥಲದ ನಿಲುವು ಪರಸ್ಥಲದಲಡಗಿದಡೆ
ಭಾವ ಬೆರಗಾಯಿತ್ತು ಕಾಣಾ ಗುಹೇಶ್ವರಾ !

ದೀಪ–ಜ್ಯೋತಿಗಳಂತೆ, ಆಳು–ಅರಸರಂತೆ, ಬೀಜ–ವೃಕ್ಷಗಳಂತೆ, ಮಣ್ಣು–ಮಡಕೆಗಳಂತೆ, ಲಿಂಗ–ಪೀಠಗಳಂತೆ, ಶಿವ–ಶಕ್ತಿಯರಂತೆ ಗುರು–ಶಿಷ್ಯ ಸಂಬಂಧ ಒಂದು ಮತ್ತೊಂದರಿಂದ ಪ್ರತ್ಯೇಕತೆಯನ್ನೇ ಅರಿಯದ ಅಂಶ. ಗುರು–ಶಿಷ್ಯ ಒಂದೇ ನಾಣ್ಯದ ಎರಡು ಮುಖಗಳು. ಒಂದು ಬೆಳಕು, ಮತ್ತೊಂದು ಬಯಲು. ಇದೇ ಗುರು ಶಿಷ್ಯ ಸಾಮರಸ್ಯದ ಸ್ವರೂಪ ಅಥವಾ ಸಾರ.

———

# "ಪುರಾಣ" ಮತ್ತು "ಕಾವ್ಯ"-ಬಸವಣ್ಣನ ಬಗ್ಗೆ

● ಡಾ॥ ಎಂ. ಚಿದಾನಂದ ಮೂರ್ತಿ
ಕನ್ನಡ ಅಧ್ಯಯನ ಸಂಸ್ಥೆ
ಬೆಂಗಳೂರು ವಿಶ್ವವಿದ್ಯಾಲಯ

'ಪುರಾಣ' ಎಂಬ ಮಾತಿಗೆ ಪ್ರಾಚೀನವಾದುದು, ಹಳೆಯದು ಎಂಬ ಅರ್ಥವಿದೆ. ಎಂದೋ ಆಗಿಹೋದ ಸಂಗತಿಗಳನ್ನು ನಿರೂಪಿಸುವುದು ಪುರಾಣ ಕೃತಿ ಅರ್ಥಾತ್ ಪುರಾಣ. ಪುರಾಣಕಾರನ ದೃಷ್ಟಿ ಯಾವಾಗಲೂ ಹಿಂದಿನವರ ಕಡೆ ಎಂಬುದು ಇದರಿಂದ ಸೂಚಿತವಾಗುತ್ತದೆ.

ಸಂಸ್ಕೃತದಲ್ಲಿ ಪುರಾಣ ಸಾಹಿತ್ಯ ಅಪಾರವಾಗಿದೆ. ಸುಪ್ರಸಿದ್ಧ ಮಹಾ ಪುರಾಣಗಳು ಮತ್ತು ಉಪಪುರಾಣಗಳಲ್ಲದೆ, ಸಾವಿರಾರು ಪುರಾಣ ಕೃತಿಗಳು ಅಲ್ಲಿ ಹುಟ್ಟಿವೆ. ಅವುಗಳಲ್ಲಿ ಬರುವ ಸಂಗತಿಗಳ ವೈವಿಧ್ಯ, ನಿರೂಪಣೆಯಲ್ಲಿ ಏಕ ಮುಖತೆಯಿಲ್ಲದಿರುವುದು, ಕಲ್ಪಿತ ಸಂಗತಿಗಳ ಆಧಿಕ್ಯ, ಕಾಲ ಕಾಲಕ್ಕೆ ಪುರಾಣಗಳು ಬೆಳೆದು ಬಂದಿರುವುದು ಇತ್ಯಾದಿ ಕಾರಣಗಳಿಂದಾಗಿ ಪುರಾಣ ಸಾಹಿತ್ಯ ಮೊದಮೊದಲು ವಿದ್ವಾಂಸರ ಗಮನವನ್ನು ಸೆಳೆಯಲಿಲ್ಲ. ಈಚೆಗೆ ಅವುಗಳ ಮಹತ್ವವನ್ನು ವಿದ್ವಾಂಸರು ಮನಗಾಣುತ್ತಿದ್ದಾರೆ. ಅವುಗಳ ಕ್ರಮಬದ್ಧವಾದ ಅಧ್ಯಯನ ಭಾರತೀಯ ಸಂಸ್ಕೃತಿಯನ್ನು ತಿಳಿಸಿಕೊಡುತ್ತದೆ. ಇದಕ್ಕೆ ನಿದರ್ಶನವಾಗಿ Cultural History from the Vayupurana ಎಂಬ ಗ್ರಂಥವನ್ನು ನೋಡಬಹುದು.

ಪುರಾಣವನ್ನು "ಪ್ರಾಚೀನರ ಭಾಷೆ' ಎಂದು ಕರೆಯುವುದುಂಟು. ಜಗತ್ತು ಮತ್ತು ಜೀವನಗಳನ್ನು ಕತೆ, ಸಾದೃಶ್ಯ, ಸಾಮತಿಗಳ ಮೂಲಕ ಅರ್ಥಮಾಡಿಕೊಳ್ಳುವ ಪ್ರಯತ್ನ ಅಲ್ಲಿ ಕಾಣುತ್ತದೆ. ಒಬ್ಬ ವ್ಯಕ್ತಿ ಅಲ್ಲಿ ಪ್ರಧಾನವಾಗಿರಬಹುದು. ಅಥವಾ ಇಲ್ಲದಿರಬಹುದು. ವ್ಯಕ್ತಿ ಪ್ರಧಾನವಾಗಿದ್ದರೂ, ಅವನೊಬ್ಬನನ್ನೆ ಕೇಂದ್ರ ವ್ಯಕ್ತಿಯಾಗಿ ಮಾಡಿಕೊಂಡು ಎಲ್ಲ ಗಮನವನ್ನು ಅವನತ್ತ ಕೇಂದ್ರೀಕರಿಸಿ ಚಿತ್ರಿಸುವುದು ಪುರಾಣಗಳಲ್ಲಿ ಅಪೂರ್ವ. ವ್ಯಕ್ತಿಯ (ವ್ಯಕ್ತಿಗಳ ಜೊತೆ) ಒಂದು ಇಡೀ ಪರಂಪರೆಯನ್ನು ಪುರಾಣ ಕೊಡುತ್ತದೆ. ಸಮಗ್ರತೆ ಅದರ ಪ್ರಧಾನ ಲಕ್ಷಣ. ಆದ್ದರಿಂದಲೇ ಸಂಸ್ಕೃತ ಪುರಾಣಗಳಲ್ಲಿ ಸೃಷ್ಟಿಪೂರ್ವಸ್ಥಿತಿ, ಸೃಷ್ಟಿಕರ್ಮ, ದೇವಾನುದೇವತೆಗಳ ಕತೆ, ಭೂಲೋಕದಲ್ಲಿ ಆಳಿದ ರಾಜರು, ಅವರ ವಂಶ, ಸ್ಥಳ ಪುರಾಣಗಳು

ಶಿಲ್ಪ, ಕಾವ್ಯಮೀಮಾಂಸೆ, ವಾಸ್ತುಮತಗಳು–ಇತ್ಯಾದಿ ಇತ್ಯಾದಿ ಎಷ್ಟೆಷ್ಟೋ ಸಂಗತಿಗಳು ಬರುತ್ತವೆ. ಇಡೀ ಜಗತ್ತನ್ನು ಸಮಗ್ರವಾಗಿ ನೋಡುವ ದೃಷ್ಟಿ ಪುರಾಣಗಳದು. ಇಲ್ಲಿ ಸಂಕ್ಷಿಪ್ತವಾಗಿ, ಸಾರವತ್ತಾಗಿ ಹೇಳುವುದೆಂಬುದಿಲ್ಲ. ಎಲ್ಲವನ್ನೂ ವಿವರಿಸಬೇಕು. ಆದಷ್ಟು ಹೆಚ್ಚು ವಿವರಗಳಿರಬೇಕು ಎಂಬುದೇ ಪ್ರಧಾನದೃಷ್ಟಿ. ಪುರಾಣದ ಮಧ್ಯೆ ಈಚಿನವರು ಯಾರೋ ಒಂದು ಕತೆಯನ್ನು ಸೇರಿಸಿದರೆ ಅದು ನಿರಾಕರಣೀಯವೇನೂ ಅಲ್ಲ. ಪುರಾಣಗಳು ಕಾಲದಿಂದ ಕಾಲಕ್ಕೆ ಬೆಳೆದು ಬಂದ ರೀತಿ ಹೀಗೆ. ಪ್ರಸಿದ್ಧ ಪುರಾಣಗಳ ಕರ್ತೃತ್ವವನ್ನು ವ್ಯಾಸರಿಗೆ ಆರೋಪಿಸಿದ್ದರೂ. ಅವುಗಳು ಅಜ್ಞಾತ ಲೇಖಕ ಕೃತ ಎಂದೇ ತೆಗೆದುಕೊಳ್ಳಬೇಕಾಗುತ್ತದೆ. ಪುರಾಣಗಳು ಒಬ್ಬನ ಸೃಷ್ಟಿಯಲ್ಲ, ಹಲವರ ಸೃಷ್ಟಿ; ಅವು ಎಲ್ಲರಿಗೂ ಸೇರಿದಂಥವು ಎಂಬ ಭಾವನೆಯೇ ಮೊದಲಿಂದ ರೂಢವಾಗಿದೆ. ಸಂಸ್ಕೃತ ಪುರಾಣಗಳು ಸಂಸ್ಕೃತ ಭಾಷೆಯಲ್ಲಿದ್ದರೂ ಅವುಗಳು ಒಂದು ರೀತಿಯಲ್ಲಿ ಜಾನಪದವೂ ಹೌದು ಎಂಬುದನ್ನಿಲ್ಲಿ ಸ್ಮರಿಸಿಕೊಳ್ಳಬಹುದು. ವೇದಗಳಿಗೆ ಅನಧಿಕಾರಿಗಳಾದ ಸ್ತ್ರೀ, ಶೂದ್ರರ ಬೋಧನೆಗಾಗಿ ಪುರಾಣಗಳು ರಚಿತವಾಗಿವೆ ಎಂಬ ಮಾತು ಅರ್ಥಪೂರ್ಣವಾದುದು. ಪುರಾಣಗಳು ಮುಖ್ಯವಾಗಿ ವಿದ್ವಾಂಸರಿಗಲ್ಲ, ಸಾಮಾನ್ಯ ಜನತೆಗಾಗಿ.

೦ ೦ ೦ ೦

ಮೇಲಿನ ಕೆಲ ಸಂಗತಿಗಳ ಹಿನ್ನೆಲೆಯಲ್ಲಿ, ಕನ್ನಡದ ಎರಡು ಕೃತಿಗಳನ್ನು ಇಲ್ಲಿ ಪರಿಶೀಲಿಸುತ್ತೇವೆ. ಅವೆರಡರ ವಸ್ತುವೂ ಒಂದೇ: ಬಸವಣ್ಣನವರು. ಆದರೆ ಆ ಎರಡು ಕೃತಿಗಳಿಗೂ ಮೂಲಭೂತವಾದ ದೃಷ್ಟಿಭೇದವಿದೆ. ಅದು ಈ ಪ್ರಬಂಧದ ಮುಖ್ಯವಸ್ತು.

ಬಸವಣ್ಣನವರಿಗೆ ಸಂಬಂಧಿಸಿದಂತೆ ಸು. ೧೨೩೦ ರ ಸುಮಾರಿನಲ್ಲಿದ್ದ ಹರಿಹರ "ಬಸವರಾಜ ದೇವರ ರಗಳೆ" ಯನ್ನು ಬರೆದ. ಬಹುಶಃ ಅವನಾದ ಬಳಿಕ, ಅದೇ ಶತಮಾನದಲ್ಲಿದ್ದ ಪಾಲ್ಕುರಿಕೆ ಸೋಮನಾಥ ತೆಲುಗಿನಲ್ಲಿ "ಬಸವ ಪುರಾಣಮು'' ಎಂಬ ಕೃತಿಯನ್ನು ರಚಿಸಿದ. ಇದನ್ನು ಭೀಮಕವಿ ಕ್ರಿ. ಶ. ೧೩೬೯ ರಲ್ಲಿ ''ಬಸವ ಪುರಾಣ'' ಎಂಬ ಹೆಸರಿನಲ್ಲಿ ಕನ್ನಡಕ್ಕೆ ಅನುವಾದಿಸಿದ. ಈ ಅನುವಾದ ಬಹುಮಟ್ಟಿಗೆ ಮೂಲವನ್ನೇ ಅನುಸರಿಸಿರುವುದರಿಂದ ಭೀಮಕವಿಯ ಕಾವ್ಯದ ಬಗ್ಗೆ ಹೇಳಿದ್ದೆಲ್ಲ ಪಾಲ್ಕುರಿಕೆ ಸೋಮನಿಗೆ ಅನ್ವಯವಾಗುತ್ತದೆ.

ಹರಿಹರನದು ಮುಖ್ಯವಾಗಿ ಕಾವ್ಯದೃಷ್ಟಿ: ಅವನ ಕೃತಿಯು ಹೇಳುವಂತೆ, 'ಬಸವರಾಜದೇವ' ನ ಬಗ್ಗೆ ಬರೆದಿರುವ ರಗಳೆಯ ರೂಪದ ಕಾವ್ಯ ಅದು. 'ರಾಜ' ಎಂಬುದನ್ನು ಗಮನಿಸಬೇಕು: ಬಿಜ್ಜಳನಂತೆಯೇ ಇವನೂ ರಾಜ. ಬಿಜ್ಜಳ ಲೌಕಿಕ ರಾಜ, ಬಸವಣ್ಣ ಆಧ್ಯಾತ್ಮಿಕ ರಾಜ ಮತ್ತುಬಿಜ್ಜಳನಿಗಿಂತ ಒಂದು ಕೈಮಿಗಿಲು ಎಂಬುದು ಸ್ಪಷ್ಟವಾಗಿ ಧ್ವನಿತವಾಗುತ ದೆ. ಕಾವ್ಯದಲ್ಲಿಯೂ ಬಸವ ತಾನು ಬಿಜ್ಜಳನ

ಕೈ ಕೆಳಗಿನ ಮಂತ್ರಿಯಾಗಿದ್ದರೂ ಅವನಿಗೆ ತಾನು ಸರಿಸಮಾನನಂತೆ ನಡೆದುಕೊಳ್ಳುವ ರೀತಿಯಲ್ಲಿಯೇ ಚಿತ್ರಿತನಾಗಿದ್ದಾನೆ. ಅವನೇ ಇಲ್ಲಿಯ ಕೇಂದ್ರವ್ಯಕ್ತಿ; ಎಲ್ಲ ಘಟನೆಗಳಿಗೂ ಅವನು ಒಂದಲ್ಲ ಒಂದು ರೀತಿ ಸಂಬಂಧಿಸಿದ್ದಾನೆ. ಅವನು ಬರೆಯದ ಅಧ್ಯಾಯವಿಲ್ಲ, ಕತೆಯಿಲ್ಲ. ಕವಿಯ ಗಮನ ಬಸವನನ್ನು ಬಿಟ್ಟು ಅತ್ತ-ಇತ್ತ ಸರಿಯುವುದಿಲ್ಲ. ಆದ್ದರಿಂದ ಹರಿಹರನ ಕೃತಿ ಏಕಮುಖ ಉದ್ದೇಶವುಳ್ಳ ಕಾವ್ಯವಾಗಿ ತೋರುತ್ತದೆ. ಇಲ್ಲಿ ಇತರ ಪಾತ್ರಗಳು ಬಂದರೂ ಅವು ಬಸವನಿಗೆ ಸಂಬಂಧಿಸಿದಂತೆ ಮಾತ್ರ ಕಾಣಿಸಿಕೊಳ್ಳಲು ಸಾಧ್ಯ.

ಭೀಮಕವಿಯ (ಪಾಲ್ಕುರಿಕೆ ಸೋಮನ) "ಬಸವ ಪುರಾಣ(ಬಸವ ಪುರಾಣಮು") ಹೆಸರೇ ಹೇಳುವಂತೆ ಪುರಾಣ. ಬಸವಣ್ಣ ಈ ಕೃತಿಯ ಪ್ರಮುಖ ವ್ಯಕ್ತಿಯೇ, ಆದರೆ ಕೃತಿಕಾರನದು ಪ್ರಮುಖವಾಗಿ ಪುರಾಣದೃಷ್ಟಿ. ಬಸವನನ್ನು ಒಂದು ಮಹಾ ಪರಂಪರೆಯ ಅಂಗವಾಗಿ, ಸಮಗ್ರವಾಗಿ ನೋಡಲು ಕೃತಿಕಾರ ಬಯಸುತ್ತಾನೆ. ಇಲ್ಲಿ ಪೌರಾಣಿಕವಾದ ಸಿರಿಯಾಳನ, ಕೋಳೂರು ಕೊಡಗೂಸಿನ, ಬೇಡರ ಕಣ್ಣಪ್ಪನ ಕತೆಗೆ ಮತ್ತು ಅಂತಹ ಇತರ ಕತೆಗಳಿಗೆ ಸ್ಥಾನವಿದೆ. ಅವರೆಲ್ಲರೂ ಭಕ್ತರು ಮತ್ತು ಬಸವ ಅವರ ಪರಂಪರೆಗೆ ಸೇರಿದವನು. ಅವರ ಕತೆ ಅವನ ರಕ್ತಗತವಾಗಿದೆ; ಅವರ ಆದರ್ಶಗಳು ಅವನನ್ನು ರೂಪಿಸಿವೆ. ಹಾಗೆಯೇ ಬಸವನ ಸಮಕಾಲೀನರ ಕತೆಗಳೂ ಇಲ್ಲಿ ಬರುತ್ತವೆ. ಬಸವನ ಜೀವನ ರೂಪಿತವಾಗಲು ಹಿಂದಿನ ಪರಂಪರೆಯಂತೆಯೇ ಅವನ ಸಮಕಾಲೀನ ಘಟನೆಗಳೂ ವ್ಯಕ್ತಿಗಳೂ ಮುಖ್ಯರು ತಾನೆ! "ಬಸವ ಪುರಾಣ'' ವನ್ನು ಓದಿದರೆ ಒಂದು ಸಮಗ್ರ ಪರಂಪರೆಯ ಪರಿಚಯವಾಗುತ್ತದೆ. ಅದರ ಜನಪ್ರಿಯತೆಗೆ ಇದೂ ಒಂದು ಕಾರಣವೆಂಬುದನ್ನು ಮರೆಯಬಾರದು.

ಹರಿಹರನ ಬಸವರಾಜ ದೇವರ ರಗಳೆಯ ಕತೆ ಇತಿಹಾಸವಲ್ಲದಿದ್ದರೂ ಕಾಲ ಮತ್ತು ರೀತಿಗಳೆರಡರ ದೃಷ್ಟಿಯಿಂದಲೂ ಇತಿಹಾಸಕ್ಕೆ ಸಮೀಪ. ಬಸವನ ಬಗ್ಗೆ ಆಸಕ್ತರಾದ ಆಧುನಿಕರಿಗೆ ಆ ಕಾರಣದಿಂದಲೇ ಆ ಕೃತಿ ಪ್ರಿಯವಾಗುವುದು. (ಹೀಗೆ ಪ್ರಿಯವಾಗಲು ಅದರ ಕಾವ್ಯಗುಣವೂ ಕಾರಣ) ಅದು ಓದಿ ಸಂತೋಷ ಪಡಬಹುದಾದ ಕಾವ್ಯ. ಆದರೆ ಬಸವ ಪುರಾಣ ಓದಿಸಿ ಕೇಳಿ ಭಕ್ತಿ, ಭಾವ ಭರಿತವಾಗಲು ಅರ್ಹವಾದ ಪುರಾಣ. ಇದರ ಭಿತ್ತಿ ವಿಶಾಲ; ಇಲ್ಲಿ ಕತೆಗಳು ಹೆಚ್ಚು. ಎಷ್ಟೋ ಕತೆಗಳಲ್ಲಿ ಬಸವನ ಮಾತೇ ಬರುವುದಿಲ್ಲ. ಬಸವನಿಗೂ ಆ ಕತೆಗೂ ಸಂಬಂಧವಿಲ್ಲ. ಆ ಕತೆಗಳನ್ನು ಓದಿ ವ್ಯಾಖ್ಯಾನಿಸುವವರು ಮಧ್ಯೆ ಮಧ್ಯೆ ವಿವರಿಸಲಿಕ್ಕೆ, ಬೇರೆ ಕತೆಗಳನ್ನು ಸೇರಿಸಿ ವಿವರಿಸಲಿಕ್ಕೆ ಅವಕಾಶವಿದೆ. ಸಾಮಾನ್ಯ ಜನತೆಗೆ ಇದು ಪ್ರಿಯವಾಗುತ್ತದೆ. ದಿನದಿನವೂ ಸ್ವಲ್ಪ ಕೇಳುತ್ತ, ಅನೇಕ ಭಕ್ತರ ಕತೆಗಳನ್ನು ಮೆಲುಕು ಹಾಕುತ್ತ ಆ ಭಕ್ತರಿಗೆಲ್ಲಾ ನಾಯಕ ಮಣಿಯಂತಿರುವ ಬಸವನ ಕತೆಯನ್ನು ಪರಿಚಯ ಮಾಡಿಕೊಳ್ಳುತ್ತಾರೆ. ಕೃತಿಯ ಕಾವ್ಯಗುಣ ಇಲ್ಲಿ ಅಮುಖ್ಯವಾಗುತ್ತದೆ. ಅದರ

ಪುರಾಣತ್ವ ಪ್ರಧಾನವಾಗುತ್ತದೆ ಜನಗಳ ದೃಷ್ಟಿಯಲ್ಲಿ*, ಪುರಾಣ ಕರ್ತೃವಿಗೆ ಬಸವ ಒಂದು ಕಾಲ, ದೇಶಕ್ಕೆ ಬದ್ಧನಾದ ವ್ಯಕ್ತಿಯಾಗದೆ, ಅವನು ತತ್ತ್ವಶಃ ಯಾವ ಕಾಲಕ್ಕಾದರೂ ಸೇರಬಹುದಾದ ಒಂದು ಮಾದರಿಯಾಗುತ್ತಾನೆ. ಎಲ್ಲಾ ಕಾಲದ ಒಂದು ಆದರ್ಶವಾಗುತ್ತಾನೆ. ಅವನು ಬಿಜ್ಜಳನ ಕಾಲದಲ್ಲಿದ್ದುದರಿಂದ ಬಿಜ್ಜಳನ ಹೆಸರು ಬರುವುದು ಅನಿವಾರ್ಯ. ಸಾಮಾನ್ಯ ಜನತೆಗೂ ಇತಿಹಾಸದಲ್ಲಿ ಆಸಕ್ತಿ ಅಷ್ಟಕ್ಕಷ್ಟೆ, ಬಸವನ ಹಿರಿಮೆ, ಮಹತ್ಕಾರ್ಯ, ಪವಾಡ ಇವೇ ಅವರಿಗೆ ಇತಿಹಾಸ ಮತ್ತು ಮುಖ್ಯ. ಅವನು ಯಾವ ಕಾಲದಲ್ಲಿದ್ದ ಎಂಬುದೂ ಮುಖ್ಯ. ಬಸವ ಯಾವ ಪರಂಪರೆಯ ಅಂಗವಾಗಿ ಹೇಗೆ ಬದುಕಿದ ಎಂಬುದರ ಸಾರ ಅವರಿಗೆ ದೊರಕಿದರೆ ಸಾಕು, ಇತಿಹಾಸವನ್ನು ಕಟ್ಟಿಕೊಂಡು ಅವರಿಗೇನು? "ಕಾವ್ಯ", "ಪುರಾಣ"ಗಳ ಕಲ್ಪನೆಯ ವ್ಯತ್ಯಾಸದ ಹಿನ್ನೆಲೆಯಲ್ಲಿ ಹರಿಹರ ಮತ್ತು ಭೀಮಕವಿಯ (ಅರ್ಥಾತ್ ಪಾಲ್ಕುರಿಕೆ ಸೋಮನ) ಕೃತಿಗಳನ್ನು ಪರಿಶೀಲಿಸಿದಾಗ, ಪುರಾಣ ದೃಷ್ಟಿಯು ಕಾವ್ಯ ದೃಷ್ಟಿಗಿಂತ ಕನಿಷ್ಠವಾದದ್ದೆಂದು ಭಾವಿಸುವ ಅಗತ್ಯವೇನೂ ತೋರುವುದಿಲ್ಲ:

---

* ಆಧುನಿಕ ದೃಷ್ಟಿಗೂ 'ಬಸವಪುರಾಣ'' ಒಳ್ಳೆಯ ಕಾವ್ಯವೆಂಬುದನ್ನು ಇಲ್ಲಿ ಮರೆಯಬಾರದು.

## ಶರಣರ ಮಹಿಮೆ

ನಡೆದೊಡೆ ಭೂಮಿಪಾವನ ಮಹಾಶರಣಂ ಸಹಜಾನುಭಾವಂ
ನುಡಿದೊಡೆ ಸರ್ವಜೀವಿಗಳ ಜನ್ಮನಿವಾರಣವೊಮ್ಮೆ ನೋಡಿ ಕಂ-
ಡೊಡೆಯುವನೇ ಕೃತಾರ್ಥ ಶರಪಂಕಜ ಮಂಡೆಯಮೇಲೆ ಬಂದು ಬಿ-
ಳ್ದೊಡೆ ಕುಲಕೋಟಿ ಎಲ್ಲಕೆ ಸಮುದ್ಧರಣಂ ಗುರು ಶಂಕರೇಶ್ವರಾ.

ನಡೆದೊಡೆ ಹೆಜ್ಜೆಯೊಳ್ ಮಡಿದ ಜೀವಿಗಳೆಲ್ಲ ಕೆ ಮೋಕ್ಷ ಸಂಪದಂ,
ನುಡಿದೊಡೆ ಶಬ್ದಮಂ ಕಿವಿಯೊಳಾಲಿಸಿ ಕೇಳಿದ ಮಾನವರ್ಗೆ ನಿ-
ರ್ಮಡಿ ಸಲೆ ಭಾಪುರೇ ಶರಣನಾ ನಡೆಯಾನುಡಿ ಎನ್ನಿಹಕ್ಕೆ ಬೆಂ-
ಬಿಡದೆ ಪರಕ್ಕೆ ನಿಚ್ಚಣಿಕೆ ಯಾದುದಲಾ ಗುರು ಶಂಕರೇಶ್ವರಾ.

ಶರಣರ ಪುಣ್ಯವರ್ತನೆಯ ದೂರದೆ ಕೇಳಿದ ಜೀವಿಗಳ್ ಕೃತಾ-
ರ್ಥರು, ನಡೆತಂದು ಮೂರ್ತಿಯ ನಿರೀಕ್ಷಿಸಿ ಕಂಡವರೇ ಅನೂನಧ-
ನ್ಯರು, ಶಿರಸಾದರ್ಪ ಪಾದಜಲ ತೀರ್ಥವನಾಂತು ವರಪ್ರಸಾದ ಮಂ
ಧರಿಸಿದ ಕಾರಣೀಕರವರೇ ಮುಕುತರ್ಗುರು ಶಂಕರೇಶ್ವರಾ.

ಈಶನ ಭಕ್ತನಾವೆಡೆಯೊಳಿರ್ದಪ ನಿರ್ದೊಡೆ ನಿಜ ನಿಜ ಕೈ-
ಲಾಸ ನಿವಾಸವಾರೊಡನೆ ಶಬ್ದಿಸುತಿರ್ದಪ ನಾರಕೂಡೆ ಸಂ-
ತೋಷವ ಮಾಡುತಿರ್ದಪ ನದಾರ ನಿರೀಕ್ಷಿಸು ತಿರ್ದಪಂ ಮಹಾ-
ಪಾಶ ವಿಮೋಕ್ಷವಾದುದ ವರ್ಗೆಲ್ಲರಿಗುಂ ಗುರುಶಂಕರೇಶ್ವರ.

—ಗುರು ಶಂಕರೇಶ್ವರ ಶತಕದಿಂದ

# ಹರಿಹರನ ಶತಕ ಕಾವ್ಯಗಳಲ್ಲಿ ಭಕ್ತಿಸಾರಮ್ಯ

● **ಡಾ|| ಎಸ್. ವಿದ್ಯಾಶಂಕರ,** ಎಂ. ಎ., ಪಿ. ಎಚ್‌ಡಿ.
ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ

ಮಹಾಕವಿ ಹರಿಹರ ಹಲವಾರು ದೃಷ್ಟಿಗಳಿಂದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಗಮನಾರ್ಹ ಕವಿ. ಈತ ಮೊದಲ ವೀರಶೈವ ಮಹಾಕವಿ. ಸಾಹಿತ್ಯ ನಿಂತ ನೀರಾಗಿದ್ದ ಕಾಲಮಾನವಲ್ಲಿ ಅಲ್ಲಾಗಬೇಕಾಗಿದ್ದ ಜರೂರು ಮಾರ್ಪಾಟನ್ನು ಗಮನಿಸಿ, ಆ ದಿಸೆಯಲ್ಲಿ ದುಡಿದು ಕಾವ್ಯಮಾರ್ಗವನ್ನು ಬದಲಿಸಿದ ಕ್ರಾಂತಿಕಾರಿ ಕವಿ. ರಗಳೆ, ಅಷ್ಟಕ, ಶತಕ, ಮಹಾಕಾವ್ಯಗಳ ಕರ್ತೃವಾಗಿ ಹಲವು ಪ್ರಾಕಾರಗಳಲ್ಲಿ ಕೈಯಾಡಿಸಿ ಬಹುಮುಖ ಪ್ರತಿಭೆಯನ್ನು ಪ್ರದರ್ಶಿಸಿದ ಸಾಹಸಿ. ವಸ್ತುವಿನ ಆಯ್ಕೆಯಲ್ಲಿ ಹೊಸತನವನ್ನು ಮೆರೆಸಿದವನಷ್ಟೇ ಅಲ್ಲದೆ ಮುಂದಣ ಕವಿಗಳಿಗೆ ಮಾರ್ಗದರ್ಶಿ. ಕನ್ನಡ ನಾಡಿನ ಶರಣರ, ತಮಿಳು ನಾಡಿನ ಶೈವರ, ಶಿವನ ಪರಮ ಭಕ್ತರ ಜೀವನ ಕಾರ್ಯಗಳ ಪರಿಚಯ ಮಾಡಿಕೊಡುವ ಪರಂಪರೆಯೊಂದಕ್ಕೆ ಆರಂಭಿಗ. ಇವೆಲ್ಲಕ್ಕಿಂತ ಹೆಚ್ಚಾಗಿ ಕನ್ನಡಕ್ಕೆ ಒಬ್ಬನೇ ಆದ ಭಕ್ತಕವಿ.

ಹರಿಹರನ ನಿಸ್ವಾರ್ಥ ಪ್ರಾಂಜಲ ಮನ, ಕಾವ್ಯವನ್ನು ಸ್ವಾರ್ಥಕ್ಕಾಗಿ ಶಿವನನ್ನು ಒಲಿಸಿಕೊಳ್ಳಲಿಕ್ಕೆ ಸಾಧನವನ್ನಾಗಿ ಮಾಡಿಕೊಂಡಿರುವುದು ಅನ್ಯತ್ರ ಕಾಣದ ವಿಶಿಷ್ಟ ಗುಣವಾಗಿದೆ. ಕಾವ್ಯ ಕಲ್ಪಾಂತರ ಸ್ಥಾಯಿ ಎನ್ನುವ ಮಾತನ್ನು ಪ್ರಾಂಜಲ ಮನದಿಂದ ಒಪ್ಪುವ ಹರಿಹರ, ಕಾವ್ಯದ ಬಗೆಗಿನ ತನ್ನ ಬಗೆಯಾಳದ ಗೌರವವನ್ನು ಗಿರಿಜಾ ಕಲ್ಯಾಣದಲ್ಲಿ ಹೀಗೆ ಹೇಳಿರುವನು.

> ಸೇವ್ಯಂ, ಸೌಖ್ಯಂ, ಪ್ರಸನ್ನಂ, ನವರಸವಿಭವಂ, ಪುಣ್ಯಪುಂಜಂ, ಶುಭಂ, ವಾ
> ಗ್ದೇವ್ಯಾವಾಸಂ, ವಿವೇಕೋನ್ನತ ಜನನಿಧಿ, ಸಂಸಾರ ವಿಶ್ರಾಮದೇಶಂ,
> ದಿವ್ಯಜ್ಞಾನೋಕ್ತಿಮಾರ್ಗಂ, ನಿರತಿಶಯ ಪದಂ, ಕೂರ್ತು ಪೇಳ್ವಳ್ತಿಯಿಂದಂ
> ಕಾವ್ಯಂ ಕಲ್ಪಾಂತರಸ್ಥಾಯಿಯೆನಿಪ ನುಡಿ ಸತ್ಯಂ ಕವೀಶಾಧಿಪತ್ಯಂ ||

ತಾನನುಭವಿಸಿದ ಪರಮಾನಂದಾಮೃತದ ಸವಿಯನ್ನು ಇತರರಿಗೂ ಕವಿ ಹರಿಹರ ತನ್ನ ಕೃತಿಗಳಲ್ಲಿ ಉಣಿಸಿರುವನು. ಆನಂದಾಮೃತ ವಾರ್ಧಿಯಲ್ಲಿ ಮಿಂದು ಪರಿಪೂತವಾದ ಆ ಕವಿಕೇತನ ತನ್ನ ಆರಾಧ್ಯದೈವದ ಮಹಿಮೆ ಲೀಲೆಗಳನ್ನೂ ಕಾರುಣ್ಯವನ್ನೂ ತುಂಬು ಮನದಿಂದ ಹಾಡಿದೆ, ನಲಿದಿದೆ. ಆ ಭಕ್ತಿಯ ಆವೇಶ, ತನ್ಮಯ ಮನೋಭಾವ

ರುಚಿ ಶುಚಿ ಸಾಮಾನ್ಯನ ಅನುಭವರಸನೆಗೂ ವೇದ್ಯ. ಹರಿಹರನ ಕೃತಿಗಳನ್ನು ಒಟ್ಟಾರೆ ಪರಿಶೀಲಿಸಿದಾಗ ಇತರ ಕವಿಗಳಿಂದ ಒಂದು ವಿಧದಲ್ಲಿ ಭಿನ್ನನೆಂದೆನ್ನಿಸುತ್ತದೆ. ಅವನ ಭಾಷೆ 'ಸುಲಿದ ಬಾಳೆಯ ಹಣ್ಣಿನಂದದಿ' ಲಲಿತ. ಲಲಿತ ಸುಭಗ ಶೈಲಿಯಿಂದ ಹರಿಹರ ಸಾಮಾನ್ಯನಿಗೂ ನಿಲುಕುವ ಕವಿಯಾಗಿ ಕಂಡುಬಂದರೂ ಅವನ ಭಕ್ತಿರಸದ ಹುಚ್ಚು ಹೊಳೆಯಲ್ಲಿ ಸಮಸಮನಾಗಿ ಸಹೃದಯ ಸಾಗುವುದು ಅಸಾಧ್ಯವೆನಿಸುತ್ತದೆ. ಈ ಒಂದು ಅಸಾಧಾರಣ ಹಿರಿಮೆಯಿಂದಲೇ ಹರಿಹರ ಇತರ ಕವಿಗಳಿಂದ ಭಿನ್ನನಾಗಿರುವುದು. ಅದಮ್ಯ ಉತ್ಸಾಹ ಹಾಗೂ ಆವೇಶ ಪ್ರಧಾನವಾದ ಉತ್ಕಟಭಕ್ತಿ ಇವೆರಡು ಗುಣಗಳನ್ನು ಪ್ರಧಾನವಾಗಿ ನಾವು ಅವನಲ್ಲಿ ಗುರುತಿಸುತ್ತೇವೆ.

ಹರಿಹರನ ಅಗಮ್ಯ ಉತ್ಸಾಹ ಏಕದೈವೋಪಾಸನೆಯಲ್ಲಿ ನಿಚ್ಚಳವಾಗಿ ವ್ಯಕ್ತಗೊಂಡಿದೆ. ಆತ ಶಿವನ ನಿಷ್ಠಾವಂತ ಭಕ್ತ. ಸರ್ವಾರ್ಪಣಾ ಮನೋಭಾವ ಅವನದು. ಅವನ ನಿಷ್ಠೆ ಎಷ್ಟರ ಮಟ್ಟಿಗೆ ಅನನ್ಯವಾದದ್ದೆಂದರೆ ಶಿವಶರಣರನ್ನು ಶಿವನನ್ನು ಕುರಿತು ಹೊಗಳಲು ತನ್ನ ನಾಲಗೆಯನ್ನು ಮೀಸಲು ಮಾಡುವಷ್ಟು ತೀವ್ರತರವಾದುದು. ಮನುಜರನ್ನು, ಸಾಯುವವರನ್ನು, ಕನಿಷ್ಠರನ್ನು ಇಂದ್ರ, ಚಂದ್ರ, ರವಿ, ಕರ್ಣ, ದಧೀಚಿ, ಬಲೀಂದ್ರನೆಂದು ಪೊಗಳದ 'ಭಾಷೆ' ಅವನದು.

ಪೊಗಳೆಂ ಮಿಕ್ಕಿನ ಚಕ್ರಪಾಣಿ ಸರಸೀಜೋದ್ಭೂತ ಸಂಕ್ರಂದನಾ
ದಿಗಳಂ ತಾನೆನೆ ಮರ್ತ್ಯಕೀಟಕರ ಮಾತಂತಿರ್ಕೆ ಮತ್ಪ್ರಾವಸಂ
ಬಗೆದಾರೆಂ ಬಿಡದಾ ಹರಂಗೆ ಶಶಿಭೂಷಣಂಗೀಶ್ವರಂಗೆಯ್ದೆ ನಾ
ಲಗೆಯುಂ ಮಾರಿದೆನೊಲ್ದು ಹಂಪೆಯ ವಿರೂಪಾಕ್ಷಂಗದೇನೆಂದಪೆಂ॥
ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆಯಕ್ಕಟಾ
ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರನೆಂದು ಮೇಣ್
ಅನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ
ನೆನೆ ಪೊಗಳರ಼್ಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ ॥

'ಎರಗುವೆನೆನ್ನ ಹಂಪೆಯರಸಂಗೆ ಹರಂಗೆ ಶಿವಂಗೆ ಮಿಕ್ಕಿನವರ್ಗೆ ಎರಗಲಾರೆ' ನೆನ್ನುವ ಛಲ ಹರಿಹರನದು. ಅನ್ಯ ದೈವಗಳನ್ನು ತಪ್ಪಿಯೂ ನೋಡದ ನೆನೆಯದ ಪ್ರತಿಜ್ಞೆ ಅವನದು. ಈ ಪ್ರಬಲವಾದ ಸ್ವಮತಪರವಾದ ಇಷ್ಟ ದೈವಪರವಾದ ಅಭಿಮಾನವೇ ಪ್ರತಿಸಿಧಿಸುವಂತೆ ಅವನ ಕೃತಿಗಳಲ್ಲಿ ಪಾತ್ರಗಳು ಸೃಷ್ಟಿಗೊಂಡಿವೆ. ಅವನ ಅಪ್ರತಿಮ ಭಕ್ತಿಯ ಆವೇಶದಲ್ಲಿ ಪರಮತ, ಪರದೈವ ದೂಷಣೆ ಹಿಂದು ಮುಂದು ನೋಡದೆ ಬರುತ್ತದೆ. ಮನುಜರು ಸುಮ್ಮನೆ ಹಾಳಾಗುತ್ತಿರುವರಲ್ಲಾ, ಮನುಜರ ಮೇಲೆ ಸಾವವರ ಮೇಲೆ ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಯೆಂದು ಹೊಗಳಿ ಕೆಡುತ್ತಿರುವರಲ್ಲಾ. ಲೌಕಿಕರನ್ನು ಹೊಗಳುವುದರಿಂದ ಸಿಗುವ ಫಲ

ಶಿವನನ್ನು ಸ್ತುತಿಸಿದರೆ ಸಿಗುವುದಿಲ್ಲವೇ ? ಆದ್ದರಿಂದ 'ನೆನೆವೊಗಳ್ ಅರ್ಚಿಸೆಮ್ಮ ಕಡು ಸೊಂಪಿನ ಪೆಂಪಿನ ಹಂಪೆಯಾಳ್ದನಂ' ಎನ್ನುತ್ತಾ ಮಾನವನನ್ನು ಪ್ರಾರ್ಥಿಸಿರುವನು. ಇಲ್ಲಿ ಕಾಣುವುದು ಭಕ್ತನೊಬ್ಬನ ಅಂತರಂಗದ ಮೊರೆ. ಜನರನ್ನು ಬೈದಾದರೂ ಅವರ ದೃಷ್ಟಿಯನ್ನು ತನ್ನ ಅಧಿದೈವದತ್ತ ತಿರುಗಿಸಲು, ಮನಃ ಪರಿವರ್ತಿಸಲು ಸಾಧ್ಯವಾಗದೇ ಎಂಬ ಸಾತ್ವಿಕ ಘೋರಣೆ ಹರಿಹರನದು. (ಶಿವನಷ್ಟೇ ಶಿವಶರಣರೂ ಹರಿಹರನ ದೃಷ್ಟಿಯಲ್ಲಿ ಪೂಜ್ಯರು. 'ಮಾನದೊಳ್ ಶೌರ್ಯದೊಳ್ ವಾರತೆಯೊಳ್ ಭಕ್ತರ್ಗೆ ಪ್ರೋ ಮಾಣ್ ಸರಿದೊರೆ ಸಮನಾವಂ' ಎನ್ನುವ ಅತ್ಯುಗ್ರ ಅಭಿಮಾನ). ಲೋಕದ ಮಾನವರಲ್ಲಿ ಹರಿಹರನ ಕಳಕಳಿಯ ಪ್ರಾರ್ಥನೆ ಇಷ್ಟೇ :

> ಮೃಡನಿರ್ದಂತಿರೆ ಕೋಟಿಕೂಟಕುಳದೈವಕ್ಕಾಸೆಯುಂ ಮಾಡಿ ನೀಂ
> ಕಿಡದಿರ್ ಮಾನವ, ಬೇಡ ಬೇಡೆಲೆಲೆ, ಪೂಣ್ಗೊಂಡಕ್ಕಟಾ ಸಾರಿದೆಂ
> ನಡೆ ನೋಡರ್ಚಿಸು ಕೀರ್ತಿಸಾದರಿಸು ಪೆರ್ಚಾನಂದದಿಂ ಬೇಡು ಬ
> ಲ್ವಿಡಿ ನಂಬೀಗಳೆ ನಚ್ಚು ಮಚ್ಚು ನಲವಿಂದೆಂದುಂ ವಿರೂಪಾಕ್ಷನಂ ॥

ವಿರೂಪಾಕ್ಷನ ದಿವ್ಯ ನಾಮಸ್ಮರಣೆ ಮನ್ಮಥ ಬಾಣದಿಂದ ಬೆಂದು ಉರಿಯುವವನಿಗೆ, ರೋಗಗಳಿಂದ ನೊಂದು ದುಃಖಿಸುವವನಿಗೆ, ನಿಷ್ಠುರವೂ ಉಗ್ರವೂ ಆದ ಚಿಂತೆಗಳಿಂದ ಬಳಲುವವನಿಗೆ, ಅತಿ ಉಗ್ರ ತಾಪಗಳಿಂದ ಕೊರಗುತ್ತ ಅಶಕ್ತನಾದವನಿಗೆ, ಶತ್ರುಭಯದಿಂದ ಮಂಕಾಗಿ ಬೀಳುವವನಿಗೆ ಪ್ರೀತಿಯಿಂದ ರಕ್ಷಣೆ ನೀಡುತ್ತದೆ (ಪಂಪಾ ಶತಕ ೭೦). ಮನುಜ ಜನ್ಮವೆತ್ತಿರುವುದು ಅಪೂರ್ವ. ಪುಣ್ಯಭಾಜನವಾದ ಈ ಮನುಜ ಜನ್ಮದಲ್ಲಿ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನನ್ನು ಮನಸಾರೆ ಅರ್ಚಿಸಿ, ಪೊಗಳಿ, ನೆನೆದು, ನೋಡಿ ಐಕ್ಯವಾಗು. 'ನೆರೆನಂಬು ನಂಬು, ಕೆಮ್ಮನೆ ಕೆಡಬೇಡ, ಬೇಡ, ಭರದಿಂ ಸಲೆ ಮಚ್ಚಲೆ ಮಚ್ಚು ಮಚ್ಚು, ಪಂಚನೆಗಿಡೆ ನಚ್ಚು ನಚ್ಚು, ಮಿಗೆ ಬಲ್ವಿಡಿ, ಬಲ್ವಿಡಿ ಹಂಪೆಯಾಳ್ದನಂ' (ಪಂಪಾ ಶತಕ ೭೧) ಎಂದು ಹರಿಹರ ಹಿತನುಡಿದು ಸಮಯೋಚಿತವಾಗಿ ಎಚ್ಚರಿಸಿರುವನು. 'ಪೋಗೆನೆ ಪೋಪ ಬಾರೆಲವೊ ಬಾರೆನೆ ಜೀಯ ಪಸಾದವೆಂದು ಬೆಳ್ಳಾಗುತೆ ಬರ್ಪ' ಸೇವೆಯ ಕಷ್ಟವೃತ್ತಿಯನ್ನು ಹರಿಹರ ಕಂಡವನು, ಉಂಡವನು. ನರಸೇವೆಗಿಂತ ಹರಸೇವೆ ಮಿಗಿಲೆಂದು ಮನಗಂಡವನು. ಓಗಾಗಿ ಆತ ಮಾನವರ್ ಕುಡುವರೆ ? ಬೇಡುವೊಡೆ ಬೇಡು ಮಹಾನಿಧಿಯಂ ಮಹೇಶನಂ ಎಂದಿರುವನು.

ಭಕ್ತರ ಬಂಧುವಾಗಿ, ಮಹಾ ನಿಧಿಯಾಗಿ, ಮಾತೆ–ಪಿತನಾಗಿ ಹಂಪೆಯದೇವ ತನ್ನ ಭಕ್ತರನ್ನು ಕಾಪಾಡುವವನು. ಹಂಪೆಯ ದೇವನ ಕೃಪಾಛತ್ರದಲ್ಲಿ ಉಜ್ಜೀವಿಸುತ್ತಿರುವ ಭಕ್ತರನ್ನು ಯಾರಾದರೂ ಪರೀಕ್ಷಿಸಲು, ಅವರ ಸದ್ಗುಣಗಳನ್ನು ಬಣ್ಣಿಸಲು ಸಾಧ್ಯವೆ ? ಹರಿಹರನ ಅಭಿಮತದಂತೆ "ಪುರಾತನರ್ ಪರಿಮದೆ ಗಂಗೆ

ನಿಂದೊಡದು ತೀರ್ಥವೊಡರ್ಚಿತೆ ಕಾರ್ಯಮೆಂದುದೇ ಹರವರಿಯಿರ್ದುದೇ ಸಭೆ ನಿರೀಕ್ಷಣೆಗೆಯ್ದುದೆ ಲೋಕಪಾವನಂ'' (ಪಂಪಾ ಶತಕ೪೬). ಈ ಸದ್ಭಕ್ತರ ಮುಂದೆ ನಿಲ್ಲುವವನು ಆವನು ? 'ಅಂತಕ ಮನೋಜ ಚತುರ್ಮುಖ ಅಬ್ಜನೇತ್ರನೆಂದೊದ ವಿದರ್ಕ್ಯರೆಂಬವರ್ಗೆ ಸುಟ್ಟಿಸಬಾರದು, ರೂಹುದೋರಬಾರದು, ತಲೆಯೆತ್ತಬಾರದೆವೆ ಯಿಕ್ಕಲೆ ಬಾರದಿಳಾತಳಾಗ್ರದೊಳ್''(ಪಂಪಾ ಶತಕ ೪೭). ಶಿವಭಕ್ತರು ಇಹ-ಪರಗಳೆ ಡರಲ್ಲೂ ವಿಶೇಷ ಪೂಜಿತರು. ಈ ಶಿವಾರ್ಚಕರಿಗೆ ವಿಷ್ಣು, ಬ್ರಹ್ಮ, ಅಗ್ನಿ ಎಲ್ಲಿಯ ಸಮಾನರು ? ಮೂರು ಲೋಕಗಳಲ್ಲೂ ಅವರಿಗೆ ಸಮಾನರಾದವರು ಯಾರಿದ್ದಾರೆ ? ಎನ್ನುವ ಅತಿಶಯ ಗೌರವ, ಪೂಜ್ಯತೆ, ಹರಿಹರನಿಗೆ. 'ಭಕ್ತಿಯುಳ್ಳೊಡೆ ಸದಾಚಾರಂ' (ಪಂಪಾ ಶತಕ ೫೫). ಎನ್ನುವ ಹರಿಹರನಿಗೆ ಶಿವನ ಭಕ್ತರ ನಡಾವಳಿ ಘನಚೋದ್ಯ. ಭಕ್ತಿಪೂರ್ವಕವಾಗಿ ಸಿರಿಯಾಳ ಮಗನನ್ನು ಕೊಂದುದು; ತಂದೆಯನ್ನು ಚಂಡೇಶ ಕೊಂದುದು; ತಾಯಿಯನ್ನು ಪರಶುರಾಮ ಕೊಂದುದು—ಇವುಗಳಿಂದ ಭಕ್ತರಿಗೆ ಎಳ್ಳಷ್ಟೂ ಕುಂದಿಲ್ಲ. ಉಗ್ರಭಕ್ತಿಯ ಮುಂದೆ ಎಲ್ಲ ಅಪಚಾರಗಳೂ ಕ್ಷಮ್ಯವೇ ! ಮದವರ್ಜಿತನಾಗಿ ದುರಾಶೆಯನ್ನು ಹರಿದು ಕಾಮಾಸಕ್ತಿಯನ್ನು ತ್ಯಜಿಸಿ ಪ್ರೇಮದಿಂದ ಲಿಂಗವನ್ನು ಒಲಿದು ನೋಡಿ ನಲಿವ ಸದ್ಭಕ್ತನಿರುವ ಸ್ಥಳವೇ ತಾರಾಚಲ. ಹಿಮಾದ್ರೀಂದ್ರ, ವಾರಣಾಸಿ. ಇಂತಹ ಸದ್ಭಕ್ತನಿರುವ ಎಡೆಯೇ ವಿರೂಪಾಕ್ಷನಿಗೆ ಪಂಪಾಪುರ (ಪಂಪಾ ಶತಕ ೫೬).

## ರಕ್ಷಾ ಶತಕ

ಹರಿಹರನ ರಕ್ಷಾ ಶತಕ ಕವಿಯ ಉತ್ಕಟ ಭಕ್ತಿಗೆ ನಿದರ್ಶನ. ಸಾಧಕಾವಸ್ಥೆಯಲ್ಲಿರುವ ಭಕ್ತನೊಬ್ಬನ ಅಂತರಂಗದ ತೀವ್ರ ತರವಾದ ಮೊರೆಯನ್ನು, ಶಿವಸಾಕ್ಷಾತ್ಕಾರಕ್ಕಾಗಿ ಜೀವದ ಚಡಪಡಿಕೆಯನ್ನು ನಾವಿಲ್ಲಿ ನೋಡಬಹುದು. ಲೋಕದ ಜಂಜಡದಿಂದ ಬಿಡುಗಡೆಗಾಗಿ ಹಾದಿ ತಪ್ಪಿಸುವ ಲೌಕಿಕ ಆಕರ್ಷಣೆಗಳಿಂದ ರಕ್ಷಿಸಬೇಕಾಗಿ ಬೇಡುವ ಭಕ್ತನ ಹೃದಯದ ಸಾತ್ವಿಕ ಮೊರೆಯನ್ನು, ಚೀರುಲಿಯನ್ನು ನಾವಿಲ್ಲಿ ಕೇಳಬಹುದು. ಕರ್ಮಮಾರ್ಗ, ಭಕ್ತಿಮಾರ್ಗ, ಜ್ಞಾನಮಾರ್ಗ, ಇವು ಮೋಕ್ಷವನ್ನು ಪಡೆಯಲು ಇರುವ ಸುಲಭ ಮಾರ್ಗಗಳು. ಹರಿಹರನದು ಭಕ್ತಿಮಾರ್ಗ. ನಿರ್ಹೇತುಕ ಭಾವದಿಂದ ಮಾನವನು ತನ್ನ ಪ್ರೇಮ ಭಂಡಾರವನ್ನು ದೇವರಲ್ಲಿ ಸೂರೆಗೈದು ಕಾರುಣ್ಯವನ್ನು ಪಡೆಯುವುದೇ ಭಕ್ತಿ ಮಾರ್ಗದ ಅಂತಿಮಗುರಿ. ನಾರದ ಭಕ್ತಿ ಸೂತ್ರದಲ್ಲಿ ಹೇಳುವಂತೆ, ಭಕ್ತಿಯೆಂಬುದು ದೇವರಲ್ಲಿನ ಆತ್ಯಂತಿಕ ಪ್ರೇಮ. ದೇವರೊಡನೆ ಸಂಪೂರ್ಣ ಅಂತಃಕರಣವುಳ್ಳ ಸಂಬಂಧ. ಇತರ ವಿಷಯಗಳಲ್ಲಿ ಅನಾಸಕ್ತಿ. ಸಮಸ್ತ ಕಾರ್ಯಗಳನ್ನೂ ದೇವರಲ್ಲಿ ಸಮರ್ಪಿಸುವುದು. ಅವನ ಮರೆಯುವಿಕೆಯಲ್ಲಿ ಕ್ಲೇಶ ಹೊಂದುವುದು. ಪರಿಪೂರ್ಣ ಭಕ್ತನೊಬ್ಬನ ಸುಂದರ ಚಿತ್ರವನ್ನು ಹರಿಹರನಲ್ಲಿ ಕಾಣುವಷ್ಟರ ಮಟ್ಟಿಗೆ ನಿಚ್ಚಳವಾಗಿ ಮತ್ತೊಬ್ಬನಲ್ಲಿ ಕಾಣಲಾಗದು. ಈ ದೃಷ್ಟಿಯಿಂದ ಹರಿಹರ ಗಮನೀಯನಾಗಿದ್ದಾನೆ.

ಭಕ್ತನಾದವನಿಗೆ ನಿಜವಾಗಿಯೂ ಸ್ವಂತ ವ್ಯಕ್ತಿತ್ವವಿಲ್ಲ. ಏಕೆಂದರೆ. ಎಲ್ಲವೂ ಲೋಕ ಶಕ್ತಿಯ ನಿಯಮಗಳಿಗೆ ಬದ್ಧ. ಎಲ್ಲವನ್ನೂ ಆ ಲೋಕ ಶಕ್ತಿಯ ಕೈಯಾಟಕ್ಕೆ ಒಪ್ಪಿಸಿದ ಮೇಲೆ ಸ್ವತಂತ್ರ್ಯವೆಲ್ಲಿ ಬಂತು? ಹರಿಹರನದು ಈ ಬಗೆಯ ಸರ್ವಾರ್ಪಣಾ ಮನೋಭಾವ.

ನಿಮಗೆನ್ನಂ ಮಾರುಗೊಟ್ಟೆಂ ಪುರಹರ, ನಿಮಗೆನ್ನಂ ಸದಾ ತೊಳ್ತುಗೊಟ್ಟೆಂ
ನಿಮಗೆನ್ನಂ ಸೂರೆಗೊಟ್ಟೆಂ ನಿಮಗೆ ಹರುಷದಿಂದೊಚ್ಚತಂ ಕೊಟ್ಟೆನಾಹಾ
ನಿಮಗೆನ್ನಂ ಮಚ್ಚುಗೊಟ್ಟೆಂ, ಗುರುವೆ ಘನವೆ ಸಂತೋಷದಿಂದೊಪ್ಪುಗೊಟ್ಟೆಂ
ನಿಮಗೆನ್ನಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪುದೆನ್ನಂ॥

ಲೋಕರಕ್ಷಕನಾದ ವಿರೂಪಾಕ್ಷನೇ ದೈವ, ಗುರು, ಜನಕ, ಜನನಿ, ಆಳ್ದ, ಸಖ-ಹೀಗೆ ಸರ್ವಸ್ವ. ಹೀಗೆ ತಾರಕ ಶಕ್ತಿಗೆ ಬದುಕಿನ ನಿರ್ಣಾಯಕ ಅಂಶವನ್ನು ಒಪ್ಪಿಸಿ, ತನ್ನ ಹಾಗೂ ಅವನ ಅನುಸಂಧಾನದ ನಡುವೆ ಮುಳ್ಳಾಗಿ ಬರುವ ಹಲವು ಬಗೆಯ ಉಪಟಳಗಳು, ಆಕರ್ಷಣೆಗಳಿಂದ ತನ್ನನ್ನು ರಕ್ಷಿಸುವಂತೆ ಹರಿಹರ ಬೇಡಿರುವನು. ಕಾಮನ ಉಪಟಳದಿಂದ ತನ್ನನ್ನು ರಕ್ಷಿಸುವಂತೆ ಕಾಮಾರಿಯನ್ನು ಪ್ರಾರ್ಥಿಸುವನು. ಧನ, ಸ್ತ್ರೀ, ಪುತ್ರರು, ಗೃಹ ಮಿತ್ರರು ವಸ್ತ್ರನಿಕಾಯಾಕಲ್ಪ. ಈ ಪಂಚಾಕರ್ಷಣೆಗಳು ತಮ್ಮ ಚುಂಬಕ ಶಕ್ತಿಯಿಂದ ಪುಣ್ಯ ಸಂಪಾದನೆಗೆ ಎಡೆಗೊಡದೆ ಪಥಭ್ರಷ್ಟನನ್ನಾಗಿ ಮಾಡುತ್ತಿರುವಾಗ ಈ ಪಂಚಲೋಭಗಳಿಂದ ಮುಕ್ತನನ್ನಾಗಿಸಿ ರಕ್ಷಿಸುವಂತೆ ಮೊರೆಯಿಟ್ಟಿರುವನು(ರಕ್ಷಾ ಶತಕ 8)ಪರರ ಐಶ್ವರ್ಯಕ್ಕೆ ಅಸೂಯೆಗೊಳ್ಳುತ್ತ,ಪರರ ಶಕ್ತಿಗೆ ಸಂತಾಪಿಸುತ್ತಾ ಪರರಿಗಿಂತ ಚೆನ್ನಾಗಿ ಬಾಳಲು ಬಯಸಿ, ಪರಚಿಂತಾಕ್ಷೋಭೆಯಿಂದ ಕುದಿದು, ಮತ್ಸರದೊಡನೆ ಹೆಚ್ಚಿಗೆ ಘಾಸಿಗೊಂಡಿರುವೆನು. ಈ ಮತ್ಸರವನ್ನು ಶಕ್ತಿ ಗುಂದಿಸಿ ನನ್ನನ್ನು ರಕ್ಷಿಸುವುದೆಂದು ದೈನ್ಯದಿಂದ ಅಂಗಲಾಚಿರುವನು(ರಕ್ಷಾ ಶತಕ 11) "ಮನಸ್ಸು ನನ್ನನ್ನು ದುರ್ವಿಕಾರಕ್ಕೆ ಎಳೆಯುತ್ತದೆ. ಮನಸ್ಸು ನನ್ನ ಮಾನವನ್ನು ಪುಡಿ ಪುಡಿ ಮಾಡುತ್ತಿದೆ. ಆಶಾವಹ್ನಿಯಲ್ಲಿ ನೂಂಕುತ್ತಿದೆ. ಮನ ಮಾಯೆಯಿಂದ ಕವಿಯಲ್ಪಟ್ಟು ನಿಮ್ಮನ್ನು ನೆನೆಯಲು ಅವಕಾಶ ಕೊಡುತ್ತಿಲ್ಲ. ಅಯ್ಯೋ, ಶಿವನೇ ಕರುಣಾ ಸಮುದ್ರನೇ, ನನ್ನ ಚಂಚಲಚಿತ್ತವನ್ನು ಸ್ಥಿರಗೊಳಿಸಿ ನನ್ನನ್ನು ರಕ್ಷಿಸು" (ರಕ್ಷಾ ಶತಕ 12) ಎಂದು ಮನಕರಗುವಂತೆ ಬೇಡಿರುವನು."ವೈರಾಗ್ಯದತ್ತ ಎಳ್ಳಷ್ಟು ಮನ ಹರಿಯದೆ. ಮದದತ್ತ, ಮಹಾ ಮೋಹದತ್ತ, ಧನದತ್ತ, ಧಾನ್ಯದತ್ತ, ಸತಿ ಸುತ ಮಿತ್ರರತ್ತ, ಸದಾ ಲೋಭದತ್ತ ಹರಿಯುತ್ತಿರುವುದು. ನನ್ನೀ ಮನವನ್ನು ಪ್ರೀತಿಯಿಂದ ನೀವು ತುಂಬಿ ಇನಿತೂ ಎಡೆಯಿಲ್ಲದಂತೆ ತುಂಬಿ ನನ್ನನ್ನು ರಕ್ಷಿಸುವುದೆಂದು ಆರ್ತಸ್ವರದಲ್ಲಿ ಪ್ರಾರ್ಥಿಸಿರುವನು. ಸಂಸಾರದಿಂದ, ವ್ಯಾಮೋಹಗಳಿಂದ, ಆಕರ್ಷಣೆಗಳಿಂದ ಬಿಡುಗಡೆಗೊಳ್ಳಲು ತವಕಿಸಿದ ಹರಿಹರನ ಮನ ಚಿನ್ನ, ಪೆಂಡಿತಿ, ಸುತ, ತಾಯ್ತಂದೆ, ತನು, ಮಿತ್ರರ್, ಇಷ್ಟರು, ಯೌವನ, ಗೃಹ ಇವೆಲ್ಲವೂ ಅಚಿರವೆಂಬ ತೀರ್ಮಾನಕ್ಕೆ ಬರುತ್ತದೆ :

ಕನಕಂ ನೀರಕ್ಕರಂ, ಪೆಂಡಿತಿ ಕನಸು, ಸುತರ್ ಮಂಜು, ತಾಯ್ತಂದೆ ವಾಯುಂ
ತನುವಭ್ರಚ್ಛಾಯೆ, ಮಿತ್ರರ್ ಗಗನಕುಸುಮಮಿಷ್ಟರ್ ಮರೀಚೀಜಲಂ ಯೌ
ವನ ಘರ್ಮಂ ಮೇಘಚಾಪಂ, ಗೃಹವಚಿರನೆನಿಪ್ಪಿಂತಿವಂ ಬಿಟ್ಟು ನಿಮ್ಮಂ
ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥

(ರಕ್ಷಾ ಶತಕ 31)

ಶಿವನಾಮ ಸ್ಮರಣೆಯಲ್ಲಿ, ಶಿವಸಂಕೀರ್ತನೆಯಲ್ಲಿ ಹೊತ್ತು ಹೋಗದೆ ಅನ್ಯ ವಿಷಯಗಳಲ್ಲಿ ಮನ ಲೀನವಾಗಿ ವ್ಯರ್ಥವಾಗಿ ಹೊತ್ತು ಹೋಗುತ್ತಿದೆಯಲ್ಲಾ ಎನ್ನುವ ಕೊರಗು ಹರಿಹರನದು. ತಾನು ದೋಷ ಸಂಪೂರ್ಣನೆಂದೂ ಶಿವ ದೋಷಾತೀತನೆಂದೂ ಕರುಣಾಮಯಿಯಾದ ಲೋಕಪ್ರಭು ತನ್ನನ್ನು ರಕ್ಷಿಸಬೇಕೆಂದೂ ಕಳಕಳಿಯಿಂದ ಪ್ರಾರ್ಥಿಸುವನು (ರಕ್ಷಾ ಶತಕ ೪೬,೫೨,೫೩). ಇಲ್ಲೆಲ್ಲಾ ಹರಿಹರನ ಮುಗ್ಧ ಸ್ನಿಗ್ಧ ಭಕ್ತಿಯು ಹಾಗೂ ಸ್ವಾಮಿ-ಭೃತ್ಯ ಭಾವನೆಯ ನಿಲುವನ್ನು ನೋಡಬಹುದಾಗಿದೆ.

ಭಕ್ತಿ ಅಂತಃಕರಣದಲ್ಲಿ ತುಂಬಿಬಂದಾಗ, ಆ ತುಂಬು ಭಕ್ತಿಯಲ್ಲಿ ಪರವಶನಾಗಿ ತನ್ನ ಸರ್ವಾಂಗಗಳಲ್ಲಿ ಬಂದು ನೆಲಸುವಂತೆ ಶಿವನನ್ನು ಬೇಡುವನು:

ನಡೆತಂದೆನ್ನಯ ಕಣ್ಗಳಲ್ಲಿರು ವಿರೂಪಾಕ್ಷಾ ವಿರೂಪಾಕ್ಷ ನೀಂ
ಬಿಡದಂತೆನ್ನಯ ಜಿಹ್ವೆಯಲ್ಲಿರು ವಿರೂಪಾಕ್ಷಾ ವಿರೂಪಾಕ್ಷ ನೀಂ
ಎಡೆಗೊಂಡೆನ್ನಯ ಚಿತ್ತದಲ್ಲಿರು ವಿರೂಪಾಕ್ಷಾ ವಿರೂಪಾಕ್ಷ ನೀಂ
ಇಡಿದಂತೆನ್ನೊಳೆ ಕೂಡಿ ನಿಲ್ಲೆಲೆ ವಿರೂಪಾಕ್ಷಾ ವಿರೂಪಾಕ್ಷನೇ॥

ಪರಶಿವನ ದಿವ್ಯ ಸ್ವರೂಪವನ್ನು ಪ್ರತಿಯೊಂದು ಬಾರಿ ಈಕ್ಷಿಸಿದಾಗಲೂ ಭಕ್ತನಿಗೆ ನಿಚ್ಚಂ ಪೊಸತಾದ ಅನುಭವ. ಆ ದೇಹವನ್ನೆಲ್ಲಾ ತೀವಿದ ಆನಂದಾನುಭವವನ್ನು ಎಷ್ಟು ಬಗೆಯಲ್ಲಿ ಬಣ್ಣಿಸಿದರೂ ಹರಿಹರನಿಗೆ ಸಾಲದು:

ಕರಣಂಗಳ್ ಕಳೆಯೇರೆ, ಲೋಚನಯುಗಂ ನೀರೇರೆ, ಮೆಯ್ಯೆಲ್ಲವಂ
ಕುರವೇರಲ್, ನುಡಿ ಕಂಪವೇರೆ, ಚರಣಂಗಳ್ ಲೀಲೆಯೇರಲ್, ಮೊಗಂ
ಸಿರಿಯೇರಲ್, ತಲೆಗೇರಿದುತ್ಸವದೆ ನಿಮ್ಮಂ ಪೂಜಿಸುತ್ತಾನುಮಾ
ದರದಿಂದೀಕ್ಷಿಸುತಾಡು ತಿರ್ಪುದೆನಗಿನ್ನೆಂದೋ ವಿರೂಪಾಕ್ಷನೇ॥ ಎಂದೂ,

ತೆರೆಮಸಗಲ್, ಸುಖಾಶ್ರುವಿದಿರೇರುತಿರಲ್, ಪುಳಕಂ ಬೆಮರ್ ಕರಂ
ಪರಿಯಿಡೆ, ಗದ್ಗದಂ ಸುಳಿಗೊಳುತ್ತಿರೆ, ಕಂಪನಮುರ್ಕಿ ಲೀಲೆಯೊ
ತ್ತರಿಸುತಿರಲ್, ನವೀನ ನಿಜಭಕ್ತಿತರಂಗಿಣಿ ಮೀರುತುಬ್ಬರಂ
ಬರಿಯಿತುಮೆನ್ನ ಮೇಲೆ ಮಡುಗಟ್ಟುವುದೆಂದೆಲೆ ಹಂಪೆಯಾಳ್ದನೇ॥

ಎಂದೂ ಅಂತಃಕರಣ ಮಿಡಿದ ಭಾವದಿಂದ ಪ್ರೀತನಾಗಿ ಬೇಡಿಕೊಳ್ಳುವನು. 'ನಿಜಾಂಘ್ರಿಗೆ ಸಾರ್ಚಲೆ ಹಂಪೆಯಾಳ್ದನೇ' ಎಂದು ದೈನ್ಯಭಾವದಲ್ಲಿ ಬೇಡುವ ಆ ಮೊರೆ, ಆ ಭಕ್ತಿಯ ಉತ್ಕಟತೆ, ಆ ಪೂಜಾವೈಭವ— ಇವೆಲ್ಲವನ್ನೂ ಬೇರೊಬ್ಬ ಮಂದಿತಾ ಹೇಳಲಾಗದು: ಪ್ರಪಂಚದ ಯಾವ ಭಾಷೆಯಲ್ಲೂ ವ್ಯಕ್ತಪಡಿಸಲಾಗದು. ರಸಸ್ಥಾಯಿಮಯವಾದ ಆ ಭಕ್ತಿಸ್ಥಲಗಳನ್ನು ಓದುತ್ತಿದ್ದಂತೆ ನಮ್ಮ ಕಂಠ ಬಿಗಿಯುತ್ತದೆ; ಮೈ ನವಿರೇಳುತ್ತದೆ; ಆನಂದಾಶ್ರು ಗರೆಯುತ್ತದೆ. ಇಷ್ಟದೈವವನ್ನು ನವನಿಧಿ, ಪುಣ್ಯನಿಧಿ, ಮಹಾನಿಧಿ, ಭಕ್ತರುತ್ಸವನಿಧಿ, ಭಾಗ್ಯನಿಧಿ, ಸುಧಾರಸ ಕಾಯ ಕಾಂತಿಯುದ್ಭವನಿಧಿ, ಸತ್ವನಿಧಿ, ಕೃಪಾನಿಧಿ, ಸತ್ಯಸಂಭವನಿಧಿ, ತತ್ವನಿಧಿ ಹೀಗೆಂದು ಎಷ್ಟು ಬಗೆಯಲ್ಲಿ ಕೊಂಡಾಡಿದರೂ ಕವಿಗೆ ತೃಪ್ತಿಯಿಲ್ಲ. ಶಿವನಲೀಲೆಗಳನ್ನು ಎಷ್ಟು ಬಣ್ಣಿಸಿದರೂ ಸಾಲದು. ಸರ್ವೇಶನನ್ನು ನಾನಾ ಬಗೆಯಲ್ಲಿ ಸಂಬೋಧಿಸಿ ಉಬ್ಬುವ ಆ ಸೌಖ್ಯದ ಪೆರ್ಚನ್ನು ತನಗಿತ್ತು ರಕ್ಷಿಸು ಎಂದು ಮೇಲಿಂದ ಮೇಲೆ ಪ್ರಾರ್ಥಿಸುತ್ತಾನೆ.

ಹರಿಹರನ ಶಿವಪೂಜಾ ವೈಭವವನ್ನು ಅವನ ರಗಳೆಗಳಲ್ಲಿ ನೋಡಬೇಕು. ಬಸವರಾಜ ದೇವರ ರಗಳೆಯಲ್ಲಿ ಬರುವ ಬಸವಣ್ಣನ ಶಿವಪೂಜೆ, ಮಹಾದೇವಿಯಕ್ಕನ ರಗಳೆಯಲ್ಲಿ ಬರುವ ಮಹಾದೇವಿಯಕ್ಕನ ಶಿವಪೂಜೆ ನಿತ್ಯವೂ ಮಾಡುವ ಸಾಂಪ್ರದಾಯಿಕ ಕ್ರಿಯೆಯಾಗಿ ಬರದೆ ರಸಪೂಜೆಯಾಗಿ ಬಂದಿದೆ. ಪತ್ರೆ ಪುಷ್ಪಗಳಿಂದ ಎಷ್ಟು ಬಗೆಯಲ್ಲಿ ಅಲಂಕರಿಸಿದರೂ, ಕಣ್ಣಿಗೆ ತೃಪ್ತಿಯಿಲ್ಲ. ಅಲಂಕರಣಗಳನ್ನೆಲ್ಲಾ ಸಡಿಲಿಸಿ ಮತ್ತೆ ಮತ್ತೆ ಅಲಂಕರಿಸಿ 'ಕಣ್ ತೀವೆ' ಶಿವನನ್ನು ಹರಿಹರಚಿತ್ರಿಸಿರುವ ಭಕ್ತರು ನೋಡುವರು. ಶಿವಾನಂದ ರಸದ ಹೊನಲಿನಲ್ಲಿ ಈಸಾಡುವರು. ಆನಂದಾಬ್ಧಿಯಲ್ಲಿ ಮುಳುಗಾಡುವರು. ಶಿವನ ಮೂರ್ತಿಯನ್ನು ಕಣ್ತುಂಬ ನೋಡಿ ಆನಂದದ ಕಣ್ಣೀರಿಡುವರು. ರೋಮಾಂಚನಗೊಳ್ಳುವರು. ಬೆವರುವರು, ಬಿಕ್ಕುವರು, ತೂಗಿ ತೊನೆದಾಡುವರು.

ನೋಡದ ಕಣ್ಗಳೇಕೆ, ಸಲೆ ಕೇಳದ ಕರ್ಣಮದೇಕೆ, ಭಕ್ತಿಯಿಂ
ಪಾಡದ ಬಾಯದೇಕೆ, ಪೆಸರ್ಗೊಳ್ಳದ ಜಿಹ್ವೆಯದೇಕೆ, ಪೂಜೆಯಂ
ಮಾಡದ ಕೈಗಳೇಕೆ, ನೆರೆ ಸೋಂಕದ ದೇಹಮದೇಕೆ, ಕೂಡಿಯು
ಳ್ಳಾಡದ ಚಿತ್ತವೇಕೆನಗೆ ..........................................................

ಎಂದು ಭಕ್ತಿಯಿಂದ ಆರ್ದ್ರಹೃದಯರಾಗಿ ಹಾಡಿರುವರು.

ಭಕ್ತಿಯ ಹುಚ್ಚು ತಲೆಗೇರಿದಾಗ ಆ ತುಂಬಿಬಂದ ಭಕ್ತಿಯ ಭರದಲ್ಲಿ ಹರಿಹರ ಶಿವನ ಲೀಲಾವಿಲಾಸಗಳ ಸಂಸ್ತವನವನ್ನು ಹೀಗೆ ಮಾಡಹೊರಡುವನು:

ಪುರವಂ ಸುಟ್ಟವನೀತನೀತನೆ ಪರಿಬ್ರಹ್ಮರ್ಗೆ ಸಾಮರ್ಥ್ಯದೊಂ
ದಿರವಂ ಕೊಟ್ಟವನೀಸನೀತನೆ ಮಹೋಗ್ರಾಭೀಳಸರ್ಪಾಂಗಳಾ
ಭರಣಂದೊಟ್ಟವನೀತನೀತನೆ ಲಸತ್ ಶೀತಾಂಶುವಂ ಮೌಳಿಯೊಳ್
ಸ್ಥಿರವಾಗಿಟ್ಟವನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ॥

ಭಕ್ತಿಯಿಂದ ಮನ ತೊಯ್ದಾಗ, ಅಂಗೈಯಲ್ಲಿ ಹಿಡಿದ ಲಿಂಗದಲ್ಲಿ ಆರಾಧ್ಯ ದೈವದ ಸಾಕ್ಷಾತ್ಕಾರವಾದಾಗ ಮನದುಂಬಿದ ಸಂತೋಷಾಧಿಕ್ಯವನ್ನು ಅದುಮಿ ಹಿಡಿಯಲಾಗದೆ.

ಎನ್ನಾನಂದ ಸುಧಾಬ್ಧಿ ವರ್ಧನ ಕಳಾಸಂಪನ್ನನಂ ಚೆನ್ನನಂ
ಮುನ್ನಾರುಂ ನೆರೆಕಾಣಬಾರದ ಲಸತ್‌ಕಾಪಾಲಿಯಂ ಶೂಲಿಯಂ
ಭಿನ್ನಾಭಿನ್ನಮೆನಲ್ಕೆ ತೋರಿದ ಮಹಾನಿಸ್ಸೀಮನಂ ಭೀಮನಂ
ಚೆನ್ನಂಗಂಡುರೆ ತನ್ನನಿತ್ತ್ರಭವನಂ ಕಂಡೆಂ ವಿರೂಪಾಕ್ಷನಂ॥

ಎಂದು ಹೃದಯ ಮಿಡಿದು ನುಡಿಯುತ್ತದೆ. ಮನದೊಡೆಯನ ಸಾಕ್ಷಾತ್ಕಾರಕ್ಕೆ ಹಂಬಲಿಸಿ ಕಾತರಚಿತ್ತದಿಂದ ನಿರೀಕ್ಷಿಸಿದ್ದ ಜೀವಕ್ಕೆ ಬಹುದಿನದ ಆಸೆ ಕೈಗೂಡಿದಾಗ ತನ್ನೊಡೆಯನ ಸಾಮೀಪ್ಯದಿಂದ ಅಗಲ ಬಯಸದೆ, ಆ ಸುಖದಿಂದ ವಂಚಿತವಾಗಲು ಮನ ಒಪ್ಪದೆ.

ಬಿಡೆನೀಶಾ ನಿಮ್ಮ ಪಾದಾಬ್ಜಮನೆಲೆಲೆ ಬಿಡೆಂ ಸೀಳ್ದೊಡಂ ಪೋಳ್ದೊಡಂ ಪೊ
ಯ್ದೊಡಮುಂದಿಂದೆಂದು ಮೆಂತು ಬಿಡೆನಭವ ಬಿಡೆಂ ಶಂಕರಾ ಮಾಣೆನಾಂ ಬಲ್
ವಿಡಿದೆಂ ಮತ್ತತ್ತಮಿತ್ತಂ ಚಲಿಯಿಸದೆಲೆ ಮತ್ ಸ್ವಾಮಿ ನಿಮ್ಮಾಜ್ಞೆಯಿಂದಂ
ಮೃಡನೇ ಭಕ್ತಾರ್ಥಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪುದೆನ್ನಂ॥

ಎಂದು ಕಣ್ಣೀರಿಡುತ್ತಾ ಪ್ರಾರ್ಥಿಸುತ್ತಾನೆ. ಕರ್ತಾರ ಭರ್ತಾರ ಎಲ್ಲವೂ ಆಗಿರುವ ವಿರೂಪಾಕ್ಷನಿಗೆ ತನ್ನನ್ನರ್ಪಿಸಿಕೊಳ್ಳುತ್ತಾ ಪ್ರೀತಿಯಿಂದು ಸ್ವೀಕರಿಸುವಂತೆ ಬೇಡಿಕೊಳ್ಳುತ್ತಾನೆ.

ಪಂಚಾಕ್ಷರೀ ಮಂತ್ರ ಜಪಿಸುತ್ತಾ ಪುಳಕಾಂಕುರವೇರಿ, ದೇಹ ಕಂಪಿಸುತ್ತಾ, ನಮೋ ನಮೋ ಎಂದರ್ಚಿಸುತ್ತಾ ಉನ್ನತಭಕ್ತಿಯಿಂದ ಪಾಡುತ್ತಾ ದೇಹವೆಲ್ಲ ಮಂತ್ರಪೂತವಾಗಿ ಪುಳಕ ದಳವೇರೆ ಮೈಯುಬ್ಬಿ ಆ ಉತ್ಕಟ ಭಕ್ತಿಯ ಆವೇಶದಲ್ಲಿ ಮೈಮರೆಯುವ ಹರಿಹರನಂತಹ ಭಕ್ತಾಗ್ರಣಿ ಕಾಣಸಿಗುವುದು ಅಪರೂಪ. ಈ ದೃಷ್ಟಿಯಲ್ಲಿ ಕನ್ನಡಕ್ಕೆ ಒಬ್ಬನೇ ಹರಿಹರ. ಪೂಜ್ಯರಾದ ಡಿ. ಎಲ್. ನರಸಿಂಹಚಾರ್ಯರು ಹೇಳುವಂತೆ "ಅವನ ಎದೆ ತುಡಿದಿರುವಷ್ಟು, ಕಣ್ಣಿಗೆ ಕಂಡ ವಿರೂಪಾಕ್ಷನನ್ನು ಸ್ತುತಿಸಿರುವಷ್ಟು, ತನ್ನ ಆತ್ಮವನ್ನು ಅವನಿಗೆ ಅರ್ಪಿಸಿ ಹಿಗ್ಗಿರುವಷ್ಟು ಬೇರಾವ ಕವಿಯ ಹೃದಯ ತುಡಿದಿದೆ, ಸ್ತುತಿಸಿದೆ, ಹಿಗ್ಗಿವೆ!"

---

# ವೀರಶೈವ ಧಾರ್ಮಿಕ ವಿಚಾರಗಳು

● ಶ್ರೀ ಬಿ. ನಂಜುಂಡಪ್ಪ
ಕನಕಪುರ

ವೀರಶೈವವು ಪರಮ ಪವಿತ್ರವಾದ ಧರ್ಮವಾಗಿದೆ. ಶಿವ ಜೀವರ ಐಕ್ಯವನ್ನು ಬೋಧಿಸತಕ್ಕದ್ದು ಈ ಧರ್ಮದ ಜೀವಾಳವಾಗಿದೆ. ಯಾವ ಒಂದು ಪರವಸ್ತುವಿನಿಂದ ಈ ಜಗತ್ತೂ, ಜೀವರಾಶಿಗಳೂ ಉತ್ಪನ್ನವಾದವೋ, ಆ ಯಾವ ಒಂದು ವಸ್ತುವಿನಲ್ಲಿ ಅವೆಲ್ಲವೂ ಅಡಗುವವೋ, ಆ ಒಂದು ಶಕ್ತಿ ವಿಶಿಷ್ಟವಾದ ಪರಬ್ರಹ್ಮದ ನಿಲವು ಇಲ್ಲಿ ಬೋಧಿಸಲ್ಪಡುತ್ತದೆ.

ಸಕಲ ಪ್ರಾಣಿವರ್ಗಗಳಲ್ಲೂ ಮಾನವನೇ ಅತಿ ಉನ್ನತ ಮಟ್ಟದವನು. ಎಣಿಸಲು ಸಾಧ್ಯವಿಲ್ಲದಷ್ಟು ಜನ್ಮಗಳಲ್ಲಿ ಬಂದು ಅಂಡಲೆದು, ಸುಕೃತವಿಶೇಷದಿಂದ ಜೀವನು ಮಾನವ ಜನ್ಮದಲ್ಲಿ ಹುಟ್ಟುವನೆಂದು ಹಿಂದಿನವರು ಹೇಳಿದ್ದಾರೆ. ಇತರ ಪ್ರಾಣಿ ವರ್ಗಗಳಲ್ಲಿ ಕಂಡುಬರದ ವಿಶೇಷರೀತಿಯ ತಿಳಿವಳಿಕೆಯು ಮಾನವನಿಗಿರುತ್ತದೆ. ಆತ್ಮಾನಾತ್ಮ ವಸ್ತುವಿವೇಕವನ್ನು ಹೊಂದಿ, ತನ್ನ ಜೀವನದ ಅಂತಿಮ ಗುರಿಯನ್ನು ಸಾಧಿಸುವುದು ಆತನ ಆದ್ಯಕರ್ತವ್ಯವಾಗಿದೆ. ತನ್ನ ಗುರಿಯನ್ನು ಸಾಧಿಸದೇ ಹೋದರೆ ಮತ್ತೆ ಜನನ ಮರಣ ಸಂಭಂಧವಾದ ದೊಡ್ಡ ತೊಡಕಿನಲ್ಲಿ ಬಿದ್ದು ನರಳುವ ಕಷ್ಟ ತಪ್ಪಿದ್ದಲ್ಲ.

ವೀರಶೈವ ಧರ್ಮದಲ್ಲಿ ಜೀವನು ಶಿವನಾಗುವ ಸಕಲ ಸಾಧನೋಪಾಯಗಳನ್ನು ಗುರುವಿನಿಂದ ಅರಿತು ಆಚರಿಸಬೇಕು. ಜ್ಞಾನ ಕ್ರಿಯೆಗಳೆರಡೂ ರಥದ ಎರಡು ಗಾಲಿಗಳಂತೆ, ಪಕ್ಷಿಯ ಎರಡು ರೆಕ್ಕೆಗಳಂತೆ, ಸಾಧಕನಿಗೆ ಅತಿ ಮುಖ್ಯ ಸಾಧನಗಳಾಗಿವೆ. ಇವುಗಳಲ್ಲಿ ಒಂದು ಪ್ರಧಾನ ಮತ್ತೊಂದು ಗೌಣ ಎನ್ನುವಂತಿಲ್ಲ.

ಜೀವನು ಮೂಲದಲ್ಲಿ ಪರಮಾತ್ಮನಿಂದ ಬೇರೆಯಲ್ಲ. ಏಕಮೇವಾದ್ವಿತೀಯನೆನಿಸಿದ ಪರಬ್ರಹ್ಮನ ಅಂಶೀಭೂತನೇ ಜೀವನು. ಅಜ್ಞಾನರೂಪವಾದ ಮಾಯಾಜಾಲವು ಮುಸುಕಿರುವುದರಿಂದ ಜೀವನಿಗೆ ತನ್ನ ಸ್ವರೂಪಜ್ಞಾನವಾಗದೆ, ತಾನು ಬೇರೆ ಪರಮಾತ್ಮನು ಬೇರೆ–ಈ ದೇಹವೇ ನಾನು ಎಂಬ ಭ್ರಮೆಯ ಕಲ್ಪನೆಯುಂಟಾಗಿದೆ. ತನ್ನ ನಿಜಸ್ಥಿತಿಯ ಅರಿವನ್ನುಂಟುಮಾಡಲು ಶ್ರೀ ಗುರುವು ಅವನಿಗೆ ಸಹಾಯನೂ ಮಾರ್ಗದರ್ಶಕನೂ ಆಗುತ್ತಾನೆ. ಶ್ರೀ ಗುರುವು ಮಾನವ ರೂಪದಿಂದ

ಬಂದ ಪರಮಾತ್ಮನೇ ಆಗಿದ್ದಾನೆ. ಆದುದರಿಂದ ಅಂತಹ ಗುರುವಿನ ಆಶ್ರಯ ವನ್ನೂ ಕರುಣೆಯನ್ನೂ ಸಂಪಾದಿಸಬೇಕು. ಆ ಮೂಲಕ ಈ ಬಗೆಯ ಜ್ಞಾನ ಬೋಧೆಯನ್ನು ಪಡೆಯುವ ಸಂಸ್ಕಾರವೇ ದೀಕ್ಷೆಯೆನಿಸುವುದು.

ವೀರಶೈವನು ಶ್ರೀಗುರುವಿನ ಆಶ್ರಯವನ್ನು ಪಡೆದು, ಶಿವದೀಕ್ಷೆಯನ್ನು ಹೊಂದಿ ಅಷ್ಟಾವರಣ ಮತ್ತು ಪಂಚಾಚಾರಗಳೆಂಬ ಆಚರಣೆಗಳ ಮೂಲಕ ಷಟ್ ಸ್ಥಲ ಮಾರ್ಗದಲ್ಲಿ ನಡೆದು ಲಿಂಗಾಂಗ ಸಾಮರಸ್ಯ ರೂಪವಾದ ಮೋಕ್ಷವನ್ನು ಹೊಂದುವನು.

## ಶಿವದೀಕ್ಷೆ

ಮಾಯಾವೃತವಾದ ಶಿವಾಂಶವೇ ಜೀವವೆಂದು ಹೇಳಿದೆಯಷ್ಟೆ. ಅಜ್ಞಾನ ಮಯವಾದ ಈ ಮಾಯಾವರಣವೇ ಮಲತ್ರಯವೆಂಬ ಹೆಸರಿನಿಂದ ಪ್ರವೃತ್ತಿ ಪರ ವಾಗಿ ಜೀವನನ್ನು ಬಂಧನದಲ್ಲಿರಿಸುವುದು. ಲಿಂಗ ಸಂಬಂಧವಾದ ಜ್ಞಾನವನ್ನುಂಟು ಮಾಡಿ, ಮಲತ್ರಯಗಳಿಂದ ಬಿಡಿಸುವ ಸಂಸ್ಕಾರವೇ ದೀಕ್ಷೆಯೆನಿಸುವುದು.

ಜೀವನಿಗೆ ಸ್ಥೂಲ, ಸೂಕ್ಷ್ಮ ಮತ್ತು ಕಾರಣಗಳೆಂಬ ಮೂರು ತನು (ದೇಹ) ಗಳಿರುವವು. ಸ್ಥೂಲದೇಹ ಹೊರಗೆ ಗೋಚರಿಸತಕ್ಕದ್ದು. ಸೂಕ್ಷ್ಮದೇಹ ಸ್ವಪ್ನಾ ವಸ್ಥೆಯ ವ್ಯವಹಾರಗಳಲ್ಲಿ ಗೋಚರವಾಗುತ್ತದೆ. ಅದು ಪ್ರಾಣದ ನೆಲೆ. ಕಾರಣ ದೇಹ ಅತ್ಯಂತ ಸೂಕ್ಷ್ಮತರ, ಅದು ಭಾವದ ಆಶ್ರಯ ಸ್ಥಾನ.

ಆಣವ, ಮಾಯಾ, ಕಾರ್ಮಿಕ ಮಲತ್ರಯಗಳು ಕ್ರಮವಾಗಿ ಈ ಮೂರು ತನುಗಳನ್ನೂ ಆವರಿಸಿರುವವು. ಅವುಗಳ ಆವರಣದಿಂದ ಜೀವನಿಗೆ ತನ್ನ ಸಹಜ ಸ್ಥಿತಿಯ ಅರಿವಾಗುವುದಿಲ್ಲ. ಅವುಗಳ ಪ್ರಭಾವದಿಂದ ಜೀವನು ಅಜ್ಞಾನದಲ್ಲಿ ವ್ಯವಹರಿಸುವನು. ಶಿವನ ಪ್ರವೃತ್ತಿ ಪರವಾದ ಇಚ್ಛಾ, ಜ್ಞಾನ, ಮತ್ತು ಕ್ರಿಯಾ ಶಕ್ತಿಗಳೇ ಸಂಕೋಚಹೊಂದಿ ತ್ರಿಮಲಗಳಾಗಿರುವವೆಂದು ಹೇಳಲ್ಪಟ್ಟಿದೆ. ಆಣವ ಮಲವು ಜೀವನಲ್ಲಿ ದೇಹವೇ ನಾನು ಎಂಬ ಬುದ್ಧಿಯನ್ನು ಹುಟ್ಟಿಸಿ ಆತ್ಮನನ್ನು ಅಣು ರೂಪನನ್ನಾಗಿ ಮಾಡಿರುವುದು. ಮಾಯಾಮಲವು ಆತ್ಮನಲ್ಲಿ ಕಿಂಚಿಜ್ಞತೆಯ ನ್ನುಂಟುಮಾಡಿರುವುದು. ಕಾರ್ಮಿಕ ಮಲದಿಂದ ಜೀವನು ಕಿಂಚಿತ್ ಕರ್ತೃತ್ವವನ್ನು ಹೊಂದಿ ಪುಣ್ಯ ಪಾಪಗಳನ್ನು ಮಾಡುತ್ತಾ 'ನಾನು ಸುಖಿ, ನಾನು ದುಃಖಿ' ಎಂಬ ವ್ಯವಹಾರದಿಂದಿರುವನು.

## ಶ್ರೀ ಗುರುವಿನ ಕಾರ್ಯ

ಶ್ರೀ ಗುರುವು ತನ್ನ ಪರುಷ ಹಸ್ತವನ್ನು ಶಿಷ್ಯನ ಮಸ್ತಕದ ಮೇಲಿಟ್ಟು (ಹಸ್ತ ಮಸ್ತಕ ಸಂಯೋಗದಿಂದ) ವೇಧಾ, ಮನು (ಮಂತ್ರ), ಮತ್ತು ಕ್ರಿಯಾ ಎಂಬ

ಮೂರು ಬಗೆಯ (೨೧ ತೆರದ) ದೀಕ್ಷಾಸಂಸ್ಕಾರಗಳಿಂದ ಮಲತ್ರಯಗಳ ಅವಿದ್ಯಾ ಗ್ರಂಥಿಯನ್ನು ಛೇದಿಸಿ, ಶಿಷ್ಯನಲ್ಲಿ ಸುಪ್ತವಾಗಿ ಅಡಗಿರುವ ನಿಷ್ಕಲ ಶಿವಚೈತನ್ಯವನ್ನು ಚೇತನಗೊಳಿಸಿ, ಕಾರಣ ಶರೀರದಲ್ಲಿ ಭಾವಲಿಂಗವನ್ನಾಗಿ, ಸೂಕ್ಷ್ಮಶರೀರದಲ್ಲಿ ಪ್ರಾಣ ಲಿಂಗವನ್ನಾಗಿ ಮತ್ತು ಸ್ಥೂಲ ಶರೀರದಲ್ಲಿ ಇಷ್ಟಲಿಂಗವನ್ನಾಗಿ ಸಂಬಂಧಗೊಳಿಸು ವನು. ಶಿಷ್ಯನ ಸರ್ವಾಂಗದಲ್ಲಿ ಲಿಂಗ ಸಂಬಂಧವಾಗುವುದು. ಮಾಂಸಪಿಂಡವು ಮಂತ್ರಪಿಂಡವಾಗಿ ಪರಿವರ್ತನಗೊಳ್ಳುವದು. ಮಲತ್ರಯಗಳನ್ನು ನೀಗಿದ ಶರೀರ ಗಳು ಲಿಂಗತನುಗಳಾಗುವವು. ಲಿಂಗ ಶರೀರಿಯಾದ ಮಂತ್ರಶುದ್ಧನಾದ ಜೀವನು ಅಂಗನೆನಿಸಿಕೊಳ್ಳುವನು. ಶ್ರೀ ಗುರುವು ನಿಷ್ಕಲ ವಸ್ತು (ಸ್ವಸ್ವರೂಪ) ಜ್ಞಾನ ವನ್ನುಂಟುಮಾಡುವನಲ್ಲದೆ ತತ್ಸಾಧನೆಯ ಕ್ರಮವನ್ನೂ (ಆಚಾರವನ್ನೂ) ಗುರಿ ಯನ್ನೂ ಅರುಹುವನು. ಅಂದಿನಿಂದ ಶಿಷ್ಯನು ತನ್ನ ಪೂರ್ವಾಶ್ರಯದ, ಎಂದರೆ– ತನ್ನ ಹಿಂದಿನ ಜನ್ಮಾಂತರಗಳ ಮತ್ತು ಜನ್ಮಕ್ಕೆ ಕಾರಣರಾದ ಐಹಿಕ ತಂದೆ ತಾಯಿಗಳ ರಕ್ತಸಂಬಂಧವಾದ ಜನನ ದೋಷದಿಂದ ಬಿಡುಗಡೆ ಹೊಂದುವನು. ಗುರುಕರಜಾತ ನೆನಿಸುವನು. ಅಂಗನು ಸಾಧಕನಾಗಿ ಕ್ರಮಕ್ರಮವಾಗಿ ಜ್ಞಾನ ಕ್ರಿಯಾಯುಕ್ತ ಷಟ್ ಸ್ಥಲಾಚರಣೆಯಿಂದ ಅಂಗಗುಣಗಳನ್ನು ದೂರೀಕರಿಸಿ, ಲಿಂಗಗುಣಗಳನ್ನು ಸಂಪೂರ್ಣ ಅಳವಡಿಸಿಕೊಂಡು ಉರಿ ಕರ್ಪೂರ ಸಂಯೋಗದಂತೆ, ಲಿಂಗದಲ್ಲಿ ಸಮರಸನಾಗಿ ಲಿಂಗವೇ ಆಗುವನು. ಈ ಬಗೆಯ ಲಿಂಗಾಂಗ ಸಾಮರಸ್ಯ ರೂಪವಾದ ಮೋಕ್ಷವೇ ವೀರಶೈವ ಧರ್ಮದ ಗುರಿ.

"ಉರುತರ ಜ್ವಲಿತ ಕಾಲಾಗ್ನಿಯ ಕಾಂತಿಯನ್ನು ಜರೆವ ವಿದ್ಯುತ್ ಕೋಟಿಯ ಕಾಂತಿಯನ್ನು ಹಳಿವ, ಮತ್ತು ಶಿಖಾ ಚಕ್ರದಲ್ಲಿ ಸೂಕ್ಷ್ಮದಿಂದ ಚಿದ್ರೂಪಿನಿಂದ ಹೊಳೆ ಯುವ ಚಿತ್ಕಳೆಯನ್ನು ದೀಕ್ಷಾಗುರುವು ಭಾವಕ್ಕೆ ತಂದು, ಭಾವದಿಂದ ಮನಕ್ಕೆ, ಮನ ದಿಂದ ದೃಕ್ಕಿಗೆ, ದೃಕ್ಕಿನಿಂದ ಕರಸ್ಥಲಕ್ಕೆ ತಂದು, ಶಿಷ್ಯನಮಸ್ತಕದಲ್ಲಿ ಹಸ್ತವನ್ನಿರಿಸಿ, ವೇಧಾ ದೀಕ್ಷೆಯಿಂದ ಕಾರಣ ತನುವಿನಲ್ಲಿ ಭಾವಲಿಂಗವನ್ನೂ, ಮಂತ್ರ ದೀಕ್ಷೆಯಿಂದ ಕರ್ಣದ್ವಾರಾ ಸೂಕ್ಷ್ಮ ತನುವಿನಲ್ಲಿ ಪ್ರಾಣಲಿಂಗವನ್ನೂ ಕ್ರಿಯಾದೀಕ್ಷೆಯಿಂದ ಸ್ಥೂಲತನುವಿನ ಕರದಲ್ಲಿ ಇಷ್ಟಲಿಂಗವನ್ನೂ ಪ್ರತಿಷ್ಠಿಸುವನು."

## ಮಹಾಲಿಂಗ ಸ್ವರೂಪ

"ಭಾವದಲ್ಲಿ ಗೋಚರಿಸುವ ಮಹಾಲಿಂಗವು ನಿಷ್ಕಲ ರೂಪವಾಗಿರುತ್ತದೆ; ಅದೇ ಭಾವಲಿಂಗ. ಆ ಲಿಂಗವೇ ಸಕಲ ನಿಷ್ಕಲ ರೂಪದಿಂದ ಮನಕ್ಕೆ ಗೋಚರಿಸಿ ಪ್ರಾಣ ಲಿಂಗವೆನಿಸುತ್ತದೆ. ಅದೇ ಸಕಲ ರೂಪದಿಂದ ಕಣ್ಣಿಗೆ ಗೋಚರಿಸಿ ಇಷ್ಟಲಿಂಗವಾಗಿರು ತ್ತದೆ. ಅದು ಅತ್ಯತಿಷ್ಠದ್ದಶಾಂಗುಲವು ನಿರುಪಮವು ನಿತ್ಯವು ನಿರಾಮಯವು ನಿರ್ಗುಣವು ಪಾಪರಹಿತವು ನಿರಂಜನವು, ನಿರ್ದ್ವಂದ್ವವು ಅವ್ಯಕ್ತವು ಅವ್ಯಯವು

ನಿಃಶೂನ್ಯವು. ಸಾಕ್ಷಿರೂಪಕವು ಅಕರ್ತೃಕವು ಅಭೋಕ್ತೃಕವು ಏಕಮೇವಾದ್ವಿತೀಯ ಬ್ರಹ್ಮವು. ಪರಕೆ ಪರವೆನಿಸುವ ಪರಬ್ರಹ್ಮವು."

—ಶ್ರೀ ಚನ್ನಬಸವೇಶ್ವರ ಪುರಾಣ–ಪೀಠಿಕೆ.

ಜನನ ಉಂಟಾದವನಿಗೆ ಮರಣವೂ ಉಂಟು. ಆದರೆ, ಶ್ರೀ ಗುರುವಿನ ಕೃಪೆಯಿಂದ ಜನನದ ಜಂಜಡ ನಿವೃತ್ತಿಯಾದ ಕಾರಣ ಶಿವದೀಕ್ಷೆಯನ್ನು ಪಡೆದ ವೀರಶೈವನಿಗೆ ಜನನ ಸೂತಕವಿರುವುದಿಲ್ಲ. ಸಾಧನೆಯಿಂದ ಲಿಂಗದಲ್ಲಿ ಅಡಗಿ ಲಿಂಗವೇ ಆಗುವನಾದ ಕಾರಣ ಮರಣದ ಭಯವೂ ಇರುವುದಿಲ್ಲ. ಮುಂದೆ ಹುಟ್ಟುವ ಸಂದೇಹಕ್ಕೆ ಅವಕಾಶವಿರದು. ಅದು ಕಾರಣ ಲಿಂಗಾಂಗಿಯು ಇಂದಿನ ಜನ್ಮದಲ್ಲಿಯೇ ಮುಕ್ತಿ ಹೊಂದುವನು.

ಶ್ರೀ ಗುರುವಿನ ಅನುಗ್ರಹದಿಂದುಂಟಾದ ಸ್ವಸ್ವರೂಪ ಜ್ಞಾನಕ್ರಿಯಾ ಸಂಬಂಧವನ್ನೂ ಲೌಕಿಕ ಮತ್ತು ಪಾರಮಾರ್ಥಿಕ ತ್ಯಾಗ–ಭೋಗ ಸಮನ್ವಯ ವಿಚಾರಗಳನ್ನೂ ಅರಿತು, ಗುರೂಪದೇಶವನ್ನು ಮನನ ಮಾಡಿ, ಅದರಂತೆ ಆಚರಿಸಬೇಕು. ಸತ್ಯವೂ ಶುದ್ಧವೂ ಆದ ಕಾಯಕದಲ್ಲಿ ನಿರತನಾಗಿ, ಶರಣರ ಅಥವಾ ಶಿವಾನುಭಾವಿಗಳ ಸದ್ಗೋಷ್ಠಿಗಳಲ್ಲಿ ಆಸಕ್ತನಾಗಬೇಕು. ಪಂಚಾಚಾರ ಯುಕ್ತನಾಗಿ ನೀತಿವಂತನಾಗಬೇಕು. ವೀರಶೈವನಿಗೆ ಅಷ್ಟಾವರಣವೇ ಅಂಗವಾಗಿ, ಪಂಚಾಚಾರವೇ ಪ್ರಾಣವಾಗಿ ಷಟ್‌ಸ್ಥಲಗಳೇ ಆತ್ಮವಾಗಬೇಕು.

## ದೀಕ್ಷೋಪದೇಶ

ಶಿವದೀಕ್ಷಾ ಕಾಲದಲ್ಲಿ ಶ್ರೀ ಗುರುವು ಶಿಷ್ಯನಿಗೆ ಬೋಧಿಸುವ ವಿಚಾರಗಳನ್ನು ಈ ರೀತಿ ಸಂಕ್ಷೇಪಿಸಬಹುದು.

"೧. ಇಂದಿನಿಂದ ನಿನ್ನ ಅಂಗವು ಶಿವದೀಕ್ಷೆಯಿಂದ ನಿರ್ಮಲವಾಗಿ, ನಿನ್ನ ಪ್ರಾಕೃತ ದೋಷಗಳ ಸಂಪರ್ಕವಿಲ್ಲವಾಗಿ. ಇನ್ನು ನೀನು ಶರಣರ ಮಾರ್ಗದಲ್ಲಿ ಸಾವಧಾನವಾಗಿ ವರ್ತಿಸು.

೨. ಪ್ರಾತಃ ಸಾಯಂಕಾಲಗಳಲ್ಲಿ ನಿಯಮದಿಂದ ಸ್ನಾನಮಾಡಿ, ಭಸ್ಮ ರುದ್ರಾಕ್ಷಿಗಳನ್ನು ಧರಿಸಿ, ಶ್ರೀ ಶಿವ ಪಂಚಾಕ್ಷರಿಯನ್ನು ಜಪಿಸುತ್ತಾ ವಾಮಹಸ್ತ ಪೀಠದಲ್ಲಿ ನಿನ್ನ ಇಷ್ಟಲಿಂಗವನ್ನು ಪೂಜಿಸು.

೩. ಶೌಚದಿಂದ ಕಾಯಕವನ್ನೂ, ಸತ್ಯದಿಂದ ವಚನವನ್ನೂ, ಶಿವಸಂಕಲ್ಪದಿಂದ ಮನವನ್ನೂ ಶುದ್ಧ ಮಾಡಿ ನೀನು ಇನ್ನು ಮೇಲೆ ಶಿವಾಚಾರದಲ್ಲಿ ಆಸಕ್ತಿಯನ್ನು ಹೊಂದು.

೪. ಗುರುಲಿಂಗ ಜಂಗಮರ ಹೊರತು ಸ್ಥಾವರ ಲಿಂಗಾದಿಗಳಲ್ಲಿ, ಶಿವ ಪ್ರಸಾದವ ಹೊರತು ಪ್ರಾಕೃತಪ್ರಸ್ನಾದಿಗಳಲ್ಲಿ ನಿನಗೆ ಆಸಕ್ತಿಯಾಗಬಾರದು.

೫. ಪರಿಶುದ್ಧವಾದ ಯಾವುದಾದರೊಂದು ಕಾಯಕದಿಂದ ದ್ರವ್ಯವನ್ನು ಗಳಿಸಿ ದಾಸೋಹಂ ಭಾವದಿಂದ ವರ್ತಿಸು.

೬. ದೀಕ್ಷೆಯಿಂದ ಪವಿತ್ರರೂ ಅಪ್ರಾಕೃತಾಚಾರಪರರೂ ಆದ ವೀರಶೈವರಲ್ಲಿ ಜಾತಿ ವೃತ್ತಿ ಕುಲಾಚಾರಗಳ ಭೇದವನ್ನು ಎಂದಿಗೂ ಭಾವಿಸಬೇಡ.

೭. ಎಂದಾದರೂ ಶಿವಧರ್ಮದ ವಿಷಯದಲ್ಲಿ ನಿನಗೆ ಸಂದೇಹವು ಬಂದರೆ ಶಿವ ಶಾಸ್ತ್ರಪಾರಂಗತರೂ, ಪೂರ್ವಾಚಾರಜ್ಞರೂ ಆದ ಶಿವಶರಣರ ನಿರ್ಣಯವನ್ನು ಮಾನಿಸು.

೮. ಎಲ್ಲಿಯಾದರೂ ಶಿವಾಚಾರಕ್ಕೆ ಮತ್ತು ಶಿವಸ್ಥಾನ ಶಿವಶಾಸ್ತ್ರಗಳಿಗೆ ಅಪಾಯವು ಸಂಭವಿಸಿದರೆ ನೀನು ಪ್ರಾಣವನ್ನಾದರೂ ಬಿಟ್ಟು ಅದಕ್ಕೆ ಪ್ರತೀಕಾರವನ್ನು ಮಾಡು.

೯. ಗುರುವಿನಲ್ಲಿಯೂ ಜಂಗಮದಲ್ಲಿಯೂ ವೈಷಮ್ಯ ಮಾಡದೆ, ಅವರಿಬ್ಬರ ಆಚಾರ ಜ್ಞಾನ ರೂಪತೆಯನ್ನು ನಿನ್ನಲ್ಲಿ ಅಳವಡಿಸಿ, ಪಾದೋದಕ ಪ್ರಸಾದಗಳ ಪರಿಣಾಮಗಳನ್ನು ಪಡೆ.

೧೦. ಹೀಗೆ ಷಟ್‌ಸ್ಥಲ ಮಾರ್ಗದಿಂದ ನಡೆದು, ಕ್ರಿಯೆಯನ್ನು ಜ್ಞಾನದಲ್ಲಿ ಮುಗಿಯಿಸಿ ಲಿಂಗಾಂಗ ಸಾಮರಸ್ಯವೆಂಬ ಪರಮಾನಂದವನ್ನು ಹೊಂದು.

ಇದೇ ಗುರುವಿನ ಆದೇಶವು; ಇದೇ ಗುರುವಿನ ಉಪದೇಶವು."

—ಜಗದ್ಗುರು ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳಿಂದ.

## ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲಗಳ ಸಂಕ್ಷಿಪ್ತ ಪರಿಚಯ

ವೀರಶೈವ ಧರ್ಮಾಚರಣೆಯಲ್ಲಿ ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲಗಳು ಧರ್ಮದ ವೈಶಿಷ್ಟ್ಯಗಳಾಗಿವೆ. ಗುರು ಲಿಂಗ ಜಂಗಮ ಇವು ಮೂರು ಆ ಪರವಸ್ತುವಿನ ಮೂರು ರೂಪಗಳೇ ಆಗಿವೆ. ಭಸ್ಮ, ರುದ್ರಾಕ್ಷಿ ಮಂತ್ರಗಳು ಸಾಧನಗಳು. ಪಾದೋದಕ ಪ್ರಸಾದಗಳು ಫಲಗಳು. ಅವುಗಳ ಅಂತರಂಗ ಬಹಿರಂಗ ಸಂಬಂಧವರಿಯುವುದರಿಂದಲೇ ಲಿಂಗಾಂಗ ಸಾಮರಸ್ಯ ಜ್ಞಾನವುಂಟಾಗುತ್ತದೆ.

### ಅಷ್ಟಾವರಣಗಳು

ಶಿವದೀಕ್ಷೆಯ ಕಾಲದಲ್ಲಿ ಶಿಷ್ಯನಿಗೆ ಗುರು, ಲಿಂಗ, ಜಂಗಮ, ಭಸ್ಮ, ರುದ್ರಾಕ್ಷಿ ಮಂತ್ರ, ಪಾದೋದಕ, ಮತ್ತು ಪ್ರಸಾದ ಎಂಬ ಎಂಟು ಆವರಣಗಳ ಸಂಬಂಧ

ಉಂಟಾಗುತ್ತದೆ. ಈ ಎಂಟು ಆವರಣಗಳ ರಕ್ಷಣೆಯಿಂದ ಅಂಗನು ಲಿಂಗದಲ್ಲಿ ಬೆರೆಯುವ ಗುರಿಯನ್ನು ಸಾಧಿಸುವನು. ಇವು ಭಕ್ತನಿಗೆ ಅಂಗವಾಗಿವೆ.

**೧. ಗುರು:** ದೀಕ್ಷೆಯ ಮೂಲಕ ಇಷ್ಟಲಿಂಗವನ್ನು ಧರಿಸಿ, ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲಗಳ ಜ್ಞಾನಬೋಧೆ ಮಾಡುವನು ಗುರು. ನಮಗೆ ಆಚಾರ ವಿಚಾರಗಳನ್ನು ಕಲಿಸುವನು. ದೇಹವನ್ನು ಶುದ್ಧವಾಗಿಟ್ಟುಕೊಳ್ಳುವ ಆಚಾರಗಳನ್ನೂ ಮನಸ್ಸು ಒಳ್ಳೆಯ ವಿಚಾರಗಳಲ್ಲಿ ತೊಡಗುವ ಪರಿಯನ್ನೂ ತಿಳಿಸುವನು.

**೨. ಲಿಂಗ:** ಹಸ್ತಮಸ್ತಕ ಸಂಯೋಗದಿಂದ ಶ್ರೀಗುರುವು ಶಿಷ್ಯನಲ್ಲಿರುವ ಚೈತನ್ಯವನ್ನು ಬಹಿಷ್ಕರಿಸಿ ಕೊಟ್ಟುದೇ ಲಿಂಗ. ಇದೇ ಇಷ್ಟಲಿಂಗ. ಸಕಲ ಲೋಕಗಳಿಗೂ ಒಡೆಯನಾದ ನಿರಾಕಾರ ಪರಬ್ರಹ್ಮವೇ ಲಿಂಗರೂಪವಾಗಿದೆ. ಅದು ಸಕಲ ಬ್ರಹ್ಮಾಂಡಗಳ ಸಕಲ ತತ್ತ್ವಗಳ ಸ್ಥಾಯೀಭೂತವು. ಅವೆಲ್ಲವುಗಳನ್ನು ತನ್ನಲ್ಲಿ ಅಡಗಿಸಿಕೊಳ್ಳತಕ್ಕದೂ ಆಗಿದೆ. ಆದ್ದರಿಂದ ಸ್ಥಲವೆಂದು ಕರೆಯಲ್ಪಟ್ಟಿವೆ. ಅದು ಓಂಕಾರ ಸ್ವರೂಪವೂ ಆಗಿದೆ. ಗುರುವಿನ ಉಪದೇಶದಂತೆ, ಸದಾ ದೇಹದ ಮೇಲೆ ಧರಿಸಿ, ಇಷ್ಟ ಪ್ರಾಣ ಭಾವಲಿಂಗಗಳ ಸಂಬಂಧದಿಂದ ಧ್ಯಾನಿಸಿ ಸ್ತುತಿಸಿ ಪೂಜಿಸುವುದು. ವೀರಶೈವನ ಸರ್ವಾಂಗದಲ್ಲೂ ವ್ಯಾಪಿಸಿರುವುದು.

**೩. ಜಂಗಮ:** ಲಿಂಗದ ನಿಜ ಜ್ಞಾನವನ್ನು ಅರುಹಿ ಲಿಂಗವು ಲಿಂಗದೊಡನೆ ಸಮರಸವಾಗುವ ಪರಿಯನ್ನು ತಿಳಿಸುವವನು ಗುರುವಾದರೆ, ಗುರು ಹೇಳಿದಂತೆ ಶಿಷ್ಯನು ನಡೆಯುವನೇ ಇಲ್ಲವೇ ಎಂಬುದನ್ನು ಪರೀಕ್ಷಿಸಿ ತಪ್ಪು ನೆಪ್ಪುಗಳನ್ನು ಸರಿಪಡಿಸಿ, ಪೂಜೆಗೊಂಡು ಪಾದೋದಕ ಪ್ರಸಾದಗಳನ್ನು ಅನುಗ್ರಹಿಸುವವನು ಜಂಗಮನು. ಪ್ರಸಾದ ಭೋಗಮೂರ್ತಿ.

ಭಕ್ತನು ಗುರುವಿಗೆ ತನುವನ್ನೂ, ಲಿಂಗಕ್ಕೆ ಮನವನ್ನೂ ಜಂಗಮಕ್ಕೆ ಧನವನ್ನೂ (ಅರ್ಥ ಪ್ರಾಣ ಅಭಿಮಾನಗಳನ್ನೂ) ಅರ್ಪಿಸಬೇಕು.

**೪. ಭಸ್ಮ:** ಭಸ್ಮವು ಶಿವನ ಮೈ ಬೆಳಗು. ಮೂರು ಎಸಳುಗಳುಳ್ಳದ್ದಾದ್ದರಿಂದ ತ್ರಿಪುಂಡ್ರವೆನಿಸಿದೆ. ಮೂರು ಮಲಗಳು ನಾಶವಾಗುವುದರ ಗುರುತು ಇದು. ಶಿವನಜ್ಯೋತಿ ಸ್ವರೂಪವು ಆಗಿರುವುದಲ್ಲದೆ ಐಶ್ವರ್ಯಪ್ರದವೂ ಆಗಿದೆ. ರೋಗರುಜಿನಾದಿಗಳ ಭೂತಪ್ರೇತಗಳ ಭಯವನ್ನು ದೂರಮಾಡುತ್ತದೆ.

೫. **ರುದ್ರಾಕ್ಷಿ** : ರುದ್ರಾಕ್ಷಿಯು ಶಿವನ ಚಕ್ಷುವಿನಿಂದ ಉದಯವಾದುದು. ಇದನ್ನು ಧರಿಸುವುದರಿಂದ ಅನಂತ ಪಾಪಗಳು ತೊಲಗುವುದಲ್ಲದೆ, ಶಿವಪದಪ್ರಾಪ್ತಿಗೆ ಇದು ಸಾಧಕವಾಗಿರುವುದು, ಶಿವಜ್ಞಾನವನ್ನುಂಟು ಮಾಡುವುದು.

**೬. ಮಂತ್ರ:** ಶ್ರೀ ಗುರುವಿನಿಂದ ಬೋಧಿಸಲ್ಪಟ್ಟ ಷಡಕ್ಷರ ಮಹಾಮಂತ್ರ. ಅದು ಶಿವನ ನಾಮ. ಗುರು ಹೇಳಿದ ರೀತಿಯಲ್ಲಿ ಜಪಿಸಬೇಕು. ಅದು ಶಿವ ಜೀವರ ಐಕ್ಯವನ್ನು ಬೋಧಿಸುವುದಾಗಿದೆ.

೭. **ಪಾದೋದಕ :** ಗುರು ಜಂಗಮರ ಪಾದ ತೀರ್ಥವೇ ಪಾದೋದಕ. ಪರಿಶುದ್ಧ ಕ್ರಿಯೆಯಿಂದ ಪಡೆದ ಪಾದೋದಕದಲ್ಲಿ ಜ್ಞಾನಾಗ್ನಿಯು ಕೂಡಿರುತ್ತದೆ. ಅದನ್ನು ಭಕ್ತಿಯಿಂದ ಸೇವಿಸುವುದರಿಂದ ಶಿವಜ್ಞಾನವು ಅಳವಡುವುದು. ಸಕಲ ಪಾಪಗಳೂ ಪರಿಹಾರವಾಗುವುವು. ಪಾದೋದಕವು ಹತ್ತು ವಿಧವಾಗಿದೆ.

೮. **ಪ್ರಸಾದ :** ಗುರು ಲಿಂಗ ಜಂಗಮಕ್ಕೆ ಅರ್ಪಿಸಿ ಅವರು ಕೃಪೆಯಿಂದ ಕೊಟ್ಟುದೇ ಪ್ರಸಾದ. ಪದಾರ್ಥದ ರೂಪು ರುಚಿ ತೃಪ್ತಿಗಳನ್ನು ಇಷ್ಟ ಪ್ರಾಣ ಭಾವಲಿಂಗಗಳಿಗೆ ಅರ್ಪಿಸಿ ಪಡೆದ ಶೇಷವೇ ಪ್ರಸಾದ. ಅದು ಶಿವಪ್ರಸನ್ನತೆಯ ನ್ನುಂಟುಮಾಡುವುದು. ಗುರು ಲಿಂಗ ಜಂಗಮರಿಗೆ ಅರ್ಪಿಸಿ ಪಡೆದ ಪ್ರಸಾದವು ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವೆನಿಸಿದೆ. ಪ್ರಸಾದವು ಹನ್ನೊಂದು ತೆರನಾಗಿದೆ.

ಬಹಿರಂಗದ ಅಷ್ಟಾವರಣಗಳ ಆಚರಣೆಗಳಿಂದಲೇ ಅಂತರಂಗದ ಅಷ್ಟಾವರಣ ಗಳು ಸಿದ್ಧಿಸುವವು.

**ವಿಶೇಷ ವಿಷಯ ;** ಗುರು ಲಿಂಗ ಜಂಗಮರು ಒಬ್ಬನೇ ಆದ ಪರಮಾತ್ಮನ ತ್ರಿವಿಧ ಮೂರ್ತಿಗಳು. ಶ್ರೀ ಗುರುವು ಶಿಷ್ಯನ ಅಜ್ಞಾನಗ್ರಂಥಿ (ಮಲತ್ರಯ) ಯನ್ನು ಕತ್ತರಿಸಿ ಜ್ಞಾನೋಪದೇಶಮಾಡಿ, ಆತನ ಮೋಕ್ಷಕ್ಕೆ ಕಾರಣನಾಗಿದ್ದಾನೆ. ಶಿಷ್ಯನ ಅನುಗ್ರಹಾರ್ಥವಾಗಿ ಬಂದ ಶಿವನ ಸಾಕಾರಮೂರ್ತಿ. ಗುರುವು ಚೈತನ್ಯಾತ್ಮನು ಶಾಶ್ವತನು, ಶಾಂತನು, ನಿರಂಜನನು, ನಾದಬಿಂದು ಕಳಾತೀತನು. 'ನಗರೋರಧಿಕಂ' —ಗುರುವಿಗಿಂತ ಅಧಿಕವಾದುದು ಇನ್ನಿಲ್ಲ. ಗುರುವಿನಿಂದ ಅನುಗ್ರಹಿಸಲ್ಪಟ್ಟ ಲಿಂಗ ವನ್ನು ದೇಹದಿಂದ ಅಗಲಿರಬಾರದು. ಅದು ಅವನ ಪ್ರಾಣಸ್ವರೂಪು. ಸಕಲ ಇಷ್ಟಾರ್ಥಪ್ರದವಾದುದು. ಲಿಂಗವಲ್ಲದೆ ಅನ್ಯವಾದುದನ್ನು ಪೂಜಿಸಲಾಗದು. ಲಿಂಗಾಂಗಿಗೆ ಅನ್ಯದೇವತಾ ಭಜನೆ ನಿಷ್ಫಲವಾದುದು. ಜಂಗಮವು ಜ್ಞಾನಸ್ವರೂಪ ವಾಗಿದೆ. ಲಿಂಗಕ್ಕೆ ಜಂಗಮವೇ ಮುಖವಾಗಿದೆ. ಜಂಗಮ ತೃಪ್ತಿಯೇ ಲಿಂಗತೃಪ್ತಿ. ಜಂಗಮವು ಆದಿ ಮಧ್ಯಾಂತರಹಿತನು, ನಿತ್ಯಪರಿಪೂರ್ಣನು, ನಿರಾಮಯನು, ಸಗುಣ ನಿರ್ಗುಣನು, ಸಚ್ಚಿದಾನಂದರೂಪನು. ಜಂಗಮದ ಸನ್ನಿಧಿಯಲ್ಲಿ ಗುರುವು ಶಿಷ್ಯನಿಗೆ ದೀಕ್ಷಾಕಾರ್ಯವನ್ನು ಮಾಡುತ್ತಾನೆ. ಭಕ್ತನು ತನ್ನ ದೇಹಶ್ರಮದಿಂದ ಗುರುಸೇವೆ ಮಾಡಬೇಕು. ಮನಸ್ಸನ್ನು ಲಿಂಗದಲ್ಲಿರಿಸಬೇಕು. ಧನವನ್ನು ಜಂಗಮಕ್ಕೆ ಅರ್ಪಿಸ ಬೇಕು. ಭಸ್ಮವು ಕಾಲಕಾಮರನ್ನು ಸುಟ್ಟುದರ ಪ್ರತೀಕವಾಗಿದೆ. ರುದ್ರಾಕ್ಷಿಗಳನ್ನು ಧರಿಸುವುದರಿಂದ ಪವಿತ್ರಾತ್ಮನಾಗುವನು. ಗುರುವಿನಿಂದ ಬೋಧಿಸಲ್ಪಟ್ಟ ಪರಮ ಪವಿತ್ರವಾದ ಮಂತ್ರಸ್ಮರಣೆಯು ಭಕ್ತನ ಮನಸ್ಸನ್ನು ಪರಮಾತ್ಮನಲ್ಲಿ ಸದಾ ವಿಲೀನ ಗೊಳ್ಳುವಂತೆ ಮಾಡುತ್ತದೆ. ಗುರುಪಾದೋದಕದಿಂದ ಸಂಚಿತವೆಂಬ ಜನ್ಮಾರಭ್ಯ ಬಂದಿರುವ ಅಜ್ಞಾನವು ತೊಲಗಿ ಸುಜ್ಞಾನವು ನೆಲೆಗೊಳುವುದು. ಲಿಂಗಪಾದೋದಕವು

ಪ್ರಾರಬ್ಧವೆಂಬ ಐಹಿಕ ಭೋಗರೂಪವಾದ ವಿಷಯಾದಿಗಳ ದೋಷವನ್ನು ತೊಲಗಿಸಿ ಲಿಂಗಾಂಗ ಸಾಮರಸ್ಯ ಸುಖವನ್ನೀಯುವುದು. ಜಂಗಮ ಪಾದೋದಕವು ಆಗಾಮಿಯನ್ನು ಪರಿಹರಿಸಿ ಭವಭವಾಂತರಗಳ ಇಹಪರಗಳ ಅಲೆದಾಟವನ್ನು ತಪ್ಪಿಸುವುದು· ಶಿವಪ್ರಸಾದ ಸೇವನೆಯಿಂದ ಆರೋಗ್ಯಾದಿ ಶಾರೀರಕ ಸಂಪತ್ತು ಲಭಿಸುತ್ತದೆ. ಅಂತಃಕರಣವು ಪರಿಶುದ್ಧವಾಗುತ್ತದೆ. ಅಜ್ಞಾನವು ತೊಲಗಿ ಶಿವಜ್ಞಾನ ನೆಲೆಗೊಂಡು ಶಾಶ್ವತ ಸುಖವು ಲಭಿಸುತ್ತದೆ.

## ಪಂಚಾಚಾರಗಳು

ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ ಮತ್ತು ಭೃತ್ಯಾಚಾರ ಇವೇ ಪಂಚಾಚಾರಗಳು. ಇವು ವೀರಶೈವರ 'ಪ್ರಾಣ'ಸ್ವರೂಪವಾಗಿವೆ.

೧. **ಲಿಂಗಾಚಾರ :** ಇಷ್ಟಲಿಂಗವನ್ನು ದೇಹದಮೇಲೆ ಸದಾಧರಿಸಬೇಕು. ಇಷ್ಟಲಿಂಗವನ್ನೂ ಗುರು ಜಂಗಮರನ್ನೂ ಪೂಜಿಸಬೇಕು. ಲಿಂಗಗುಣ (ಸದ್ಗುಣ) ಗಳನ್ನು ತನ್ನಲ್ಲಿ ಅಳವಡಿಸಿಕೊಳ್ಳಬೇಕು. ಅನ್ಯದೇವತೆಗಳನ್ನು ಭಜಿಸಬಾರದು.

೨. **ಸದಾಚಾರ :** ಸದ್ಗುಣಗಳಿಂದ ಕೂಡಿ ಲಿಂಗನಿಷ್ಠೆಯಿಂದಿರುವುದಲ್ಲದೆ, ಸತ್ಯಶುದ್ಧಕಾಯಕವನ್ನು ಮಾಡಿ ಹಣಗಳಿಸಿ, ಗುರು ಲಿಂಗ ಜಂಗಮ ಸೇವೆ ಮಾಡಬೇಕು. ಇದರಿಂದ ತನಗೂ ತನ್ನ ಸಮಾಜಕ್ಕೂ ರಾಷ್ಟ್ರಕ್ಕೂ ಹಿತವಾಗುವುದು.

೩. **ಶಿವಾಚಾರ** : ವೀರಶೈವರೆಲ್ಲರೂ ಶಿವಸ್ವರೂಪರೆಂದು ತಿಳಿದು, ಅವರಲ್ಲಿ ಕುಲ, ಕಸಬು, ಹೆಚ್ಚು ಕಡಿಮೆಯನ್ನೆಣಿಸದಿರಬೇಕು. ಬಳಕೆ ಭೋಜನ ಶರೀರ ಸಂಬಂಧಗಳನ್ನು ನಡೆಸಬೇಕು.

೪. **ಗಣಾಚಾರ :** ಶಿವನಿಂದೆ ಶಿವಭಕ್ತರ ದೂಷಣೆಗಳನ್ನು ಕಿವಿಗೊಟ್ಟು ಕೇಳಬಾರದು. ಅದನ್ನು ತಪ್ಪಿಸಲು ಸರ್ವಪ್ರಯತ್ನವನ್ನು ಮಾಡಬೇಕು. ಪ್ರಾಣಾಂತ್ಯದವರೆಗೂ ಲಿಂಗನಿಷ್ಠೆಯಿಂದಿರುವೆನೆಂಬ ಛಲಬೇಕು.

೫. **ಭೃತ್ಯಾಚಾರ:** ಶಿವಭಕ್ತರೆಲ್ಲರೂ ಪೂಜ್ಯರೆಂದು ತಿಳಿದು, ಅವರಲ್ಲಿ ಕಿಂಕುರ್ವಾಣಭಾವದಿಂದ ನಡೆದುಕೊಳ್ಳಬೇಕು. ಅವರ ಸೇವೆ ಮಾಡಲು ಸಿದ್ಧನಾಗಬೇಕು.

**ಚನ್ನಬಸವೇಶ್ವರರ ವಚನ :**

"ಲಿಂಗವೇ ಪರವೆಂದರಿದು ಅನ್ಯದೇವರ ಭಜನೆಯಿಲ್ಲದಿಪ್ಪುದೇ ಲಿಂಗಾಚಾರ.
ಸತ್ಕ್ರಿಯೆಯಿಂದ ಧನಸಂಪಾದಿಸಿ, ಗುರುಲಿಂಗಜಂಗಮದಾಸೋಹ ದಾನ.
ಪರೋಪಕಾರ ಮಾಡುವುದೇ ಸದಾಚಾರ,

ಅಂಗದ ಮೇಲೆ ಲಿಂಗವಿರ್ಪ ಶಿವಭಕ್ತನೇ ಶಿವರೂಪೆಂದರಿದು ಆವರ
ಮಂದಿರವ ಪೊಕ್ಕು ಮಿಕ್ಕುದ ನುಂಬುದೇ ಶಿವಾಚಾರ.
ಶಿವನಿಂದೆಯ ಕಿವಿಗೊಟ್ಟು ಕೇಳದಿಪ್ಪುದೇ ಗಣಾಚಾರ.
ಶಿವಭಕ್ತರ ಶಿಶುವು ತೊಟ್ಟಿಲಲ್ಲಿರ್ಪುದ ಕಂಡು ಯಜಮಾನನೆಂದರಿದು
ನಮ್ರಭಾವದಿಂ ನಡೆದುಕೊಳ್ಳುವುದೇ ಭೃತ್ಯಾಚಾರ.

"ಇಂತೀ ಪಂಚಾಚಾರ ಸಂಯುಕ್ತನಾಗಿ ನಡೆಯುವ ಶಿವಭಕ್ತನೊಕ್ಕುಮಿಕ್ಕುದನಿಕ್ಕಿ ಸಲಹೋ ಕೂಡಲ ಚನ್ನಸಂಗಮದೇವಾ"

## ಷಟ್‌ಸ್ಥಲಗಳು

ಷಟ್‌ಸ್ಥಲಗಳು ವೀರಶೈವನ ಆತ್ಮಸ್ವರೂಪವಾಗಿವೆ. ಭಕ್ತನು ಷಟ್‌ಸ್ಥಲಾಚರಣೆಯಿಂದಲೇ ಲಿಂಗಾಂಗಸಾಮರಸ್ಯವನ್ನು ಹೊಂದುವನು. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ – ಇವು ಷಟ್‌ಸ್ಥಲಗಳು. ಶಿವಯೋಗಾನುಷ್ಠಾನದಲ್ಲಿ ಇವು ಆರು ಮೆಟ್ಟಿಲುಗಳು.

೧. **ಭಕ್ತ:** ಗುರುವಿನಿಂದ ದೀಕ್ಷೆಪಡೆದ ಭಕ್ತನು ಇಷ್ಟಲಿಂಗ ಪೂಜಕನಾಗಿ ಶಿವನಲ್ಲಿಯೂ ಶಿವಾಚಾರಗಳಲ್ಲಿಯೂ ಶಿವಭಕ್ತರಲ್ಲಿಯೂ ಕಿಂಕುರ್ವಾಣತೆಯಿಂದ ನಡೆದುಕೊಳ್ಳಬೇಕು. ಸತ್ಯಶುದ್ಧಕಾಯಕದಿಂದ ಗುರುಲಿಂಗ ಜಂಗಮ ಸೇವೆ ಮಾಡಬೇಕು. ಎಂದರೆ–ತನುವಿನಿಂದ ಗುರುಸೇವೆ ಮಾಡಬೇಕು. ಮನವನ್ನು ಲಿಂಗಧ್ಯಾನದಲ್ಲಿ ತೊಡಗಿಸಬೇಕು. ಧನವನ್ನು ಜಂಗಮಕ್ಕರ್ಪಿಸಬೇಕು. ಭಕ್ತಿ, ಪ್ರೀತಿ, ದಯೆ, ಶಾಂತಿ, ಸತ್ಯ, ಕ್ಷಮೆ, ಅಹಿಂಸೆ ಮೊದಲಾದ ಸದ್ಗುಣಗಳಿಂದ ಕೂಡಿರಬೇಕು.

೨. **ಮಹೇಶ:** ಆ ಭಕ್ತನೇ ವಿಶೇಷ ನಿಷ್ಠೆಯಿಂದ ಗುರುಲಿಂಗಜಂಗಮದಲ್ಲಿ ಭಕ್ತಿಯನ್ನು ಆಚರಿಸಬೇಕು. ಪರಧನ, ಪರಸ್ತ್ರೀ, ಪರಹಿಂಸೆ,ಪರನಿಂದೆ, ಪರಪಾಕ ಪರದೈವಗಳಿಂದ ದೂರನಾಗಿರಬೇಕು. ಶಿವಪೂಜೆ, ಶಿವಭಜನೆ, ಶಿವಾನುಭವ ಗೋಷ್ಠಿಗಳಲ್ಲಿ ವಿಶೇಷ ಆಸಕ್ತಿವಹಿಸಬೇಕು. ತನ್ನ ಆಚಾರದಲ್ಲಿ ನಿಷ್ಠೆಯಿರಬೇಕು.

೩. **ಪ್ರಸಾದಿ:** ಪ್ರಸಾದಿಯು ತಾನು ಸೇವಿಸುವ ಎಲ್ಲಾ ವಸ್ತುಗಳನ್ನೂ ಗುರುಲಿಂಗಜಂಗಮಕ್ಕೆ ಅರ್ಪಿಸಿ, ಶೇಷ ಪ್ರಸಾದವನ್ನು ಸ್ವೀಕರಿಸುವನು. ಕಣ್ಣಿನಿಂದ ನೋಡುವುದನ್ನಾಗಲೀ, ಮೂಗಿನಿಂದ ವಾಸನೆ ನೋಡುವುದನ್ನಾಗಲೀ, ಕಿವಿಯಿಂದ ಕೇಳುವುದನ್ನಾಗಲೀ, ನಾಲಿಗೆಯಿಂದ ರುಚಿ ನೋಡುವುದನ್ನಾಗಲೀ, ಮೃದು ಕಠಿಣ ಶೀತೋಷ್ಣಸ್ಪರ್ಶ ಸುಖವನ್ನಾಗಲೀ ಲಿಂಗಮುಖವಾಗಿ ಅರ್ಪಿಸಿ ಪ್ರಸಾದ ರೂಪವಾಗಿ ಅನುಭವಿಸಿ, ಲಿಂಗಭೋಗೋಪಭೋಗಿಯಾಗಿ ಶಿವಪ್ರಸನ್ನತೆಯನ್ನು ಪಡೆಯುವನು.

೪. **ಪ್ರಾಣಲಿಂಗಿ :** ಆ ಪ್ರಸಾದಿಯೇ ಈ ಸ್ಥಲಾಚರಣೆಯಲ್ಲಿ ಲಿಂಗವೇ ತನ್ನ ಪ್ರಾಣವೆಂದೂ, ತನ್ನ ಪ್ರಾಣವೇ ಲಿಂಗವೆಂದೂ ಭಾವಿಸಿ ಪ್ರಾಣಲಿಂಗಿಯೆನಿಸು ವನು. ದೇಹಕ್ಕೆ ಆಗುವ ಎಲ್ಲಾ ಕಷ್ಟ ಸುಖಗಳೂ ಪರಮಾತ್ಮನಿಂದ ಪರೀಕ್ಷಾರ್ಥ ವಾಗಿ ಬಂದವೆಂದು ತಿಳಿದು, ಲಿಂಗನಿಷ್ಠೆಯಿಂದಿರುವನು. ಅವನಲ್ಲಿ ಶಾಂತಿ, ವಿವೇಕ, ಸತ್ಯ, ಅಹಿಂಸೆ, ವೈರಾಗ್ಯ, ಮನಸ್ಸಿನ ಏಕಾಗ್ರತೆ, ನಿರಹಂಕಾರ, ವಿಶ್ವಬಂಧುತ್ವ ಮುಂತಾದ ಗುಣಗಳು ಸ್ಥಿರಪಡುತ್ತವೆ.

೫. **ಶರಣ :** ಆ ಪ್ರಾಣಲಿಂಗಿಯೇ ಶರಣನಾಗಿ, ತಾನೇ ಸತಿ ಪರಮಾತ್ಮನೇ ಪತಿ ಎಂಬ ಭಾವನೆಯಿಂದ ಲಿಂಗಮೂರ್ತಿಯ ಪೂಜೆ ಧ್ಯಾನಗಳಿಂದ ಆನಂದವನ್ನು ಅನುಭವಿಸುವನು. ಎಲ್ಲವನ್ನೂ, ಇಡೀ ವಿಶ್ವವನ್ನೇ ಶಿವಸ್ವರೂಪವೆಂದು ಭಾವಿಸಿ ತಾನು ಕಿಂಕರನಾಗಿ ನಡೆಯುವನು. ನೀನೇ ರಕ್ಷಕನೆಂದು ಪರಮಾತ್ಮನನ್ನು ಮರೆ ಹೊಗುವನು.

೬. **ಐಕ್ಯ :** ಐಕ್ಯಸ್ಥಲದಲ್ಲಿ ಶರಣನ ಆತ್ಮವು ಲಿಂಗದಲ್ಲಿ ಬೆರೆತು ಹೋಗು ತ್ತದೆ. ಎಲ್ಲವೂ ಪರಮಾತ್ಮ ಸ್ವರೂಪೇ ಆಗುತ್ತದೆ. ಜ್ವಾಲೆಯೂ ಕರ್ಪೂರವೂ ಕೂಡಿ ಅಡಗುವಂತೆ ಪ್ರಾಣವೂ ಮನಸ್ಸೂ ಲಿಂಗದಲ್ಲಿ ಕೂಡಿ ಒಂದಾಗುತ್ತದೆ.

**ವಚನಗಳು :**

೧ "ಸದಾಚಾರದಲ್ಲಿ ನಡೆಯುವುದು, ಶಿವನಲ್ಲಿ ಭಕ್ತಿಯಾಗಿರುವುದು, ಲಿಂಗ ಜಂಗಮವು ಬಂದರೆ ಸಂತೋಷಬುದ್ಧಿಯಾಗಿರುವದು.
ಲಾಂಛನಧಾರಿಗಳ ಕಂಡರೆ ವಂದಿಸುವುದು–ಇದು ಭಕ್ತಿಸ್ಥಲನೋಡಾ
ಅಪ್ರಮಾಣ ಕೂಡಲಸಂಗಮದೇವಾ.

೨ ಪರಸ್ತ್ರೀ ಪರಧನದಾಸೆಯ ಬಿಟ್ಟು ಶುದ್ಧವಾಗಿ ಲಿಂಗನಿಷ್ಠೆಯುಳ್ಳಾತನು ಮಾಹೇಶ್ವರ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

೩ ಲಿಂಗಪ್ರಸಾದ ನೆನಹಿನಿಂದ ಭೋಗಿಸುವುದೇ ಅರ್ಪಿತ. ಅನರ್ಪಿತವ ಬಿಡುವುದೀಗ ಪ್ರಸಾದಿಸ್ಥಲ ನೋಡಾ ಅಪ್ರಮಾಣ ಕೂಡಲಸಂಗಮ ದೇವಾ.

೪ ಪ್ರಾಣವೇ ಲಿಂಗವಾಗಿ ಲಿಂಗವೇ ಪ್ರಾಣವಾಗಿ, ಸುಖ ದುಃಖ ಉಭಯವು ತನಗಿಲ್ಲದಿಹುದೀಗ ಪ್ರಾಣಲಿಂಗಿಸ್ಥಲ ನೋಡಾ
ಅಪ್ರಮಾಣ ಕೂಡಲಸಂಗಮದೇವಾ.

೫ ಲಿಂಗವೇ ಪತಿಯಾಗಿ ತಾನು ಸತಿಯೆಂಬ ಭಾವದಲ್ಲಿ ಆಚರಿಸಿ,
ಪಂಚೇಂದ್ರಿಯ ಸುಖಗಳ ಬಯಸದಿಹುದೀಗ ಶರಣಸ್ಥಲ ನೋಡಾ
ಅಪ್ರಮಾಣ ಕೂಡಲಸಂಗಮದೇವಾ.

೬ ಕ್ಷೀರದೊಳಗಣ ಘೃತದಂತೆ, ತಿಲದೊಳಗಣ ತೈಲದಂತೆ,
ಪುಷ್ಪದೊಳಗಣ ಪರಿಮಳದಂತೆ, ಉಪ್ಪು ಉದಕವ ಕೂಡಿದಂತೆ,
ಮನ ಲಿಂಗವಲ್ಲಿ ಲೀಯುವಾಗಿಹುದೀಗ ಐಕ್ಯಸ್ಥಲ ನೋಡಾ
ಅಪ್ರಮಾಣ ಕೂಡಲಸಂಗಮದೇವಾ.

ಭಕ್ತನು ದೇಹಾಭಿಮಾನವನ್ನು ಬಿಟ್ಟು ಎಲ್ಲವನ್ನೂ ಪರಮಾತ್ಮನಿಗೆ ಎಂದರೆ ಅವನ ಸ್ವರೂಪವಾದ ಗುರುಲಿಂಗಜಂಗಮಕ್ಕೆ ಅರ್ಪಿಸುತ್ತಾನೆ. ಮಾಹೇಶ್ವರಸ್ಥಲದ ಆಚರಣೆಯುಳ್ಳ ಭಕ್ತನು ಚಿತ್ತಶುದ್ಧಿಯುಳ್ಳವನಾಗುತ್ತಾನೆ. ಮತ್ತು ಅನ್ಯರ ಪದಾರ್ಥಗಳೆನಿಸಿದ ಪರದ್ರವ್ಯ, ಪರಸ್ತ್ರೀ ಚಿಂತನೆ ಮುಂತಾದವುಗಳ ಕಡೆಗೆ ಗಮನ ಕೊಡದೆ ಆ ಬಗ್ಗೆ ಧೃಡ ನಂಬುಗೆಯುಳ್ಳವನಾಗುತ್ತಾನೆ. ಪ್ರಸಾದಿಯು ಎಲ್ಲವನ್ನೂ ಶಿವರೂಪಿಯಾದ ಗುರುಲಿಂಗಜಂಗಮಕ್ಕೆ ಅರ್ಪಿಸಿ, ದಯೆಯಿಂದ ಬಂದ ಶಿವ ಪ್ರಸಾದದ ಸೇವನೆಯಿಂದ ಬದುಕುವನು. ಪ್ರಾಣಲಿಂಗಿಯು ತನ್ನ ಪ್ರಾಣವನ್ನು ಲಿಂಗಕ್ಕೆ ಅರ್ಪಿಸಿ, ಲಿಂಗವೇ ಪ್ರಾಣವೆಂದು ತಿಳಿದು ಆಚರಿಸುವನು. ಶರಣನು ತಾನು ಸತಿಯೆಂತಲೂ ಲಿಂಗವು ಪತಿಯೆಂತಲೂ ಭಾವಿಸಿ ಶರೀರ ಪ್ರಾಣಾಭಿಮಾನಗಳನ್ನೆಲ್ಲವನ್ನೂ ಪರಮಾತ್ಮನಿಗೆ ಕಿಂಕರತ್ವದಿಂದ ಅರ್ಪಿಸುತ್ತಾನೆ. ಅಂಗ ಲಿಂಗ ಎಂಬ ಭಿನ್ನತೆಯಿಲ್ಲದೆ ಪರಮಾತ್ಮನಲ್ಲಿ ಒಂದಾಗಿ ಲಿಂಗವೇ ಆಗುವ ಸ್ಥಿತಿಯನ್ನು ಪಡೆದಾಗ ಭಕ್ತನು ಐಕ್ಯನೆನಿಸುತ್ತಾನೆ.

ಈ ಆರು ಸ್ಥಲಗಳಲ್ಲೂ ಭಕ್ತನು ಕ್ರಮವಾಗಿ ಶ್ರದ್ಧಾಭಕ್ತಿ, ನಿಷ್ಠಾಭಕ್ತಿ, ಸಾವಧಾನಭಕ್ತಿ ಅನುಭಾವಭಕ್ತಿ, ಆನಂದಭಕ್ತಿ ಮತ್ತು ಸಮರಸಭಕ್ತಿ ಎಂಬ ಆರು ತೆರನಾದ ಭಕ್ತಿಮಾರ್ಗವನ್ನು ಅನುಸರಿಸಿ ನಡೆಯುತ್ತಾನೆ. ತಾನು ಶಿವನೆಂಬ ನಂಬುಗೆ ಶ್ರದ್ಧಾಭಕ್ತಿ. ಆ ನಂಬುಗೆಯ ದೃಢ ಭಾವನೆಯ ಆಚರಣೆಯೇ ನಿಷ್ಠಾ ಭಕ್ತಿ, ತಾನು ಶಿವನೆಂಬುದರ ಗಮನದೊಡನೆ ಸದಾ ಇರುವುದು ಅವಧಾನಭಕ್ತಿ. ತನ್ನ ಪ್ರಾಣವೇ ಲಿಂಗವೆಂದು ಆ ಲಿಂಗವನ್ನು ಅನುಸರಿಸಿ ನಡೆಯುವುದು ಅನುಭಾವ ಭಕ್ತಿ, ಎಲ್ಲವನ್ನೂ ಅರ್ಪಿಸಿ ಸಂತೋಷದಿಂದಿರುವುದೇ ಆನಂದಭಕ್ತಿ. ಶಿವನೊಡನೆ ಕೂಡಿ ಭಿನ್ನತೆಯನ್ನು ಮರೆದು ಶಿವನೇ ತಾನಾಗಿ ನಡೆಯುವುದೇ ಸಮರಸಭಕ್ತಿ.

ಒಟ್ಟಿನಲ್ಲಿ, ದೇಹವೂ ಪ್ರಾಣವೂ ಅಲ್ಲದೆ ಸರ್ವವೂ ಶಿವನಿಗೆ ಅರ್ಪಿತವಾಗಿ ತಾನೇ ಶಿವನಾಗುವ ಸ್ಥಿತಿಯು ಷಟ್‌ಸ್ಥಲಾಚರಣೆಯಿಂದ ಉಂಟಾಗುತ್ತದೆ. ಇವೆಲ್ಲವೂ ಒಂದೇ ಜನ್ಮದಲ್ಲಿ ಉಂಟಾಗುತ್ತವೆ. ಈ ಆರು ಸ್ಥಲಗಳೇ ಅಂಗಸ್ಥಲ, ಲಿಂಗಸ್ಥಲ ಎಂಬ ಎರಡು ತೆರದಿಂದ ಭಕ್ತನ ಆಚರಣೆಯ ನೂರೊಂದು ಸ್ಥಲ (ಏಕೋತ್ತರ ಶತಸ್ಥಲ) ಸಕೀಲ ಸಂಬಂಧಗಳಾಗುವುವು.

# ವಿಶೇಷ ವಿಷಯಗಳು

## (ನಿತ್ಯವಿಧಿ ಮುಂತಾದವು)

ಪ್ರತಿದಿನ ಉಷಃಕಾಲದಲ್ಲಿ ಹಾಸಿಗೆಯಿಂದೆದ್ದು, ಇಷ್ಟಲಿಂಗದರ್ಶನದಿಂದ ಪರಮೇಶ್ವರನ ಧ್ಯಾನಮಾಡಿ, ಶೌಚಾದಿಗಳನ್ನು ಮುಗಿಸಬೇಕು. ಬಳಿಕ ಸ್ನಾನಮಾಡಿ ಮಡಿಯುಟ್ಟು ಶುದ್ಧವಾದ ಮನಸ್ಸಿನಿಂದ ಪೂಜಾಗೃಹವನ್ನು ಪ್ರವೇಶಿಸಬೇಕು. ವಿಧ್ಯುಕ್ತವಾಗಿ ಶಿವಪೂಜೆ ಮಾಡಬೇಕು. ಮನಸ್ಸು ಶುದ್ಧವೂ ಭಕ್ತಿಯುಕ್ತವೂ ಆಗಿರಬೇಕು. ಪೂಜೋಪಚಾರಗಳಲ್ಲಿ ಗುರುವಿನಿಂದ ನಿರೂಪಿಸಲ್ಪಟ್ಟ ತಾತ್ತ್ವಿಕಾರ್ಥ ಗಳನ್ನು ಗಮನಕ್ಕೆ ತಂದುಕೊಳ್ಳಬೇಕು. ಸ್ವಸ್ವರೂಪವಾದ ನಿರಾಕಾರ ನಿಷ್ಕಲ ಪರಬ್ರಹ್ಮವೇ ಭಾವದಲ್ಲಿ ಭಾವಲಿಂಗರೂಪವೂ, ಮನದಲ್ಲಿ ಪ್ರಾಣಲಿಂಗರೂಪವೂ, ಕರದಲ್ಲಿ ಇಷ್ಟಲಿಂಗರೂಪವೂ ಆಗಿರುವುದೆಂಬ ಭಾವವು ಬಲಿದು, ಇಷ್ಟಲಿಂಗ ನಿರೀ ಕ್ಷಣೆಯಿಂದ ಧ್ಯಾನಜಪಾದಿಗಳನ್ನು ನಡೆಸಬೇಕು. ಅಖಂಡ ತೇಜೋರಾಶಿಯಾದ ಶಿವನನ್ನು ಭಕ್ತಿಯಿಂದ ಭಾವಕ್ಕೆ ತಂದು ಸ್ವಸ್ವರೂಪ ದೃಷ್ಟಿಯಿಂದ ಇಷ್ಟಲಿಂಗ ವನ್ನು ಪೂಜಿಸಬೇಕು. ಪೂಜೆಯಲ್ಲಿ ಫಲಪದವಿಯನ್ನು ಬಯಸಬಾರದು. ಪೂಜ್ಯ ಪೂಜಕ ಭಾವವಳಿದು ಸ್ವಾನುಭಾವರತಿಯಿಂದ, ಲಿಂಗಾಂಗ ಸಾಮರಸ್ಯಯೋಗದಿಂದ ಆಚರಿಸುವುದೇ ಸದ್ಯೋನ್ಮುಕ್ತಿಯೆನಿಸುತ್ತದೆ. ಕ್ರಮವರಿತು ದಿನಕ್ಕೆ ಮೂರು ಅಥವಾ ಎರಡು ವೇಳೆ ಲಿಂಗಪೂಜೆ ಮಾಡಬೇಕು.

ಲಿಂಗಪೂಜಾನಂತರ ತನ್ನ ಉದ್ಯೋಗ (ಕಾಯಕ) ದಲ್ಲಿ ನಿರತನಾಗಬೇಕು. ಕಾಯಕವು ಸತ್ಯಶುದ್ಧವಾದುದಾಗಿರಬೇಕು. ಉದ್ಯೋಗದಲ್ಲಿ ತೊಡಗದೆ ಯಾಚನೆ ಯಿಂದ ಹೊಟ್ಟೆ ತುಂಬಿಸಿಕೊಳ್ಳುವುದು ಶ್ರೇಯಸ್ಕರವಲ್ಲ.

ವೀರಶೈವ ಧರ್ಮದಲ್ಲಿ ಜ್ಞಾನ ಮತ್ತು ಕ್ರಿಯೆ ಎರಡೂ ಪ್ರಧಾನವಾಗಿವೆ. ಅರಿವು ಆಚರಣೆ ಎರಡೂ ಒಂದೇ ಆಗಿರಬೇಕು. ಕಾಯಾ ವಾಚಾ ಮನಸಾ ಶುದ್ಧನಡೆ ನುಡಿಗಳುಳ್ಳವನೇ ಸದಾಚಾರಿಯೆನಿಸುವನು. ತನ್ನ ಕಾಯಕದಲ್ಲಿ ನಿರತನಾಗಿರುವಾಗ, ಇತರರೊಡನೆ ವ್ಯವಹರಿಸುವಾಗಲ್ಲದೆ, ತನ್ನ ನಿತ್ಯಕ್ರಿಯೆಗಳಲ್ಲಿ ತೊಡಗಿರುವಾಗ-ಯಾವ ಸಮಯದಲ್ಲೇ ಆಗಲಿ ಲಿಂಗಸಂಬಂಧವುಳ್ಳ ಲಿಂಗಾಂಗಿಯು ತನ್ನ ಧರ್ಮಾಚರಣೆಗೆ ಲೋಪ ಬಾರದಂತೆ ನಡೆಯಲು ಪ್ರಯತ್ನಿಸಬೇಕು. ಗುರುಕರಜಾತರಾದ ವೀರಶೈವ ರೆಲ್ಲರೂ–ಪುರುಷರಾಗಲೀ, ಸ್ತ್ರೀಯರಾಗಲೀ, ವೃದ್ಧರಾಗಲೀ, ತರುಣರಾಗಲಿ ಸಮಾನ ಆಚರಣೆಯುಳ್ಳವರು.

ಇಷ್ಟಲಿಂಗವಲ್ಲದೆ ಇತರ ದೈವಗಳನ್ನು ಭಜಿಸಬಾರದು. ಮನಸ್ಸಿನಿಂದಾಗಲೀ ಮಾತಿನಿಂದಾಗಲೀ ಕೃತಿಯಿಂದಾಗಲೀ ಪ್ರಾಣಿಮಾತ್ರಕ್ಕೂ ನೋವನ್ನುಂಟುಮಾಡ ಬಾರದು. ಅಭಕ್ಷ್ಯ ಭಕ್ಷಣ, ಅಪೇಯಪಾನಾದಿಗಳನ್ನು ಮಾಡಬಾರದು.

ಸಂಜೆಯ ವೇಳೆ ದಿನಂಪ್ರತಿಯೂ ಸದ್ಗೋಷ್ಠಿಯಲ್ಲಿ ಒಂದೆರಡು ಘಂಟೆಗಳ ಕಾಲವನ್ನು ವಿನಿಯೋಗಿಸಬೇಕು. ಪುರಾಣ ಪುಣ್ಯಕಥೆಗಳನ್ನು ಕೇಳುವುದು, ಶಿವಾನುಭಾವ ಗ್ರಂಥಗಳ ವ್ಯಾಸಂಗಮಾಡುವುದು, ಅನುಭಾವಿಗಳಿಂದ ತತ್ತ್ವಾರ್ಥಗಳನ್ನು ತಿಳಿಯುವುದು ಅತ್ಯಗತ್ಯ. ತತ್ತ್ವಾರ್ಥ ಮನನವು ಶಿವಪೂಜೆಯಷ್ಟೇ ಮುಖ್ಯವಾದುದು. ಅದರಿಂದ ಧಾರ್ಮಿಕಮನೋವೃತ್ತಿ ಬೆಳೆಯುತ್ತದೆ. ವಿಚಾರಶಕ್ತಿ ಹೆಚ್ಚುತ್ತದೆ. ಮನಸ್ಸಿನ ಚಂಚಲವ ತ್ತಿ ಅಡಗುತ್ತದೆ. ಐಹಿಕ ವಿಷಯ ಸುಖಾದಿಗಳಲ್ಲಿ ಪ್ರವೃತ್ತವಾದ ಮನಸ್ಸು ಪರಿವರ್ತನಹೊಂದಿ, ಇಂದ್ರಿಯ ಭೋಗವು ಲಿಂಗ ಭೋಗೋಪಭೋಗದಿಂದ ಪ್ರಸಾದ ಸ್ವರೂಪವಾಗುವುದು. ಅದರಿಂದ ಆತ್ಮಶಕ್ತಿ ಉದ್ದೀಪಿತವಾಗುತ್ತದೆ. ಸತ್ಸಹವಾಸ, ಸತ್ಕಥಾಶ್ರವಣ, ಸದ್ವಿಚಾರಗಳಿಗೆ ಆಗರವಾಗಿದೆ ಶಿವಾನುಭವ ಗೋಷ್ಠಿ. ಅಂತಹ ಗೋಷ್ಠಿಯ ಮಹತ್ವವೆಷ್ಟೆಂಬುದನ್ನು ಹೇಳಲು ಸಾಧ್ಯವಿಲ್ಲ.

ಎಳೆತನದಲ್ಲಿ ಧಾರ್ಮಿಕ ಶಿಕ್ಷಣವೀಯುವುದು ಸಾಧುವಲ್ಲವೆಂದೂ, ವಯಸ್ಸಾದಂತೆ ಆ ಬಗೆಯ ಮನೋಭಾವವು ತಾನಾಗಿ ಹುಟ್ಟುವುದೆಂದೂ ಕೆಲವರು ಭಾವಿಸುವುದುಂಟು. ಇದು ತಪ್ಪು. ತನ್ನ ಜೀವನಕಾಲ ಎಷ್ಟೆಂಬುದು ಅನಿರ್ದಿಷ್ಟವಾದುದರಿಂದ, ತಾನು ಬದುಕಿರುವಾಗಲೇ, ದೈಹಿಕ ಚಟುವಟಿಕೆಗಳು ಕುಂದದಿರುವಾಗಲೇ–ಅಂದಂದಿಗೇ ತನ್ನ ಜೀವನದ ಗುರಿಯನ್ನು ಸಾಧಿಸಲು ಪ್ರಯತ್ನ ನಡೆಸುತ್ತಾ ಇರಬೇಕಾಗುತ್ತದೆ. ಎಳೆತನದಿಂದಲೂ ಧಾರ್ಮಿಕ ಮತ್ತು ನೈತಿಕ ಮನೋಭಾವವನ್ನು ಬೆಳೆಸದಿದ್ದರೆ, ಮುಂದಿನ ಜೀವನ ವ್ಯರ್ಥಜೀವನವಾಗಬಹುದು. ಸಮಾಜವು ಈ ಬಗೆಯ ಧಾರ್ಮಿಕ ವ್ಯವಸಾಯದತ್ತ ಹೆಚ್ಚು ಗಮನ ಹರಿಸಬೇಕಾಗುತ್ತದೆ.

ಈ ಬಗೆಯ ಧಾರ್ಮಿಕ ಶಿಕ್ಷಣ ವ್ಯವಸ್ಥೆಗೆ ಧಾರ್ಮಿಕ ಗ್ರಂಥಭಂಡಾರಗಳು ಬೇಕು. ಪಂಡಿತರೂ ಪಾಮರರೂ ಅರಿಯಲು ಸಾಧ್ಯವಾಗುವ ಎಲ್ಲಾ ಗ್ರಂಥಗಳೂ ಅಲ್ಲಿ ಸಂಗ್ರಹವಾಗಬೇಕು.

ಆಗಾಗ್ಗೆ ಧಾರ್ಮಿಕ ವಿಚಾರಗಳ ಪ್ರವಾಸಗೋಷ್ಠಿಗಳನ್ನು ಏರ್ಪಡಿಸಬೇಕು. ವ್ಯವಸ್ಥಿತ ಕಾರ್ಯಕ್ರಮಗಳಿಂದ ಅಂತಹ ಗೋಷ್ಠಿಗಳ ಕಾರ್ಯ ಯಶಸ್ವಿಯಾಗುವುದರಲ್ಲಿ ಸಂದೇಹವಿರುವುದಿಲ್ಲ. ಗುರುಜಂಗಮರೂ, ಧಾರ್ಮಿಕ ಸಂಸ್ಥೆಗಳೂ ಸಮಾಜದ ಪ್ರತಿಷ್ಠಿತ ವ್ಯಕ್ತಿಗಳೂ ಆ ಬಗ್ಗೆ ಹೆಚ್ಚು ಆಸ್ಥೆ ವಹಿಸಿ ಕಾರ್ಯಪ್ರವೃತ್ತರಾಗುವುದರಿಂದ ಧರ್ಮ–ಸಂಸ್ಕೃತಿ ತನ್ಮೂಲಕ ದೇಶ ಉದ್ಧಾರ ಕಾರ್ಯ ಯಶಸ್ವಿಯಾಗುವುದು.

# ಹಿತೋಕ್ತಿಗಳು

(ಸಂಗ್ರಹ)

ದೇವರಲ್ಲಿ ನಂಬಿಕೆಯನ್ನಿಡಬೇಕು. ಗುರುಹಿರಿಯರಲ್ಲಿ ಭಕ್ತಿ ವಿಶ್ವಾಸವಿರಬೇಕು. ಸತ್ಯ ಸದಾಚಾರ ವರ್ತನೆಯುಳ್ಳವರಾಗಿರಬೇಕು. ಪ್ರಾಣಿಗಳಲ್ಲಿ ದಯೆಯಿರಬೇಕು. ಮಾತಿನಲ್ಲಿಯೂ ಮನಸ್ಸಿನಲ್ಲಿಯೂ ಮತ್ತು ಕಾರ್ಯದಲ್ಲಿಯೂ ಪರರನ್ನು ನೋಯಿಸ ಬಾರದು, ಮರ್ಮ ಭೇದಕವಾದ ಮಾತುಗಳನ್ನಾಡಬಾರದು. ಪರರಿಂದ ನೋವುಂಟಾದರೂ ಪ್ರತಿಯಾಗಿ ಅವರನ್ನುನೋಯಿಸಲು ತೊಡಗಬಾರದು. ದಯೆಗಿಂತ ಮಿಗಿಲಾದ ಧರ್ಮವಿಲ್ಲ. ಹಿಂಸೆಗಿಂತ ಮಿಗಿಲಾದ ಪಾಪವಿಲ್ಲ. ಸ್ವಾರ್ಥಸಾಧನೆಗಾಗಿ ಪರರನ್ನು ಉಪಯೋಗಿಸಿ ಕೊಳ್ಳಬಾರದು.

ಸಮ್ಯಜ್ಞಾನವುಳ್ಳವನಾಗಿ ಸತ್ಕ್ರಿಯಾಚರಣೆ, ಶಾಂತಿ, ಶಮ, ದಯೆಯುಳ್ಳವನಾಗಿರುವವನೇ ನಿಜವಾದ ಐಶ್ವರ್ಯವಂತನು. ಅದಿಲ್ಲದಿರುವವನೇ ದರಿದ್ರನು.

ಅಲ್ಪಾಲೋಚನೆಯಿಂದ ಸ್ವಧರ್ಮದಲ್ಲಿ ವಿವೇಚನೆಯಿಲ್ಲದೆ, ಪರಧರ್ಮಕ್ಕೆ ಮತಾಂತರ ಹೊಂದುವುದು ವಿಚಾರ ಶೂನ್ಯನ ನಡವಳಿಕೆ.

ಅವರವರ ಧರ್ಮದಲ್ಲಿ ಅವರವರು ನಿಷ್ಠರಾಗಿದ್ದು ವ್ಯವಹಾರದಲ್ಲಿ ನಂಬಿಕೆ ವಿಶ್ವಾಸ ಸೌಹಾರ್ದ್ರತೆಗಳಿಂದ ನಡೆಯುವುದರಿಂದ ವ್ಯಕ್ತಿಗೌರವವು ಹೆಚ್ಚುವುದಲ್ಲದೆ ರಾಷ್ಟ್ರ ಹಿತಚಿಂತನೆಗೆ ಸಾಧಕವಾಗಿರುವುದು.

ಆತ್ಮಸ್ತುತಿ ಪರನಿಂದೆಗಳು ಮನುಷ್ಯನನ್ನು ಅಧೋಗತಿಗೆ ಎಳೆಯುತ್ತವೆ. ಹಿಂದಿನಿಂದ ಬಂದಿದ್ದರೂ ಅರ್ಥವಿಲ್ಲದ ಮೂಢ ನಂಬಿಕೆಗಳನ್ನು ಅನುಸರಿಸುವುದು ವಿಹಿತವಲ್ಲ. ವಿಚಾರಕ್ಕೂ ಅನುಭವಕ್ಕೂ ಬರುವ ಪದ್ಧತಿಗಳಿಂದ ಶ್ರೇಯಸ್ಸುಂಟು.

ಸ್ತ್ರೀಯರನ್ನು ಗೌರವಿಸಬೇಕು. ಅವರನ್ನು ಸುಸಂಸ್ಕೃತರನ್ನಾಗಿ ಮಾಡಬೇಕು. ಪರೋಪಕಾರಿಯೂ ಉಪಕಾರಿಯೂ ಆದವನು ದೇವರನ್ನು ಸಂಲಭವಾಗಿ ಮೆಚ್ಚಿಸುವನು.

ದೇವರಲ್ಲಿ ಹೇಗೋ ದೈವ ಭಕ್ತರಲ್ಲೂ ಧಾರ್ಮಿಕ ಸಾಹಿತ್ಯದಲ್ಲೂ ಹಾಗೆಯೇ ಶ್ರದ್ಧೆಯಿರಬೇಕು.

ಮನೆಗೆ ಬಂದ ಅತಿಥಿಗಳನ್ನು ಆದರದಿಂದ ಗೌರವಿಸಬೇಕು.

ಶತ್ರುಗಳನ್ನು ಗೆಲ್ಲಲು ಅತಿ ಸುಲಭೋಪಾಯವೆಂದರೆ ಸ್ನೇಹ ಸೌಹಾರ್ದ್ರಗಳೇ.

ತಂದೆತಾಯಿಗಳನ್ನೂ ಅನ್ನವಿಟ್ಟು ಕಾಪಾಡಿದವರನ್ನೂ ಬುದ್ಧಿ ಕಲಿಸಿದ ಹಿರಿಯರನ್ನೂ ಭಕ್ತಿಯಿಂದ ಆದರಿಸಬೇಕು, ಕೃತಜ್ಞತೆಯಿಂದ ನೆನೆಯಬೇಕು.

ಪಂಡಿತರನ್ನು ಗೌರವಿಸಬೇಕು. ಪಾಮರರನ್ನು ಉದ್ಧರಿಸಲು ಪ್ರಯತ್ನಿಸಬೇಕು ವಿತಂಡವಾದ ಮಾಡಬಾರದು. ಶುಷ್ಕವಾದದಿಂದ ಕಾಲವ್ಯಯವಾಗುವುದು.

ಸೌಮ್ಯತೆ ಪ್ರೇಮಗಳಿಂದ ಕಷ್ಟಸಾಧ್ಯವಾದ ಕೆಲಸಗಳನ್ನು ಗೆಲ್ಲಬಹುದು. ಕೋಪ ಹಠ ಸೇಡು ತೀರಿಸಿಕೊಳ್ಳುವ ಮನೋಭಾವದಿಂದ ಯಾವುದೂ ಸಾಧಿತವಾಗ ಲಾರದು.

ಸಂಪತ್ತು ಬಂದಾಗ ಹಿಗ್ಗದೆ, ವಿಪತ್ತು ಬಂದಾಗ ತಗ್ಗದೆ, ಇವೆರಡೂ ದೈವೇಚ್ಛೆಯಂತೆ ಉಂಟಾಗುವುದೆಂದು ನಂಬಿ ಶಾಂತತೆಯಿಂದಿರಬೇಕು.

ಸಂಸಾರದಲ್ಲಿ ಕಂಡು ಬರುವ ಕಷ್ಟ ಸುಖಗಳನ್ನೂ ಹುಟ್ಟು ಸಾವುಗಳ ತೊಂದರೆ ಯನ್ನೂ ದೈವ ಚಿಂತನೆಯಿಂದ ತಪ್ಪಿಸಿಕೊಳ್ಳಬಹುದು.

ಉಲ್ಲಾಸ ವೃತ್ತಿಯಿಂದ ಸರ್ವ ಸುಖವೂ, ಖಿನ್ನವೃತ್ತಿಯಿಂದ ದುಃಖವೂ. ಉಂಟಾಗುತ್ತದೆ. ಕೈಕೊಂಡ ಕಾರ್ಯವನ್ನು ಶಾಂತತೆಯಿಂದ ಕೊನೆಗಾಣಿಸಬೇಕು.

ಐಶ್ವರ್ಯದಂತೆಯೇ ದಾರಿದ್ರ್ಯವೂ ಅಸ್ಥಿರವಾದುದು.

ಸಾಲದ ಗೊಡವೆಗೆ ಹೋಗಬಾರದು. ಹಾಸಿಗೆಯಿದ್ದಷ್ಟಕ್ಕೆ ಕಾಲುಚಾಚಬೇಕು. ಅಸಾಧ್ಯವಾದುದಕ್ಕೆ ಬಯಸಿ ಬಯಸಿ ಬಳಲಬಾರದು. ಬಂದುದರಲ್ಲಿ ತೃಪ್ತಿಪಡಬೇಕು.

ಬುದ್ಧಿವಂತರೂ ವಿದ್ವಾಂಸರೂ ವಿದ್ಯಾಭ್ಯಾಸಂಗಕ್ಕೆ ಅವಕಾಶ ದೊರಕದೇ ಹೋದವರಿಗೆ ತಿಳಿವಳಿಕೆಯನ್ನುಂಟು ಮಾಡಲು ಸಾಧ್ಯವಾದಷ್ಟು ಪ್ರಯತ್ನಿಸಬೇಕು.

ಗ್ರಂಥಾವ ಲೋಕನವು ಸತ್ಸಹವಾಸದಷ್ಟೇ ಜೀವನದಲ್ಲಿ ಉತ್ತಮ ಪರಿಣಾಮ ವನ್ನು ಉಂಟು ಮಾಡುವುದು.

ಸುಶಿಕ್ಷಿತರೂ ವಿನಯ ಸೌಶೀಲ್ಯಾದಿ ಸದ್ಗುಣಗಳಿಂದ ಕೂಡಿದವರೂ ಆದ ಸ್ತ್ರೀಯರಿಂದ ಸಮಾಜವು ಅಭಿವೃದ್ಧಿಗೆ ಬರುವುದು.

ಲೋಭಿಯಿಂದ ಜಗತ್ತಿಗೆ ಏನೂ ಪ್ರಯೋಜನವಾಗಲಾರದು. ದುಂದುಗಾರನು ಬಹುಬೇಗ ಕಷ್ಟಕ್ಕೀಡಾಗುವನು.

ಕಾಲವು ಅಮೌಲ್ಯವಾದುದು. ಕಳೆದು ಹೋದ ಕಾಲ ಮತ್ತೆ ಬರಲಾರದು. ಕ್ರಮ ತಪ್ಪಿ ನಡೆಯುವುದರಿಂದ ಮಹಾಕಷ್ಟವೊದಗುವುದು.

ಸಿಟ್ಟಿನಲ್ಲಿರುವವನನ್ನು ಉದ್ರೇಕಿಸುವವನು ಮೂರ್ಖನು. ಸಿಟ್ಟು ಬೇರೆಯವ ನಿಗೆ ಕೆಡಕನ್ನುಂಟು ಮಾಡುವುದಕ್ಕಿಂತಲೂ ತನ್ನನ್ನು ಮೊದಲು ಕೆಡಿಸುವುದು.

ಮೃದು ನುಡಿಗಳನ್ನಾಡಲಿಕ್ಕೆ ವೆಚ್ಚ ತಗಲುವುದಿಲ್ಲ. ಆದರೂ ಅವುಗಳ ಪ್ರತಿಫಲ ಹೆಚ್ಚು ಬೆಲೆಯುಳ್ಳದು.

ಚಿಕ್ಕಂದಿನಿಂದಲೂ ದುಡಿಮೆಯಿಂದ ಬಾಳು ಸಾಗಿಸಿದವನು ಮುಪ್ಪಿನಲ್ಲಿ ತೊಂದರೆಗೆ ಗುರಿಯಾಗಲಾರನು.

ತೃಪ್ತಿಯೇ ನಾಶವಿಲ್ಲದ ಐಶ್ವರ್ಯವು, ನಂಬಿಕೆಯೇ ಸರ್ವೋತ್ತಮವಾದ ಬಂಧುವು, ಆರೋಗ್ಯವೇ ಸರ್ವೋತ್ಕೃಷ್ಟವಾದ ಭಾಗ್ಯವು ಆಗಿರುತ್ತದೆ. ★

## ಕಾಯಕ ಮತ್ತು ದಾಸೋಹ

[ದಿವ್ಯ ಜೀವನದ ಎರಡು ಭವ್ಯ ಅಡಿಗಲ್ಲುಗಳ ಸತ್ಯ ವಿಮರ್ಶೆ]

—ವಚನಗಳ ಮೂಲಕ—

● "ಕಟ್ಟೆಯ ಬಸವೇಶ್ವರ", ಬೆಂಗಳೂರು.

### ಜೀವನ ವ್ಯಾಖ್ಯೆ

ಆಯುಷ್ಯ ಇದ್ದರೆ ಸಾಲದು ! ಆರೋಗ್ಯ ಇರಬೇಕು !
ಆರೋಗ್ಯ ಇದ್ದರೆ ಸಾಲದು ! ಸಂಪದ ಇರಬೇಕು !
ಸಂಪದ ಇದ್ದರೆ ಸಾಲದು ! ಸೌಭಾಗ್ಯ ಇರಬೇಕು !
ಸೌಭಾಗ್ಯ ಇದ್ದರೆ ಸಾಲದು ! ಸಂತೋಷ ಇರಬೇಕು !
ಸಂತೋಷ ಇದ್ದರೆ ಸಾಲದು ! ಸಂತೃಪ್ತಿ ಇರಬೇಕು !

ಇಂತೀ ಆಯುಷ್ಯಾರೋಗ್ಯ ಸಂಪದ ಸೌಭಾಗ್ಯ ಸಂತೋಷ ಸಂತೃಪ್ತಿಗಳು ಇರಬೇಕಾದರೆ–ಕಾಯಕ ದಾಸೋಹಗಳೆರಡರಲ್ಲೂ ಕೂಲಂಕಷ ಶ್ರಮ ನಿರಂತರ ಇರಬೇಕು ! ಇದೇ ಬಸವಲಿಂಗಪ್ರಿಯ ಕಟ್ಟೆಯ ಬಸವೇಶ್ವರನಲ್ಲಿ ಜೀವನ ವ್ಯಾಖ್ಯೆಯು !

### ಕಾಯಕ—ದಾಸೋಹ—ಶಿವಯೋಗ

ಕಾಯಕವೆಂದರೆ ಪ್ರಮಾಣಬದ್ಧ ಗಳಿಕೆ !
ದಾಸೋಹವೆಂದರೆ ಪ್ರೇಮಸಿದ್ಧ ಬಳಕೆ !
ಶಿವಯೋಗವೆಂದರೆ ಪ್ರಶಾಂತ ಶುದ್ಧ ಉಳಿಕೆ !
ಬಸವಲಿಂಗಪ್ರಿಯ ಕಟ್ಟೆಯ ಬಸವೇಶ್ವರನಲ್ಲಿ !

### ಚಿಂತೆಗಳ ಪರಿಹರಿಸುವ ಚಿಂತೆ

ಕೃತಯುಗದಲ್ಲಿ ಅಶನದ ಚಿಂತೆ ! ತ್ರೇತಾಯುಗದಲ್ಲಿ ವಸನದ ಚಿಂತೆ !
ದ್ವಾಪರಯುಗದಲ್ಲಿ ವಸತಿಯ ಚಿಂತೆ ! ಕಲಿಯುಗದಲ್ಲಿ ವಿಮೆಯ ಚಿಂತೆ !

ಇಂತಪ್ಪ ಹಲವು ಚಿಂತೆಗಳ ಪರಿಪರಿಸುವ—ಕಾಯಕ ದಾಸೋಹಗಳ ಚಿಂತೆ ಎಂದಿಗೆ ಉಂಟು ಹೇಳಾ –ಬಸವಲಿಂಗಪ್ರಿಯ ಕಟ್ಟೆಯ ಬಸವೇಶ್ವರಾ ?

### ತ್ರಿವಿಧ ಸಂಪಾದನೆಗಳು

ಕಾಯಕದಿಂದ ಶಕ್ತಿ ಸಂಪಾದನೆ ! ದಾಸೋಹದಿಂದ ಭಕ್ತಿ ಸಂಪಾದನೆ !

ಶಕ್ತಿ ಭಕ್ತಿಗಳ ಸಂಪಾದನೆಯಿಂದ ಮುಕ್ತಿ ಸಂಪಾದನೆ—ಬಸವಲಿಂಗಪ್ರಿಯ ಕಟ್ಟೆಯ ಬಸವೇಶ್ವರನಲ್ಲಿ !

## ಬಡತನ–ಸಿರಿತನ–ಹಿರಿತನ

ಬಡತನವೆಂಬುದು ಬಹು ಕೆಟ್ಟ ರೋಗವು !
ಸಿರಿತನವೆಂಬುದು ಬಹು ಕೆಟ್ಟ ಪೇಯವು !
ಎಲ್ಲ ಪಾಪ ಕರ್ಮಗಳಿಗೂ ಇವೆರಡೇ ಮೂಲವು !
ಎಲ್ಲ ಕಷ್ಟಕಾರ್ಪಣ್ಯಗಳಿಗೂ ಇವೆರಡೇ ಕಾರಣವು !
ಕಾಯಕವೊಂದೇ ಬಡತನಕ್ಕೆ ದಿವ್ಯ ಔಷಧವು !
ದಾಸೋಹವೊಂದೇ ಸಿರಿತನಕ್ಕೆ ದಿವ್ಯ ಅನುಪಾನವು !

ಇದನರಿತು–ಕಾಯಕ ದಾಸೋಹಗಳ ನಡೆಸಿ, ಬಡತನ ಸಿರಿತನಗಳ ಜಯಿಸಿ, ಬಸವಲಿಂಗಪ್ರಿಯ ಕಟ್ಟೆಯ ಬಸವೇಶ್ವರನಲ್ಲಿ ಹಿರಿತನವಗಳಿಸಬೇಕು. ಸರ್ವರೂ ಸಕಲ ಸುಖ ಶಾಂತಿ ಸಂಪದ ಸೌಭಾಗ್ಯಗಳ ಸರ್ವದಾ ಸವಿಯಲಿ !

## ಕಾಯಕದ ಮಹತ್ವ

ಕಾಯಕವೇ ಕಾಮಧೇನು ! ಕಾಯಕವೇ ಕಲ್ಪವೃಕ್ಷ !
ಕಾಯಕವೇ ಪರುಷ ಮಣಿ ! ಕಾಯಕವೇ ಹರುಷ ಖಣಿ !
ಕಾಯಕವೇ ಮಾಯಾದೀಪ ! ಕಾಯಕವೇ ವಿಜಯ ಕಲಾಪ !
ಕಾಯಕವೇ ದಿವ್ಯ ಮಂತ್ರ ! ಕಾಯಕವೇ ಸತ್ಯ ತಂತ್ರ !
ಕಾಯಕವೇ ಕೈಲಾಸ ! ಕಾಯಕವೇ ವೈಕುಂಠ !
ಕಾಯಕವೇ ಮೋಕ್ಷ ! ಕಾಯಕವೇ ನಿರ್ವಾಣ !

ಬಸವಲಿಂಗಪ್ರಿಯ ಕಟ್ಟೆಯ ಬಸವೇಶ್ವರನಲ್ಲಿ ಜಗದ ಸುಖ ಶಾಂತಿ ಸಂಪದಕೆ ಕಾಯಕವೇ ಮೂಲಾಧಾರ !

## ಹೆಣ್ಣಾಗಲಿ–ಗಂಡಾಗಲಿ ಸರ್ವರೂ ದುಡಿಮೆಯ ದೃಥ ಭಕ್ತರಾಗಬೇಕು

ಹೊನ್ನ ಹಂಚಿದರೇನು ? ಹೆಣ್ಣ ಹಂಚಿದರೇನು ? ಮಣ್ಣ ಹಂಚಿದರೇನು ?
ದಾಹ ಅಡಗದು ! ಮೋಹ ತೊಲಗದು ! ದಾರಿದ್ರ್ಯ ನೀಗದು !
ಪರತಂತ್ರ ಹೋಗದು ! ಸುಖ ಲಭಿಸದು ! ಶಾಂತಿ ನೆಲೆಸದು !

ಇದು ಕಾರಣ—ದಾಹ ಅಡಗಿ, ಮೋಹ ತೊಲಗಿ, ದಾರಿದ್ರ್ಯ ನೀಗಿ, ಪರ ತಂತ್ರ ಹೋಗಿ, ಸುಖ ಶಾಂತಿಗಳು ಶಾಶ್ವತದಿ ಲಭಿಸಿ ನೆಲಸುವಡೆ–ಕಾಯಕವ ಹಂಚ ಬೇಕು ! ಬಸವಲಿಂಗಪ್ರಿಯ ಕಟ್ಟೆಯ ಬಸವೇಶ್ವರನಲ್ಲಿ ಗಂಡಾಗಲಿ ಹೆಣ್ಣಾಗಲಿ ಸರ್ವರೂ ದುಡಿಮೆಯ ದೃಥ ಭಕ್ತರಾಗಬೇಕು!

## ಬೇಕು ಮತ್ತು ಬೇಡ

ಬೇಕು, ಬೇಕು- ಎಂದು ಕೆಟ್ಟರು ಅನಂತಕೋಟಿ !
ಬೇಡ, ಬೇಡ- ಎಂದು ಕೆಟ್ಟರು ಅನಂತಕೋಟಿ !

ಬೇಕು ಎಂದುಕೊಂಡು, ಬೇಡ–ಎಂದು ಕೊಟ್ಟರೆ–ಅವರು ಬದುಕಿದರು–ಬಸವಲಿಂಗಪ್ರಿಯ ಕಟ್ಟೆಯ ಬಸವೇಶ್ವರನಲ್ಲಿ !

## ಕಾಯಕ ದುಡಿಮೆಯ ದಶಲಕ್ಷಣಗಳು

ಕಾಯಕವೆಂದರೆ ಶಕ್ತಿಫಲದ ದುಡಿಮೆ !
ಕಾಯಕವೆಂದರೆ ಭಕ್ತಿ ಬಲದ ದುಡಿಮೆ !
ಕಾಯಕವೆಂದರೆ ಸತ್ಯ ಶುದ್ಧಿಯ ದುಡಿಮೆ !
ಕಾಯಕವೆಂದರೆ ನಿತ್ಯ ನಿರ ಯ ದುಡಿಮೆ !
ಕಾಯಕವೆಂದರೆ ಸುಖ ಶಾಂತಿಯ ದುಡಿಮೆ !
ಕಾಯಕವೆಂದರೆ ಶುಭ ಕಾಂತಿಯ ದುಡಿಮೆ !
ಕಾಯಕವೆಂದರೆ ಸುಸಂಪದದ ದುಡಿಮೆ !
ಕಾಯಕವೆಂದರೆ ಸುಸಂತಸದ ದುಡಿಮೆ !
ಕಾಯಕವೆಂದರೆ ಸುಸಂಸ್ಕೃತಿಯ ದುಡಿಮೆ !
ಕಾಯಕವೆಂದರೆ ಸುಸಂತೃಪ್ತಿಯ ದುಡಿಮೆ !

ಇದು ಕಾರಣ—ಶಕ್ತಿಫಲ, ಭಕ್ತಿಬಲ, ಸತ್ಯಶುದ್ಧಿ, ನಿತ್ಯಸಿದ್ಧಿ, ಸುಖಶಾಂತಿ, ಶುಭಕಾಂತಿ, ಸುಸಂಪದ, ಸುಸಂತಸ, ಸುಸಂಸ್ಕೃತಿ, ಸುಸಂತೃಪ್ತಿ—ಇಂತಪ್ಪ ದಶಲಕ್ಷಣಗಳು ಇಲ್ಲದೊಡೆ ಆ ದುಡಿಮೆ ಮಾಯಕದ ದುಡಿಮೆಯಹುದಲ್ಲದೆ ಕಾಯಕದ ದುಡಿಮೆಯಾಗದು ಬಸವಲಿಂಗಪ್ರಿಯ ಕಟ್ಟೆಯ ಬಸವೇಶ್ವರನಲ್ಲಿ !

## ವ್ರತಿ

ಮತಿ ಇದ್ದರೆ ಸಾಲದು ! ಧೃತಿ ಇರಬೇಕು !
ಧೃತಿ ಇದ್ದರೆ ಸಾಲದು ! ಕೃತಿ ಇರಬೇಕು !

ಮತಿ, ಧೃತಿ, ಕೃತಿಗಳು ಕಾಯಕ ದಾಸೋಹಗಳಲ್ಲಿ ಪರಿಣಾಮಗೊಂಡರೆ ಆತನೇ ಬಸವಲಿಂಗಪ್ರಿಯ ಕಟ್ಟೆಯ ಬಸವೇಶ್ವರನಲ್ಲಿ ವ್ರತಿ ಎನಿಸಿಕೊಂಬನು !

---

# ಶರಣೆಯರ ನೆನೆದು

● ಶ್ರೀಮತಿ ಜಯದೇವಿತಾಯಿ ಲಿಗಾಡೆ
ಸೊಲ್ಲಾಪುರ

ಹೆಣ್ಣು ಜೀವಕ ಅಕ್ಕ ಕಣ್ಣು ನೀ ಕೊಟ್ಟಿ
ಎಣ್ಯಾಗಿ ಬತ್ಯಾಗಿ ದೀಪಾಗಿ–ದೀಪ್ತಿಯಾಗಿ
ಅಣಿಮಾಡಿಕೊಟ್ಟಿ ನೀ ಕಿರು ನುಡಿ ೧

ಅಕ್ಕನ ನುಡಿಯಿಂದ ನಡುಮಂನಿ ಬೆಳಗಿತ್ತ
ದಿಕ್ಕುದಿಕ್ಕೆಲ್ಲ ಹೊಳದಿತ್ತ – ಹೊಂಬೆಳಗ
ಮಿಕ್ಕೀದ ಮಹಾಮನಿ ಮೂಡಿತ್ತ ೨

ಶರಣರೀನಗಲಿ ಹ ರ ಣ ಹೆಂಗಿಡಲೆವ್ವ,
ಮಗಣವೆ ಲೇಸೆಂದು ಹಾಡೀದಿ – ನನ್ನಕ್ಕ
ಶರಣರ ಸಂಗ ಕರುಣಿಸು. ೩

ವನದ ತುಂಬೆಲ್ಲ ಚೆನ್ನನ ಚೆಲುವ ಕಂಡು
ಅನುರಾಗದಿ ಹಾಡಿ ಹರಸೀದಿ – ಅಕ್ಕವ್ವ
ಅನುಗಾಲ ನನಗ್ಯಾಕ ತೋರವಲ್ಲಿ ೪

ಅಕ್ಕ ನನ್ನಕ್ಕ ಬಾರ ತೋರ ನಿನ್ನ ದಾರಿ
ಯಾಕವ್ವ ಕರುಣಬಾರದ – ಹಡದವ್ವ
ಸಾಕಾಯ್ತು ತಾಯಿ ಈ ಲೋಕವ ೫

ಕಿರಿಕಿರಿ ಬೇಡಂತ ಗಿರಿ ಏರಿ ಕುಂತರ
ಬರುವುದು ಬಿಡರು ಭಕ್ತರು–ಅಕ್ಕವ್ವ
ವರವ ನೀಡೆಂದು ಬೇಡಂವರು ೬

ಅಕ್ಕನ ಜೀವನ ಚೊಕ್ಕ ಚಿನ್ನದಂತೆ
ಪಕ್ವಾದ ಮಾವಿನ ಫಲದಂತೆ–ಅಕ್ಕವ್ವ
ಮಿಕ್ಯಾಳ ಮಂರು ಲೋಕವ ೭

ಅಕ್ಕನ ಅರಿಲಾಕ ಭಾವ ಪಕ್ಕಾಗಬೇಕ
ಮಿಕ್ಕಿ ಮೀರಿದ ಮಹಿಮಳು-ನನ್ನಕ್ಕ
ಪೊಕ್ಕಳು ಕದಳಿಯ ಬನದಾಗ ೮

ನೀಲಮ್ಮನೀ ಬಾರೆ ನಮ್ಮಮ್ಮ ನೀ ಬಾರೆ
ಬಾಲ ಸಂಗನ ಹಡದವ್ವ–ಬಸವನ
ಶೀಲ ಸಂಪನ್ನೆ ಮಡದಿ ಬಾ ೯

ವರದಾಸೋಹ ಮಾಡಿ ಪರಮ ಪ್ರಸಾದ
ನೀಡಿ
ಕರದಿಷ್ಟಲಿಂಗದೊಳುಬಯಲಾಗಿ-ನೀಲಮ್ಮ
ನೀರ ನಿಷ್ಪತಿಯೊಳು ಒಂದಾಗಿ ೧೦

ಅಂಗದ ಮೇಲಿನ ಸೀರೆ ಜಂಗಮ ಬೇಡಿದ
ಗಂಗಮ್ಮ ಕೊಟ್ಟಳು ತವಕದಿ–ಬಸವನ
ಭಂಗ ಬಾರದಂತೆ ಬಕುತೀಗ ೧೧

ಮಾರಯ್ಯನ ಸತಿ ಲಕ್ಕಮ್ಮ ನುಡಿದಾಳ
ತರಬಾರದಿತ್ತ ಈ ಸಕ್ಕಿ-ಪತಿದೇವ
ಹರನೇಮಕದು ಸಲ್ಲದು ೧೨

ಧೀರದಾನಮ್ಮ ಬಾರೆ ವೀರಸಂದೇಶ ಸಾರೆ
ಶರಣಗಣಾಚಾರ ಬೀರಬಾರೆ–ಏವೀರ
ವರ ಸಂಗಮೇಶನ ಸತಿಯಳೆ ೧೩

ಸುಗ್ಗವ್ವೆ ನಿನ್ನಡಿಗೆ ಬಾಗಿ ನಾ ಶರಣಾದೆ
ಕಗ್ಗತಲೆಯಿಂದಬೆಳಕೀಗ–ಒಯ್ಯುವ
ಯೋಗಿ ಸಿದ್ಧನ ಹಡೆದವ್ವ ೧೪

ವೀರ ಗುಡ್ಡವ್ವೆ ಬಾರೆ ಧೀರ ಸಂಗವ್ವೆ ಬಾರೆ
ನೀರ ನಿಃಪತಿ ತೋರಬಾರೆ ಮುಕ್ತಕ್ಕ
ಸಾರ ಶಿವತತ್ತ್ವ ಕಮಳವ್ವೆ ೧೫

ಅಕ್ಕ ನಾಗಲ ತಾಯಿ ಗಕ್ಕನೆ ನೀಬಾರೆ
ಚಿಕ್ಕ ಚೆನ್ನನ ಹಡದವ್ವ–ನೀ ಎನಗ
ಕಕ್ಕಲಾತಿಯಂ ಮಾತ ಹೇಳವ್ವ ೧೬

ಕದರಿಯರೆಮ್ಮವ್ವ ಚದುರಿ ನಿನ್ನ ರಾಟಿ
ಸದರೀಗೆ ತಂದ ಬಾಪೂಜಿ ತಾನೋತು
ಮಾದರಿ ಮಾಡೀದ ಜಗದಾಗ ೧೭

ಮುಕ್ತಾಯಕ್ಕ ನೀನು ಮುತ್ತೀನ ಹಂತಾಕಿ
ಮುತ್ತ ತಾ ನೀರಾಗ ನಿರ್ಮಿತ-ಅಲ್ಲಿದೆ
ಮತ್ತೆ ಆದರಿಂದ ಬೇರೆ ಆಗಿ ೧೮

ವೀರ ಸಂಗವ್ವೆಬಾರೆ ಶಿವತತ್ತ್ವವ ಬೀರೆ
ಪರಮಲಿಂಗ ಪ್ರಾಣೆ ಕೀಲತೋರೆಕಮಲವ್ವೆ
ಹರಣ ನಿಮ್ಮಿಂದ ಬೆಳಗೀತ ೧೯

ಇಂದು ಧರಗೆ ತಾಯಿ ತಂದೆಗಳಿಲ್ಲಂತ
ನೊಂದಿದ ಮುಗ್ಧ ಅಮ್ಮವ್ವೆ ಕೂಸಾಗಿ
ಬಂದನು ಶಿವ ತಾ ಬುಪಿಯೊಳು ೨೦

ಅತ್ತೆ ನೆಗೆಣ್ಣೆಗಂಜಿ ಹುಚ್ಚ ಗಂಡನ ನಂಬಿ
ಮತ್ತ ಮಲ್ಲಯ್ಯನ ಸೇವೆಯ-ಮಲ್ಲಮ್ಮ
ಉತ್ತುಮ ಬಕುತಿಯಲಿ ಮಾಡ್ಯಾಳ ೨೧

★

## ನವಲಿಂಗ ಮಂಗಳಾರತಿ

ಮಂಗಳ ಜಯ ಜಯ ಮಂಗಳ
ಶಿವಮಂಗಳ **ಶ್ರೀ ಮಹಾಲಿಂಗನಿಗೆ** ॥ಪ॥

ಆಧಾರ ಮಂಟಪದೊಳು ಪೀತವರ್ಣದ
ಚೌದಳ ನಡುವೆ **ನ**ಕಾರ ಬೀಜ ।
ಮೇದಿನಿ ಅಂಗ ಭಕ್ತನು-ಕ್ರಿಯಾಶಕ್ತಿಯು
ಸಾಧಿಸಿ ಗಂಧ ಘ್ರಾಣ **ಆಚಾರಲಿಂಗಕ್ಕೆ** ೧

ಎರಡನೆ ಮಂಟಪ ಕಾರು ಯೆಸಳು ಶ್ವೇತ
ವರ್ಣ ಮಧ್ಯದೋಳ್ **ಮ**ಕಾರ ಬೀಜ !
ಹರುಷೋದಕಾಂಗ ಮಹೇಶ ಜ್ಞಾನಶಕ್ತಿ
**ಗುರುಲಿಂಗ** ಜಿಹ್ವೆಮುಖದಿ ರಸಗೊಳುತಲಿ ॥ ೨

ತೃತೀಯ ಚಕ್ರಕೆ ದಶದಳ ಹರಿತವರ್ಣ
ಮಿತಿಯಲ್ಲಿರುವ **ಶಿ**ಕಾರಬೀಜಾ ।
ಮತವಗ್ನಿ ಅಂಗಪ್ರಸಾದಿ ಇಚ್ಛಾಶಕ್ತಿ
ಅತಿಶಯ ರೂಪು ನೇತ್ರದಿ **ಶಿವಲಿಂಗಕ್ಕೆ** ॥ ೩

ಅನಾಹುತದೊಳು ದ್ವಾದಶದಳ ಮಾಂಜಿಷ್ಟ
ಮನುಗೊಳಿಸಿರುವ **ವ**ಕಾರ ಬೀಜ
ಅನಿಲಾಂಗ ಪ್ರಾಣಲಿಂಗಾದಿ ಶಕ್ತಿ
ಯೆನಿಪ ಸ್ಪರ್ಶತ್ವಕ್ಕು **ಜಂಗಮಲಿಂಗ** ದೇವನಿಗೆ ॥ ೪

ಷೋಡಶದಳ ವಿಶುದ್ಧಿ ಚಕ್ರ ಪೊರ್ಕೆತ
ಸೂಡಿದ ವರ್ಣ **ಯ**ಕಾರ ಬೀಜ
ಕೂಡಿದಾಕಾಶಾಂಗ ಶರಣನು ಪರಾಶಕ್ತಿ
ಪಾಡಿ ಶಬ್ದ ಶ್ರೋತ್ರ**ಪ್ರಸಾದಲಿಂಗಕ್ಕೆ** ॥ ೫

ದ್ವಿದಳ ತ್ರಿಕೋಟಿ ಯೆಳೆ ಮಿಂಚಿನ ವರ್ಣದ
ಆದಿ ಪ್ರಣವ **ಓಂ**ಕಾರ ಬೀಜ
ಮೋದದಿ ಆತ್ಮಾಂಗವಾದೈಕ್ಯ ಚಿಚ್ಛಕ್ತಿ
ಸಾಧಿಪ ತೃಪ್ತಿ ಹೃದಯ **ಮಹಾಲಿಂಗಕ್ಕೆ**॥ ೬

ಯೋಗರಂಧ್ರ ಸಾಸಿರದಳ ಪ್ರಭೆ ಜ್ಯೋತಿ
ಯಾಗಿರುವುದು **ಅ**ಕಾರ ಬೀಜ
ತ್ಯಾಗಾಂಗ ನಿಷ್ಕಳ ಆನಂದಮಯ ಶಕ್ತಿ
ಭೋಗಿ ಪರಮಾನಂದ **ನಿಷ್ಕಳಲಿಂಗಕ್ಕೆ** ॥ ೭

ಮೂರು ಯೆಸಳು ಶಿಖೆ ಮಹಾಜ್ಯೋತಿ ವರ್ಣದ
ಪೂರೈಸಿಯಿರುವ **ಉ**ಕಾರ ಬೀಜ
ಸೇರಿ ಭೋಗಾಂಗ **ನಿಶ್ಶೂನ್ಯನಿಗೆ** ವಿಭ್ರಾಂತಿಯು
ಸಾರ ಉನ್ಮನಿಯ ನಿರಾಳ **ಶೂನ್ಯಲಿಂಗಕ್ಕೆ**॥ ೮

ಪಶ್ಚಿಮ ಚಕ್ರಕ್ಕೇಕದಳ ಅಗಣಿತ ಜ್ಯೋತಿ
ಮುಚ್ಚಿಕೊಂಡಿರುವ **ಮ**ಕಾರ ಬೀಜ
ಬಿಚ್ಚಿಯೋಗಾಂಗ **ನಿರಂಜ** ನಿರಾಮಯ
ಪಶ್ಚಿಮ ಮುಖದ ನಿರಾಳ **ನಿರಂಜನನಿಗೆ** ೯

ನವಕೃತಿ ಆತ್ಮತನು ಹಸ್ತವು ಭಕ್ತಿಯು
ನವ ಪ್ರಸಾದಗಳಧಿ ದೇವಪೂಜಕರು
ನವಾಕಾರ ಸಂಜ್ಞೆ ಸಾದಾಖ್ಯ ಲಕ್ಷಣ ದಿಕ್ಕು
ನವಲಿಂಗ ಸ್ಥಳಕೆಲ್ಲಾ ಮಹಾಲಿಂಗದಾಶ್ರಯವು ॥ ೧೦

ನಾಸಿಕಾಗ್ರದಿ ನಿಂದು ಲೇಸೆಂದೇ ಮನವನು
ಸೂಸಲೀಯದೆ ಸುಳಿಗಾಳಿಯನು
ಭಾಸುರ ಬೆಳಗಿನೊಳಂಗ ಲಿಂಗವನು
ನ್ಯಾಸವರಿದೇಕರಸದೈಕ್ಯಭಾವದಿ ॥ ೧೧

ತುಂಬಿ ವೀಣೆ ಘಂಟೆ ಭೇರಿ ಮೇಘ ಪ್ರಣವ
ವೆಂಬ ಪರಮ ದಿವ್ಯ ಸಿಂಹ ಮಹಾ
ಬೆಂಬಿಡದನುದಿನ ಬಗೆ ಬಗೆ ನಾದದಿ
ಸಂಭ್ರಮದೊಳು ಅಹಂ ಬ್ರಹ್ಮಾಸ್ಮಿ ಮಂತ್ರದಿ ॥ ೧೩

ಹರುಷದಿ ದ್ವಿಶತ ಷೋಡಶದಳವನು
ಗುರುಕರುಣದಿ ತಿಳಿದಿಹ ಭಕ್ತ
ಪರಮಾನಂದದ ಸರ್ವಾಂಗಲಿಂಗವೆಂದರಿದು
ಪೂರ್ಣ ಸುಖಮಯ ಮಹಿಮನಿಗೆ ॥ ೧೩

ಗುರುಕರದೊಳು ಬ್ರಹ್ಮಾಂಡ ಭೂತಗಳಿಗೆ ಪೇ
ಳ್ವರ ಭಕ್ತನೆಂಬ ಕರ್ಪೂರವನಿಟ್ಟು
ಅರುಹಿಸಿ ಮೂಲಾಗ್ನಿಯನೆ ಹಚ್ಚಿ ನೋಡಲು
ಕುರುಹಿಲ್ಲ ನಿರವಲಾಯಿತು ॥ ೧೪

ಮಂಗಳಾರತಿ ಪದ ಇಂಗಿತ ವರಿದರೆ
ಅಂಗ ಲಿಂಗ ಸಮರಸ ಭಾವವು
ಹಿಂಗದೆ ಗುರುಸಿದ್ಧನಂಘ್ರಿಯೊಳೈಕ್ಯವು
ಸಂಗಿಸಿ ನಿಜ ಬೆಳಗಂಗವಾಗಿಹುದು ॥ ೧೫

ಮಂಗಳ ಜಯ ಜಯ ಮಂಗಳ
ಶಿವ ಮಂಗಳ ಶ್ರೀ ಮಹಾಲಿಂಗನಿಗೆ ॥

---

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೫ | ೨೪ | ೩೪ | ೩೬ |
| ೧೯ | ೧೦ | ವೈಷ್ಣ | ವೈಷ್ಣವ |
| ೨೦ | ೧೫ | ಘಾತ್ರಾದಿ | ಭಾತ್ರಾದಿ |
| ೨೫ | ೩ | ಶಾಸದ | ಶಾಸನದ |
| ೩೧ | ೨೫ | ಆರ್ಜಿದ | ಆರ್ಜಿಸಿದ |
| ೩೨ | ೨೫ | ಶಿಷ್ಯರುಳಗ | ಶಿಷ್ಯರುಗಳ |
| ೩೭ | ೯ | ಭಕ | ಭಕ್ತ |
| ೪೧ | ೨೪ | ಅಲ್ಲಿಯ್ಯೋ | ಅಲ್ಲಿಯೋ |
| ೪೧ | ೩೧ | ಮುನ್ನ ಶ್ರೀಗಳು ಮತ್ತೆ | ಮುನ್ನ, ಮತ್ತೆ |
| ೪೮ | ೧೦ | ಸ್ತಯ ಮಸ್ತ | ಸ್ವಯಂಮಪ್ಪ |
| ೫೦ | ೬ | ಳವಿರತ ವಿರುಹ | ಳವಿರತ ವಿರುತಿಹ |
| ೫೦ | ೭ | ಬಲಿದೊನ್ನನು | ಬಲಿದೆನ್ನನು |
| ೫೨ | ೧೦ | ೩-೧೧-೧೯೭೨ | ೩೧-೧-೧೯೭೨ |
| (ಉದ್ಧಾನ ಎಂಬಲ್ಲಿ ಉದ್ದಾನ ಎಂದು ತಿದ್ದಿಕೊಳ್ಳಬೇಕು.) | | | |
| ೫೩ | ೧೬ | ಶ್ರೀಮತವ | ಶ್ರೀಮಂತದ |
| ೫೮ | ೨೪ | ಇತ್ಮಾದಿ | ಇತ್ಯಾದಿ |
| ೬೨ | ೧೫ | ಧನದ | ಧನವ |
| ೮೦ | ೨೪ | ಗಣ್ಣೆಗಂದವಾಗಿ | ಕಣ್ಣೆಗಂದವಾಗಿ |
| ೯೨ | ೭ | ಅದರ | ಅಧರ |
| ೯೫ | ೩೦ | ಮಾಯೆಯಂಗೆ ಲಿದು | ಮಾಯೆಯು ಗೆಲಿದು |
| ೯೬ | ೧ | ಮರೆಯೋಳಿರ್ದು | ಮರೆಯೊಳಿರ್ದು |
| ” | ೧೦ | ಮುಟ್ಟಿತು | ಮುಟ್ಟೀತು ! |
| ” | ೨೭ | ನೋಡಿದುದು | ನೇರಿದುಂದು |
| ೯೭ | ೧ | ತಾನೊಪ್ಭ | ತಾನೊಪ್ಪ |
| ೧೦೦ | ೧ | ಆ ಜನ್ಮ | ಆಜನ್ಮ |
| ೧೦೯ | ೬ | ಕ್ಷೇತ್ರಗಳಲ್ಲ | ಕ್ಷೇತ್ರಗಳಲ್ಲಿ |
| ೧೧೨ | ೨೫ | ೨೫ ನೇ ಸಾಲಿನ ಕೆಳಗೆ ಇರಬೇಕಾದ್ದು—ಕಾಯುವ ವಿವರಿಸಬಲ್ಲಡೆ. | |

| ಪುಟ | ಸಾಲು | ತಪ್ಪು | ಒಪ್ಪು |
| --- | --- | --- | --- |
| ೧೧೩ | ೧ | ಹಾವಿನ್ನ | ಹಾವಿನ |
| ೧೧೪ | ೫ | ದದುಂಳಿಗ | ಹದುಂಳಿಗ |
| „ | ೧೧ | ಉಳಿದುದವೆಲ್ಲ | ಉಳಿದವೆಲ್ಲ |
| ೧೧೯ | ೨ | ಆಯ್ದುಕ್ತಿ | ಆಯ್ದುಕ್ಕಿ |
| ೧೫೧ | ೨೧ | ತೆರೆಯುತ್ತಿತ್ತು | ಪ್ರೋತ್ಸಾಹಿಸುತ್ತಿತ್ತು |
| ೧೫೮ | ೧ | ವಾಸಾಚಾರ್ಯ ಕೃತ | ಶ್ರೀನಿವಾಸಾಚಾರ್ಯ ಕೃತ |
| ೧೫೯ | ೭ | ತೇನಸ್ಯತ್ತೇನ | ತೇನತ್ಯಕ್ತೇನ |
| ೧೬೭ | ೧ | ನಿಷ್ಕ್ಯಲಲಿಂಗ | ನಿಷ್ಕಲ ಲಿಂಗ |
| ೧೭೮ | ೨೩ | ವೈದಿಕಷಡ್ಡನಕಾರರು | ವೈದಿಕ ಷಡ್ದರ್ಶನಕಾರರು |
| ೧೮೦ | ೨೪ | ಮೂಹೇಶ್ವರಾಣಾಂ | ಮಾಹೇಶ್ವರಾಣಾಂ |
| ೨೩೭ | ೧೪ | ಮಾನವರ | ಮಾನವರು |
| ೨೪೭ | ೧೩ | ಕ್ಲೇಷವನ್ನು ಕೊಟ್ಟು ಕೊಳ್ಳುವವನು | —ಕ್ಲೇಶವನ್ನು ಕೊಟ್ಟು ಕೊಳ್ಳುವನು |
| ೨೫೧ | ೨೩ | ಹೇಳಿಬೀಡುತ್ತೇವೆ | ಹೇಳಿಬಿಡುತ್ತೇವೆ |
| ೨೫೫ | ೨೭ | ಭಾವಾಪರ್ಣವು | ಭಾವಾರ್ಪಣವು |
| ೨೭೯ | ೨೫ | ವಾರಧಿ | ವಾರಿಧಿ |
| ೩೧೨ | ೭ | ವ್ಯಾಖ್ಯಾಯಿಸಿದೆ | ವ್ಯಾಖ್ಯಾಯಿಸಿದೆ |
| ೩೫೪ | ೧೫ | ಸಹಜಾನುಭಾವಂ | ಸಹಜಾನುಭಾವದಿಂ |
| „ | ೧೭ | ಶರಪಂಕಜ | ಕರಪಂಕಜ |
| „ | ೨೫ | ಶೆರೆಸಾದರ್ಂ | ನೆರೆಸಾದರ್ಂ |
| ೩೬೩ | ೧೪ | ಸಂಭಂಧವಾದ | ಸಂಬಂಧವಾದ |